ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೯

ಶ್ರೀವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

## ಭಾಗ—೬

(೮೦—೯೧ ಅಧ್ಯಾಯಗಳು)

(ಮಂತ್ರಶಾಸ್ತ್ರ ಭಾಗ—೨)



ಪಂಡಿತ ಶಿರೋಮಣಿ, ಮಹಾವಿದ್ವಾನ್, ವಿದ್ವನ್ಮಣಿ,

**ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ.**

ಅನುವಾದಕ.

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಪೀಠಿಕೆ

ತಂತ್ರವು ಸಮಯಾಚಾರ, ಕುಲ ಮತ್ತು ಮಿಶ್ರಕ ಎಂದು ಮೂರು ವಿಧವು. ವಸಿಷ್ಠಸಂಹಿತೆ, ಸನಕಸಂಹಿತೆ, ಸನಂದನಸಂಹಿತೆ, ಸನತ್ಕುಮಾರಸಂಹಿತೆ ಮತ್ತು ಶುಕಸಂಹಿತೆ ಎಂಬ ಶ್ರೀವಿದ್ಯಾಪ್ರತಿಪಾದಕವಾದ ಐದು ತಂತ್ರಗಳನ್ನು ಸಮಯಾಚಾರ ತಂತ್ರವೆಂದು ಪರಿಗಣಿಸಿದೆ. ಕುಲತಂತ್ರಗಳು ಅರವತ್ತುನಾಲ್ಕು ಎಂಬುದನ್ನು ಹಿಂದಿನ ಸಂಪುಟದ ಉಪೋದ್ಘಾತದಲ್ಲಿ ವಿವರಿಸಿದೆ. ಕುಲಮಾರ್ಗ ಮತ್ತು ಸಮಯಾಚಾರಗಳೆರಡನ್ನೂ ಅನುಸರಿಸಿರುವುದು ಮಿಶ್ರಕತಂತ್ರವು. ಅದು ಭುವನೇಶ್ವರೀತಂತ್ರ, ದಕ್ಷಿಣಾಮೂರ್ತಿಸಂಹಿತೆ, ಜ್ಯೋತ್ಸ್ನಾಪಕ್ಷತಂತ್ರ, ಕಲಾವಿಧಿತಂತ್ರ ಮುಂತಾಗಿ ಅನೇಕವಿಧವಾಗಿದೆ. ಕುಲತಂತ್ರ ಮತ್ತು ಮಿಶ್ರಕ ತಂತ್ರಗಳು ಈ ಲೋಕದಲ್ಲಿಯೇ ಕಾಮ್ಯಫಲಗಳನ್ನು ಪಡೆಯುವ ಉಪಾಯ ವನ್ನು ಮಾತ್ರ ಬೋಧಿಸುತ್ತವೆ. ಪರಮಶ್ರೇಯಸ್ಸಿಗೆ ಸಾಧಕವಾಗುವುದಿಲ್ಲ.

"ಕೌಲಮಿಶ್ರಕಮಾರ್ಗೌ ಹಿ ಹೇಯೌ ಗೌರಿ ದ್ವಿಜಾತಿಭಿಃ" ಎಂದು ಜ್ಞಾನಾರ್ಣವತಂತ್ರದಲ್ಲಿ ಈಶ್ವರನು ಕೌಲಮಿಶ್ರಕಮಾರ್ಗಗಳು ದ್ವಿಜರಿಗೆ ಉಪಾದೇಯವಲ್ಲವೆಂದು ಅಪ್ಪಣೆ ಕೊಡಿಸಿರುವನು.

ಈ ತಂತ್ರಗ್ರಂಥಗಳನ್ನು ವಿಷ್ಣುಕ್ರಾಂತಾ, ರಥಕ್ರಾಂತಾ, ಅಶ್ವಕ್ರಾಂತಾ ಎಂಬುದಾಗಿ ಮೂರುಪಂಗಡಗಳಾಗಿ ವಿಂಗಡಿಸಿರುವರು. ಒಂದೊಂದು ಪಂಗಡ ದಲ್ಲಿಯೂ ಅರವತ್ತುನಾಲ್ಕು ಗ್ರಂಥಗಳು ಪರಿಗಣಿತವಾಗಿವೆ. ಈ ಮೂರು ಪಂಗಡಗಳಲ್ಲಿಯೂ ಸೇರದಿರುವ ಕೆಲವು ತಂತ್ರಗ್ರಂಥಗಳೂ ಕಂಡುಬಂದಿವೆ.

## ವಿಷ್ಣುಕ್ರಾಂತಾತಂತ್ರಗಳು

| | | | |
|---|---|---|---|
| 1 | ಸಿದ್ಧೀಶ್ವರ | 8 | ಉತ್ತರ |
| 2 | ಕಾಳೀತಂತ್ರ | 9 | ಶ್ರೀಕ್ರಮ |
| 3 | ಕುಲಾರ್ಣವ | 10 | ಸಿದ್ಧಿಯಾಮಳ |
| 4 | ಜ್ಞಾನಾರ್ಣವ | 11 | ಮತ್ಸ್ಯಸೂಕ್ತ |
| 5 | ನೀಲಾತಂತ್ರ | 12 | ಸಿದ್ಧಸಾರ |
| 6 | ಫೇಟ್ಕಾರಿ | 13 | ಸಿದ್ಧಿಸಾರಸ್ವತ |
| 7 | ದೇವ್ಯಾಗಮ | 14 | ವಾರಾಹೀ |

15 ಯೋಗಿನೀ
16 ಗಣೇಶವಿಮರ್ಶಿನೀ
17 ನಿತ್ಯಾತಂತ್ರ
18 ಶಿವಾಗಮ
19 ಚಾಮುಂಡಾ
20 ಮುಂಡಮಾಲಾ
21 ಹಂಗ್ಸಮಹೇಶ್ವರ
22 ನಿರುತ್ತರ
23 ಕುಲಪ್ರಕಾಶಕ
24 ದೇವೀಕಲ್ಪ
25 ಗಂಧರ್ವ
26 ಕ್ರಿಯಾಸಾರ
27 ನಿಬಂಧ
28 ಸ್ವತಂತ್ರ
29 ಸಂಮೋಹನ
30 ತಂತ್ರರಾಜ
31 ಲಲಿತಾ
32 ರಾಧಾ
33 ಮಾಲಿನೀ
34 ರುದ್ರಯಾಮಳಾ
35 ಬೃಹಚ್ಛ್ರೀಕ್ರಮ
36 ಗವಾಕ್ಷ
37 ಸುಕುಮುದಿನೀ
38 ವಿಶುದ್ಧೇಶ್ವರ
39 ಮಾಲಿನೀವಿಜಯ
40 ಸಮಯಾಚಾರ
41 ಭೈರವೀ
42 ಯೋಗಿನೀಹೃದಯ
43 ಭೈರವ
44 ಸನತ್ಕುಮಾರ
45 ಯೋನಿ
46 ತಂತ್ರಾಂತರ
47 ನವರತ್ನೇಶ್ವರ
48 ಕುಲಚೂಡಾಮಣಿ
49 ಭಾವಚೂಡಾಮಣಿ
50 ದೇವಪ್ರಕಾಶ
51 ಕಾಮಾಖ್ಯಾ
52 ಕಾಮಧೇನು
53 ಕುಮಾರೀ
54 ಭೂತಡಾಮರ
55 ಯಾಮಳ
56 ಬ್ರಹ್ಮಯಾಮಳ
57 ವಿಶ್ವಸಾರ
58 ಮಹಾಕಾಲ
59 ಕುಲೋಡ್ಡೀಶ
60 ಕುಲಾಮೃತ
61 ಕುಬ್ಜಿಕಾ
62 ಯಂತ್ರಚಿಂತಾಮಣಿ
63 ಕಾಳೀವಿಲಾಸ
64 ಮಾಯಾತಂತ್ರ

## ರಥಕ್ರಾಂತಾತಂತ್ರಗಳು

1 ಚಿನ್ಮಯ
2 ಮತ್ಸ್ಯಸೂಕ್ತ
3 ಮಹಿಷಮರ್ದಿನೀ
4 ಮಾತೃಕೋದಯ
5 ಹಂಗ್ಸಮಹೇಶ್ವರ
6 ಮೇರು
7 ಮಹಾನೀಲ
8 ಮಹಾನಿರ್ವಾಣ
9 ಭೂತಡಾಮರ
10 ದೇವಡಾಮರ
11 ಬೀಜಚಿಂತಾಮಣಿ
12 ಏಕಜಟಾ

13 ವಾಸುದೇವರಹಸ್ಯ
14 ಬೃಹದ್ಗೌತಮೀಯ
15 ವರ್ಣೋದ್ಧೃತಿ
16 ಛಾಯಾನಿಲ
17 ಬೃಹದ್ಯೋನಿ
18 ಬ್ರಹ್ಮಜ್ಞಾನ
19 ಗರುಡ
20 ವರ್ಣವಿಲಾಸ
21 ಬಾಲವಿಲಾಸ
22 ಪುರಶ್ಚರಣಚಂದ್ರಿಕಾ
23 ಪುರಶ್ಚರಣರಾಸೋಲ್ಲಾಸ
24 ಪಂಚದಶೀ
25 ಪಿಚ್ಛಿಲಾ
26 ಪ್ರಪಂಚಸಾರ
27 ಪರಮೇಶ್ವರ
28 ನವರತ್ನೇಶ್ವರ
29 ನಾರದೀಯ
30 ನಾಗಾರ್ಜುನ
31 ಯೋಗಸಾರ
32 ದಕ್ಷಿಣಾಮೂರ್ತಿ
33 ಯೋಗಸ್ವರೋದಯ
34 ಯಕ್ಷಿಣೀತಂತ್ರ
35 ಸ್ವರೋದಯ
36 ಜ್ಞಾನಭೈರವ
37 ಆಕಾಶಭೈರವ
38 ರಾಜರಾಜೇಶ್ವರೀ
39 ರೇವತೀ
40 ಸಾರಸಾ
41 ಇಂದ್ರಜಾಲ
42 ಕೃಕಲಾಸದೀಪಿಕಾ
43 ಕಂಕಾಲಮಾಲಿನೀ
44 ಕಾಲೋತ್ತಮ
45 ಯಕ್ಷಡಾಮರ
46 ಸಾರಸ್ವತೀ
47 ಶಾರದಾ
48 ಶಕ್ತಿಸಂಗಮ
49 ಶಕ್ತಿಕಾಗಮಸರ್ವಸ್ವ
50 ಸಂಮೋಹಿನೀ
51 ಆಚಾರಸಾರ
52 ಚೀನಾಚಾರ
53 ಷಡಾಮ್ನಾಯ
54 ಕರಾಳಭೈರವ
55 ಷೋಢಾ
56 ಮಹಾಲಕ್ಷ್ಮೀ
57 ಕೈವಲ್ಯ
58 ಕುಲಸದ್ಭಾವ
59 ಸಿದ್ಧಿತದ್ಧರಿ
60 ಕೃತಿಸಾರ
61 ಕಾಲಭೈರವ
62 ಉಡ್ಡಾಮರೇಶ್ವರ
63 ಮಹಾಕಾಲ
64 ಭೂತಭೈರವ

## ಅಶ್ವಕ್ರಾಂತಾತಂತ್ರಗಳು

1 ಭೂತಶುದ್ಧಿ
2 ಗುಪ್ತದೀಕ್ಷಾ
3 ಬೃಹತ್ಸಾರ
4 ತತ್ವಸಾರ
5 ವರ್ಣಸಾರ
6 ಕ್ರಿಯಾಸಾರ
7 ಗುಪ್ತತಂತ್ರ
8 ಗುಪ್ತಸಾರ
9 ಬೃಹತ್ತೋದಲ
10 ಬೃಹನ್ನಿರ್ವಾಣ

# ವಿಷಯಸೂಚೀ

ಪುಟಸಂಖ್ಯೆ

11 ಬೃಹತ್ತಂಕಾಲಿನೀ
12 ಸಿದ್ಧಾಂತತಂತ್ರ
13 ಕಾಲತಂತ್ರ
14 ಶಿವತಂತ್ರ
15 ಸಾರಾತ್ಸಾರ
16 ಗೌರೀತಂತ್ರ
17 ಯೋಗತಂತ್ರ
18 ಧರ್ಮಕತಂತ್ರ
19 ತತ್ವಚಿಂತಾಮಣಿ
20 ಬಿಂದುತಂತ್ರ
21 ಮಹಾಯೋಗಿನೀ
22 ಬೃಹದ್ಯೋಗಿನೀ
23 ಶಿವಾರ್ಚನ
24 ಸಂವರ
25 ಶೂಲಿನೀ
26 ಮಹಾಮಾಲಿನೀ
27 ಮೋಕ್ಷ
28 ಬೃಹನ್ಮಾಲಿನೀ
29 ಮಹಾಮೋಕ್ಷ
30 ಬೃಹನ್ಮೋಕ್ಷ
31 ಗೋಪೀತಂತ್ರ
32 ಭೂತಲಿಪಿ
33 ಕಾಮಿನೀ
34 ಮೋಹಿನೀ
35 ಮೋಹನ
36 ಸಮೀರಣ
37 ಕಾಮಕೇಸರ
38 ಮಹಾವೀರ
39 ಚೂಡಾಮಣಿ
40 ಗುರ್ವರ್ಚನ
41 ಗೋಪ್ಯ
42 ತೀಕ್ಷ್ಣ
43 ಮಂಗಳಾ
44 ಕಾಮರತ್ನ
45 ಗೋಪಲೀಲಾಮೃತ
46 ಬ್ರಹ್ಮಾಂಡ
47 ಚೀನ
48 ಮಹಾನಿರುತ್ತರ
49 ಭೂತೇಶ್ವರ
50 ಗಾಯತ್ರೀ
51 ವಿಶುದ್ಧೇಶ್ವರ
52 ಯೋಗಾರ್ಣವ
53 ಭೇರುಂಡಾ
54 ಮಂತ್ರಚಿಂತಾಮಣಿ
55 ಯಂತ್ರಚಿಂತಾಮಣಿ
56 ವಿದ್ಯುಲ್ಲತಾ
57 ಭುವನೇಶ್ವರೀ
58 ಲೀಲಾವತೀ
59 ಬೃಹಚ್ಚೀನ
60 ಕುರಂಜ
61 ಜಯರಾಧಾಮಾಧವ
62 ಉಜ್ಜಾಸಕ
63 ಧೂಮಾವತೀ
64 ಶಿವಾ.

ಈ ಗ್ರಂಥಗಳಲ್ಲಿ ಹೇಳಿರುವ ಮಂತ್ರಗಳನ್ನೆಲ್ಲ ಈ ಪುರಾಣದಲ್ಲಿ ಸಂಗ್ರಹಿಸಿದೆ. ಮಂತ್ರಗಳನ್ನು ಮಾತ್ರ ತಿಳಿದರೆ ಸಾಲದು. ಪ್ರತಿಯೊಂದು ಮಂತ್ರಕ್ಕೂ ಋಷಿ, ಛಂದಸ್ಸು, ದೇವತೆ, ಆಯಾಯಾ ಮಂತ್ರಕ್ಕನುಗುಣವಾದ ಪಂಚಾಂಗ ಅಥವಾ ಷಡಂಗನ್ಯಾಸ, ಧ್ಯಾನ, ಜಪಸಂಖ್ಯೆ, ತರ್ಪಣ, ಹೋಮ, ಪೂಜೆ, ಕೆಲವೆಡೆಗಳಲ್ಲಿ ಯಂತ್ರನಿರ್ಮಾಣಕ್ರಮ, ವಿಶೇಷನ್ಯಾಸಗಳು ಇವೆಲ್ಲವನ್ನೂ

ಚೆನ್ನಾಗಿ ತಿಳಿದು ಅನುಷ್ಠಾನವಾಡಿದರೇ ಸಿದ್ಧಿಯಾಗುವುದು. ಸಿದ್ಧಿಯನ್ನು ಪಡೆದವನು ನಾನಾವಿಧಪ್ರಯೋಗಗಳನ್ನಾಚರಿಸಿ ಕಾಮ್ಯಫಲಗಳನ್ನು ಹೊಂದಬಹುದು. ಈ ಅಂಗಕಲಾಪನೆಲ್ಲವೂ ಈ ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಮಂತ್ರಗಳು ಮಾತ್ರವೇ ಅಲ್ಲದೆ ಅತ್ಯಂತ ಶ್ರೇಯಸ್ಸಾಧನಗಳಾದ ಕವಚ, ದೀಪವಿಧಾನ, ಆಯಾಯಾ ದೇವತೆಗಳ ಸಹಸ್ರನಾಮ ಮುಂತಾದುವೂ ಸಹ ಸಪರಿಕರವಾಗಿ ಉಕ್ತವಾಗಿವೆ.

ಈ ಸಂಪುಟದಲ್ಲಿ ಎಂಬತ್ತನೆಯ ಅಧ್ಯಾಯದಿಂದ ತೊಂಬತ್ತೊಂದನೆಯ ಅಧ್ಯಾಯ ಪೂರ್ತಿಯಾಗಿ ಹನ್ನೆರಡು ಅಧ್ಯಾಯಗಳು ಅಡಕವಾಗಿವೆ. ಇಲ್ಲಿಗೆ ಮಂತ್ರಶಾಸ್ತ್ರವು ಮತ್ತು ಪೂರ್ವಭಾಗದ ಮೂರನೆಯ ಭಾಗವೂ ಕೂಡ ಮುಗಿದುವು. ಈ ಸಂಪುಟಕ್ಕೆ ಮಂತ್ರಶಾಸ್ತ್ರದ ಎರಡನೆಯ ಭಾಗವೆಂದು ಅಂಕಿತ ಮಾಡಿದೆ.

ಸಂಪದಭ್ಯುದಯ ಮತ್ತು ಪರಮಪುರುಷಾರ್ಥಗಳಿಗೆ ಸಾಧಕವಾದ ಅನರ್ಘ್ಯವಿಷಯಗಳನ್ನೊಳಗೊಂಡಿರುವ ಈ ಪುರಾಣವನ್ನು ದೇಶಭಾಷೆಯಲ್ಲಿ ಪರಿವರ್ತಿಸಲು ಅವಕಾಶವನ್ನು ದಯೆಪಾಲಿಸಿ ಕನ್ನಡನಾಡಿನ ಜನತೆಗೆ ಜ್ಞಾನಜ್ಯೋತಿಯನ್ನು ಬೆಳಗಿಸಿ ಮಹೋಪಕಾರಮಾಡುತ್ತಿರುವ, ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುಗಳ ಸನ್ನಿಧಾನದಲ್ಲಿ ಕೃತಜ್ಞತೆಯನ್ನರ್ಪಿಸಿ, ಮಹಾಸ್ವಾಮಿಯವರಿಗೆ ಮಂತ್ರದೇವತೆಯಾದ ಭಗವಂತನು ಆಯುರಾರೋಗ್ಯ ಸತ್ಸಂತಾನಾದಿಸಂಪತ್ತುಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಅನುವಾದಕ

ಮೈಸೂರು
ಸರ್ವಜಿತ್ ಸಂ. ಕಾರ್ತಿಕ ಕೃಷ್ಣ ತ್ರಯೋದಶೀ.
10-12-1947

ಪಂಡಿತಶಿರೋಮಣಿ, ವಿದ್ವನ್ಮಣಿ, ಮಹಾವಿದ್ವಾನ್,
**ಡಿ. ವಾಸುದೇವಾಚಾರ್ಯ**



# ವಿಷಯಸೂಚೀ



ಪುಟಸಂಖ್ಯೆ

ಪುಟಸಂಖ್ಯೆ

ಹದಿಮೂರಕ್ಷರಗಳ ಮೂರು ಕೃಷ್ಣಮಂತ್ರಗಳು.
ನ್ಯಾಸ, ಧ್ಯಾನ ಮುಂತಾದುವುಗಳು.
ದ್ವಾದಶಾಕ್ಷರ ಕೃಷ್ಣಮಂತ್ರ.
ಹದಿನಾರಕ್ಷರಗಳ ಕೃಷ್ಣಮಂತ್ರ.
ಇಪ್ಪತ್ತೆರಡಕ್ಷರಗಳ ಕೃಷ್ಣಮಂತ್ರ.
ಮೂವತ್ತುಮೂರಕ್ಷರಗಳ ಕೃಷ್ಣಮಂತ್ರ.
ಇಪ್ಪತ್ತೆಂಟಕ್ಷರಗಳ ಕೃಷ್ಣಮಂತ್ರ.
ಮೂವತ್ತೆರಡಕ್ಷರಗಳ ಕೃಷ್ಣಮಂತ್ರ.
ಹತ್ತೊಂಬತ್ತಕ್ಷರಗಳ ಕೃಷ್ಣಮಂತ್ರ.
ಹದಿನಾರಕ್ಷರಗಳ ಕೃಷ್ಣಮಂತ್ರ.
ಇಪ್ಪತ್ತೊಂಬತ್ತಕ್ಷರಗಳ ಕೃಷ್ಣಮಂತ್ರ.
ಸಪ್ತಾಕ್ಷರಗಳ ಕೃಷ್ಣಮಂತ್ರ.
ದ್ವಾದಶಾಕ್ಷರಗಳ ಕೃಷ್ಣಮಂತ್ರ.
ಅಷ್ಟಾಕ್ಷರಮಹಾಮಂತ್ರ.
ಇಪ್ಪತ್ತುನಾಲ್ಕಕ್ಷರಗಳ ಕೃಷ್ಣಮಂತ್ರ.
ಏಕಾಕ್ಷರ ಕೃಷ್ಣಮಂತ್ರ.
ದ್ವ್ಯಕ್ಷರಮಂತ್ರ.
ತ್ರ್ಯಕ್ಷರಮಂತ್ರ.
ನಾಲ್ಕಕ್ಷರಗಳ ಮಂತ್ರ.
ಪಂಚಾಕ್ಷರ ಮಂತ್ರದ್ವಯ.
ಷಡಕ್ಷರ ಮಂತ್ರದ್ವಯ.
ಸಪ್ತಾಕ್ಷರ ಮಂತ್ರದ್ವಯ.
ನವಾಕ್ಷರ ಮಂತ್ರದ್ವಯ.
ದಶಾಕ್ಷರ ಮಂತ್ರದ್ವಯ.
ಪುತ್ರಪ್ರದ ಕೃಷ್ಣಮಂತ್ರ.
ಪಂಚಬ್ರಹ್ಮಾತ್ಮಕಮಂತ್ರ.
ಅಷ್ಟಾಕ್ಷರಮಂತ್ರ. (ಹೃಷೀಕೇಶಮಂತ್ರ)

ಪುಟಸಂಖ್ಯೆ

॥ ಶ್ರೀಃ ॥

# ನಾರದೀಯಮಹಾಪುರಾಣಂ

## ಅಶೀತಿತಮೋಽಧ್ಯಾಯಃ

ಸೂತ ಉವಾಚ

ಶ್ರುತ್ವಾ ತು ನಾರದೋ ವಿಪ್ರಾಃ ಕುಮಾರವಚನಂ ಮುನಿಃ ।
ಯತ್ಪಪ್ರಚ್ಛ ಪುನಸ್ತಚ್ಚ ಯುಷ್ಮಭ್ಯಂ ಪ್ರವದಾಮ್ಯಹಂ ॥ ೧ ॥

ಕಾರ್ತವೀರ್ಯಸ್ಯ ಕವಚಂ ತಥಾ ಹನುಮತೋಽಪಿ ಚ ।
ಚರಿತಂ ಚ ಮಹತ್ಪುಣ್ಯಂ ಶ್ರುತ್ವಾ ಭೂಯೋಽಬ್ರವೀದ್ವಚಃ ॥ ೨ ॥

ನಾರದ ಉವಾಚ

ಸಾಧು ಸಾಧು ಮುನಿಶ್ರೇಷ್ಠ ತ್ವಯಾತಿಕರುಣಾತ್ಮನಾ ।
ಶ್ರಾವಿತಂ ಚರಿತಂ ಪುಣ್ಯಂ ಶಿವಸ್ಯ ಚ ಹನೂಮತಃ ॥ ೩ ॥

---

## ಎಂಬತ್ತನೆಯ ಅಧ್ಯಾಯವು

೧. ಸೂತನು ಹೇಳಿದನು :—ಬ್ರಾಹ್ಮಣರೇ! ನಾರದಮುನಿಯು ಸನತ್ಕುಮಾರನ ಮಾತನ್ನು ಕೇಳಿದನಂತರ ಪುನಃ ಪ್ರಶ್ನೆಮಾಡಿದ ವಿಷಯವನ್ನೂ ನಿಮಗೆ ಹೇಳುವೆನು.

೨. ಕಾರ್ತವೀರ್ಯಾರ್ಜುನ ಮತ್ತು ಹನುಮಂತನ ಕವಚಗಳು, ಮಹಾಪುಣ್ಯಕರವಾದ ಚರಿತ್ರೆ ಇವುಗಳನ್ನು ಕೇಳಿ ನಾರದನು ಪುನಃ ಪ್ರಶ್ನೆ ಮಾಡಿದನು.

೩. ನಾರದನು ಹೇಳಿದನು :—ಮುನಿವರ್ಯನೇ! ಒಳ್ಳೆಯದು, ಒಳ್ಳೆಯದು, ಅತ್ಯಂತ ದಯಾಳುವಾದ ನಿನ್ನಿಂದ ಪುಣ್ಯಕರವಾದ ಶಿವ ಮತ್ತು ಹನುಮಂತನ ಚರಿತ್ರೆಯನ್ನು ಶ್ರವಣಮಾಡಿದೆನು.

ತಂತ್ರಸ್ಯಾಸ್ಯ ಕ್ರಮಪ್ರಾಪ್ತಂ ಕಥನೀಯಂ ಚ ಯತ್ತ್ವಯಾ ।
ತತ್ಪ್ರಬ್ರೂಹಿ ಮಹಾಭಾಗ ಕಿಂ ಪೃಚ್ಛಾಮ್ಯನ್ಯದ್ವಿದಾಂ ವರ ॥ ೪ ॥

ಸನತ್ಕುಮಾರ ಉವಾಚ

ಅಥ ವಕ್ಷ್ಯೇ ಕೃಷ್ಣಮಂತ್ರಾನ್ ಭುಕ್ತಿಮುಕ್ತಿಫಲಪ್ರದಾನ್ ।
ಬ್ರಹ್ಮಾದ್ಯಾ ಯಾನ್ಸಮಾರಾಧ್ಯ ಸೃಷ್ಟ್ಯಾದಿಕರಣೇ ಕ್ಷಮಾಃ ॥ ೫ ॥

ಕಾಮಃ ಕೃಷ್ಣಪದಂ ಙೇಂತಂ ಗೋವಿಂದಂ ಚ ತಥಾವಿಧಂ ।
ಗೋಪೀಜನಪದಂ ಪಶ್ಚಾದ್ವಲ್ಲಭಾಯಾಗ್ನಿಸುಂದರೀ ॥ ೬ ॥

ಅಷ್ಟಾದಶಾರ್ಣೋ ಮಂತ್ರೋಽಯಂ ದುರ್ಗಾಧಿಷ್ಠಾತೃದೈವತಃ ।
ನಾರದೋಽಸ್ಯ ಮುನಿಶ್ಛಂದೋ ಗಾಯತ್ರೀ ದೇವತಾ ಪುನಃ ॥ ೭ ॥

---

೪. ಜ್ಞಾನಿಶ್ರೇಷ್ಠನಾದ ಸನತ್ಕುಮಾರ ಮಹಾಶಯನೇ! ಬೇರೆ ವಿಷಯವನ್ನು ಕೇಳುವುದರಿಂದೇನು ಫಲ? ನೀನು ಹೇಳಲುಪಕ್ರಮಿಸಿರುವ ಮಂತ್ರಶಾಸ್ತ್ರದ ವಿಷಯಗಳಲ್ಲಿ ಇದುವರೆಗೆ ಹೇಳಿರುವ ಮಂತ್ರಗಳ ಅನಂತರ ಕ್ರಮಪ್ರಾಪ್ತವಾಗಿ ಹೇಳಬೇಕಾಗಿರುವ ಮಂತ್ರಗಳನ್ನು ನನಗೆ ಸಪರಿಕರವಾಗಿ ಹೇಳು.

೫. ಸನತ್ಕುಮಾರನು ಹೇಳಿದನು :—ಬ್ರಹ್ಮಾದಿದೇವತೆಗಳು ಯಾವ ಮಂತ್ರಗಳನ್ನಾರಾಧಿಸಿ ಸೃಷ್ಟಿ ಮುಂತಾದ ಮಹಾಕಾರ್ಯಗಳನ್ನು ಮಾಡಲು ಸಮರ್ಥರಾದರೋ ಅಂತಹ, ಇಹದಲ್ಲಿ ಭೋಗ, ಪರದಲ್ಲಿ ಮುಕ್ತಿ ಎಂಬ ಮಹಾಫಲಗಳನ್ನು ಕೊಡುವ ಕೃಷ್ಣಮಂತ್ರಗಳನ್ನು ಈಗ ಹೇಳುವೆನು.

೬-೮. (ಕಾಮ= ಕ್ಲೀಂ, ಅಗ್ನಿಸುಂದರೀ= ಸ್ವಾಹಾ.) “ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪೀಜನವಲ್ಲಭಾಯ ಸ್ವಾಹಾ ”

ಇದು ಹದಿನೆಂಟು ಅಕ್ಷರಗಳುಳ್ಳ ಮಂತ್ರವು. ದುರ್ಗಾದೇವಿಯು ಇದಕ್ಕೆ ಅಧಿದೇವತೆಯು. ನಾರದನು ಋಷಿಯು, ಗಾಯತ್ರೀ ಛಂದಸ್ಸು,

**ಶ್ರೀಕೃಷ್ಣಃ ಪರಮಾತ್ಮಾ ಚ ಕಾಮೋ ಬೀಜಂ ಪ್ರಕೀರ್ತಿತಂ ।**
**ಸ್ವಾಹಾ ಶಕ್ತಿರ್ನಿಯೋಗಸ್ತು ಚತುರ್ವರ್ಗಪ್ರಸಿದ್ಧಯೇ　　　॥ ೮ ॥**

**ಋಷಿಂ ಶಿರಸಿ ವಕ್ತ್ರೇ ತು ಛಂದಶ್ಚ ಹೃದಿ ದೇವತಾಂ ।**
**ಗುಹ್ಯೇ ಬೀಜಂ ಪದೋಃ ಶಕ್ತಿಂ ನ್ಯಸೇತ್ಸಾಧಕಸತ್ತಮಃ　　　॥ ೯ ॥**

**ಯುಗವೇದಾಬ್ಧಿನಿಗಮೈರ್ದ್ವಾಭ್ಯಾಂ ವರ್ಣೈರ್ಮನೂದ್ಭವೈಃ ।**
**ಪಂಚಾಂಗಾನಿ ಪ್ರವಿನ್ಯಸ್ಯ ತತ್ತ್ವನ್ಯಾಸಂ ಸಮಾಚರೇತ್　　　॥ ೧೦ ॥**

**ಹೃದಂತಮಾದಿಕಾಂತಾರ್ಣಪರಾಯೊಾದ್ಯಾನಿ ಚಾತ್ಮನೇ ।**
**ನತ್ಯಂತಾನಿ ಚ ತತ್ತ್ವಾನಿ ಜೀವಾದ್ಯಾನಿ ನ್ಯಸೇತ್ಕ್ರಮಾತ್　　　॥ ೧೧ ॥**

---

ಶ್ರೀ ಕೃಷ್ಣಪರಮಾತ್ಮನೇ ದೇವತೆ, ‘ ಕ್ಲೀಂ ’ ಎಂಬುದೇ ಬೀಜ, ‘ ಸ್ವಾಹಾ ’ ಎಂಬುದೇ ಶಕ್ತಿ, ಸಮಸ್ತಪುರುಷಾರ್ಥಸಿಧ್ಯರ್ಥವಾಗಿ ವಿನಿಯೋಗ ಎಂದರೆ ಜಪಾದಿಗಳನ್ನು ಮಾಡಬೇಕು.

೯. ಸಾಧಕವರ್ಯನು ಋಷಿಯನ್ನು ಶಿರಸ್ಸಿನಲ್ಲಿಯೂ, ಛಂದಸ್ಸನ್ನು ಬಾಯಿಯಲ್ಲಿಯೂ, ದೇವತೆಯನ್ನು ಹೃದಯದಲ್ಲಿಯೂ, ಗುಹ್ಯಾವಯವದಲ್ಲಿ ಬೀಜವನ್ನೂ, ಪಾದಗಳಲ್ಲಿ ಶಕ್ತಿಯನ್ನೂ ನ್ಯಾಸಮಾಡಭೇಕು.

೧೦. ಈ ಮಂತ್ರದ 4, 4, 4, 4, 2 ವರ್ಣಗಳಿಂದ ಹೃದಯಾದಿ ಪಂಚಾಂಗಗಳನ್ನು ನ್ಯಾಸಮಾಡಿ ತತ್ತ್ವನ್ಯಾಸವನ್ನು ಮಾಡಬೇಕು.

೧೧. ತತ್ತ್ವ, ಅದರ ಸ್ಥಾನ, ನ್ಯಾಸಮಂತ್ರ ಇವುಗಳನ್ನು ಹೇಳುತ್ತಾರೆ :––ವ್ಯುತ್ಕ್ರಮವಾಗಿ ಮಕಾರದಿಂದ ಕಕಾರದವರೆಗಿನ ಇಪ್ಪತ್ತೈದು ಅಕ್ಷರಗಳನ್ನು ಪ್ರತ್ಯೇಕವಾಗಿ ಅನುಸ್ವಾರ ಸಹಿತ ಮೊದಲು ಹೇಳಿ ನಂತರ ‘ ನಮಃ ’ ಎಂಬ ಪದವನ್ನೂ, ಬಳಿಕ ‘ ಪರಾಯ ’ ಎಂಬ ಪದವನ್ನೂ, ಅದರ ಮುಂದೆ ಜೀವಾದಿ ತತ್ತ್ವಗಳಲ್ಲೊಂದರ ಹೆಸರು ಸಹಿತವಾದ ‘ ಆತ್ಮನೇ ’ ಎಂಬ ಪದವನ್ನೂ ಸೇರಿಸಿ ಕೊನೆಯಲ್ಲಿ ‘ ನಮಃ ’ ಪದವನ್ನೂ ಸಂಯೋಜನೆ ಮಾಡುವುದರಿಂದ ನಿಷ್ಪನ್ನವಾಗುವ “ ಮಂ ನಮಃ ಪರಾಯ ಜೀವಾತ್ಮನೇ

**ಜೀವಂ ಪ್ರಾಣಂ ಮತಿಮಹಂಕಾರಂ ಮನಸ್ತಥೈವ ಚ |**
**ಶಬ್ದಂ ಸ್ಪರ್ಶಂ ರೂಪರಸೌ ಗಂಧಂ ಶ್ರೋತ್ರಂ ತ್ವಚಂ ತಥಾ || ೧೨ ||**

**ನೇತ್ರಂ ಚ ರಸನಾಂ ಘ್ರಾಣಂ ವಾಚಂ ಪಾಣಿಂ ಪದೇಂದ್ರಿಯಂ |**
**ಪಾಯುಂ ಶಿಶ್ನಮಥಾಕಾಶಂ ವಾಯುಂ ವಹ್ನಿಂ ಜಲಂ ಮಹೀಂ || ೧೩ ||**

**ಜೀವಂ ಪ್ರಾಣಂ ಚ ಸರ್ವಾಂಗೇ ಮತ್ಯಾದಿತ್ರಿತಯಂ ಹೃದಿ |**
**ಮೂರ್ಧಾಸ್ಯಹೃದ್ಗುಹ್ಯಪಾದೇಷ್ವಥ ಶಬ್ದಾದಿಕಾನ್ನ್ಯಸೇತ್ || ೧೪ ||**

**ಕರ್ಣಾದಿಸ್ವಸ್ವಸ್ಥಾನೇಷು ಶ್ರೋತ್ರಾದೀನೀಂದ್ರಿಯಾಣಿ ಚ |**
**ತಥಾ ವಾಗಾದೀಂದ್ರಿಯಾಣಿ ಸ್ವಸ್ವಸ್ಥಾನೇಷು ವಿನ್ಯಸೇತ್ || ೧೫ ||**

---

ನಮಃ, ಭಂ ನಮಃ ಪರಾಯ ಪ್ರಾಣಾತ್ಮನೇ ನಮಃ" ಇತ್ಯಾದಿ ಮಂತ್ರಗಳಿಂದ ಜೀವಾದಿ ತತ್ವಗಳನ್ನು ಕ್ರಮವಾಗಿ ನ್ಯಾಸಮಾಡಬೇಕು.

೧೨-೧೩. ಜೀವಾದಿತತ್ವಗಳನ್ನು ಹೇಳುತ್ತಾರೆ .--ಜೀವ, ಪ್ರಾಣ, ಮತಿ, ಅಹಂಕಾರ, ಮನಸ್ಸು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಶ್ರೋತ್ರ, ತ್ವಕ್, ನೇತ್ರ, ಜಿಹ್ವೆ, ಘ್ರಾಣ, ವಾಕ್ಕು, ಹಸ್ತ, ಪಾದ, ಪಾಯು (ಗುಹ್ಯ) ಶಿಶ್ನ, ಆಕಾಶ, ವಾಯು, ವಹ್ನಿ, ಜಲ, ಪೃಥಿವೀ ಈ ಇಪ್ಪತ್ತೈದು ತತ್ವಗಳನ್ನು ಹಿಂದೆ ಹೇಳಿರುವ ಮಂತ್ರಗಳಿಂದ ನ್ಯಾಸಮಾಡಬೇಕು.

೧೪-೧೫. ಆಯಾ ತತ್ವಗಳ ನ್ಯಾಸ ಸ್ಥಾನಗಳನ್ನು ವಿವರಿಸುತ್ತಾರೆ :- ಜೀವ ಮತ್ತು ಪ್ರಾಣಗಳನ್ನು ಸರ್ವಾಂಗಗಳಲ್ಲಿಯೂ, ಮತಿ ಅಹಂಕಾರ ಮನಸ್ಸುಗಳನ್ನು ಹೃದಂಯದಲ್ಲಿಯೂ, ಶಿರಸ್ಸು, ಮುಖ, ಹೃದಯ, ಗುಹ್ಯ, ಪಾದಗಳಲ್ಲಿ ಕ್ರಮವಾಗಿ ಶಬ್ದಾದಿ ಪಂಚತನ್ಮಾತ್ರಗಳನ್ನೂ ನ್ಯಾಸಮಾಡಬೇಕು. ಶ್ರೋತ್ರಾದೀಂದ್ರಿಯ ಮತ್ತು ವಾಗಾದೀಂದ್ರಿಯ ಇವನ್ನು ಕಿವಿ ಮುಂತಾದ ಆದರದರ ಸ್ಥಾನಗಳಲ್ಲಿ ನ್ಯಾಸಮಾಡಬೇಕು.

ಮೂರ್ಧಾಸ್ಯಹೃದ್ಗುಹ್ಯಪಾದೇಷ್ವಾಕಾಶಾದೀನ್ನ್ಯಸೇತ್ತತಃ ।
ಹೃತ್ಪುಂಡರೀಕಮರ್ಕೇಂದುವಹ್ನಿಬಿಂಬಾನ್ಯನುಕ್ರಮಾತ್ || ೧೬ ||

ದ್ವಿಷಟ್‌ದ್ವ್ಯಷ್ಟದಶಕಲಾ ವ್ಯಾಪ್ತಾನಿ ಚ ತಥಾ ಮತಃ ।
ಭೂತಾಷ್ಟಾಂಗಾಕ್ಷಿಪದಗೈರ್ವರ್ಣೈಃ ಪ್ರಾಗ್ವನ್ನ್ಯಸೇದ್ಧೃದಿ || ೧೭ ||

ಅಥಾಕಾಶಾದಿಸ್ಥಲೇಷು ವಾಸುದೇವಾದಿಕಾಂಸ್ತತಃ ।
ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಶ್ಚಾನಿರುದ್ಧಕಃ || ೧೮ ||

ನಾರಾಯಣಶ್ಚ ಕ್ರಮಶಃ ಪರಮೇಷ್ಠ್ಯಾದಿಭಿರ್ಯುತಾಃ ।
ಪರಮೇಷ್ಠಿಪುಮಾಂಸೌ ಚ ವಿಶ್ವನಿವೃತ್ತಿಸರ್ವಕಾಃ || ೧೯ ||

---

೧೬-೧೭. ತಲೆ, ಮುಖ, ಹೃದಯ, ಗುಹ್ಯ, ಪಾದ ಇವುಗಳಲ್ಲಿ ಆಕಾಶಾದಿ ಪಂಚಭೂತಗಳನ್ನು ಕ್ರಮವಾಗಿ ನ್ಯಾಸಮಾಡಬೇಕು. ತರುವಾಯ ಹೃತ್ಪುಂಡರೀಕ ಮತ್ತು ಹನ್ನೆರಡು ಕಲೆಗಳಿಂದ ಸಹಿತವಾದ ಸೂರ್ಯಬಿಂಬ, ಹದಿನಾರು ಕಲೆಗಳಿಂದ ಕೂಡಿದ ಚಂದ್ರಬಿಂಬ, ಹತ್ತು ಕಲೆಗಳಿಂದ ಯುಕ್ತವಾದ ಅಗ್ನಿಬಿಂಬ ಈ ನಾಲ್ಕನ್ನೂ ಯಕಾರದಿಂದ ಐದನೆಯದಾದ 'ಶ,' ಎಂಟನೆಯದಾದ 'ಹ,' ಏಳನೆಯದಾದ 'ಸ,' ಎರಡನೆಯದಾದ 'ರ' ಈ ವರ್ಣಗಳನ್ನು ಅನುಸ್ವಾರ ಸಹಿತವಾಗಿ ಆದಿಯಲ್ಲಿ ಸೇರಿಸಿ ಪೂರ್ವೋಕ್ತರೀತಿಯಿಂದ ಹೃದಯದಲ್ಲಿ ನ್ಯಾಸಮಾಡಬೇಕು. ಅದರ ಮಂತ್ರ :--

'ಶಂ ನಮಃ ಪರಾಯ ಪುಂಡರೀಕಾತ್ಮನೇ ನಮಃ', 'ಹಂ ನಮಃ ಪರಾಯ ದ್ವಾದಶಕಲಾವ್ಯಾಪ್ತಸೂರ್ಯಮಂಡಲಾತ್ಮನೇ ನಮಃ', 'ಸಂ ನಮಃ ಪರಾಯ ಷೋಡಶಕಲಾವ್ಯಾಪ್ತಚಂದ್ರಮಂಡಲಾತ್ಮನೇ ನಮಃ', 'ರಂ ನಮಃ ಪರಾಯ ದಶಕಲಾವ್ಯಾಪ್ತವಹ್ನಿಮಂಡಲಾತ್ಮನೇ ನಮಃ' ಎಂಬ ಈ ನಾಲ್ಕು ಹೃತ್ಪುಂಡರೀಕಾದಿ ನ್ಯಾಸಮಂತ್ರಗಳು.

೧೮-೨೧. ತರುವಾಯ ಆಕಾಶಾದಿ ಪಂಚಭೂತಸ್ಥಾನಗಳಾದ ಶಿರಸ್ಸು, ಮುಖ, ಹೃದಯ, ಗುಹ್ಯ ಮತ್ತು ಪಾದಗಳಲ್ಲಿ ಪರಮೇಷ್ಠೀ, ಪುರುಷ, ವಿಶ್ವ,

**ಶ್ವೇತಾನಿಲಾಗ್ನ್ಯಂಬುಭೂಮಿವರ್ಣೈಃ ಪ್ರಾಗ್ವತ್ತ್ರವಿನ್ನ್ಯಸೇತ್ |**
**ಸ್ವಬೀಜಾದ್ಯಂ ಕೋಪತತ್ತ್ವಂ ನೃಸಿಂಹಂ ವ್ಯಾಪಕೇನ ಚ || ೨೦ ||**
**ಪ್ರಾಗ್ವದ್ವಿನ್ಯಸ್ಯ ಸರ್ವಾಂಗೇ ತತ್ತ್ವನ್ಯಾಸೋಯಮೀರಿತಃ |**
**ಮಕಾರಾದ್ಯಾ ಆದ್ಯವರ್ಣಾಃ ಸರ್ವೇ ಸ್ಯುಶ್ಚಂದ್ರಭೂಷಿತಾಃ || ೨೧ ||**
**ವಾಸುದೇವಾದಿಕಾ ಜ್ಞೇಯಾ ಜೇಂತಾಃ ಸಾಧಕಸತ್ತಮೈಃ |**
**ಪ್ರಾಣಾಯಾಮಂ ತತಃ ಕೃತ್ವಾ ಪೂರಕುಂಭಕರೇಚಕೈಃ || ೨೨ ||**

---

ನಿವೃತ್ತಿ, ಸರ್ವ ಇವುಗಳಿಂದ ಸಹಿತವಾದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ ಮತ್ತು ನಾರಾಯಣ ಇವರನ್ನು ಕ್ರಮವಾಗಿ ಪ, ಯ, ಲ, ವ, ಳ ಎಂಬ ಅಕ್ಷರಗಳಿಂದ ಹಿಂದೆ ಹೇಳಿರುವ ಪ್ರಕಾರ ನ್ಯಾಸಮಾಡಬೇಕು. ಹೇಗೆಂದರೆ :-

'ಷಂ ನಮಃ ಪರಾಯ ವಾಸದೇವಾಯ ಪರಮೇಷ್ಠ್ಯಾತ್ಮನೇ ನಮಃ' ಎಂದು ಶಿರಸ್ಸಿನಲ್ಲಿಯೂ, 'ಯಂ ನಮಃ ಪರಾಯ ಸಂಕರ್ಷಣಾಯ ಪುರುಷಾತ್ಮನೇ ನಮಃ' ಎಂದು ಮುಖದಲ್ಲಿಯೂ, 'ಲಂ ನಮಃ ಪರಾಯ ಪ್ರದ್ಯುಮ್ನಾಯ ವಿಶ್ವಾತ್ಮನೇ ನಮಃ' ಎಂದು ಹೃದಯದಲ್ಲಿಯೂ, 'ವಂ ನಮಃ ಪರಾಯ ಅನಿರುದ್ಧಾಯ ನಿವೃತ್ತ್ಯಾತ್ಮನೇ ನಮಃ' ಎಂದು ಶಿಶ್ನದಲ್ಲಿಯೂ, 'ಲಂ ನಮಃ ಪರಾಯ ನಾರಾಯಣಾಯ ಸರ್ವಾತ್ಮನೇ ನಮಃ' ಎಂದು ಪಾದಗಳಲ್ಲಿಯೂ ನ್ಯಾಸ ಮಾಡಬೇಕು.

ಅನಂತರ ಆದಿಯಲ್ಲಿ 'ಕ್ಷ್ರೌಂ' ಎಂಬ ನರಸಿಂಹ ಬೀಜಾಕ್ಷರ, ಕೋಪತತ್ವ, ಚತುರ್ಥೀ ವಿಭಕ್ತ್ಯಂತ ನೃಸಿಂಹಪದ= 'ನರಸಿಂಹಾಯ' ಎಂಬ ಪದಗಳನ್ನು ಸೇರಿಸಿ ಹಿಂದಿನಂತೆ ಎಂದರೆ 'ಕ್ಷ್ರೌಂ ನಮಃ ಪರಾಯ ನೃಸಿಂಹಾಯ ಕೋಪತತ್ವಾತ್ಮನೇ ನಮಃ' ಎಂದು ಸರ್ವಾಂಗಗಳಲ್ಲಿಯೂ ನ್ಯಾಸ ಮಾಡಬೇಕು. 'ಮ' ಮುಂತಾದ ಆದ್ಯಕ್ಷರಗಳೆಲ್ಲವೂ ಅನುಸ್ವಾರಸಹಿತವಾಗಿ ಮಂತ್ರದಲ್ಲಿ ಸೇರಿಸಲ್ಪಡಬೇಕು. ಇದೇ ತತ್ವನ್ಯಾಸವೆಂದು ಉಕ್ತವಾಗಿದೆ.

೨೨-೨೩. ಸಾಧಕವರ್ಯರು ವಾಸುದೇವಾದಿ ಶಬ್ದಗಳನ್ನು 'ವಾಸುದೇವಾಯ' ಮುಂತಾಗಿ ಚತುರ್ಥೀ ವಿಭಕ್ತ್ಯಂತವಾಗಿ ಉಪಯೋಗಿಸಬೇಕು.

ಚತುರ್ಭಿಷ್ಷಡ್ಭಿರ್ದ್ವಾಭ್ಯಾಂ ಚ ಮೂಲಮಂತ್ರೇಣ ಮಂತ್ರವಿತ್ |
ಕೇಚಿದಾಹುರಿಹಾಚಾರ್ಯಾಃ ಪ್ರಾಣಾಯಾಮೋತ್ತರಂ ಪುನಃ　　|| ೨೩ ||

ಪೀಠನ್ಯಾಸಂ ವಿಧಾಯಾಥ ನ್ಯಾಸಾನನ್ಯಾನ್ಸಮಾಚರೇತ್ |
ದಶತತ್ತ್ವಾದಿ ವಿನ್ಯಸ್ಯ ವಕ್ಷ್ಯಮಾಣವಿಧಾನತಃ　　|| ೨೪ ||

ಮೂರ್ತಿಪಂಜರನಾಮಾನಂ ಪೂರ್ವೋಕ್ತಂ ವಿನ್ಯಸೇದ್ಬುಧಃ |
ಸರ್ವಾಂಗೇ ವ್ಯಾಪಕಂ ಕೃತ್ವಾ ಕಿರೀಟಮನುನಾ ಸುಧೀಃ　　|| ೨೫ ||

ತತಸ್ತಾರಪುಟಂ ಮಂತ್ರಂ ವ್ಯಾಪಯ್ಯ ಕರಯೋಸ್ತ್ರಿಶಃ |
ಪಂಚಾಂಗುಲೀಷು ಕರಯೋಃ ಪಂಚಾಂಗಂ ವಿನ್ಯಸೇತ್ತತಃ　　|| ೨೬ ||

ತ್ರಿಶೋ ಮೂಲೇನ ಮೂರ್ಧಾದಿಪಾದಾಂತಂ ವ್ಯಾಪಕಂ ನ್ಯಸೇತ್ |
ಸಕೃದ್ವ್ಯಾಪಯ್ಯ ತಾರೇಣ ಮಂತ್ರನ್ಯಾಸಂ ತತಶ್ಚರೇತ್　　|| ೨೭ ||

---

ತರುವಾಯ ಮಂತ್ರಜ್ಞನು ಮೂಲಮಂತ್ರವನ್ನು ಕ್ರಮವಾಗಿ ನಾಲ್ಕು, ಆರು, ಎರಡು ಸಾರಿ ಜಪಿಸುತ್ತಾ ಪೂರಕ, ಕುಂಭಕ, ರೇಚಕಗಳಿಂದ--ಪ್ರಾಣಾಯಾಮ ಮಾಡಬೇಕು. ಕೆಲವು ಆಚಾರ್ಯರು ಪ್ರಾಣಾಯಾಮ ಮಾಡಿದ ಮೇಲೆ ಪುನಃ ನ್ಯಾಸ ಮಾಡಬೇಕು ಎಂದು ಹೇಳುತ್ತಾರೆ.

೨೪. ಪೀಠನ್ಯಾಸ ಮಾಡಿ, ಬಳಿಕ ದಶತತ್ವಾದಿನ್ಯಾಸವನ್ನಾಚರಿಸಿ ಮುಂದೆ ಹೇಳುವ ವಿಧಾನಾನುಸಾರವಾಗಿ ಇತರ ನ್ಯಾಸಗಳನ್ನ ಮಾಡಬೇಕು.

೨೫. ಜ್ಞಾನಿಯು ಕಿರೀಟಮಂತ್ರದಿಂದ ಪೂರ್ವೋಕ್ತಮೂರ್ತಿಪಂಜರ ನ್ಯಾಸವನ್ನು ಸರ್ವಾಂಗಗಳಲ್ಲಿಯೂ ವ್ಯಾಪಿಸುವಂತೆ ಮಾಡಬೇಕು.

೨೬. ಅನಂತರ ಆದ್ಯಂತಗಳಲ್ಲಿ ಓಂಕಾರ ಸಹಿತವಾದ ಮಂತ್ರವನ್ನು ಮೂರಾವರ್ತಿ ಜಪಿಸಿ ಕೈಗಳ ಐದುಬೆರಳುಗಳಲ್ಲಿಯೂ ವ್ಯಾಪಕನ್ಯಾಸ ಮಾಡಿ ಪಂಚಾಂಗ ನ್ಯಾಸ ಮಾಡಬೇಕು.

೨೭. ತರುವಾಯ ಮೂಲಮಂತ್ರದಿಂದ ಶಿರಸ್ಸಿನಿಂದ ಕಾಲಿನವರೆಗೂ ಮೂರಾವರ್ತಿ ವ್ಯಾಪಕನ್ಯಾಸ ಮಾಡಬೇಕು. ಒಂದು ಸಾರಿ ತಾರಮಂತ್ರದಿಂದ ಸರ್ವಾಂಗನ್ಯಾಸ ಮಾಡಿ ಬಳಿಕ ಮಂತ್ರನ್ಯಾಸ ಮಾಡಬೇಕು.

ಶಿರೋಲಲಾಟೇ ಭ್ರೂಮಧ್ಯೇ ಕರ್ಣಯೋಶ್ಚಕ್ಷುಷೋಸ್ತಥಾ |
ಘ್ರಾಣಯೋರ್ವದನೇ ಕಂಠೇ ಹೃದಿ ನಾಭೌ ತಥಾ ಪುನಃ || ೨೮ ||

ಕಟ್ಯಾಂ ಲಿಂಗೇ ಜಾನುನೋಶ್ಚ ಪಾದಯೋರ್ವಿನ್ಯಸೇತ್ಕ್ರಮಾತ್ |
ಹೃದಂತಾನ್ಮಂತ್ರವರ್ಣಾಂಶ್ಚ ತತೋ ಮೂರ್ಧ್ನಿ ಧ್ರುವಂ ನ್ಯಸೇತ್ || ೨೯ ||

ಪುನರ್ನಯನಯೋರಾಸ್ಯೇ ಹೃದಿ ಗುಹ್ಯೇ ಚ ಪಾದಯೋಃ |
ವಿನ್ಯಸೇದ್ಧೃದಯಾಂತಾನಿ ಮನೋಃ ಪಂಚ ಪದಾನಿ ಚ || ೩೦ ||

ಭೂಯೋ ಮುನ್ಯಾದಿಕಂ ನ್ಯಸ್ಯ ಪಂಚಾಂಗಂ ಪೂರ್ವವನ್ನ್ಯಸೇತ್ |
ಅಥ ವಕ್ಷ್ಯೇ ಮಹಾಗುಹ್ಯಂ ಸರ್ವನ್ಯಾಸೋತ್ತಮೋತ್ತಮಂ || ೩೧ ||

---

೨೮-೨೯. 'ನಮಃ' ಎಂಬ ಪದವನ್ನು ಕೊನೆಯಲ್ಲಿ ಸೇರಿಸಿ ಈ ಮಂತ್ರದ ವರ್ಣಗಳನ್ನು 'ಕ್ಲೀಂ ನಮಃ' ಮುಂತಾಗಿ ಶಿರಸ್ಸು ಮುಂತಾದ ಅವಯವಗಳಲ್ಲಿ ಎಂದರೆ ಶಿರಸ್ಸು, ಹಣೆ, ಹುಬ್ಬುಗಳ ಮಧ್ಯ, ಕಿವಿಗಳು, ಕಣ್ಣುಗಳು, ಮೂಗಿನ ಎರಡು ಭಾಗಗಳು, ಆಸ್ಯ, ಕಂಠ, ಹೃದಯ, ಹೊಕ್ಕಳು, ನಡುವು, ಶಿಶ್ನ, ಮೊಣಕಾಲುಗಳು ಮತ್ತು ಪಾದಗಳು ಇವುಗಳಲ್ಲಿ ಕ್ರಮವಾಗಿ ನ್ಯಾಸಮಾಡಬೇಕು. ತರುವಾಯ ಶಿರಸ್ಸಿನಲ್ಲಿ ಓಂಕಾರವನ್ನು ನ್ಯಾಸ ಮಾಡಬೇಕು.

೩೦. 'ನಮಃ' ಎಂಬ ಪದವನ್ನು ಕೊನೆಯಲ್ಲಿ ಸೇರಿಸಿ ಈ ಮಂತ್ರದ 'ಕ್ಲೀಂ ಕೃಷ್ಣಾಯ' ಮುಂತಾದ ಐದು ಪದಗಳನ್ನು ನೇತ್ರ, ಮುಖ, ಹೃದಯ, ಗುಹ್ಯ, ಪಾದ ಇವುಗಳಲ್ಲಿ ಕ್ರಮವಾಗಿ ನ್ಯಾಸ ಮಾಡಬೇಕು.

೩೧. ಪುನಃ ಋಷಿ ಮುಂತಾದುವನ್ನು ನ್ಯಾಸಮಾಡಿ ಹಿಂದಿನಂತೆ ಪಂಚಾಂಗ ನ್ಯಾಸಮಾಡಬೇಕು. ಮಹಾ ರಹಸ್ಯವಾದ ಸರ್ವಶ್ರೇಷ್ಠನ್ಯಾಸವನ್ನು ಈಗ ಹೇಳುವೆನು.

ಯಸ್ಯ ವಿಜ್ಞಾನಮಾತ್ರೇಣ ಜೀವನ್ಮುಕ್ತೋ ಭವೇನ್ನರಃ ।
ಅಣಿಮಾದ್ಯಷ್ಟಸಿದ್ಧೀನಾಮೀಶ್ವರಃ ಸ್ಯಾನ್ನ ಸಂಶಯಃ ॥ ೩೨ ॥

ಯಸ್ಯಾರಾಧನತೋ ಮಂತ್ರೀ ಕೃಷ್ಣಸಾಂನಿಧ್ಯತಾಂ ವ್ರಜೇತ್ ।
ತಾರಾದ್ಯಾಭಿರ್ವ್ಯಾಹೃತಿಭಿಃ ಸಂಪುಟಂ ವಿನ್ಯಸೇನ್ಮನುಂ ॥ ೩೩ ॥

ಮಂತ್ರೇಣ ಪುಟಿತಾಂಶ್ಚಾಪಿ ಪ್ರಣವಾದ್ಯಾಂಸ್ತತೋ ನ್ಯಸೇತ್ ।
ಗಾಯತ್ರ್ಯಾ ಪುಟಿತಂ ಮಂತ್ರಂ ವಿನ್ಯಸೇನ್ಮಾತೃಕಾಸ್ಥಲೇ ॥ ೩೪ ॥

ಮಂತ್ರೇಣ ಪುಟಿತಾಂ ತಾಂ ಚ ಗಾಯತ್ರೀಂ ವಿನ್ಯಸೇತ್ಕ್ರಮಾತ್ ।
ಮಾತೃಕಾಪುಟಿತಂ ಮೂಲಂ ವಿನ್ಯಸೇತ್ಸಾಧಕೋತ್ತಮಃ ॥ ೩೫ ॥

---

೩೨. ಅದನ್ನು ತಿಳಿಯುವ ಮಾತ್ರದಿಂದ ಮನುಷ್ಯನು ಜೀವನ್ಮುಕ್ತನಾಗುವನು. ಮತ್ತು ಅಣಿಮಾ ಮುಂತಾದ ಅಷ್ಟಸಿದ್ಧಿಗಳಿಗೆ ಒಡೆಯನಾಗುವನು ; ಸಂದೇಹವಿಲ್ಲ.

೩೩. ಅದನ್ನು ಅನುಷ್ಠಾನ ಮಾಡುವುದರಿಂದ ಮಂತ್ರಿಯು ಕೃಷ್ಣಸಾನ್ನಿಧ್ಯವನ್ನು ಪಡೆಯುವನು. ಓಂಕಾರಾದಿಯಾದ ವ್ಯಾಹೃತಿಗಳಿಂದ ಸಂಪುಟಿತವಾಗಿ ಮಂತ್ರವನ್ನು ನ್ಯಾಸ ಮಾಡಬೇಕು.

೩೪. ಅನಂತರ ಈ ಮಂತ್ರಸಂಪುಟಿತವಾಗಿ ಪ್ರಣವಾದಿಗಳನ್ನು ನ್ಯಾಸ ಮಾಡಬೇಕು. ಗಾಯತ್ರೀ ಮಂತ್ರದಿಂದ ಸಂಪುಟಿತವಾಗಿ ಮಂತ್ರವನ್ನು ಮಾತೃಕೆಗಳ ಸ್ಥಾನದಲ್ಲಿ ನ್ಯಾಸಮಾಡಬೇಕು.

೩೫-೩೭. ಮಂತ್ರದಿಂದ ಸಂಪುಟಿತವಾಗಿ ಗಾಯತ್ರಿಯನ್ನೂ ಕ್ರಮವಾಗಿ ನ್ಯಾಸಮಾಡಬೇಕು. ಸಾಧಕಶ್ರೇಷ್ಠನು ಮಾತೃಕಾಸಂಪುಟಿತವಾಗಿ ಮೂಲಮಂತ್ರವನ್ನೂ, ಮೂಲಮಂತ್ರದಿಂದ ಸಂಪುಟಿತವಾದ ಮಾತೃಕೆಗಳನ್ನೂ,

ಮೂಲೇನ ಪುಟಿತಾಂ ಚೈವ ಮಾತೃಕಾಂ ವಿನ್ಯಸೇತ್ಕ್ರಮಾತ್ ।
ತಥೈವ ಮಾತೃಕಾವರ್ಣಾನ್ಪೂರ್ವಂ ತತ್ತತ್ಸ್ಥಲೇ ಸುಧೀಃ ॥ ೩೬ ॥

ವಿನ್ಯಸೇನ್ನ್ಯಾಸಷಟ್ಕಂ ಚ ಷೋಢಾ ನ್ಯಾಸೋಯಮೀರಿತಃ ।
ಅನೇನ ನ್ಯಾಸವರ್ಯೇಣ ಸಾಕ್ಷಾತ್ಕೃಷ್ಣಸಮೋ ಭವೇತ್ ॥ ೩೭ ॥

ನ್ಯಾಸೇನ ಪುಟಿತಂ ದೃಷ್ಟ್ವಾ ಸಿದ್ಧಗಂಧರ್ವಕಿನ್ನರಾಃ ।
ದೇವಾ ಅಪಿ ನಮಂತ್ಯೇನಂ ಕಿಂ ಪುನರ್ಮಾನವಾ ಭುವಿ ॥ ೩೮ ॥

ಸುದರ್ಶನಸ್ಯ ಮಂತ್ರೇಣ ಕುರ್ಯಾದ್ದಿಗ್ಬಂಧನಂ ತತಃ ।
ದೇವಂ ಧ್ಯಾಯನ್ ಸ್ವಹೃದಯೇ ಸರ್ವಾಭೀಷ್ಟಪ್ರದಾಯಕಂ ॥ ೩೯ ॥

ಉತ್ಫುಲ್ಲಕುಸುಮವ್ರಾತನಮ್ರಶಾಖೈರ್ವರದ್ರುಮೈಃ ।
ಸಸ್ಮೇರಮಂಜರೀವೃಂದವಲ್ಲರೀವೇಷ್ಟಿತೈಃ ಶುಭೈಃ ॥ ೪೦ ॥

---

ಕ್ರಮವಾಗಿ ನ್ಯಾಸಮಾಡಬೇಕು ಜ್ಞಾನಿಯು ಪೂರ್ವದಲ್ಲಿ ಮಾತೃಕಾವರ್ಣವನ್ನು ಅದರದರ ಸ್ಥಾನದಲ್ಲಿ ನ್ಯಾಸಮಾಡಬೇಕು. ಈ ರೀತಿಯಾದ ಆರು ನ್ಯಾಸಗಳು ಷೋಢಾನ್ಯಾಸಗಳೆಂದು ಉಕ್ತವಾಗಿವೆ. ಉತ್ತಮವಾದ ಈ ನ್ಯಾಸವನ್ನಾಚರಿಸುವುದರಿಂದ ಕೃಷ್ಣಸಾರೂಪ್ಯವನ್ನು ಪಡೆಯುವನು.

೩೮. ಈ ನ್ಯಾಸವನ್ನು ಮಾಡಿ ಪರಿಶುದ್ಧನಾದವನನ್ನು ನೋಡಿ ಸಿದ್ಧ, ಗಂಧರ್ವ, ಕಿನ್ನರ ಮತ್ತು ದೇವತೆಗಳೂ ಸಹ ನಮಸ್ಕರಿಸುವರು. ಭೂಲೋಕದಲ್ಲಿ ಮನುಷ್ಯರು ನಮಸ್ಕರಿಸುವರೆಂದು ಹೇಳುವುದೇನು ?

೩೯. ಅನಂತರ ಸಕಲೇಷ್ಟಪ್ರದನಾದ ದೇವರನ್ನು ತನ್ನ ಹೃದಯದಲ್ಲಿ ಧ್ಯಾನಿಸುತ್ತಾ, ಸುದರ್ಶನ ಮಂತ್ರದಿಂದ ದಿಗ್ಬಂಧನ ಮಾಡಬೇಕು.

೪೦-೪೫. 'ಓಂ ನಮಃ ಸುದರ್ಶನಾಯ ಅಸ್ತ್ರಾಯ ಫಟ್।' ಎಂಬುದೇ ಸುದರ್ಶನ ಮಂತ್ರವು.

ವೃಂದಾವನಧ್ಯಾನ :–ವಿಕಸಿತ ಪುಷ್ಪರಾಶಿಗಳಿಂದ ಬಗ್ಗಿರುವ ಕೊಂಬೆಗಳುಳ್ಳ, ಮನೋಹರ ತೆನೆಗಳ ಸಮೂಹದಿಂದ ಕೂಡಿದ ಲತೆಗಳಿಂದ ಸುತ್ತ

ಗಲತ್ಪರಾಗಧೂಲೀಭಿಃ ಸುರಭೀಕೃತದಿಙ್ಮುಖೈಃ ।
ಸ್ಮೇರಚ್ಛಿಶಿರಿತಂ ವೃಂದಾವನಂ ಮಂತ್ರೀ ಸಮಾಹಿತಃ ॥ ೪೧ ॥

ಉನ್ಮೀಲನ್ನವಕಂಜಾಲಿವಿಗಲನ್ಮಧುಸಂಚಯೈಃ ।
ಲುಬ್ಧಾಂತಃಕರಣೈರ್ಮಂಜುದ್ವಿರೇಫಪಟಲೈಃ ಶುಭಂ ॥ ೪೨ ॥

ಮರಾಲಪರಭೃತ್ಕೀರಕಪೋತನಿಕರೈರ್ಮುಹುಃ ।
ಮುಖರೀಕೃತಮಾಸ್ನೃತ್ಯನ್ಮಯೂರಕುಲಮಂಜುಲಂ ॥ ೪೩ ॥

ಕಾಲಿಂದ್ಯಾ ಲೋಲಕಲ್ಲೋಲವಿಪ್ರುಷೈರ್ಮಂದವಾಹಿಭಿಃ ।
ಉನ್ನಿದ್ರಾಂಬುರುಹವ್ರಾತರಜೋಭಿರ್ಧೂಸರೈಃ ಶಿವೈಃ ॥ ೪೪ ॥

ಪ್ರದೀಪಿತಸ್ಮರೈರ್ಗೋಷ್ಠಸುಂದರೀಮೃದುವಾಸಸಾಂ ।
ವಿಲೋಲನಪರೈಃ ಸಂಸೇವಿತಂ ವಾತೈರ್ನಿರಂತರಂ ॥ ೪೫ ॥

---

ಲ್ಪಟ್ಟಿರುವ, ಮಂಗಳಕರವಾದ, ಹರಡಿದ ಕುಸುಮ ರೇಣುಗಳ ಧೂಳಿಯಿಂದ ಸುಗಂಧವುಳ್ಳದಾಗಿ ಮಾಡಲ್ಪಟ್ಟ ಪ್ರದೇಶಗಳುಳ್ಳ, ಉತ್ತಮ ವೃಕ್ಷಗಳಿಂದ ತಣ್ಣಗೆ ಮಾಡಲ್ಪಟ್ಟಿರುವ, ಅರಳುತ್ತಿರುವ ನೂತನ ಪದ್ಮಸಮೂಹಗಳಿಂದ ಸುರಿಸಿದ ಮಧುಸಮೂಹಗಳನ್ನು ಆಶಿಸುತ್ತಿರುವ ಅಂತಃಕರಣವುಳ್ಳ ಭ್ರಮರಸಮೂಹಗಳಿಂದಲೂ ಮತ್ತು ಕೋಗಿಲೆ, ಗಿಳಿ, ಪಾರಿವಾಳದಹಕ್ಕಿ ಮುಂತಾದುವುಗಳಿಂದಲೂ ಅತಿಶಯಿತವಾಗಿ ಮಾಡಲ್ಪಟ್ಟ ಧ್ವನಿಗಳುಳ್ಳ, ಕುಣಿಯುತ್ತಿರುವ ನವಿಲುಗಳ ಸಮೂಹದಿಂದ ಮನೋಹರವಾದ, ಯಮುನಾ ಜಲದ ಅಲೆಗಳಿಂದ ಹಾರುತ್ತಿರುವ ಜಲಕಣ (ಹನಿ) ಗಳಿಂದ ಸಹಿತವಾಗಿ ಮೆಲ್ಲಗೆ ಬೀಸುತ್ತಿರುವ, ವಿಕಾಸ ಹೊಂದಿದ ಪದ್ಮಸಮೂಹಗಳ ರಜಸ್ಸುಗಳಿಂದ ಧೂಮ್ರವರ್ಣಗಳಾದ, ಕಾಮೋದ್ರೇಕವನ್ನುಂಟುಮಾಡುವ, ಗೋಕುಲ ಸುಂದರಸ್ತ್ರೀಯರ ಮೃದುವಾದ ದುಕೂಲಗಳನ್ನು ಹಾರಿಸುತ್ತಿರುವ ಗಾಳಿಗಳಿಂದ ಯಾವಾಗಲೂ ಸೇವಿಸಲ್ಪಡುತ್ತಿರುವ ವೃಂದಾವನವನ್ನು ಮಂತ್ರಿಯು ಸಮಾಧಾನ ಚಿತ್ತದಿಂದ ಧ್ಯಾನಿಸಬೇಕು.

ಸ್ಮರೇತ್ತದಂತರ್ಗೀರ್ವಾಣಭೂರುಹಂ ಸುಮನೋಹರಂ ।
ತದಧಃ ಸ್ವರ್ಣವೇದ್ಯಾಂ ಚ ರತ್ನಪೀಠಮನುತ್ತಮಂ ॥ ೪೬ ॥

ರತ್ನಕುಟ್ಟಿಮಪೀಠೇಸ್ಮಿನ್ನರುಣಂ ಕಮಲಂ ಸ್ಮರೇತ್ ।
ಅಷ್ಟಪತ್ರಂ ಚ ತನ್ಮಧ್ಯೇ ಮುಕುಂದಂ ಸಂಸ್ಮರೇತ್ಸ್ಥಿತಂ ॥ ೪೭ ॥

ಫುಲ್ಲೇಂದೀವರಕಾಂತಂ ಚ ಕೇಕಿಬರ್ಹಾವತಂಸಕಂ ।
ಪೀತಾಂಶುಕಂ ಚಂದ್ರಮುಖಂ ಸರಸೀರುಹನೇತ್ರಕಂ ॥ ೪೮ ॥

ಕೌಸ್ತುಭೋದ್ಭಾಸಿತಾಂಗಂ ಚ ಶ್ರೀವತ್ಸಾಂಕಂ ಸುಭೂಷಿತಂ ।
ವ್ರಜಸ್ತ್ರೀನೇತ್ರಕಮಲಾಭ್ಯರ್ಚಿತಂ ಗೋಗಣಾವೃತಂ ॥ ೪೯ ॥

ಗೋಪವೃಂದಯುತಂ ವಂಶೀಂ ವಾದಯಂತಂ ಸ್ಮರೇತ್ಸುಧೀಃ ।
ಏವಂ ಧ್ಯಾತ್ವಾ ಜಪೇದಾದಾವಯುತದ್ವಿತಯಂ ಬುಧಃ ॥ ೫೦ ॥

---

೪೬-೫೦. ಕೃಷ್ಣಧ್ಯಾನ :–ಅದರೊಳಗೆ ಮನೋಹರವಾದ ಕಲ್ಪವೃಕ್ಷವನ್ನೂ, ಅದರ ಕೆಳಗೆ ಸುವರ್ಣವೇದಿಕೆಗಳಲ್ಲಿ ಶ್ರೇಷ್ಠವಾದ ರತ್ನಪೀಠವನ್ನೂ, ರತ್ನಖಚಿತವಾದ ಈ ಪೀಠದಲ್ಲಿ ಕೆಂಪಗಿರುವ, ಎಂಟುದಳಗಳಿಂದ ಕೂಡಿದ, ಕಮಲವನ್ನೂ ಚಿಂತಿಸಬೇಕು

ಬಳಿಕ ಆ ಕಮಲ ಮಧ್ಯದಲ್ಲಿರುವ ಅರಳಿದ ಕನ್ನೈದಿಲೆ ಹೂವಿನೋಪಾದಿಯಲ್ಲಿ ಮನೋಹರನಾದ, ನವಿಲುಗರಿಗಳಿಂದ ಅಲಂಕೃತನಾದ, ಪೀತಾಂಬರವನ್ನು ಉಟ್ಟಿರುವ, ಚಂದ್ರನಂತೆ ಮುಖವುಳ್ಳ, ಕಮಲನೇತ್ರನಾದ, ಕೌಸ್ತುಭಮಣಿಯಿಂದ ವಿರಾಜಮಾನವಾದ ಅವಯವವುಳ್ಳ, ಶ್ರೀವತ್ಸಾಂಕನೂ, ಚೆನ್ನಾಗಿ ಅಲಂಕೃತನೂ, ಗೋಕುಲ ಸ್ತ್ರೀಯರ ನೇತ್ರಕಮಲಗಳಿಂದ ಸತ್ಕರಿಸಲ್ಪಟ್ಟ, ಗೋಸಮೂಹಮಧ್ಯದಲ್ಲಿರುವ, ಗೋಪಾಲಕ ಸಂಘದಿಂದ ಸಹಿತನಾಗಿರುವ, ಕೊಳಲನ್ನೂದುತ್ತಿರುವ, ಮೋಕ್ಷಪ್ರದನಾದ ಶ್ರೀಕೃಷ್ಣನನ್ನು ಧ್ಯಾನಿಸಬೇಕು.

ಜುಹುಯಾದರುಣಾಂಭೋಜೈಸ್ತದ್ದಶಾಂಶಂ ಸಮಾಹಿತಃ |
ಜಪೇತ್ಪಂಚಾನ್ಮಂತ್ರಸಿದ್ಧ್ಯೈ ಭೂತಲಕ್ಷಂ ಸಮಾಹಿತಃ || ೫೧ ||

ಅರುಣೈಃ ಕಮಲೈರ್ಹುತ್ವಾ ಸರ್ವಸಿದ್ಧೀಶ್ವರೋ ಭವೇತ್ |
ಪೂರ್ವೋಕ್ತೇ ವೈಷ್ಣವೇ ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ||೫೨||

ತಸ್ಯಾಮಾವಾಹ್ಯ ಚಾಭ್ಯರ್ಚೇದ್ಗೋಪೀಜನಮನೋಹರಂ |
ಮುಖೇ ವೇಣುಂ ಸಮಭ್ಯರ್ಚ್ಯ ವನಮಾಲಾಂ ಚ ಕೌಸ್ತುಭಂ || ೫೩ ||

ಶ್ರೀವತ್ಸಂ ಚ ಹೃದಿ ಪ್ರಾರ್ಚ್ಯ ತತಃ ಪುಷ್ಪಾಂಜಲಿಂ ಕ್ಷಿಪೇತ್ |
ತತಃ ಶ್ವೇತಾಂ ಚ ತುಲಸೀಂ ಶುಕ್ಲಚಂದನಪಂಕಿಲಾಂ || ೫೪ ||

ರಕ್ತಾಂ ಚ ತುಲಸೀಂ ರಕ್ತಚಂದನಾಕ್ತಾಂ ಕ್ರಮಾತ್ಸುಧೀಃ |
ಅರ್ಪಯೇದ್ದಕ್ಷಿಣೇ ವಾಮಭಾಗೇ ಧ್ಯಾಯನ್ಸುರೇಶ್ವರಂ || ೫೫ ||

---

೫೦-೫೧. ಜ್ಞಾನಿಯು ಈ ರೀತಿ ಧ್ಯಾನಿಸಿ ಇಪ್ಪತ್ತುಸಾವಿರ ಮಂತ್ರ ಜಪಮಾಡಿ, ಅದರ ಹತ್ತನೆಯ ಒಂದು ಭಾಗದಷ್ಟು ಕೆಂಪು ಕಮಲಪುಷ್ಪಗಳಿಂದ ಹೋಮ ಮಾಡಬೇಕು. ತರುವಾಯ ಮಂತ್ರಸಿದ್ಧಿಗಾಗಿ ಸಮಾಧಾನ ಮನಸ್ಸಿನಿಂದ ಐದುಲಕ್ಷ ಜಪಮಾಡಬೇಕು.

೫೨. ಅನಂತರ ಅರುಣಕಮಲಗಳಿಂದ ಹೋಮಮಾಡಿದರೆ ಸಿದ್ಧೀಶ್ವರನಾಗುವನು. ಹಿಂದೆ ಹೇಳಿರುವ ವೈಷ್ಣವ ಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಬೇಕು.

೫೩-೫೫. ಆ ಮೂರ್ತಿಯಲ್ಲಿ ಗೋಪಿಕಾಸ್ತ್ರೀಯರ ಚಿತ್ತಾಪಹಾರಕನಾದ ಶ್ರೀಕೃಷ್ಣನನ್ನು ಆವಾಹನೆ ಮಾಡಿ ಪೂಜಿಸಬೇಕು. ಮುಖದಲ್ಲಿ ಕೊಳಲು, ಹೃದಯದಲ್ಲಿ ವನಮಾಲೆ, ಕೌಸ್ತುಭಮಣಿ ಮತ್ತು ಶ್ರೀವತ್ಸಗಳನ್ನು ಪೂಜಿಸಬೇಕು. ಅನಂತರ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ತರುವಾಯ ಶುಕ್ಲಗಂಧದಲ್ಲಿ ಅದ್ದಿದ ಶ್ವೇತತುಲಸಿಯನ್ನು ಬಲಭಾಗದಲ್ಲಿಯೂ, ಕೇಸರಿಯ ಗಂಧದಲ್ಲಿ ಅದ್ದಿದ ಕೃಷ್ಣತುಲಸಿಯನ್ನು ಎಡಭಾಗದಲ್ಲಿಯೂ, ದೇವೇಶ್ವರನನ್ನು ಧ್ಯಾನಿಸುತ್ತಾ ಸಮರ್ಪಿಸಬೇಕು.

ಹಯಮಾರದ್ವಯೇನೈವ ಹೃದಿ ಮೂರ್ಧ್ನಿ ತಥಾ ಪುನಃ ।
ಪದ್ಮದ್ವಯಂ ಚ ವಿಧಿವತ್ ತತಃ ಶೀರ್ಷೇ ಸಮರ್ಪಯೇತ್ ॥ ೫೬ ॥

ತುಲಸೀದ್ವಯಮಂಭೋಜದ್ವಯಮಶ್ವಾರಿಯುಗ್ಮಕಂ ।
ತತಃ ಸರ್ವಾಣಿ ಪುಷ್ಪಾಣಿ ಸರ್ವಾಂಗೇಷು ಸಮರ್ಪಯೇತ್ ॥ ೫೭ ॥

ದಕ್ಷಿಣೇ ವಾಸುದೇವಾಖ್ಯಂ ಸ್ವಚ್ಛಂ ಚೈತನ್ಯಮವ್ಯಯಂ ।
ವಾಮೇ ಚ ರುಕ್ಮಿಣೀಂ ತದ್ವನ್ನಿತ್ಯಾಂ ರಕ್ತಾಂ ರಜೋಗುಣಾಂ ॥ ೫೮ ॥

ಏವಂ ಸಂಪೂಜ್ಯ ಗೋಪಾಲಂ ಕುರ್ಯಾದಾವರಣಾರ್ಚನಂ ।
ಯಜೇದ್ದಾಮಸುದಾಮೌ ಚ ವಸುದಾಮಂ ಚ ಕಿಂಕಿಣೀಂ ॥ ೫೯ ॥

---

೫೬. ಹೃದಯದಲ್ಲಿ ಶ್ವೇತರಕ್ತಕರವೀರಪುಷ್ಪಗಳನ್ನೂ, ಶಿರಸ್ಸಿನಲ್ಲಿ ಶ್ವೇತರಕ್ತಪದ್ಮಗಳನ್ನೂ ವಿಧಾನೋಕ್ತಪ್ರಕಾರ ಸಮರ್ಪಿಸಬೇಕು.

೫೭. ಅನಂತರ ಶ್ವೇತಕೃಷ್ಣತುಲಸೀದ್ವಯ, ಶ್ವೇತರಕ್ತಪದ್ಮದ್ವಯ ಮತ್ತು ಅಂತಹ ಕರವೀರದ್ವಯ, ಇವುಗಳನ್ನು ಶಿರಸ್ಸಿನಲ್ಲಿ ಸಮರ್ಪಿಸಬೇಕು. ಬಳಿಕ ಸಮಸ್ತ ಪುಷ್ಪಗಳನ್ನೂ ಸರ್ವಾಂಗಗಳಲ್ಲಿಯೂ ಸಮರ್ಪಿಸಬೇಕು.

೫೮-೫೯. ಬಲ ಭಾಗದಲ್ಲಿ ನಾಶರಹಿತನಾದ, ವಾಸುದೇವನೆಂಬ ನಿರ್ದೋಷಚೈತನ್ಯರೂಪನಾದ ಗೋಪಾಲನನ್ನೂ, ಎಡಭಾಗದಲ್ಲಿ, ಅದರಂತೆಯೇ ನಿತ್ಯಳೂ, ರಜೋಗುಣಾಭಿಮಾನಿಯೂ ಮತ್ತು ರಕ್ತವರ್ಣೋಪೇತಳೂ ಆಗಿರುವ ರುಕ್ಮಿಣಿಯನ್ನೂ ಈ ಪ್ರಕಾರ ಪೂಜಿಸಿ ಆವರಣಪೂಜೆಯನ್ನು ಮಾಡಬೇಕು.

೫೯-೬೦. ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ದಾಮ, ಸುದಾಮ, ವಸು ದಾಮ ಮತ್ತು ಕಿಂಕಿಣೀ ಎಂಬಿವರನ್ನು ಓಂಕಾರಾದಿಯಾದ ಚತುರ್ಥೀ ವಿಭಕ್ತ್ಯಂತ ಶಬ್ದ, ಅದರ ಮುಂದೆ 'ನಮಃ' ಎಂಬ ಶಬ್ದವನ್ನು ಸೇರಿಸಿ

ಪೂರ್ವಾದ್ಯಾಶಾಸು ದಾಮಾದ್ಯಾ ಜ್ಞೇನಮೋಂತಧ್ರುವಾದಿಕಾಃ ।
ಅಗ್ನಿನೈರ್ಋತಿವಾಯ್ವೀಶಕೋಣೇಷು ಹೃದಯಾದಿಕಾನ್ ॥ ೬೦ ॥

ದಿಕ್ಷ್ವಸ್ತ್ರಾಣಿ ಸಮಭ್ಯರ್ಚ್ಯ ಪತ್ರೇಷು ಮಹಿಷೀರ್ಯಜೇತ್ ।
ರುಕ್ಮಿಣೀ ಸತ್ಯಭಾಮಾ ಚ ನಾಗ್ನಜಿತ್ಯಭಿಧಾ ಪುನಃ ॥ ೬೧ ॥

ಸುವಿಂದಾ ಮಿತ್ರವಿಂದಾ ಚ ಲಕ್ಷಣಾ ಚರ್ಕ್ಷಜಾ ತತಃ ।
ಸುಶೀಲಾ ಚ ಲಸದ್ರಮ್ಯಚಿತ್ರಿತಾಂಬರಭೂಷಣಾ ॥ ೬೨ ॥

ತತೋ ಯಜೇದ್ದಲಾಗ್ರೇಷು ವಸುದೇವಂ ಚ ದೇವಕೀಂ ।
ನಂದಗೋಪಂ ಯಶೋದಾಂ ಚ ಬಲಭದ್ರಂ ಸುಭದ್ರಿಕಾಂ ॥ ೬೩ ॥

ಗೋಪಾನ್ ಗೋಪೀಂಶ್ಚ ಗೋವಿಂದವಿಲೀನಮತಿಲೋಚನಾನ್ ।
ಜ್ಞಾನಮುದ್ರಾಭಯಕರೌ ಪಿತರೌ ಪೀತಪಾಂಡುರೌ ॥ ೬೪ ॥

---

"ಓಂ ದಾಮಾಯ ನಮಃ" ಇತ್ಯಾದಿ ಮಂತ್ರಗಳಿಂದ ಪೂಜಿಸಬೇಕು. ಆಗ್ನೇಯ, ನೈರುತ್ಯ, ವಾಯವ್ಯ, ಈಶಾನ್ಯವೆಂಬ ವಿದಿಕ್ಕುಗಳಲ್ಲಿ ಹೃದಯಾದಿ ಕವಚಾಂತ ನಾಲ್ಕು ಅಂಗಗಳನ್ನು ಪೂಜಿಸಬೇಕು.

೬೧-೬೨. ಪೂರ್ವಾದಿ ದಿಕ್ಕುಗಳಲ್ಲಿ ಅಸ್ತ್ರಾದಿಗಳನ್ನು ಪೂಜಿಸಿ, ಪತ್ರಗಳಲ್ಲಿ ರುಕ್ಮಿಣೀ, ಸತ್ಯಭಾಮಾ, ನಾಗ್ನಜಿತೀ, ಸುವಿಂದಾ, ಮಿತ್ರವಿಂದಾ, ಲಕ್ಷಣಾ, ಜಾಂಬುವತೀ ಮತ್ತು ।ಪ್ರಕಾಶಮಾನವೂ, ಮನೋಹರವೂ ಆದ ವಿಚಿತ್ರ ವಸ್ತ್ರಾಭರಣಗಳನ್ನು ಧರಿಸಿರುವ ಸುಶೀಲಾ ಎಂಬ ಅಷ್ಟ ಮಹಿಷಿಯರನ್ನೂ, ಪೂಜಿಸಬೇಕು.

೬೩-೬೪. ತರುವಾಯ ದಲಾಗ್ರಭಾಗಗಳಲ್ಲಿ ಶ್ರೀಕೃಷ್ಣನಲ್ಲಿಯೇ ಲೀನವಾದ ಮನೋನೇತ್ರವುಳ್ಳ, ವಸದೇವ, ದೇವಕೀ, ನಂದಗೋಪ, ಯಶೋದಾ, ಬಲಭದ್ರ, ಸುಭದ್ರಾ, ಗೋಪಾಲಕರು ಮತ್ತು ಗೋಪಸ್ತ್ರೀಯರು ಇವರನ್ನು ಪೂಜಿಸಬೇಕು.

ದಿವ್ಯಮಾಲಾಂಬರಾಲೇಪಭೂಷಣೇ ಮಾತರೌ ಪುನಃ ।
ಧಾರಯಂತ್ಯೌ ಚರುಂ ಚೈವ ಪಾಯಸೀಂ ಪೂರ್ಣಪಾತ್ರಿಕಾಂ ॥ ೬೫ ॥

ಅರುಣಶ್ಯಾಮಲೇ ಹಾರಮಣಿಕುಂಡಲಮಂಡಿತೇ ।
ಬಲಃ ಶಂಖೇಂದುಧವಲೋ ಮುಸಲಂ ಲಾಂಗಲಂ ದಧತ್ ॥ ೬೬ ॥

ಹಾಲಾಲೋಲೋ ನೀಲವಾಸಾ ಹೇಲಾವಾನೇಕಕುಂಡಲಃ ।
ಕಲಾಯಶಾಮಲಾ ಭದ್ರಾ ಸುಭದ್ರಾ ಭದ್ರಭೂಷಣಾ ॥ ೬೭ ॥

ವರಾಭಯಯುತಾ ಪೀತವಸನಾರೂಢಯೌವನಾ ।
ವೇಣುವೀಣಾಹೇಮಯಷ್ಟಿಶಂಖಶೃಂಗಾದಿಪಾಣಯಃ ॥ ೬೮ ॥

---

೬೪-೬೬. ಇವರ ಆಯುಧಗಳನ್ನು ಹೇಳುತ್ತಾರೆ ;-ವಸುದೇವ ನಂದ ಗೋಪರು ಹಸ್ತಗಳಲ್ಲಿ ಜ್ಞಾನಮುದ್ರೆ, ಅಭಯಮುದ್ರೆಗಳನ್ನು ಧರಿಸಿರುವರು. ಇವರ ಬಣ್ಣ ಹಳದಿ, ಶುಕ್ಲ. ದೇವಕೀ ಯಶೋದೆಯರು ದೇವತೆಗಳಿಗೆ ಅರ್ಹವಾದ ಮಾಲ್ಯ, ವಸ್ತ್ರ, ಗಂಧ, ಆಭರಣಗಳನ್ನು ಧರಿಸಿರುವರು. ಕೈಗಳಲ್ಲಿ ಚರು ಮತ್ತು ಪಾಯಸ ಪೂರ್ಣಪಾತ್ರೆಗಳನ್ನು ಹಿಡಿದಿರುವರು. ಹಾರ, ಮಣಿ, ಓಲೆ ಇವುಗಳಿಂದಲಂಕೃತರು. ಇವರ ಬಣ್ಣ ಕೆಂಪು, ಶ್ಯಾಮವರ್ಣ.

೬೬-೬೭. ಬಲಭದ್ರನು ಶಂಖ ಮತ್ತು ಚಂದ್ರನಂತೆ ಬೆಳ್ಳಗಿರುವನು, ಒನಕೆ ಮತ್ತು ನೇಗಿಲನ್ನು ಧರಿಸಿರುವನು, ಮಧುಪಾನ ಚಂಚಲನು, ನೀಲ ವಸ್ತ್ರವನ್ನುಟ್ಟಿರುವನು, ಕ್ರೀಡಾಸಕ್ತನು ಮತ್ತು ಏಕಕುಂಡಲಧಾರಿಯು.

೬೭-೬೮. ಸುಭದ್ರೆಯು ಕಲಾಯ (ಬಟಾಣಿ) ದಂತೆ ಶ್ಯಾಮವರ್ಣವುಳ್ಳವಳು, ಮಂಗಳಕರಳು, ಮಂಗಳಕರವಾದ ಆಭರಣಗಳನ್ನು ಧರಿಸಿರುವಳು, ವರ ಮತ್ತು ಅಭಯಮುದ್ರೆಗಳನ್ನು ಕೈಯಲ್ಲಿ ಧರಿಸಿರುವಳು. ಅವಳು ಪೀತಾಂಬರವನ್ನುಟ್ಟಿರುವ ನವಯುವತಿಯು.

ಗೋಪಾ ಗೋಪ್ಯಶ್ಚ ವಿವಿಧಸ್ರಾಭೃತಾನ್ನಕರಾಂಬುಜಾಃ ।
ಮಂದಾರಾದೀಂಶ್ಚ ತದ್ಬಾಹ್ಯೇ ಪೂಜಯೇತ್ಕಲ್ಪಪಾದಪಾನ್ ॥ ೬೯ ॥

ಮಂದಾರಶ್ಚ ತಥಾ ಸಂತಾನಕೋ ವೈ ಪಾರಿಜಾತಕಃ ।
ಕಲ್ಪದ್ರುಮಸ್ತತಃ ಪಶ್ಚಾದ್ಧರಿಚಂದನಸಂಜ್ಞಕಃ ॥ ೭೦ ॥

ಮಧ್ಯೇ ದಿಕ್ಷು ಸಮಭ್ಯರ್ಚ್ಯ ಬಹಿಃ ಶಕ್ರಾದಿಕಾನ್ಯಜೇತ್ ।
ತದಸ್ತ್ರಾಣಿ ಚ ಸಂಪೂಜ್ಯ ಯಜೇತ್ಕೃಷ್ಣಾಷ್ಟಕೇನ ಚ ॥ ೭೧ ॥

ಕೃಷ್ಣಂ ಚ ವಾಸುದೇವಂ ಚ ದೇವಕೀನಂದನಂ ತಥಾ ।
ನಾರಾಯಣಂ ಯದುಶ್ರೇಷ್ಠಂ ವಾರ್ಷ್ಣೇಯಂ ಧರ್ಮಪಾಲಕಂ ॥ ೭೨ ॥

ಅಸುರಾಕ್ರಾಂತಭೂಭಾರಹಾರಿಣಂ ಪೂಜಯೇತ್ತತಃ ।
ಏಭಿರಾವರಣೈಃ ಪೂಜಾ ಕರ್ತವ್ಯಾ ಸುರವೈರಿಣಃ ॥ ೭೩ ॥

---

೬೮-೬೯. ಕೊಳಲು, ವೀಣೆ, ಬಂಗಾರದ ಕೋಲು, ಶೃಂಗ ಮುಂತಾದು ವನ್ನು ಕರದಲ್ಲಿ ಪಿಡಿದಿರುವ ಗೋಪ ಗೋಪಿಕಾ ಸ್ತ್ರೀಯರು ನಾನಾವಿಧವಾದ ಅನ್ನವನ್ನು ಕರಕಮಲಗಳಲ್ಲಿ ಧರಿಸಿರುವರು. ದಳಗಳ ಬಹಿರ್ಭಾಗದಲ್ಲಿ ಮಂದಾರ ಮುಂತಾದ ಕಲ್ಪವೃಕ್ಷಗಳನ್ನು ಪೂಜಿಸಬೇಕು.

೭೦-೭೧. ಮಂದಾರ, ಸಂತಾನ, ಪಾರಿಜಾತ, ಕಲ್ಪವೃಕ್ಷ ಅನಂತರ ಹರಿಚಂದನ ಇವುಗಳನ್ನು ದಿಕ್ಕುಗಳ ಮಧ್ಯದಲ್ಲಿ ಪೂಜಿಸಿ, ಹೊರಗೆ ಇಂದ್ರಾದಿ ದಿಕ್ಪಾಲಕರನ್ನೂ, ಅವರವರ ಆಯುಧಗಳನ್ನೂ ಪೂಜಿಸಿ, ಮುಂದೆ ಹೇಳುವ ಎಂಟು ನಾಮಗಳಿಂದ ಕೃಷ್ಣನನ್ನು ಪೂಜಿಸಬೇಕು.

೭೨-೭೩. ಕೃಷ್ಣ, ವಾಸುದೇವ, ದೇವಕೀನಂದನ, ನಾರಾಯಣ, ಯದು ಶ್ರೇಷ್ಠ, ವಾರ್ಷ್ಣೇಯ, ಧರ್ಮಪಾಲಕ ಮತ್ತು ಅಸುರಾಕ್ರಾಂತಭೂಭಾರ ಪರಿಹಾರಕ ಎಂಬಿವೇ ಕೃಷ್ಣನ ಎಂಟು ನಾಮುಗಳು.

ಸಂಸಾರಸಾಗರೋತ್ತೀರ್ತ್ಯೈ ಸರ್ವಕಾಮಾಪ್ತಯೇ ಬುಧೈಃ ।
ಏವಂ ಪೂಜಾದಿಭಿಃ ಸಿದ್ಧೋ ಭವೇದ್ವೈಶ್ರವಣೋ ಯಮಃ ॥ ೭೪ ॥

ತ್ರಿಕಾಲಪೂಜನಂ ಚಾಸ್ಯ ವಕ್ಷ್ಯೇ ಸರ್ವಾರ್ಥಸಿದ್ಧಿದಂ ।
ಶ್ರೀಮದುದ್ಯಾನಸಂವೀತಹೇಮಭೂರತ್ನಮಂಡಪೇ ॥ ೭೫ ॥

ಲಸತ್ಕಲ್ಪದ್ರುಮಾಧಸ್ಥರತ್ನಾಬ್ಜಪೀಠಸಂಸ್ಥಿತಂ ।
ಸುತ್ರಾಮರತ್ನಸಂಕಾಶಂ ಗುಡಸ್ನಿಗ್ಧಾಲಕಂ ಶಿಶುಂ ॥ ೭೬ ॥

ಚಲತ್ಕನಕಕುಂಡಲೋಲ್ಲಸಿತಚಾರುಗಂಡಸ್ಥಲಂ
ಸುಘೋಣಾಧರಮದ್ಭುತಸ್ಮಿತಮುಖಾಂಬುಜಂ ಸುಂದರಂ ।
ಸ್ಫುರದ್ವಿಮಲರತ್ನಯುಕ್ಕನಕಸೂತ್ರನದ್ಧಂ
ದಧತ್ಸುವರ್ಣಪರಿಮಂಡಿತಂ ಸುಭಗಪೌಂಡರೀಕಂ ನಖಂ ॥ ೭೭ ॥

---

೭೩-೭೪. ಸಂಸಾರವೆಂಬ ಸಾಗರವನ್ನು ದಾಟುವುದಕ್ಕೂ ಮತ್ತು ಸಕಲೇಷ್ಟಾರ್ಥಗಳನ್ನು ಪಡೆಯುವುದಕ್ಕೂ ಸಹ ಈರೀತಿ ಆವರಣಗಳಿಂದ ಅಸುರಶತ್ರುವಾದ ಶ್ರೀಕೃಷ್ಣನ ಪೂಜೆಯನ್ನು ಮಾಡಬೇಕು. ಈ ರೀತಿ ಪೂಜಾದಿಗಳಿಂದ ಸಿದ್ಧಿಯನ್ನು ಪಡೆದವನು ಕುಬೇರನಿಗೆ ಸಮಾನನಾದ ಐಶ್ವರ್ಯವಂತನಾಗುವನು.

೭೫-೮೦. ಈಗ ಸಕಲೇಷ್ಟಾರ್ಥದಾಯಕವಾದ ಪ್ರಾತರ್ಮಧ್ಯಾಹ್ನ ಸಾಯಂಕಾಲಗಳಲ್ಲಿ ಮಾಡುವ ಪೂಜಾ ವಿಧಾನವನ್ನು ಹೇಳುವೆನು :-ಶೋಭಿಸುತ್ತಿರುವ ವಿಹಾರವನಗಳ ಮಧ್ಯದಲ್ಲಿನ ಕಾಂಚನಭೂಮಿಯಲ್ಲಿರುವ ರತ್ನಖಚಿತವಾದ ಮಂಟಪದಲ್ಲಿ ಪ್ರಕಾಶಮಾನವಾದ ಕಲ್ಪವೃಕ್ಷದ ಕೆಳಗೆ ರತ್ನಮಯ ಕಮಲವೆಂಬ ಪೀಠದಲ್ಲಿ ಕುಳಿತಿರುವ, ಇಂದ್ರನೀಲಮಣಿಯಂತೆ ಹೊಳೆಯುತ್ತಿರುವ, ಕುಟಿಲವಾಗಿ ನುಣುಪಾಗಿರುವ ಮುಂಗುರುಳುಗಳುಳ್ಳ, ಅಲ್ಲಾಡುತ್ತಿರುವ ಸುವರ್ಣ ಕುಂಡಲಗಳಿಂದ ವಿರಾಜಿಸುತ್ತಿರುವ ಮನೋಹರವಾದ ಗಂಡ

ಸಮುದ್ಭಾಸಶ್ರೀಸರಸ್ಥಲೇ ಧೇನುಧೂಲ್ಯಾ
ಸುಪುಷ್ಟಾಂಗಮಷ್ಟಾಪದಾಕಲ್ಪದೀಪ್ತಂ ।
ಕಟೀಲಸ್ಥಲೇ ಚಾರುಜಂಘಾಂತಯುಗ್ಮಂ
ಪಿನದ್ಧಂ ಕ್ವಣತ್ಕಿಂಕಿಣೀಜಾಲದಾಮ್ನಾ　　　　|| ೭೮ ||

ಹಸಂತಂ ಹಸದ್ಬಂಧುಜೀವಪ್ರಸೂನಪ್ರಭಾಂ
ಪಾಣಿಪಾದಾಂಬುಜೋದಾರಕಾಂತ್ಯಾ ।
ದಧಾನಂ ಕರೇ ದಕ್ಷಿಣೇ ಪಾಯಸಾನ್ನಂ
ಸುಹೈಯಂಗವೀನಂ ತಥಾ ವಾಮಹಸ್ತೇ　　　　|| ೭೯ ||

ಲಸದ್ಗೋಪಗೋಪೀಗವಾಂ ವೃಂದಮಧ್ಯೇ ।
ಸ್ಥಿತಂ ವಾಸವಾದ್ಯೈಃ ಸುರೈರರ್ಚಿತಾಂಘ್ರಿಂ ।
ಮಹೀಭಾರಭೂತಾಮರಾರಾತಿಯೂಥಾಂ
ತತಃ ಪೂತನಾದೀನ್ನಿಹಂತುಂ ಪ್ರವೃತ್ತಂ　　　　|| ೮೦ ||

---

ಸ್ಥಳವುಳ್ಳ, ಸಮೀಚೀನವಾದ ಮೂಗು ಮತ್ತು ತುಟಿಗಳುಳ್ಳ, ಆಶ್ಚರ್ಯಕರ ಮಂದಹಾಸಯುಕ್ತವಾದ ಮುಖಕಮಲವುಳ್ಳ, ಸುಂದರನಾದ, ಪ್ರಕಾಶಮಾನವೂ ನಿರ್ಮಲವೂ ಆದ ರತ್ನಗಳಿಂದ ಯುಕ್ತವಾದ ಬಂಗಾರದ ಉಡುದಾರವನ್ನು ಕಟ್ಟಿಕೊಂಡಿರುವ, ಬಂಗಾರದ ಕಟ್ಟು ಹಾಕಿರುವ ಮನೋಹರವಾದ ಹುಲಿಯ ಉಗುರುಗಳನ್ನು ಧರಿಸಿರುವ, ಗೋಧೂಳಿಯಿಂದ ಧೂಮ್ರವರ್ಣವಾಗಿ ಮಾಡಲ್ಪಟ್ಟ ವಕ್ಷಃಸ್ಥಳದಲ್ಲಿ ಸುವರ್ಣಾಭರಣಗಳಿಂದ ವಿರಾಜಮಾನನಾದ, ಅಂಗಪುಷ್ಟಿಯುಳ್ಳ, ನಡುವಿನ ಕೆಳಗೆ ಮನೋಹರ ಗುಲ್ಫದ್ವಯಗಳ ಮೇಲ್ಭಾಗದಲ್ಲಿ ಶಬ್ದ ಮಾಡುತ್ತಿರುವ ಕಿರುಘಂಟೆಗಳ ಸಮೂಹಮಾಲಿಕೆಯನ್ನು ಕಟ್ಟಿಕೊಂಡಿರುವ, ವಿಕಸಿತವಾದ ಕೆಂಪು ರೋಜಾ ಹೂವಿನ ಕಾಂತಿಯನ್ನು ತನ್ನ ಹಸ್ತಪಾದಾಂಬುಜಗಳ ವಿಪುಲಕಾಂತಿಯಿಂದ ಧಿಕ್ಕಾರಮಾಡುತ್ತಿರುವ, ಬಲಗೈಯಲ್ಲಿ ಪಾಯಸಾನ್ನವನ್ನೂ, ಎಡಗೈಯಲ್ಲಿ ಹಸುವಿನ ಹಾಲಿನಿಂದ ತೆಗೆದ ಬೆಣ್ಣೆ ತುಪ್ಪಗಳನ್ನೂ ಧರಿಸಿಕೊಂಡಿರುವ, ವಿರಾಜಮಾನರಾದ ಗೋಪಾಲರು, ಅವರ

ಏವಂ ಧ್ಯಾತ್ವಾರ್ಚಯೇದ್ದೇವಂ ಪೂರ್ವವತ್ ಸ್ಥಿರಮಾನಸಃ ।
ದಧ್ನಾ ಗುಡೇನ ನೈವೇದ್ಯಂ ದತ್ವಾ ದಶಶತಂ ಜಪೇತ್ ॥ ೮೧ ॥

ಮಧ್ಯಂದಿನೇ ಯಜೇದೇವಂ ವಿಶಿಷ್ಟರೂಪಧಾರಿಣಂ ।
ನಾರದಾದ್ಯೈರ್ಮುನಿಗಣೈಃ ಸುರವೃಂದೈಶ್ಚ ಪೂಜಿತಂ ॥ ೮೨ ॥

ಲಸದ್ಗೋಪಗೋಪೀಗವಾಂ ವೃಂದಮಧ್ಯಸ್ಥಿತಂ
ಸಾಂದ್ರಮೇಘಪ್ರಭಂ ಸುಂದರಾಂಗಂ ।
ಶಿಖಂಡಿಚ್ಛದಾಪೀಡಮಬ್ಜಾಯತಾಕ್ಷಂ
ಲಸಚ್ಚಿಲ್ಲಿಕಂ ಪೂರ್ಣಚಂದ್ರಾನನಂ ಚ ॥ ೮೩ ॥

---

ಸ್ತ್ರೀಯರು ಮತ್ತು ಗೋವು ಇವುಗಳ ಮಧ್ಯದಲ್ಲಿರುವ, ಇಂದ್ರಾದಿ ದೇವತೆಗಳಿಂದ ಪೂಜಿಸಲ್ಪಟ್ಟ ಪಾದವುಳ್ಳ ಭೂಭಾರಭೂತರಾದ ದೇವಶತ್ರು ಎಂದರೆ ದೈತ್ಯರನ್ನೂ, ಪೂತನೆ ಮುಂತಾದವರನ್ನೂ ಸಂಹರಿಸಲು ಪ್ರವರ್ತಿಸಿದ, ಶಿಶುರೂಪಿಯಾದ ಶ್ರೀಕೃಷ್ಣನನ್ನು ಧ್ಯಾನಿಸಬೇಕು.

೮೧. ಈ ರೀತಿಯಾಗಿ ಧ್ಯಾನಿಸಿ ಹಿಂದೆ ಹೇಳಿರುವಂತೆ ಸ್ಥಿರಚಿತ್ತನಾಗಿ ದೇವರನ್ನು ಪೂಜಿಸಿ ಮೊಸರು ಬೆಲ್ಲಗಳನ್ನು ನೈವೇದ್ಯಮಾಡಿ ಒಂದುಸಾವಿರ ಮಂತ್ರಜಪ ಮಾಡಬೇಕು.

೮೨, ಉತ್ಕೃಷ್ಟರೂಪಧಾರಿಯಾದ ನಾರದಾದಿ ಋಷಿಸಂಘದಿಂದಲೂ ದೇವತೆಗಳ ಸಮೂಹದಿಂದಲೂ ಪೂಜಿಸಲ್ಪಟ್ಟ ಶ್ರೀಕೃಷ್ಣನನ್ನು ಈ ರೀತಿಯಾಗಿ ಮಧ್ಯಾಹ್ನಕಾಲದಲ್ಲಿ ಪೂಜಿಸಬೇಕು.

೮೩-೮೫. ವಿರಾಜಮಾನರಾದ ಗೋಪ, ಗೋಪಿಕಾ, ಗೋವುಗಳ ಸಮೂಹಮಧ್ಯದಲ್ಲಿರುವ ನಿಬಿಡವಾದ ಮೇಘದಂತೆ ಹೊಳೆಯುತ್ತಿರುವ ಸುಂದರಾಂಗನಾದ, ನವಿಲುಗರಿಗಳಿಂದ ಮಾಡಿದ ಶಿರೋಭೂಷಣವನ್ನು ಧರಿಸಿರುವ ಕಮಲದಂತೆ ನೇತ್ರವುಳ್ಳ, ಹೊಳೆಯುತ್ತಿರುವ ಬೆವರಿನಿಂದಯುಕ್ತವಾದ ಪೂರ್ಣಚಂದ್ರಸದೃಶವಾದ ಮುಖವುಳ್ಳ, ಅಲ್ಲಾಡುತ್ತಿರುವ ಕುಂಡಲಗಳಿಂದ ಪ್ರಕಾಶ

ಚಲತ್ಕುಂಡಲೋಲ್ಲಾಸಿಗಂಡಸ್ಥಲಶ್ರೀಭರಂ
ಸುಂದರಂ ಮಂದಹಾಸಂ ಸುನಾಸಂ ।
ಸುಕಾರ್ತಸ್ವರಾಂಬರಂ ದಿವ್ಯಭೂಷಂ
ಕ್ವಣತ್ಕಿಂಕಿಣೀಜಾಲಮಾತಾನುಲೇಪಂ ॥ ೮೪ ॥

ವೇಣುಂ ಧಮಂತಂ ಸ್ವಕರೇದಧಾನಂ
ಸವ್ಯೇ ದರಂ ಯಷ್ಟಿಮುದಾರವೇಷಂ ।
ದಕ್ಷೇ ತಥೈವೇಪ್ಸಿತದಾನದಕ್ಷಂ
ಧ್ಯಾತ್ವಾರ್ಚಯೇನ್ನಂದಜಮಿಂದಿರಾಪ್ತ್ಯೈ ॥ ೮೫ ॥

ಏವಂ ಧ್ಯಾತ್ವಾರ್ಚಯೇತ್ಕೃಷ್ಣಂ ಪೂರ್ವವದ್ವೈಷ್ಣವೋತ್ತಮಃ ।
ಅಪೂಪಪಾಯಸಾನ್ನಾದ್ಯೈರ್ನೈವೇದ್ಯಂ ಪರಿಕಲ್ಪಯೇತ್ ॥ ೮೬ ॥

ಹುತ್ವಾ ಚಾಷ್ಟೋತ್ತರಶತಂ ಪಯೋನ್ನೈಃ ಸರ್ಪಿಷಾಪ್ಲುತೈಃ ।
ಸ್ವಸ್ವದಿಕ್ಷು ಬಲಿಂ ದದ್ಯಾದ್ದಿಶೇದಾಚಮನಂ ತತಃ ॥ ೮೭ ॥

---

ಮಾನವಾದ ಗಂಡಸ್ಥಲಗಳ ಕಾಂತಿಯಿಂದಕೂಡಿದ, ಮನೋಹರನು ಮಂದಹಾಸಯುಕ್ತನು ಸಲಕ್ಷಣವಾದ ಮೂಗುಳ್ಳವನೂ ಆಗಿರುವ ಒಳ್ಳೆಯ ಬಂಗಾರದಂತೆ ಹೊಳೆಯುತ್ತಿರುವ ವಸ್ತ್ರಧಾರಿಯಾದ, ದಿವ್ಯಾಭರಣಗಳಿಂದಲಂಕೃತನಾದ, ಶಬ್ದಮಾಡುತ್ತಿರುವ ಉಡೆಗೆಜ್ಜೆಗಳ ಸಮೂಹವನ್ನು ಕಟ್ಟಿಕೊಂಡಿರುವ, ಕುಂಕುಮಾದಿಗಳನ್ನು ಹಚ್ಚಿಕೊಂಡಿರುವ, ಕೈಯಲ್ಲಿ ಕೊಳಲನ್ನು ಹಿಡಿದು ಊದುತ್ತಿರುವ, ಎಡಗೈಯಲ್ಲಿ ಶಂಖವನ್ನೂ ಬಲಗೈಯಲ್ಲಿ ಕೋಲನ್ನೂ ಧರಿಸಿರುವ, ಉತ್ತಮ ವೇಷವನ್ನು ತಾಳಿರುವ, ಇಷ್ಟಾರ್ಥಪ್ರದಾನಸಮರ್ಥನಾದ ನಂದಕುಮಾರನನ್ನು ಧ್ಯಾನಿಸಿ ಐಶ್ವರ್ಯವನ್ನು ಪಡೆಯುವುದಕ್ಕಾಗಿ ಪೂಜಿಸಬೇಕು.

೮೬. ವಿಷ್ಣುಭಕ್ತವರ್ಯನು ಈ ರೀತಿ ಕೃಷ್ಣನನ್ನು ಧ್ಯಾನಿಸಿ ಪೂಜಿಸಬೇಕು. ಬಳಿಕ ಅಪೂಪ, ಪಾಯಸ, ಅನ್ನ ಮುಂತಾದುವುಗಳನ್ನು ನೈವೇದ್ಯ ಮಾಡಬೇಕು.

೮೭. ತುಪ್ಪಸಹಿತ ಕ್ಷೀರಾನ್ನಗಳಿಂದ ನೂರೆಂಟು ಹೋಮಮಾಡಿ ತರುವಾಯ ದೇವತೆಗಳಿಗೆ ಅವರವರ ದಿಕ್ಕುಗಳಲ್ಲಿ ಬಲಿಪ್ರದಾನಮಾಡಿ ಆಚಮನವನ್ನರ್ಪಿಸಬೇಕು.

**ಅಷ್ಟೋತ್ತರಸಹಸ್ರಂ ಚ ಪ್ರಜಪೇನ್ಮಂತ್ರಮುತ್ತಮಂ ।**
**ಅಹ್ನೋ ಮಧ್ಯೇ ಯಜೇದೇವಂ ಯಃ ಕೃಷ್ಣಂ ವೈಷ್ಣವೋತ್ತಮಃ ॥೮೮॥**

**ದೇವಾಃ ಸರ್ವೇ ನಮಸ್ಯಂತಿ ಲೋಕಾನಾಂ ವಲ್ಲಭೋ ನರಃ ।**
**ಮೇಧಾಯುಃಶ್ರೀಕಾಂತಿಯುಕ್ತಃ ಪುತ್ರೈಃ ಪೌತ್ರೈಶ್ಚ ವರ್ಧತೇ ॥ ೮೯ ॥**

**ತೃತೀಯಕಾಲಪೂಜಾಯಾಮಸ್ತಿ ಕಾಲವಿಕಲ್ಪನಾ ।**
**ಸಾಯಾಹ್ನೇ ನಿಶಿ ವೇತ್ಯತ್ರ ವದಂತ್ಯೇಕೇ ವಿಪಶ್ಚಿತಃ ॥ ೯೦ ॥**

**ದಶಾಕ್ಷರೇಣ ಚೇದ್ರಾತ್ರೌ ಸಾಯಾಹ್ನೇಽಷ್ಟಾದಶಾರ್ಣತಃ ।**
**ಉಭಯೋಮುಭಯೇನೈವ ಕುರ್ಯಾದಿತ್ಯಪರೇ ಜಗುಃ ॥ ೯೧ ॥**

---

೮೮-೮೯. ಅನಂತರ ಉತ್ತಮವಾದ ಶ್ರೀಕೃಷ್ಣಮಂತ್ರವನ್ನು ನೂರೆಂಟಾವರ್ತಿ ಜಪಿಸಬೇಕು. ಮಧ್ಯಾಹ್ನಕಾಲದಲ್ಲಿ ಈಪ್ರಕಾರವಾಗಿ ಶ್ರೀಕೃಷ್ಣನನ್ನು ಪೂಜಿಸುವ ವೈಷ್ಣವೋತ್ತಮನು ಸಕಲ ದೇವತೆಗಳಿಂದಲೂ ಸ್ತುತ್ಯನಾಗಿ ಲೋಕವಲ್ಲಭನಾಗುವನು. ಮತ್ತು ಆ ಕೃಷ್ಣಪೂಜಕನು ಈ ಲೋಕದಲ್ಲಿ ಪ್ರಜ್ಞೆ, ಆಯುಸ್ಸು, ಐಶ್ವರ್ಯ, ಕಾಂತಿ ಇವುಗಳಿಂದ ಯುಕ್ತನಾಗಿ ಪುತ್ರಪೌತ್ರಸಂಪತ್ತನ್ನು ಪಡೆದು ಶ್ರೇಯೋಭಾಗಿಯಾಗುವನು.

೯೦. ಮೂರನೆಯ ಕಾಲದ ಪೂಜೆಯ ವಿಷಯದಲ್ಲಿ ಭಿನ್ನ ಭಿನ್ನ ಕಾಲಕಲ್ಪನೆಗಳು ಕಂಡುಬರುತ್ತವೆ. ಕೆಲವು ಜ್ಞಾನಿಗಳು ಸಾಯಂಕಾಲದಲ್ಲಿ ಪೂಜೆ ಮಾಡಬೇಕೆಂತಲೂ ಇನ್ನು ಕೆಲವು ಪಂಡಿತರು ರಾತ್ರಿಯು ಕಾಲದಲ್ಲಿ ಪೂಜೆ ಮಾಡಬೇಕೆಂತಲೂ ಹೇಳುತ್ತಾರೆ.

೯೧. ಇತರರು ದಶಾಕ್ಷರ ಕೃಷ್ಣಮಂತ್ರಜಪಾದಿಗಳಿಗೆ ರಾತ್ರಿಯು ವಿಹಿತ ಕಾಲವೆಂತಲೂ ಅಷ್ಟಾದಶಾಕ್ಷರಮಂತ್ರಜಪಾದಿಗಳಿಗೆ ಸಾಯಂಕಾಲವು ವಿಹಿತ ಕಾಲವೆಂತಲೂ ಹೇಳುತ್ತಾರೆ. ಇನ್ನೂ ಕೆಲವರು ಎರಡನ್ನೂ ಸಾಯಂಕಾಲ, ರಾತ್ರಿ ಎರಡು ಕಾಲಗಳಲ್ಲಿಯೂ ಮಾಡಬೇಕೆಂದು ಹೇಳುವರು.

ಸಾಯಾಹ್ನೇ ದ್ವಾರವತ್ಯಾಂ ತು ಚಿತ್ರೋದ್ಯಾನೋಪಶೋಭಿತೇ ।
ದ್ವ್ಯಷ್ಟಸಾಹಸ್ರಸಂಖ್ಯಾತೈರ್ಭವನೈರುಪಮಂಡಿತೇ ॥ ೯೨ ॥

ಹಂಸಸಾರಸಸಂಕೀರ್ಣಕಮಲೋತ್ಪಲಶಾಲಿಭಿಃ ।
ಸರೋಭಿರ್ನಿರ್ಮಲಾಂಭೋಭಿಃ ಪರೀತೇ ಭವನೋತ್ತಮೇ ॥ ೯೩ ॥

ಉದ್ಯತ್ಪ್ರದ್ಯೋತನೋದ್ಯೋತದ್ಯುತೌ ಶ್ರೀಮಣಿಮಂಡಪೇ ।
ಹೇಮಾಂಭೋಜಾಸನಾಸೀನಂ ಕೃಷ್ಣಂ ತ್ರೈಲೋಕ್ಯಮೋಹನಂ ॥ ೯೪ ॥

ಮುನಿವೃಂದೈಃ ಪರಿವೃತಮಾತ್ಮತತ್ವವಿನಿರ್ಣಯೇ ।
ತೇಭ್ಯೋ ಮುನಿಭ್ಯಃ ಸ್ವಂ ಧಾಮ ದಿಶಂತಂ ಪರಮಕ್ಷರಂ ॥ ೯೫ ॥

ಉನ್ನಿದ್ರೇಂದೀವರಶ್ಯಾಮಂ ಪದ್ಮಪತ್ರಾಯತೇಕ್ಷಣಂ ।
ಸ್ನಿಗ್ಧಂ ಕುಂತಲಸಂಭಿನ್ನಕಿರೀಟವನಮಾಲಿನಂ: ॥ ೯೬ ॥

---

೯೨-೯೯. ಸಾಯಂಕಾಲದಲ್ಲಿ ದ್ವಾರಕಾಪಟ್ಟಣದಲ್ಲಿನ ವಿಚಿತ್ರವಿಹಾರ ವನಗಳಿಂದಲಂಕೃತವಾದ ಹದಿನಾರು ಸಾವಿರ ಭವನಗಳನ್ನೊಳಗೊಂಡು ಹಂಸಾದಿಪಕ್ಷಿಸಮೂಹ ಮತ್ತು ಕಮಲಕನ್ನೈದಿಲೇ ಹೂವುಗಳುಳ್ಳ ನಿರ್ಮಲ ಜಲದಿಂದ ತುಂಬಿದ ಸರೋವರಗಳ ಮಧ್ಯದಲ್ಲಿರುವ ಶ್ರೇಷ್ಠ ಭವನದಲ್ಲಿ ಉದಯಿಸುತ್ತಿರುವ ಸೂರ್ಯನ ಪ್ರಚಂಡ ಪ್ರಭೆಗೆ ಸಮಾನವಾದ ಕಾಂತಿಯಿಂದ ಶೋಭಿಸುತ್ತಿರುವ, ರತ್ನಖಚಿತ ಮಂಟಪದಲ್ಲಿ ಸುವರ್ಣಮಯ ಪದ್ಮಾಸನದಲ್ಲಿ ಕುಳಿತಿರುವ, ತ್ರೈಲೋಕ್ಯಮೋಹಕನಾದ, ಆತ್ಮತತ್ವಪರಿಜ್ಞಾನಕ್ಕಾಗಿ ಬಂದಿದ್ದ ಮುನಿಸಮೂಹಗಳಿಂದ ಕೂಡಿರುವ, ಆ ಮುನಿಗಳಿಗೆ ಆತ್ಮತತ್ವವನ್ನು ಉಪದೇಶಿಸುತ್ತಿರುವ, ಪರಮಾಕ್ಷರನಾಮಕನಾದ, ಅರಳಿದ ಕನ್ನೈದಿಲೇ ಹೂವಿನಂತೆ ಶ್ಯಾಮವರ್ಣವಿಶಿಷ್ಟನಾದ, ಕಮಲದಳಗಳಂತೆ ವಿಶಾಲನೇತ್ರಗಳುಳ್ಳ, ನುಣುಪಾದ ಕೂದಲುಗಳಲ್ಲಿ ಸೇರಿಸಲ್ಪಟ್ಟ ಕಿರೀಟ ಮತ್ತು ವನಮಾಲೆಗಳುಳ್ಳ, ಮನೋಹರ ಪ್ರಸನ್ನಮುಖನಾದ, ಪ್ರಕಾಶಿಸುತ್ತಿರುವ ಮಕರಾಕಾರದ ಕಡಕುಗಳನ್ನು ಇಟ್ಟ

ಚಾರು ಪ್ರಸನ್ನವದನಂ ಸ್ಫುರನ್ಮಕರಕುಂಡಲಂ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ಸುಮನೋಹರಂ ॥ ೯೭ ॥

ಕಾಶ್ಮೀರಕಪಿಶೋರಸ್ಕಂ ಪೀತಕೌಶೇಯವಾಸಸಂ ।
ಹಾರಕೇಯೂರಕಟಕಕಟಿಸೂತ್ರೈರಲಂಕೃತಂ ॥ ೯೮ ॥

ಹೃತವಿಶ್ವಂಭರಾಭೂರಿಭಾರಂ ಮುದಿತಮಾನಸಂ ।
ಶಂಖಚಕ್ರಗದಾಪದ್ಮರಾಜದ್ಭುಜಚತುಷ್ಟಯಂ ॥ ೯೯ ॥

ಏವಂ ಧ್ಯಾತ್ವಾರ್ಚಯೇನ್ಮಂತ್ರೀ ಸ್ಯಾದಂಗೈಃ ಪ್ರಥಮಾವೃತಿಃ ।
ದ್ವಿತೀಯಾ ಮಹಿಷೀಭಿಸ್ತು ತೃತೀಯಾಯಾಂ ಸಮರ್ಚಯೇತ್ ॥ ೧೦೦ ॥

ನಾರದಂ ಪರ್ವತಂ ಜಿಷ್ಣುಂ ನಿಶಠೋದ್ಧವದಾರುಕಾನ್ ।
ವಿಷ್ವಕ್‌ಸೇನಂ ಚ ಶೈನೇಯಂ ದಿಕ್ಷ್ವಗ್ರೇ ವಿನತಾಸುತಂ ॥ ೧೦೧ ॥

---

ಕೊಂಡಿರುವ, ಶ್ರೀವತ್ಸವೆಂಬ ಗುರುತಿನಿಂದ ಯುಕ್ತವಾದ ವಕ್ಷಸ್ಥಳವುಳ್ಳ, ಪ್ರಕಾಶಮಾನವಾದ ಕೌಸ್ತುಭಮಣಿಯನ್ನು ಧರಿಸಿರುವ, ಅತ್ಯಂತ ಮನೋಹರಸ್ವರೂಪನಾದ, ನೆಲತಾವರೆ ಗೆಡ್ಡೆಯಂತೆ ಕುಂಕುಮಬಣ್ಣದ ಎದೆಯುಳ್ಳ, ಪೀತಾಂಬರವನ್ನುಟ್ಟಿರುವ, ಮುತ್ತಿನ ಹಾರ, ಬಾಹ್ವಾಭರಣ, ಕಡಗ ಮತ್ತು ಉಡುದಾರಗಳಿಂದಲಂಕೃತನಾದ, ಅಧಿಕ ಭೂಭಾರವನ್ನಪಹರಿಸಿದ, ಸಂತುಷ್ಟಚಿತ್ತನಾದ, ಶಂಖ ಚಕ್ರ ಗದಾ ಪದ್ಮಗಳಿಂದ ಪ್ರಕಾಶಿಸುತ್ತಿರುವ ಚತುರ್ಭುಜಗಳುಳ್ಳ ಕೃಷ್ಣನನ್ನು ಧ್ಯಾನಿಸಿ ಸಾಯಂಕಾಲದಲ್ಲಿ ಪೂಜಿಸಬೇಕು.

೧೦೦. ಈ ಪೂಜೆಯಲ್ಲಿ ಪೂರ್ವೋಕ್ತ ಪಂಚಾಂಗಪೂಜೆಯು ಪ್ರಥಮಾವರಣವು. ರುಕ್ಮಿಣೀ ಮುಂತಾದ ಅಷ್ಟಮಹಿಷಿಯರಿಂದ ಎಂದರೆ ಅಷ್ಟಮಹಿಷಿಯರ ಪೂಜೆಯು ದ್ವಿತೀಯಾವರಣವು. ಮೂರನೆಯ ಆವರಣದಲ್ಲಿ ಮುಂದೆ ಹೇಳಿರುವವರನ್ನು ಪೂಜಿಸಬೇಕು.

೧೦೧. ಮೊದಲು ಗರುಡನನ್ನೂ, ದಿಕ್ಕುಗಳಲ್ಲಿ ನಾರದ. ಪರ್ವತಮುನಿ ಅರ್ಜುನ, ನಿಶಠನೆಂಬ ಯಾದವ, ಉದ್ಧವ, ದಾರುಕನೆಂಬ ಕೃಷ್ಣಸಾರಥಿಯು,

ಲೋಕಪಾಲೈಶ್ಚ ವಜ್ರಾದ್ಯೈಃ ಪೂಜಯೇದ್ವೈಷ್ಣವೋತ್ತಮಃ ।
ಏವಂ ಸಂಪೂಜ್ಯ ವಿಧಿವತ್ಪಾಯಸಂ ವಿನಿವೇದಯೇತ್ ॥ ೧೦೨ ॥

ತರ್ಪಯಿತ್ವಾ ಖಂಡಮಿಶ್ರದುಗ್ಧಬುದ್ಧ್ಯಾ ಜಲೈರಿಹ ।
ಜಪೇದಷ್ಟಶತಂ ಮಂತ್ರೀ ಭಾವಯನ್ಪುರುಷೋತ್ತಮಂ ॥ ೧೦೩ ॥

ಪೂಜಾಸು ಹೋಮಂ ಸರ್ವಾಸು ಕುರ್ಯಾನ್ಮಧ್ಯಂದಿನೇಽಥವಾ ।
ಆಸನಾದರ್ಘ್ಯಪರ್ಯಂತಂ ಕೃತ್ವಾ ಸ್ತುತ್ವಾ ನಮೇತ್ಸುಧೀಃ ॥ ೧೦೪ ॥

ಸಮರ್ಪ್ಯಾತ್ಮಾನಮುದ್ವಾಸ್ಯ ಸ್ವೀಯಹೃತ್ಸರಸೀರುಹೇ ।
ವಿನ್ಯಸ್ಯ ತನ್ಮಯೋ ಭೂತ್ವಾ ಪುನರಾತ್ಮಾನಮರ್ಚಯೇತ್ ॥ ೧೦೫ ॥

---

ವಿಷ್ವಕ್ಸೇನ ಮತ್ತು ಸಾತ್ಯಕೀ ಇವರನ್ನೂ ಪೂಜಿಸಬೇಕು. ಇದೇ ಮೂರನೆಯ ಆವರಣ ಪೂಜೆಯು.

೧೦೨. ಅನಂತರ ಇಂದ್ರಾದಿ ಲೋಕಪಾಲಕರ ಮತ್ತು ಅವರವರ ಆಯುಧಗಳಾದ ವಜ್ರಾದಿಗಳ ಪೂಜೆಗಳಿಂದ ಚತುರ್ಥ ಪಂಚಮಾವರಣ ಪೂಜೆಗಳನ್ನು ಮಾಡಬೇಕು. ವೈಷ್ಣವೋತ್ತಮನು ಈ ರೀತಿ ವಿಧಿವತ್ತಾಗಿ ಪೂಜಿಸಿ ಪಾಯಸವನ್ನು ನೈವೇದ್ಯಮಾಡಬೇಕು.

೧೦೩. ಸಕ್ಕರೆಮಿಶ್ರವಾದ ಹಾಲು ಎಂದು ಭಾವಿಸಿ ನೀರಿನಿಂದ ಅರ್ಘ್ಯೆಯನ್ನು ಕೊಟ್ಟು ಪುರುಷೋತ್ತಮನನ್ನು ಚಿಂತಿಸುತ್ತಾ ಮಂತ್ರಿಯು ನೂರೆಂಟಾವರ್ತಿ ಜಪಮಾಡಬೇಕು.

೧೦೪. ತ್ರಿಕಾಲಪೂಜೆಗಳಲ್ಲಿಯೂ ಹೋಮಮಾಡಬೇಕು. ಅಥವಾ ಮಧ್ಯಾಹ್ನಪೂಜೆಯಲ್ಲಿ ಮಾತ್ರ ಹೋಮಮಾಡಿ ಉಳಿದ ಎರಡು ಪೂಜೆಗಳಲ್ಲಿ ಆಸನದಿಂದ ಅರ್ಘ್ಯೆಯವರೆಗೂ ಮಾಡಿ ಧ್ಯಾನಿಸಿ ನಮಸ್ಕಾರಮಾಡಬೇಕು.

೧೦೫. ಆತ್ಮಸಮರ್ಪಣಮಂತ್ರದಿಂದ ಆತ್ಮನನ್ನು ಪರಮೇಶ್ವರನಲ್ಲಿ ಸಮರ್ಪಿಸಿ, ಆ ಭಗವಂತನ ತೇಜಸ್ಸನ್ನು ಪೂಜಾಸ್ಥಲದಿಂದ ವಿಸರ್ಜನೆಮಾಡಿ ತನ್ನ ಹೃದಯಕಮಲದಲ್ಲಿ ಸ್ಥಾಪನೆಮಾಡಿಕೊಂಡು, ಆ ಕೃಷ್ಣಭಗವಂತನಲ್ಲಿಯೇ ಲೀನನಾಗಿ ಪುನಃ ಆತ್ಮಸನ್ನಿಹಿತನಾದ ಶ್ರೀಕೃಷ್ಣನನ್ನು ಪೂಜಿಸಬೇಕು.

**ಸಾಯಾಹ್ನೇ ವಾಸುದೇವಂ ಯೋ ನಿತ್ಯಮೇವಂ ಸಮರ್ಚಯೇತ್ ।**
**ಸರ್ವಾನ್ಕಾಮಾನವಾಪ್ಯಾಂತೇ ಸ ಯಾತಿ ಪರಮಾಂ ಗತಿಂ ॥ ೧೦೬ ॥**

**ರಾತ್ರೌ ಚೇನ್ಮದನಾಕ್ರಾಂತಚೇತಸಂ ನಂದನಂದನಂ ।**
**ಯಜೇದ್ರಾಸಪರಿಶ್ರಾಂತಂ ಗೋಪೀಮಂಡಲಮಧ್ಯಗಂ । ॥ ೧೦೭ ॥**

**ವಿಕಸತ್ಕುಂದಕಲ್ಹಾರಮಲ್ಲಿಕಾಕುಸುಮೋದ್ಗತೈಃ ।**
**ರಜೋಭಿರ್ಧೂಸರೈರ್ಮಂದಮಾರುತೈಃ ಶಿಶಿರೀಕೃತೇ ॥ ೧೦೮ ॥**

**ಉನ್ಮೀಲನ್ನವಕೈರವಾಲಿವಿಗಲನ್ಮಾಧ್ವೀಕಲುಬ್ಧಾಂತರಂ ।**
**ಭ್ರಾಮ್ಯನ್ಮತ್ತಮಿಲಿಂದಗೀತಲಲಿತೇ ಸನ್ಮಲ್ಲಿಕೋಜ್ಜೃಂಭಿತೇ ॥**
**ಪೀಯೂಷಾಂಶುಕರೈರ್ವಿಶಾಲಿತಹರಿತ್ಪ್ರಾಂತೇ ಸ್ಮರೋದ್ದೀಪಿತೇ ।**
**ಕಾಲಿಂದೀ ಪುಲಿನಾಂಗಣೇ ಸ್ಮಿತಮುಖಂ ವೇಣುಂ ರಣಂತಂ ಮುಹುಃ ೧೦೯**

---

೧೦೬. ಸಾಯಂಕಾಲದಲ್ಲಿ ನಿತ್ಯವೂ ಈ ರೀತಿಯಾಗಿ ಪೂಜಿಸುವವನು ಸಕಲೇಷ್ಟಾರ್ಥಗಳನ್ನೂ ಪಡೆದು ಕೊನೆಯಲ್ಲಿ ಉತ್ತಮಗತಿಯನ್ನು ಹೊಂದುವನು.

೧೦೭. ರಾತ್ರಿಯಕಾಲದಲ್ಲಿ ಪೂಜೆಮಾಡುವ ಸಂದರ್ಭದಲ್ಲಿ ಕಾಮೋದ್ರೇಕಗೊಂಡ ಮನಸ್ಸುಳ್ಳ, ರಾಸಕ್ರೀಡೆಯಿಂದ ಬಳಲಿದ ಗೋಪಿಕಾಸ್ತ್ರೀಯರ ಸಮೂಹದ ಮಧ್ಯದಲ್ಲಿರುವ ನಂದಕುಮಾರನನ್ನು ಪೂಜಿಸಬೇಕು.

೧೦೮-೧೧೩. ರಾತ್ರಿಪೂಜಾಂಗ ಧ್ಯಾನವಿಧಾನವನ್ನು ಮುಂದಿನ ಆರು ಶ್ಲೋಕಗಳಿಂದ ವಿವರಿಸುತ್ತಾರೆ :— ವಿಕಸಿತವಾದ ಕುಂದ, ಕಲ್ಹಾರ, ಮಲ್ಲಿಗೇ ಹೂವುಗಳಿಂದ ಹೊರಟ ರಜಸ್ಸುಗಳಿಂದ ಧೂಮ್ರವರ್ಣವಿಶಿಷ್ಟವಾದ ಮಂದ ಮಾರುತ (ತಂಗಾಳಿ)ಗಳಿಂದ ತಣ್ಣಗೆ ಮಾಡಲ್ಪಟ್ಟ ಆಗಲೇ ಅರಳಿದ ಬಿಳಿಯ ಕುಮುದ ಪುಷ್ಪಸಮೂಹಗಳಿಂದ ಸ್ರವಿಸುತ್ತಿರುವ ಮಧುವಿನ ಆಶೆಯಿಂದ ಸುತ್ತುತ್ತಿರುವ ಮತ್ತು ಭ್ರಮರಗಳ ಝೇಂಕಾರದಿಂದ ಮನೋಹರವಾದ ಒಳ್ಳೆಯ ಮಲ್ಲಿಕೆಗಳಿಂದ ಪ್ರಕಾಶಿಸುತ್ತಿರುವ ಚಂದ್ರಕಿರಣ (ಬೆಳದಿಂಗಳು) ಗಳಿಂದ ವ್ಯಾಪ್ತವಾದ ದಿಕ್ಪ್ರದೇಶಗಳುಳ್ಳ, ಕಾಮೋತ್ತೇಜಕವಾದ ಸನ್ನಿವೇಶಗಳನ್ನೊಳಗೊಂಡಿರುವ ಯಮುನಾತೀರದಲ್ಲಿನ ಮರಳುದಿಣ್ಣೆಗಳಲ್ಲಿ ಬಾರಿಬಾರಿಗೂ ಕೊಳ

ಅಂತಸ್ತೋಯಲಸನ್ನವಾಂಬುದಘಟಾಸಂಘಟ್ಟಕಾರತ್ವಿಷಂ ।
ಚಂಚಚ್ಚಿಲ್ಲಿಕಮಂಬುಜಾಯತದೃಶಂ ಬಿಂಬಾಧರಂ ಸುಂದರಂ ॥
ಮಾಯೂರಚ್ಛದಬದ್ಧಮೌಲಿ ವಿಲಸದ್ಧಮ್ಮಿಲ್ಲಮಾಲಂ ಚಲ ।
ದ್ದೀಪ್ಯತ್ಕುಂಡಲರತ್ನರಶ್ಮಿವಿಲಸದ್ಗಂಡದ್ವಯೋದ್ಭಾಸಿತಂ　　॥ ೧೧೦ ॥

ಕಾಂಚೀನೂಪುರಹಾರಕಂಕಣಲಸತ್ಕೇಯೂರಭೂಷಾನ್ವಿತಂ ।
ಗೋಪೀನಾಂ ದ್ವಿತಯಾಂತರೇ ಸುಲಲಿತಂ ವನ್ಯಪ್ರಸೂನಸ್ರಜಂ ॥
ಅನ್ಯೋನ್ಯಂ ವಿನಿಬದ್ಧಗೋಪದಯಿತಾದೋರ್ವಲ್ಲಿವೀತಂ ಲಸತ್ ।
ರಾಸಕ್ರೀಡನಲೋಲುಪಂ ಮನಸಿಜಾಕ್ರಾಂತಂ ಮುಕುಂದಂ ಭಜೇತ್ ॥

ವಿವಿಧಶ್ರುತಿಭಿನ್ನಮನೋಜ್ಞತರ ।
ಸ್ವರಸಪ್ತಕಮೂರ್ಛನತಾಲಗಣೈಃ ॥
ಭ್ರಮಮಾಣಮಮೂಮಿರುದಾರಮಣಿ ।
ಸ್ಫುಟಮಂಡನಸಿಂಜಿತಚಾರುತರಂ　　॥ ೧೧೨ ॥

---

ಲನ್ನೂದುತ್ತಿರುವ, ಮುಖದಲ್ಲಿ ಮಂದಹಾಸಮಾಡುತ್ತಿರುವ, ಪ್ರಕಾಶಮಾನವಾದ ನೂತನ ಮೇಘಗಳ ಸಂಘರ್ಷದಿಂದುಂಟಾದ ಮಿಂಚಿನಂತೆ ನೀರಿನೊಳಗೆ ಹೊಳೆಯುತ್ತಿರುವ, ಪದ್ಮದಂತೆ ವಿಶಾಲ ನೇತ್ರಗಳುಳ್ಳ, ಚಂದ್ರಬಿಂಬದಂತೆ ಕೆಂಪಗಿರುವ ತುಟಿಗಳುಳ್ಳ, ಮನೋಹರನಾದ, ತಲೆಯಲ್ಲಿ ನವಿಲುಗರಿಯಿಂದ ಮಾಡಿದ ಆಭರಣಗಳಿಂದ ಪ್ರಕಾಶಮಾನವಾದ ಮಾಲಿಕೆಯಂತಿರುವ ಜಡೆಯುಳ್ಳ, ಅಲ್ಲಾಡುತ್ತಿರುವ ವಿರಾಜಮಾನ ಕುಂಡಲಗಳಲ್ಲಿನ ರತ್ನಕಿರಣಗಳಿಂದ ಪ್ರಕಾಶಮಾನವಾದ ಎರಡು ಗಂಡಸ್ಥಲಗಳಿಂದ ಹೊಳೆಯುತ್ತಿರುವ, ಉಡುದಾರ ಕಾಲ್ಗಡಗ ಮುಕ್ತಾಹಾರ ಕೈಗಡಗಗಳು ಮತ್ತು ಹೊಳೆಯುತ್ತಿರುವ ಬಾಹ್ವಾಭರಣ ಇವುಗಳನ್ನು ಧರಿಸಿರುವ ಇಬ್ಬರು ಗೋಪಿಕಾಸ್ತ್ರೀಯರ ಮಧ್ಯದಲ್ಲಿರುವ, ಅತ್ಯಂತ ಮನೋಹರವಾದ ವನಪುಷ್ಪಮಾಲಿಕೆಯನ್ನು ಧರಿಸಿರುವ, ಪರಸ್ಪರವಾಗಿ ಕಟ್ಟಿಕೊಂಡಿರುವ ಗೋಪಸ್ತ್ರೀಯರ ಬಾಹುಲತೆಗಳಿಂದ ಯುಕ್ತನಾದ, ವಿರಾಜಮಾನ ರಾಸಕ್ರೀಡೆಯಲ್ಲಿ ಆಸಕ್ತನಾದ, ಕಾಮೋದ್ರೇಕಗೊಂಡ, ಮೋಕ್ಷಪ್ರದನಾದ, ನಾನಾವಿಧಶ್ರುತಿಗಳಿಂದ ಸಂಗತವಾದ ಅತ್ಯಂತ ಮನೋಹರವಾದ ಸಪ್ತಸ್ವರಗಳು

ಇತರೇತರಬದ್ಧಕರಪ್ರಮದಾಗಣ ।
ಕಲ್ಪಿತರಾಸವಿಹಾರವಿಧೌ ॥
ಮಣಿಶಂಕುಗಮಪ್ಯಮುನಾ ವಪುಷಾ ।
ಬಹುಧಾ ವಿಹಿತಸ್ವಕದಿವ್ಯತನುಂ ॥ ೧೧೩ ॥

ಏವಂ ಧ್ಯಾತ್ವಾऽರ್ಚಯೇನ್ಮಂತ್ರೀ ಸ್ಯಾದಂಗೈಃ ಪ್ರಥಮಾವೃತಿಃ ।
ಶ್ರೀಕಾಮಃ ಸಸ್ವರಾದ್ಯಾನಿ ಕಲಾಬ್ಜೈರ್ವೈಷ್ಣವೋತ್ತಮಃ ॥ ೧೧೪ ॥

ಯಜೇತ್ಕೇಶವಕೀರ್ತ್ಯಾದಿ ಮಿಥುನಾನಿ ಚ ಷೋಡಶ ।
ಇಂದ್ರಾದ್ಯಾನಪಿ ವಜ್ರಾದೀನ್ಪೂಜಯೇತ್ತದನಂತರಂ ॥ ೧೧೫ ॥

---

ಇಪ್ಪತ್ತೊಂದು ಮೂರ್ಛನೆಗಳು, ಭಾಗತಾಲ, ಅಶ್ವತಾಲ ಮುಂತಾದ ನಲವತ್ತೊಂಬತ್ತು ತಾಳಗಳು ಇವುಗಳ ಸಮೂಹಗಳುಳ್ಳ ಗೋಪಿಕಾಸ್ತ್ರೀಯರೊಡನೆ ಸುತ್ತುತ್ತಿರುವ, ವ್ಯಕ್ತಭೂಷಣವಾದ ಉದಾರಮಣಿಯ ಶಬ್ದದಿಂದ ಹೃದಯಂಗಮನಾಗಿರುವ, ಗೋಪಿಕಾಸ್ತ್ರೀಯರ ಅನ್ಯೋನ್ಯಕರಗಳನ್ನು ಪಿಡಿದು ರಚಿಸಿದ ರಾಸಕ್ರೀಡಾ ವಿಧಾನದಲ್ಲಿ ಮಧ್ಯದಲ್ಲಿನ ಮಣಿಮಯ ಶಂಕುವಿನಲ್ಲಿರುವವನಾದಾಗ್ಯೂ ತನ್ನ ದಿವ್ಯಶರೀರವನ್ನೇ ಬಹುವಾಗಿ ನಿರ್ಮಿಸಿ ಗೋಪಸ್ತ್ರೀಯರ ಜೊತೆಯಲ್ಲಿಯೂ ಸಹ ಸುತ್ತುತ್ತಿರುವ ಶ್ರೀಕೃಷ್ಣನನ್ನು ಭಜಿಸಬೇಕು.

೧೧೪-೧೧೫. ಮಂತ್ರಿಯು ಈ ರೀತಿ ಧ್ಯಾನಿಸಿ ಪೂಜಿಸಬೇಕು. ಅಂಗಪೂಜೆಗಳಿಂದ ಪ್ರಥಮಾವರಣ ಪೂಜೆಯನ್ನು ಮಾಡಬೇಕು. ಬಳಿಕ ಸಂಪತ್ಕಾಮನಾದ ವೈಷ್ಣವೋತ್ತಮನು ಅಕಾರಾದಿ ವರ್ಣಾದ್ಯಗಳಾದ ಕೀರ್ತ್ಯಾದಿಶಕ್ತಿ ಸಹಿತ ಕೇಶವಾದಿ ಷೋಡಶ ದ್ವಂದ್ವಗಳನ್ನು ಷೋಡಶ ಪದ್ಮದಳಗಳಲ್ಲಿ ಪೂಜಿಸಬೇಕು. ಅನಂತರ ಇಂದ್ರಾದಿ ದಿಕ್ಪಾಲಕರನ್ನೂ ವಜ್ರಾದ್ಯಾಯುಧಗಳನ್ನೂ ಪೂಜಿಸಬೇಕು.

ಪೃಥುಂ ಸುವೃತ್ತಂ ಮಸೃಣಂ ವಿತಸ್ತಿ-
ಮಾತ್ರೋನ್ನತಂ ಕೌ ವಿನಿಖನ್ಯ ಶಂಕುಂ ॥
ಆಕ್ರಮ್ಯ ಪದ್ಭ್ಯಾಮಿತರೇತರೈಸ್ತು
ಹಸ್ತೈರ್ಭ್ರಮೋಽಯಂ ಖಲು ರಾಸಗೋಷ್ಠೀ ॥ ೧೧೬ ॥

ಸಂಪೂಜ್ಯೈವಂ ಚ ಪಯಸಾ ಸಸಿತೋಪಲಸರ್ಪಿಷಾ ।
ನೈವೇದ್ಯಮರ್ಪಯಿತ್ವಾ ತು ಚಷಕೈರ್ನೃಪ ಸಂಖ್ಯಕೈಃ ॥ ೧೧೭ ॥

ಸಸಿತಂ ಪಾಯಸಂ ಮಂತ್ರೀ ಮಿಥುನೇಷ್ವರ್ಪಯೇತ್ಕ್ರಮಾತ್ ।
ವಿಧಾಯ ಪೂರ್ವವಚ್ಛೇಷಂ ಸಹಸ್ರಂ ಪ್ರಜಪೇನ್ಮನುಂ ॥ ೧೧೮ ॥

ಸ್ತುತ್ವಾ ನತ್ವಾ ಚ ಸಂಪ್ರಾರ್ಥ್ಯ ಪೂಜಾಶೇಷಂ ಸಮಾಪಯೇತ್ ।
ಏವಂ ಯಃ ಪೂಜಯೇತ್ಕೃಷ್ಣಂ ಸ ಸಮೃದ್ಧೇಃ ಪದಂ ಭವೇತ್ ॥ ೧೧೯ ॥

---

೧೧೬. ದಪ್ಪವಾದ, ಗುಂಡಗಿರುವ, ನುಣುಪಾದ ಗೂಟವನ್ನು ಮೇಲೆ ಒಂದಡಿ ಕಾಣಿಸುವಂತೆ ಭೂಮಿಯಲ್ಲಿ ಹೂಳಿ, ಅದನ್ನು ಕಾಲಿನಿಂದ ಒತ್ತಿಕೊಂಡು ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಸುತ್ತುವುದೇ ರಾಸಕ್ರೀಡಾವಿಧಾನವು.

೧೧೭-೧೧೮. ಈ ರೀತಿ ಪೂಜಿಸಿ ಹಾಲು ಸಕ್ಕರೆ ತುಪ್ಪ ಮುಂತಾದುವನ್ನು ನೈವೇದ್ಯಮಾಡಿ ಮಂತ್ರಿಯು ಹದಿನಾರು ಪಾತ್ರೆಗಳಲ್ಲಿ ಸಕ್ಕರೆ ಪಾಯಸಗಳನ್ನುಕ್ರಮವಾಗಿ ಹದಿನಾರು ಕೇಶವಾದಿ ದ್ವಂದ್ವಗಳಿಗೆ ನೈವೇದ್ಯಮಾಡಬೇಕು. ಉಳಿದ ಪೂಜಾಪ್ರಕಾರವನ್ನು ಹಿಂದೆ ಹೇಳಿರುವಂತೆ ನಡೆಯಿಸಿ ಒಂದು ಸಾವಿರ ಮಂತ್ರ ಜಪವನ್ನು ಮಾಡಬೇಕು.

೧೧೯. ಸ್ತೋತ್ರ, ನಮಸ್ಕಾರ ಮತ್ತು ಪ್ರಾರ್ಥನೆಗಳಿಂದ ಅವಶಿಷ್ಟ ಪೂಜೆಯನ್ನು ಪೂರ್ತಿಮಾಡಬೇಕು. ಈ ಪ್ರಕಾರವಾಗಿ ಕೃಷ್ಣನನ್ನು ಪೂಜಿಸುವವನು ಸಕಲೈಶ್ವರ್ಯಸಮೃದ್ಧಿಯನ್ನೂ ಪಡೆಯುವನು.

ಅಣಿಮಾದ್ಯಷ್ಟಸಿದ್ಧೀನಾಮೀಶ್ವರಃ ಸ್ಯಾನ್ನ ಸಂಶಯಃ ।
ಭುಕ್ತ್ವೇಹ ವಿವಿಧಾನ್ ಭೋಗಾನಂತೇ ವಿಷ್ಣುಪದಂ ವ್ರಜೇತ್ ॥೧೨೦॥

ಏವಂ ಪೂಜಾದಿಭಿಃ ಸಿದ್ಧೇ ಮನೌ ಕಾಮ್ಯಾನಿ ಸಾಧಯೇತ್ ।
ಅಷ್ಟಾವಿಂಶತಿವಾರಂ ವಾ ತ್ರಿಕಾಲಂ ಪೂಜಯೇತ್ಸುಧೀಃ ॥ ೧೨೧ ॥

ಸ್ವಕಾಲವಿಹಿತಾನ್ ಭೂಯಃ ಪರಿವಾರಾಂಶ್ಚ ತರ್ಪಯೇತ್ ।
ಪ್ರಾತರ್ದಧ್ನಾ ಗುಡಾಕ್ತೇನ ಮಧ್ಯಾಹ್ನೇ ಪಯಸಾ ಪುನಃ ॥ ೧೨೨ ॥

ನವನೀತಯುತೇನಾಥ ಸಾಯಾಹ್ನೇ ತರ್ಪಯೇತ್ಪುನಃ ।
ಸಸಿತೋಪಲಮಿಶ್ರೇಣ ಪಯಸಾ ವೈಷ್ಣವೋತ್ತಮಃ ॥ ೧೨೩ ॥

ತರ್ಪಯಾಮಿಪದಂ ಯೋಜ್ಯಂ ಮಂತ್ರಾಂತೇ ಸ್ವೇಷು ನಾಮಸು ।
ದ್ವಿತೀಯಾಂತೇಷು ತು ಪುನಃ ಪೂಜಾಶೇಷಂ ಸಮಾಪಯೇತ್ ॥ ೧೨೪ ॥

---

೧೨೦. ಅಲ್ಲದೆ ಅವನು ಅಣಿಮಾದಿ ಅಷ್ಟಸಿದ್ಧಿಗಳಿಗೊಡೆಯನಾಗುವನು ಸಂದೇಹವಿಲ್ಲ. ಈ ಲೋಕದಲ್ಲಿ ನಾನಾವಿಧ ಭೋಗಗಳನ್ನು ಅನುಭವಿಸಿ ಕೊನೆಗೆ ವಿಷ್ಣುಸ್ಥಾನ ಎಂದರೆ ವೈಕುಂಠಾದಿ ಲೋಕಕ್ಕೆ ಹೋಗುವನು ಎಂದರೆ ಮುಕ್ತನಾಗುವನು ಎಂದು ತಾತ್ಪರ್ಯ.

೧೨೧. ಈ ರೀತಿ ಪೂಜಾದಿಗಳಿಂದ ಮಂತ್ರಸಿದ್ಧಿಯನ್ನು ಪಡೆದರೆ ಅಂತಹವನು ಇಷ್ಟಾರ್ಥಗಳನ್ನು ಸಾಧಿಸಬಹುದು. ಜ್ಞಾನಿಯು ಇಪ್ಪತ್ತೆಂಟಾವರ್ತಿಯಾದರೂ ತ್ರಿಕಾಲದಲ್ಲಿ ಪೂಜೆಮಾಡಬೇಕು.

೧೨೨-೧೨೪. ಪುನಃ ಆಯಾ ಕಾಲಗಳಲ್ಲಿ ವಿಹಿತವಾದ ಪರಿವಾರಗಳಿಗೆ ಅರ್ಘ್ಯೆಯನ್ನು ಬಿಡಬೇಕು. ಪ್ರಾತಃಕಾಲದಲ್ಲಿ ಬೆಲ್ಲದಿಂದ ಸಹಿತವಾದ ಮೊಸರಿನಿಂದಲೂ ಮಧ್ಯಾಹ್ನಕಾಲದಲ್ಲಿ ಬೆಣ್ಣೆಯಿಂದ ಸಹಿತವಾದ ಹಾಲಿನಿಂದಲೂ, ಸಾಯಂಕಾಲದಲ್ಲಿ ಸಕ್ಕರೆಯ ಚೂರುಗಳಿಂದ ಸಹಿತವಾದ ಹಾಲಿನಿಂದಲೂ ಮೂಲಮಂತ್ರವನ್ನು ಹೇಳಿ ಅದರ ಕೊನೆಯಲ್ಲಿ ಆಯಾ ತರ್ಪಣದೇವತೆಗಳ ಹೆಸರನ್ನು ದ್ವಿತೀಯಾಂತವಾಗಿ ಹೇಳಿ ಅದರ ಮುಂದೆ "ತರ್ಪಯಾಮಿ" ಎಂಬ ಪದವನ್ನು ಸೇರಿಸಿ ನಿಷ್ಪನ್ನವಾಗುವ ಮಂತ್ರವನ್ನು ಹೇಳಿ ತರ್ಪಣ ಮಾಡಬೇಕು. ಬಳಿಕ ಅವಶಿಷ್ಟಪೂಜೆಯನ್ನು ಪೂರ್ತಿಗೊಳಿಸಬೇಕು.

ಅಭ್ಯುಕ್ಷ್ಯ ತತ್ಪ್ರಸಾದಾದ್ಭಿರಾತ್ಮಾನಂ ಪ್ರಪಿಬೇದಪಃ ।
ತತ್ತೃಪ್ತಸ್ತಮಥೋದ್ವಾಸ್ಯ ತನ್ಮಯಃ ಪ್ರಜಪೇನ್ಮನುಂ ॥ ೧೨೫ ॥

ಅಥ ದ್ರವ್ಯಾಣಿ ಕಾಮ್ಯೇಷು ಪ್ರೋಚ್ಯಂತೇ ತರ್ಪಣೇಷು ಚ ।
ತಾನಿ ಪ್ರೋಕ್ತವಿಧಾನಾನಾಮಾಶ್ರಿತ್ಯಾನ್ಯತಮಂ ಭಜೇತ್ ॥ ೧೨೬ ॥

ಪಾಯಸಂ ದಧಿಕಂ ಚಾಜ್ಯಂ ಗೌಡಾನ್ನಂ ಕೃಸರಂ ಪಯಃ ।
ದಧೀನಿ ಕದಲೀ ಮೋಚಾ ತಥಾ ಚೋಚಾ ರಜಸ್ವಲಾ ॥೧೨೭॥

ಅಪೂಪಾ ಮೋದಕಾ ಲಾಜಾಃ ಪೃಥುಕಾ ನವನೀತಕಂ ।
ದ್ರವ್ಯ ಷೋಡಶಕಂ ಹ್ಯೇತತ್ಕಥಿತಂ ಪದ್ಮಜಾದಿಭಿಃ ॥ ೧೨೮ ॥

---

೧೨೫. ಅನಂತರ ಕೃಷ್ಣಪ್ರಸಾದ ತರ್ಪಣಜಲಗಳಿಂದ ತನ್ನನ್ನು ಪ್ರೋಕ್ಷಿಸಿಕೊಂಡು ಆ ನೀರನ್ನು ಕುಡಿಯಬೇಕು. ಅದರಿಂದ ತೃಪ್ತನಾಗಿ ಪೂಜಿತನಾದ ಶ್ರೀಕೃಷ್ಣನನ್ನು ಅಲ್ಲಿಂದ ವಿಸರ್ಜನೆ ಮಾಡಿ ತನ್ನ ಹೃದಯದಲ್ಲಿ ಸ್ಥಾಪಿಸಿ ತನ್ಮಯನಾಗಿ ಮಂತ್ರವನ್ನು ಜಪಿಸಬೇಕು.

೧೨೬. ಈಗ ಕಾಮ್ಯತರ್ಪಣಗಳಿಗೆ ಉಪಯೋಗಿಸುವ ಪದಾರ್ಥಗಳನ್ನು ಹೇಳುವೆನು. ಮುಂದೆ ಹೇಳುವ ವಿಧಾನಗಳಲ್ಲಿ ಯಾವುದಾದರೂ ಒಂದು ವಿಧಾನವನ್ನು ಆಶ್ರಯಿಸಿ ನಡೆಯಬಹುದು.

೧೨೭-೧೨೮. ಪಾಯಸ, ಮೊಸರನ್ನ, ತುಪ್ಪ, ಸಿಹಿಪಂಗಲು, ಹುಗ್ಗಿ, ಹಾಲು, ಮೊಸರು, ಕದಲೀ, ಮೋಚಾ, ಚೋಚ, ರಜಸ್ವಲಾ ಎಂಬ ನಾಲ್ಕು ತರದ ಬಾಳೇಹಣ್ಣುಗಳು, ಅಪೂಪ, ಕಡಬು, ಅರಳು, ಅವಲಕ್ಕಿ, ಬೆಣ್ಣೆ ಈ ಹದಿನಾರು ಪದಾರ್ಥಗಳು ತರ್ಪಣಕ್ಕೆ ಉಪಯೋಗಿಸತಕ್ಕವುಗಳೆಂದು ಬ್ರಹ್ಮಾದಿಗಳಿಂದ ಉಕ್ತವಾಗಿದೆ.

ಲಾಜಾಂತೇ ಪೃಥುಕಂ ಪ್ರಾಕ್ಚ ಸಮುರ್ಪ್ಯ ಚ ಸಿತೋಪಲಂ ।
ಚತುಃಸಪ್ತತಿವಾರಂ ಯಃ ಪ್ರಾತರೇವಂ ಪ್ರತರ್ಪಯೇತ್ ॥ ೧೨೯ ॥

ಧ್ಯಾತ್ವಾ ಕೃಷ್ಣಪದಂ ಮಂತ್ರೀ ಮಂಡಲಾದಿಷ್ಟಮಾಪ್ನುಯಾತ್ ।
ಧಾರೋಷ್ಣಪಕ್ವಪಯಸಾ ನವನೀತಂ ದಧೀನಿ ಚ ॥ ೧೩೦ ॥

ದೌಗ್ಧಾನ್ನಮಾಜ್ಯಂ ಮತ್ಸ್ಯಂಡೀ ಕ್ಷೌದ್ರಂ ಕೀಲಾಲಮೇವ ಚ ।
ಪೂಜಯೇನ್ನವಭಿರ್ದ್ರವ್ಯೈಃ ಪ್ರತ್ಯೇಕಂ ರವಿಸಂಖ್ಯಯಾ ॥ ೧೩೧ ॥

ಏವಮಷ್ಟೋತ್ತರಶತಸಂಖ್ಯಾಕಂ ತರ್ಪಣಂ ಪುನಃ ।
ಯಃ ಕುರ್ಯಾದ್ವೈಷ್ಣವಶ್ರೇಷ್ಠಃ ಪೂರ್ವೋಕ್ತಂ ಫಲಮಾಪ್ನುಯಾತ್ ॥

ಕಿಂ ಬಹೂಕ್ತೇನ ಸರ್ವೇಷ್ಟದಾಯಕಂ ತರ್ಪಣಂ ತ್ವಿದಂ ।
ಸಸಿತೋಪಲಧಾರೋಷ್ಣದುಗ್ಧಬುದ್ಧ್ಯಾ ಜಲೇನ ವೈ ॥ ೧೩೩ ॥

---

೧೨೯-೧೩೦. ಅರಳಿನ ತರ್ಪಣವಾದಮೇಲೆ ಅವಲಕ್ಕಿಯ ತರ್ಪಣ ಮಾಡುವುದಕ್ಕೆ ಮೊದಲು ಸಕ್ಕರೆಯ ಚೂರುಗಳ ತರ್ಪಣಮಾಡಿ ಬಳಿಕ ಉಳಿದ ತರ್ಪಣವನ್ನು ಮಾಡಬೇಕು. ಈ ರೀತಿ ಪ್ರಾತಃಕಾಲದಲ್ಲಿ ಪ್ರತಿದಿನವೂ ಕೃಷ್ಣಸ್ವರೂಪವನ್ನು ಧ್ಯಾನಿಸಿ ಎಪ್ಪತ್ತುನಾಲ್ಕಾವರ್ತಿ ತರ್ಪಣಮಾಡುವ ಮಂತ್ರಿಯು ನಲವತ್ತು ದಿನಗಳೊಳಗೇ ಇಷ್ಟಾರ್ಥವನ್ನು ಪಡೆಯುವನು.

೧೩೦-೧೩೧, ನೊರೆಹಾಲು (ಆಗತಾನೆ ಕರೆದ ಹಾಲು) ಕಾಯಿಸಿದ ಹಾಲು, ಬೆಣ್ಣೆ, ಮೊಸರು, ಹಾಲನ್ನ, ತುಪ್ಪ, ಮತ್ಸ್ಯಂಡಿ ಎಂಬ ಸಕ್ಕರೆ, ಜೇನುತುಪ್ಪ ಮತ್ತು ನೀರು ಈ ಒಂಬತ್ತು ಪದಾರ್ಥಗಳಿಂದ ಪ್ರತ್ಯೇಕವಾಗಿ ಹನ್ನೆರಡಾವರ್ತಿ ತರ್ಪಣಮಾಡಿ ಪೂಜಿಸಬೇಕು.

೧೩೨. ಈ ರೀತಿ ಪುನಃ ನೂರೆಂಟಾವರ್ತಿ ತರ್ಪಣಮಾಡುವ ವೈಷ್ಣವೋತ್ತಮನು ಹಿಂದೆ ಹೇಳಿದ ಫಲವನ್ನು ಹೊಂದುವನು.

೧೩೩. ಹೆಚ್ಚು ಹೇಳಿದ್ದರಿಂದೇನು? ಸಕ್ಕರೆ ಚೂರುಗಳಿಂದ ಸಹಿತವಾದ ನೊರೆಹಾಲೆಂದು ಭಾವಿಸಿ ನೀರಿನಿಂದ ಮಾಡುವ ಈ ತರ್ಪಣವು ಸಕಲೇಷ್ಟಪ್ರದವಾಗುವುದು.

ಕೃಷ್ಣಂ ಪ್ರತರ್ಪಯನ್ ಗ್ರಾಮಂ ವ್ರಜನ್ ಪ್ರಾಪ್ನೋತಿ ಸಾಧಕಃ ।
ಧನವಸ್ತ್ರಾಣಿ ಭೋಜ್ಯಂ ಚ ಪರಿವಾರಗಣೈಃ ಸಹ　॥ ೧೩೪ ॥

ಯಾವತ್ಸಂತರ್ಪಯೇನ್ಮಂತ್ರೀ ತಾವತ್ಸಂಖ್ಯಂ ಜಪೇನ್ಮನುಂ ।
ತರ್ಪಣೇನೈವ ಕಾರ್ಯಾಣಿ ಸಾಧಯೇದಖಿಲಾನ್ಯಪಿ　॥ ೧೩೫ ॥

ಕಾಮ್ಯಹೋಮಮಥೋ ವಕ್ಷ್ಯೇ ಸಾಧಕಾನಾಂ ಹಿತಾಯ ಚ ।
ಶ್ರೀಪುಷ್ಪೈರ್ಜುಹುಯಾನ್ಮಂತ್ರೀ ಶ್ರಿಯಮಿಚ್ಛನ್ನನಿಂದಿತಾಂ　॥ ೧೩೬ ॥

ಸಾಜ್ಯೇನಾನ್ನೇನ ಜುಹುಯಾತ್ ಘೃತಾನ್ನಸ್ಯ ಸಮೃದ್ಧಯೇ ।
ವನ್ಯಪುಷ್ಪೈರ್ದ್ವಿಜಾನ್ ಜಾತೀಪುಷ್ಪೈಶ್ಚ ಪೃಥಿವೀಪತೀನ್　॥ ೧೩೭ ॥

ಅಸಿತೈಃ ಕುಸುಮೈರ್ವೈಶ್ಯಾನ್ ಶೂದ್ರಾನ್ನೀಲೋತ್ಪಲೈಸ್ತಥಾ ।
ವಶಯೇಲ್ಲವಣೈಃ ಸರ್ವಾನಂಬುಜೈರ್ಯುವತೀಜನಂ　॥ ೧೩೮ ॥

---

೧೩೪. ಕೃಷ್ಣತರ್ಪಣ ಮಾಡುವ ಸಾಧಕನು ಪರಿವಾರಸಮೂಹದೊಡನೆ ಗ್ರಾಮಾಂತರಕ್ಕೆ ಹೋದರೆ ಧನ ವಸ್ತ್ರ ಸುಖಭೋಜನಗಳು ದೊರಕುವುವು.

೧೩೫. ತರ್ಪಣಮಾಡುವಷ್ಟು ಸಾರಿ ಮಂತ್ರಜಪ ಮಾಡಬೇಕು. ತರ್ಪಣದಿಂದಲೇ ಸಮಸ್ತಕಾರ್ಯಗಳನ್ನೂ ಸಾಧಿಸಬಹುದು.

೧೩೬. ಈಗ ಸಾಧಕರ ಹಿತಕ್ಕಾಗಿ ಕಾಮ್ಯಹೋಮವನ್ನು ಹೇಳುವೆನು. ಅನಿಷಿದ್ಧ ಸಂಪತ್ತನ್ನು ಬಯಸುವ ಮಂತ್ರಿಯು ಶ್ರೀಪುಷ್ಪಗಳಿಂದ ಹೋಮ ಮಾಡಬೇಕು.

೧೩೭. ತುಪ್ಪಾನ್ನವನ್ನು ಸಮೃದ್ಧಿಯಾಗಿ ಪಡೆಯಲು ಆಜ್ಯಸಹಿತವಾದ ಅನ್ನದಿಂದ ಹೋಮಮಾಡಬೇಕು. ಬ್ರಾಹ್ಮಣರನ್ನು ಸ್ವಾಧೀನಪಡಿಸಿಕೊಳ್ಳಲು ಕಾಡಿನಲ್ಲಿ ಬೆಳೆದ ಪುಷ್ಪಗಳಿಂದಲೂ ರಾಜರನ್ನು ವಶಪಡಿಸಿಕೊಳ್ಳಲು ಜಾಜಿ ಪುಷ್ಪಗಳಿಂದಲೂ ಹೋಮಮಾಡಬೇಕು.

೧೩೮. ವೈಶ್ಯರನ್ನು ಅಧೀನಮಾಡಿಕೊಳ್ಳಲು ಅಸಿತಪುಷ್ಪಗಳಿಂದಲೂ ಶೂದ್ರವಶೀಕರಣಕ್ಕೆ ಕನ್ನೈದಿಲೇ (ನೀಲೋತ್ಪಲ) ಹೂವುಗಳಿಂದಲೂ ಸರ್ವ

ಗೋಶಾಲಾಸು ಕೃತೋ ಹೋಮಃ ಪಾಯಸೇನ ಸಸರ್ಪಿಷಾ ।
ಗವಾಂ ಶಾಂತಿಂ ಕರೋತ್ಯಾಶು ಗೋಪಾಲಾ ಗೋಕುಲೇಶ್ವರಾಃ ॥ ೧೩೯ ॥

ಶಿಶುವೇಷಧರಂ ಕೃಷ್ಣಂ ಕಿಂಕಿಣೀಜಾಲಶೋಭಿತಂ ।
ಧ್ಯಾತ್ವಾ ಪ್ರತರ್ಪಯೇನ್ಮಂತ್ರೀ ದುಗ್ಧಬುದ್ಧ್ಯಾ ಶುಭೈರ್ಜಲೈಃ ॥ ೧೪೦ ॥

ಧನಂ ಧಾನ್ಯಂ ಸುತಾನ್ಕೀರ್ತಿಂ ಪ್ರೀತಸ್ತಸ್ಮೈ ದದಾತಿ ಸಃ ।
ಬ್ರಹ್ಮವೃಕ್ಷಸಮಿದ್ಭಿರ್ವಾ ಕುಶೈರ್ವಾ ತಿಲತಂಡುಲೈಃ ॥ ೧೪೧ ॥

ಜುಹುಯಾದಯುತಂ ಮಂತ್ರೀ ತ್ರಿಮಧ್ವಾಕ್ತೈರ್ಹುತಾಶನೇ ।
ವಶಯೇದ್ಬ್ರಾಹ್ಮಣಾಂಶ್ಚಾಥ ರಾಜವೃಕ್ಷಸಮುದ್ಭವೈಃ ॥ ೧೪೨ ॥

---

ವಶೀಕರಣಕ್ಕಾಗಿ ಉಪ್ಪಿನಿಂದಲೂ ಯುವತಿಯರಾದ ಸ್ತ್ರೀಯರುಗಳನ್ನು ಸ್ವಾಧೀನಮಾಡಿಕೊಳ್ಳುವುದಕ್ಕಾಗಿ ಕಮಲಪುಷ್ಪಗಳಿಂದಲೂ ಹೋಮ ಮಾಡಬೇಕು.

೧೩೯. ಘೃತಯುಕ್ತವಾದ ಪಾಯಸದಿಂದ ಗೋಶಾಲೆಯಲ್ಲಿ ಮಾಡಿದ ಹೋಮವು ಗೋವುಗಳಿಗೆ ಸುಖದಾಯಕವಾಗುವುದು. ಮತ್ತು ಆದರಿಂದ ಗೋಪಾಲಕರು ಗೋಕುಲಾಧಿಪತಿಗಳಾಗುವರು.

೧೪೦. ಬಾಲವೇಷಧಾರಿಯಾದ, ಶಬ್ದಮಾಡುತ್ತಿರುವ ಉಡೆಗೆಜ್ಜೆಯಿಂದ ಶೋಭಿಸುತ್ತಿರುವ ಕೃಷ್ಣನನ್ನು ಧ್ಯಾನಿಸಿ ಮಂತ್ರಿಯು ಹಾಲೆಂದುಭಾವಿಸಿ ಶುಭೋದಕಗಳಿಂದ ತರ್ಪಣವನ್ನು ಮಾಡಬೇಕು.

೧೪೧-೧೪೩. ಆದರಿಂದ ಪ್ರಸನ್ನನಾದ ಕೃಷ್ಣನು ಅವನಿಗೆ ಧನ, ಧಾನ್ಯ ಪುತ್ರಸಂಪತ್ತುಗಳನ್ನು ಕೊಡುವನು. ಮಧುತ್ರಯಸಮೇತವಾದ ಹೂವರಸೇ ಮರದ ಸಮಿತ್ತುಗಳಿಂದ ಅಥವಾ ದರ್ಭೆಗಳಿಂದ ಮತ್ತು ಎಳ್ಳು ಅಕ್ಕಿಗಳಿಂದ ಅಗ್ನಿಯಲ್ಲಿ ಮಂತ್ರಿಯು ಹತ್ತುಸಾವಿರ ಹೋಮಮಾಡಿ ಬ್ರಾಹ್ಮಣರನ್ನೂ, ಕಕ್ಕೆ ಗಿಡದಲ್ಲಿ ಹುಟ್ಟಿದ ಪುಷ್ಪಗಳಿಂದ ಹೋಮಮಾಡಿ ಕ್ಷತ್ರಿಯರನ್ನೂ, ಗೋರಂಟೀ

ಪ್ರಸೂನೈಃ ಕ್ಷತ್ರಿಯಾನ್ವೈಶ್ಯಾನ್ ಕುರಂಡಕುಸುಮೈಸ್ತಥಾ ।
ಪಾಟಲೋತ್ಥೈಶ್ಚ ಕುಸುಮೈರ್ವಶಯೇದಂತಿಮಾನ್ ಸುಧೀಃ ॥ ೧೪೩ ॥

ಶ್ವೇತಪದ್ಮೈ ರ್ರಕ್ತಪದ್ಮೈಶ್ಚಂಪಕೈಃ ಪಾಟಲೈಃ ಕ್ರಮಾತ್ ।
ಹುತ್ವಾಽಯುತಂ ತ್ರಿಮಧ್ವಾಕ್ತೈರ್ವಶಯೇತ್ತದ್ವರಾಂಗನಾಃ ॥ ೧೪೪ ॥

ನಿತ್ಯಂ ಹಯಾರಿಕುಸುಮೈರ್ನಿಶೀಥೇ ತ್ರಿಮಧುಪ್ಲುತೈಃ ।
ವಾರಸ್ತ್ರೀರ್ವಶಯೇತ್ಪ್ರಾಜ್ಞಃ ಸಮ್ಯಗ್ಘುತ್ವಾ ದಿನಾಷ್ಟಕಂ ॥ ೧೪೫ ॥

ಅಯುತತ್ರಿತಯಂ ರಾತ್ರೌ ಸಿದ್ಧಾರ್ಥೈಸ್ತ್ರಿಮಧುಪ್ಲುತೈಃ ।
ಪ್ರತ್ಯಹಂ ಜುಹ್ವತೋ ಮಾಸಾತ್ಸುರೇಶೋಽಪಿ ವಶೀ ಭವೇತ್ ॥ ೧೪೬ ॥

ಆಹೃತ್ಯ ವಲ್ಲವೀವಸ್ತ್ರಾಣ್ಯಾರೂಢಂ ನೀಪಭೂರುಹೇ ।
ಸ್ಮರೇತ್ಕೃಷ್ಣಂ ಜಪೇದ್ರಾತ್ರೌ ಸಹಸ್ರಂ ಹೋಂದ್ವಹಾತ್ಸುಧೀಃ ॥ ೧೪೭ ॥

---

ಹೂವುಗಳಿಂದ ಹೋಮಮಾಡಿ ವೈಶ್ಯರನ್ನೂ, ಪಾದರೀಹೂವುಗಳಿಂದ ಹೋಮ ಮಾಡಿ ಶೂದ್ರರನ್ನೂ ವಶಪಡಿಸಿಕೊಳ್ಳಬೇಕು.

೧೪೪. ಬಿಳಿಯಕಮಲ, ಕೆಂಪುಕಮಲ, ಸಂಪಿಗೆ, ಪಾದರೀ ಹೂವುಗಳಿಂದ ಮಧುತ್ರಯಸಮೇತವಾಗಿ ಹತ್ತುಸಾವಿರ ಹೋಮಮಾಡಿದರೆ ಕ್ರಮವಾಗಿ ಬ್ರಾಹ್ಮಣಾದಿ ಸ್ತ್ರೀಯರು ಸ್ವಾಧೀನರಾಗುವರು.

೧೪೫. ಮಧುತ್ರಯದಲ್ಲಿ ತೋಯಿಸಿದ ಕರವೀರಪುಷ್ಪಗಳಿಂದ ಎಂಟು ದಿನಗಳು ಪ್ರತಿನಿತ್ಯವೂ ಅರ್ಧರಾತ್ರಿಯಲ್ಲಿ ಚೆನ್ನಾಗಿ ಹೋಮಮಾಡಿದರೆ ಉತ್ತಮ ಸ್ತ್ರೀಯರನ್ನು ವಶಪಡಿಸಿಕೊಳ್ಳಬಹುದು.

೧೪೬. ಮಧುತ್ರಯಗಳಲ್ಲಿ ನೆನೆಸಿದ ಬಿಳಿಯ ಸಾಸುವೆಗಳಿಂದ ರಾತ್ರಿಯ ಕಾಲದಲ್ಲಿ ಪ್ರತಿದಿನವೂ ಮೂವತ್ತುಸಾವಿರ ಹೋಮಮಾಡುವವನಿಗೆ ದೇವೇಂದ್ರನೂ ಸಹ ವಶನಾಗುವನು.

೧೪೭-೧೪೮. ಸ್ತ್ರೀಯರ ಸೀರೆಗಳನ್ನು ಅಪಹರಿಸಿ ಈಚಲಮರದ ಮೇಲೆ ಹತ್ತಿರುವ ಕೃಷ್ಣನನ್ನು ಸ್ಮರಿಸಿ ರಾತ್ರಿಯಲ್ಲಿ ಒಂದು ಸಾವಿರ ಜಪ

ಹಠಾದಾಕರ್ಷಯೇಚ್ಛೀಘ್ರಮುರ್ವಶೀಮಪಿ ಸಾಧಕಃ ।
ಬಹುನಾ ಕಿಮಿಹೋಕ್ತೇನ ಮಂತ್ರೋಯಂ ಸರ್ವವಶ್ಯಕೃತ್ ॥ ೧೪೮ ॥

ರಹಸ್ಯಂ ಪರಮಂ ಚಾಥ ವಕ್ಷ್ಯೇ ಮೋಕ್ಷಪ್ರದಂ ನೃಣಾಂ ।
ಧ್ಯಾಯೇತ್ಸ್ವಹೃತ್ಸರಸಿಜೇ ದೇವಕೀನಂದನಂ ವಿಭುಂ ॥ ೧೪೯ ॥

ಶ್ರೀಮತ್ಕುಂದೇಂದುಗೌರಂ ಸರಸಿಜನಯನಂ ಶಂಖಚಕ್ರೇಗದಾಬ್ಜೇ ।
ಬಿಭ್ರಾಣಂ ಹಸ್ತಪದ್ಮೈರ್ನವನಲಿನಲಸನ್ಮಾಲಯಾ ದೀಪ್ಯಮಾನಂ ॥
ವಂದೇ ವೇದ್ಯಂ ಮುನೀಂದ್ರೈಃ ಕಣಿಕಮಣಿಲಸದ್ದಿವ್ಯ ಭೂಷಾಭಿರಾಮಂ।
ದಿವ್ಯಾಂಗಾಲೇಪಭಾಸಂ ಸಕಲಭಯಹರಂ ಪೀತವಸ್ತ್ರಂ ಮುರಾರಿಂ ॥೧೫೦॥

---

ಮಾಡುವ ಸಾಧಕನು ಊರ್ವಶಿಯನ್ನು ಸಹ ಸ್ವರ್ಗಲೋಕದಿಂದ ಕೂಡಲೇ ಆಕರ್ಷಿಸುವನು. ಈ ವಿಷಯದಲ್ಲಿ ಹೆಚ್ಚು ಹೇಳಿದ್ದರಿಂದೇನು? ಈ ಮಂತ್ರವು ಸಕಲವನ್ನೂ ವಶಪಡಿಸಿಕೊಳ್ಳಲು ಸಾಧಕವು.

೧೪೯. ಈಗ ಪುರುಷರಿಗೆ ಮೋಕ್ಷಪ್ರದವಾದ ಪರಮರಹಸ್ಯವನ್ನು ಹೇಳುವೆನು :—ತನ್ನ ಹೃದಯಕಮಲದಲ್ಲಿ ದೇವಕಿಯ ಕುಮಾರನಾದ ಶ್ರೀ ಕೃಷ್ಣಸ್ವಾಮಿಯನ್ನು ಧ್ಯಾನಿಸಬೇಕು.

೧೫೦. ಧ್ಯಾನ—ಹೊಳೆಯುತ್ತಿರುವ ಕುಂದೇಂದುವಿನಂತೆ ಗೌರವರ್ಣ ವಿಶಿಷ್ಟನಾದ ಕಮಲಗಳಂತೆ ಕಣ್ಣುಗಳುಳ್ಳ ಕಮಲದಂತಿರುವ ಹಸ್ತಗಳಲ್ಲಿ ಶಂಖ ಚಕ್ರ ಗದೆ ಪದ್ಮಗಳನ್ನು ಧರಿಸಿರುವ ನೂತನವಾದ ಕಮಲಪುಷ್ಪಗಳಿಂದ ರಚಿಸಿದ ಪ್ರಕಾಶಮಾನಮಾಲಿಕೆಯಿಂದ ಶೋಭಿಸುತ್ತಿರುವ, ಮುನಿಶ್ರೇಷ್ಠರಿಂದ ಜ್ಞೇಯನಾದ ದೇವಯೋಗ್ಯಭೂಷಣಗಳಿಂದ ಮನೋಹರನಾದ, ದಿವ್ಯ ಚಂದನಾದಿಗಳಿಂದ ಪ್ರಕಾಶಿಸುತ್ತಿರುವ, ಸಮಸ್ತಭಯಪರಿಹಾರಕನಾದ ಪೀತಾಂಬರವನ್ನುಟ್ಟಿರುವ ಮುರಶತ್ರುವಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

ಏವಂ ಧ್ಯಾತ್ವಾ ಪುಮಾಂಸಂ ಸ್ಫುಟಹೃದಯಸರೋಜಾಸನಾಸೀನಮಾದ್ಯಂ ।
ಸಾಂದ್ರಾಂಭೋಜಾಚ್ಛಬಿಂಬಾದ್ಭುತಕನಕನಿಭಂ ಸಂಜಪೇದರ್ಕಲಕ್ಷಂ ।
ಮನ್ವೋರೇಕಂ ದ್ವಿತಾರಾಂತರಿತಮಥ ಹುನೇದರ್ಕಸಾಹಸ್ರಮಿಧ್ಮೈಃ ।
ಕ್ಷೀರಿದ್ರೂತ್ಥೈರ್ಯಥೋಕ್ತೈಃ ಸಮಧುಘೃತಸಿತೇನಾಥವಾ ಪಾಯಸೇನ

ಏವಂ ಲೋಕೇಶ್ವರಾರಾಧ್ಯಂ ಕೃಷ್ಣಂ ಸ್ವಹೃದಯಾಂಬುಜೇ ।
ಧ್ಯಾಯನ್ನನುದಿನಂ ಮಂತ್ರೀ ತ್ರಿಸಹಸ್ರಂ ಜಪೇನ್ಮನುಂ　　॥ ೧೫೨ ॥

ಸಾಯಾಹ್ನೋಕ್ತೇನ ವಿಧಿನಾ ಸಂಪೂಜ್ಯ ಹವನಂ ಪುನಃ ।
ಕೃತ್ವಾ ಪೂರ್ವೋಕ್ತವಿಧಿನಾ ಮಂತ್ರೀ ತದ್ಗತಮಾನಸಃ　　॥ ೧೫೩ ॥

ಏವಂ ಯೋ ಭಜತೇ ನಿತ್ಯಂ ವಿದ್ವಾನ್ ಗೋಪಾಲನಂದನಂ ।
ಸಮುತ್ತೀರ್ಯ ಭವಾಂಭೋಧಿಂ ಸ ಯಾತಿ ಪರಮಂ ಪದಂ　　॥ ೧೫೪ ॥

---

೧೫೧. ಹೃದಯಕಮಲವೆಂಬ ಆಸನದಲ್ಲಿ ವ್ಯಕ್ತನಾಗಿರುವ, ಜಗದಾದಿ ಕಾರಣನಾದ, ನಿಬಿಡಮೇಘ ನಿರ್ಮಲಬಿಂಬ ಮತ್ತು ಸುವರ್ಣಗಳಂತೆ ಅದ್ಭುತ ಕಾಂತಿಯುಕ್ತನಾದ, ಪರಮಪುರುಷನನ್ನು ಮೇಲ್ಕಂಡ ಪ್ರಕಾರವಾಗಿ ಧ್ಯಾನಿಸಿ ಉಕ್ತಮಂತ್ರದ್ವಯಗಳಲ್ಲೊಂದನ್ನು ಆದ್ಯಂತಗಳಲ್ಲಿ ಓಂಕಾರಸಹಿತವಾಗಿ ಹನ್ನೆರಡು ಲಕ್ಷ ಜಪಿಸಬೇಕು. ಅನಂತರ ಹಾಲೇಗಿಡದ ಸಮಿತ್ತು ಅಥವಾ ಜೇನು ತುಪ್ಪ ಮತ್ತು ತುಪ್ಪಗಳಿಂದ ಮಿಶ್ರವಾದ ಪಾಯಸ ಇವುಗಳಿಂದ ಹನ್ನೆರಡು ಸಾವಿರ ಹೋಮ ಮಾಡಬೇಕು.

೧೫೨. ಈರೀತಿ ಮಂತ್ರಿಯು ಲೋಕೇಶ್ವರಾರಾಧ್ಯನಾದ ಕೃಷ್ಣನನ್ನು ಪ್ರತಿದಿನವೂ ತನ್ನ ಹೃದಯ ಕಮಲದಲ್ಲಿ ಧ್ಯಾನಿಸುತ್ತಾ ಮಂತ್ರವನ್ನು ಮೂರು ಸಾವಿರ ಜಪಮಾಡಬೇಕು.

೧೫೩. ಮಂತ್ರಿಯು ಸಾಯಂಕಾಲದ ಪೂಜಾನುವಿಧಾನಾನುಸಾರವಾಗಿ ಕೃಷ್ಣನನ್ನು ಪೂಜಿಸಿ, ಪೂರ್ವೋಕ್ತವಿಧಾನಾನುಸಾರ ಹೋಮವನ್ನೂ ಸಹ ಮಾಡಿ ಏಕಾಗ್ರಚಿತ್ತನಾಗಬೇಕು.

೧೫೪. ಈರೀತಿಯಾಗಿ ಗೋಪಾಲಬಾಲನಾದ ಕೃಷ್ಣನನ್ನು ನಿರಂತರ ಭಜಿಸುವವನು ಸಂಸಾರಸಾಗರವನ್ನು ದಾಟಿ, ಪರಮಪದವಿ ಎಂದರೆ ಮುಕ್ತಿಗೆ ಹೋಗುವನು.

ಮಧ್ಯೇ ಕೋಣೇಷು ಬಾಹ್ಯೇಷ್ವನಲಪುರಪುಟಸ್ಯಾಲಿಖೇತ್ಕರ್ಣಿಕಾಯಾಂ
ಕಂದರ್ಪಂ ಸಾಧ್ಯಯುಕ್ತಂ ವಿವರಗತಷಡರ್ಣಾನ್ದ್ವಯೇಕಶಃ ಕೇಸರೇಷು।
ಶಕ್ತಿಃ ಶ್ರೀಪೂರ್ವಿಕಾಣಿ ದ್ವಿನವಲಿಪಿಮನೋರಕ್ಷರಾಣಿ ಚ್ಛದಾನಾಂ
ಮಧ್ಯೇ ವರ್ಣಾ ದಶಾಂತೋ ದಶಲಿಪಿಮನುವರ್ಯಸ್ಯ ವೈಕೈಕಶೋಬ್ಜಂ

ಭೂಸದ್ಮನಾಭಿವೃತಮಸ್ರಗಮನ್ಮಥೇನ
ಗೋರೋಚನಾವಿಲಿಖಿತಂ ತಪನೀಯ ಸೂಚ್ಯಾ।
ಪಟ್ಟೇ ಹಿರಣ್ಯರಚಿತೇ ಗುಲಿಕೀಕೃತಂ ತತ್
ಗೋಪಾಲಯಂತ್ರಮಖಿಲಾರ್ಥದಮೇತದುಕ್ತಂ ॥ ೧೫೬ ॥

---

೧೫೫. ಯಂತ್ರಬರೆಯುವ ಕ್ರಮವನ್ನು ವಿವರಿಸುತ್ತಾರೆ:—ಹತ್ತು ದಳಗಳುಳ್ಳ ಪದ್ಮವನ್ನು ಬರೆದು, ಅದರ ಕೋಶದಲ್ಲಿ ಆರು ಮೂಲೆಗಳುಳ್ಳ ವಹ್ನಿ ಗೃಹವನ್ನು ಬರೆದು, ಅದರ ಮಧ್ಯದಲ್ಲಿನ ಆರು ಕೋಣಗಳಲ್ಲಿ ಬರೆಯಬೇಕು. ಎಂತೆಂದರೆ: ಕೋಶಮಧ್ಯದಲ್ಲಿ ಸಾಧ್ಯನಾಮ, ಎಂದರೆ ಇಂತಹವನಿಗೆ ಇಂತಹ ಕಾರ್ಯವಾಗಬೇಕೆಂಬುದನ್ನೂ, ಅದರೊಂದಿಗೆ "ಕ್ಲೀಂ" ಎಂಬ ಕಾಮ ಬೀಜಾಕ್ಷರವನ್ನೂ ಬರೆಯಬೇಕು. ಅಂತೆಯೇ ಮುಂದೆ ಹೇಳುವ ಷಟ್ಕೋಣ ಗಳಲ್ಲಿನ ಆರು ಅಕ್ಷರಗಳನ್ನೂ ಬರೆಯಬೇಕು. ದಶದಳಗಳ ಕುಸುರುಗಳಲ್ಲಿ ಈ ಅಷ್ಟಾದಶಾಕ್ಷರ ಮಂತ್ರದ ಅಕ್ಷರಗಳಲ್ಲಿ ಎರಡೆರಡು ವರ್ಣಗಳಂತೆ ಒಂಬತ್ತು ಕುಸುರುಗಳಲ್ಲಿಯೂ, ಶಕ್ತಿಬೀಜ ಮತ್ತು ಶ್ರೀಬೀಜಾಕ್ಷರಗಳನ್ನು ಒಂದು ಕುಸುರಿ ನಲ್ಲಿಯೂ, ಬರೆಯಬೇಕು. ದಶಪತ್ರಗಳ ಮಧ್ಯದ ಭಾಗದಲ್ಲಿ ದಶಾಕ್ಷರ ಮಂತ್ರ ವರ್ಯದ ಹತ್ತು ಅಕ್ಷರಗಳನ್ನು ಒಂದೊಂದನ್ನಾಗಿ ಬರೆದು ಕಮಲವನ್ನು ರಚಿಸಬೇಕು.

೧೫೬. ನಾಲ್ಕು ಮೂಲೆಗಳಲ್ಲಿ ಕಾಮಬೀಜವರ್ಣಗಳನ್ನೊಳಗೊಂಡ, ಚದುರವಾದ, ಮಂಡಲದಿಂದ ಮೇಲ್ಕಂಡ ಪದ್ಮವನ್ನು ಸುತ್ತುಗಟ್ಟಿ ಎಂದರೆ ಆ ಪದ್ಮವು ಒಳಗೆ ಅಡಗುವಂತಹ ಕಾಮಬೀಜಯುಕ್ತ ಚತುರಸ್ರ ರೇಖೆಯನ್ನು ಬರೆಯಬೇಕು. ಈ ಯಂತ್ರವನ್ನು ಸುವರ್ಣಪಟ್ಟಿಯಲ್ಲಿ ಬಂಗಾರದ ಶಲಾಕೆ ಯಿಂದ ಗೋರೋಜನಾದಿಗಳಿಂದ ಬರೆದು ಗುಂಡಗೆ ಸುತ್ತಬೇಕು. ಸಕಲೇಷ್ಟಾರ್ಥ ಪ್ರದವಾದ "ಗೋಪಾಲಯಂತ್ರ"ವು ಈರೀತಿಯಾಗಿ ಹೇಳಲ್ಪಟ್ಟಿದೆ.

ಸಂಯಾತಸಿಕ್ತಮಭಿಜಪ್ತಮಿಮಂ ಮಹದ್ಭಿಃ
ಧಾರ್ಯಂ ಜಗತ್ತ್ರಯವಶೀಕರಣೈಕದಕ್ಷಂ ।
ರಕ್ಷಾಯಶಃ ಸುತಮಹೀಧನಧಾನ್ಯಲಕ್ಷ್ಮೀ
ಸೌಭಾಗ್ಯಲಿಪ್ಸುಭಿರಜಸ್ರಮನರ್ಘ್ಯವೀರ್ಯಂ ॥ ೧೫೭ ॥

ಸ್ಮರಸ್ತ್ರಿವಿಕ್ರಮಾಕ್ರಾಂತಶ್ಚಕ್ರೀಷ್ಣಾಯ ಹೃದಿತ್ಯಸೌ ।
ಷಡಕ್ಷರೋಽಯಂ ಸಂಪ್ರೋಕ್ತಃ ಸರ್ವಸಿದ್ಧಿಕರೋ ಮನುಃ ॥ ೧೫೮ ॥

ಕ್ರೋಡಃ ಶಾಂತೀಂದುವನ್ಮ್ಯಾಢ್ಯೋ ಮಾಯಾಬೀಜಂ ಪ್ರಕೀರ್ತಿತಂ ।
ಗೋವಿಂದವಹ್ನಿಚಂದ್ರಾಢ್ಯೋ ಮನುಃ ಶ್ರೀಬೀಜವಿಶ್ರಾರಿತಂ ॥ ೧೫೯ ॥

ಅಭ್ಯಾಮಷ್ಟಾದಶಲಿಪಿಃ ಸ್ಯಾದ್ವಿಂಶತ್ಯಕ್ಷರೋ ಮನುಃ ।
ಶಾಲಗ್ರಾಮೇ ಮಣೌ ಯಂತ್ರೇ ಮಂಡಲೇ ಪ್ರತಿಮಾಸು ವಾ ॥ ೧೬೦ ॥

---

೧೫೭. ಈ ಯಂತ್ರವು ಮಹಾ ಪ್ರಭಾವಯುತವೂ, ಮೂರು ಲೋಕಗಳನ್ನೂ ವಶಪಡಿಸುವ ಸಾಮರ್ಥ್ಯವುಳ್ಳದೂ ಆಗಿರುವುದು. ಭಯನಿವಾರಣೆ, ಕೀರ್ತಿ, ಮಕ್ಕಳು, ಭೂಮಿ, ಧನ. ಧಾನ್ಯ, ಸಕಲಸಂಪತ್ತು ಮತ್ತು ಸಕಲ ಜನರ ಪ್ರೀತಿ, ಇವುಗಳನ್ನು ಪಡೆಯುವುದಕ್ಕಾಗಿ ಶೌಚಾಚಾರ ಸಂಪನ್ನರಾದವರು ಈ ಯಂತ್ರವನ್ನು ಹೋಮ ಮಾಡಿ ಉಳಿದಿರುವ ತುಪ್ಪದಲ್ಲಿ ನೆನೆಸಿ, ಮಂತ್ರದಿಂದ ಅಭಿಮಂತ್ರಿಸಿ ಯಾವಾಗಲೂ ಧಾರಣೆಮಾಡಬೇಕು.

೧೫೮. (ಸ್ಮರ= ಕ್ಲೀಂ, ತ್ರಿವಿಕ್ರಮ= ಋ, ಚಕ್ರೀ= ಕ, ಹೃತ್= ನಮಃ) "ಕ್ಲೀಂ ಕೃಷ್ಣಾಯ ನಮಃ" ಇದು ಸಕಲ ಸಿದ್ಧಿಪ್ರದವಾದ ಷಡಕ್ಷರ ಮಂತ್ರವೆಂದು ಉಕ್ತವಾಗಿದೆ.

೧೫೯. (ಕ್ರೋಡ= ಹ, ಶಾಂತಿ= ಈ, ಇಂದು= ಂ, ಗೋವಿಂದ= ಈ, ವಹ್ನಿ= ರ, ಚಂದ್ರ= ಂ, ಮನು= ಶ) "ಹ್ರೀಂ" ಎಂಬುದು ಮಾಯಾಬೀಜವೆಂತಲೂ "ಶ್ರೀಂ" ಎಂಬುದು ಶ್ರೀಬೀಜವೆಂತಲೂ ಹೇಳಲ್ಪಟ್ಟಿದೆ.

೧೬೦-೧೬೧. ಹಿಂದೆ ಹೇಳಿರುವ ಹದಿನೆಂಟುಅಕ್ಷರಮಂತ್ರವೇ ಮಾಯಾಶ್ರೀಬೀಜಾಕ್ಷರಗಳಿಂದ ಕೂಡಿ ಇಪ್ಪತ್ತು ಅಕ್ಷರಗಳ ಮಂತ್ರವಾಗು

**ನಿತ್ಯಂ ಪೂಜಾ ಹರೇಃ ಕಾರ್ಯಾ ನ ತು ಕೇವಲಭೂತಲೇ ।**
**ಏವಂ ಯೋ ಭಜತೇ ಕೃಷ್ಣಂ ಸ ಯಾತಿ ಪರಮಾಂ ಗತಿಂ ॥ ೧೬೧ ॥**

**ವಿಂಶಾರ್ಣಸ್ಯ ಮುನಿರ್ಬ್ರಹ್ಮಾ ಗಾಯತ್ರೀ ಛಂದ ಈರಿತಂ ।**
**ಕೃಷ್ಣಶ್ಚ ದೇವತಾ ಕಾಮೋ ಬೀಜಂ ಶಕ್ತಿರ್ದ್ವಿಠೋ ಬುಧೈಃ ॥ ೧೬೨ ॥**

**ರಾಮಾಗ್ನಿವೇದವೇದಾಬ್ಧಿನೇತ್ರಾರ್ಣೈರಂಗಕಲ್ಪನಾ ।**
**ಮೂಲೇನ ವ್ಯಾಪಕಂ ಕೃತ್ವಾ ಮನುನಾ ಪುಟಿತಾನ್ಯತ ॥ ೧೬೩ ॥**

**ಮಾತೃಕಾರ್ಣಾನ್ನ್ಯಸೇತ್ತತ್ತತ್ಸ್ಥಾನೇಷು ಸುಸಮಾಹಿತಃ ।**
**ದಶತತ್ತ್ವಾನಿ ವಿನ್ಯಸ್ಯ ಮೂಲೇನ ವ್ಯಾಪಕಂ ಚರೇತ್ ॥ ೧೬೪ ॥**

**ಮಂತ್ರನ್ಯಾಸಂ ತತಃ ಕುರ್ಯಾದ್ದೇವತಾಭಾವಸಿದ್ಧಯೇ ।**
**ಶೀರ್ಷೇ ಲಲಾಟೇ ಭ್ರೂಮಧ್ಯೇ ನೇತ್ರಯೋಃ ಕರ್ಣಯೋಸ್ತಥಾ ॥ ೧೬೫ ॥**

---

ವುದು. ಶಾಲಗ್ರಾಮ, ರತ್ನ, ಉಕ್ತವಾದ ಗೋಪಾಲ ಯಂತ್ರ, ಸರ್ವತೋಭದ್ರ ಅಥವಾ ಚಂದ್ರ ಸೂರ್ಯಾಗ್ನಿಮಂಡಲ, ವಿಗ್ರಹ ಇವುಗಳಲ್ಲಿಯೇ ಯಾವಾಗಲೂ ಹರಿಯಪೂಜೆಯನ್ನು ಮಾಡಬೇಕು. ಕೇವಲ ನೆಲದಮೇಲೆ ದೇವತೆಯನ್ನು ಆವಾಹನೆಮಾಡಿ ಪೂಜೆ ಮಾಡಬಾರದು. ಈ ರೀತಿಯಾಗಿ ಶ್ರೀಕೃಷ್ಣನನ್ನು ಭಜಿಸುವವನು ಉತ್ತಮಗತಿಯನ್ನು ಹೊಂದುವನು. ''

೧೬೨-೧೬೪. ವಿಂಶತ್ಯಕ್ಷರ ಕೃಷ್ಣಮಂತ್ರಕ್ಕೆ ಬ್ರಹ್ಮನೇ ಋಷಿ, ಗಾಯತ್ರೀ ಛಂದಸ್ಸು, ಕೃಷ್ಣನೇ ದೇವತೆ. ''ಕ್ಲೀಂ'' ಎಂಬುದೇ ಬೀಜ, ''ಸ್ವಾಹಾ'' ಎಂಬುದು ಶಕ್ತಿಯು.

ಈ ಮಂತ್ರದಲ್ಲಿನ 3, 3, 4, 4, 4, 2 ವರ್ಣಗಳಿಂದ ಷಡಂಗಗಳನ್ನು ನ್ಯಾಸಮಾಡಬೇಕು. ಮೂಲಮಂತ್ರದಿಂದ ಸರ್ವಾಂಗ ನ್ಯಾಸಮಾಡಿ ಮಂತ್ರಸಂಪುಟಿತವಾದ ಮಾತೃಕಾಕ್ಷರಗಳನ್ನು ಅದರದರ ಸ್ಥಾನಗಳಲ್ಲಿ ಸಮಾಧಾನಮನಸ್ಕನಾಗಿ ನ್ಯಾಸಮಾಡಬೇಕು. ಹತ್ತು ತತ್ವಗಳನ್ನು ನ್ಯಾಸಮಾಡಿ ಮೂಲಮಂತ್ರದಿಂದ ಸರ್ವಾಂಗನ್ಯಾಸ ಮಾಡಬೇಕು.

೧೬೫-೧೬೭. ಅನಂತರ ದೇವತಾಭಕ್ತಿ ಸಿದ್ಧ್ಯರ್ಥವಾಗಿ ಮಂತ್ರನ್ಯಾಸವನ್ನು ಮಾಡಬೇಕು. ತಲೆ, ಹಣೆ, ಹುಬ್ಬುಗಳ ಮಧ್ಯಪ್ರದೇಶ, ಎರಡು

ನಸೋರ್ವಕ್ತ್ರೇ ಚ ಚಿಬುಕೇ ಕಂಠೇ ದೋರ್ಮೂಲಕೇ ಹೃದಿ ।
ಉದರೇ ನಾಭಿದೇಶೇ ಚ ಲಿಂಗೇ ಮೂಲಸರೋರುಹೇ ॥ ೧೬೬ ॥

ಕಟ್ಯಾಂ ಜಾನ್ವೋರ್ಜಂಘಯೋಶ್ಚ ಗುಲ್ಫಯೋಃ ಪಾದಯೋಃ ಕ್ರಮಾತ್
ನ್ಯಸೇದ್ಧೃದಂತಾನ್ಮಂತ್ರಾರ್ಣಾನ್ ಸೃಷ್ಟಿನ್ಯಾಸೋಯಮೀರಿತಃ ॥ ೧೬೭ ॥

ಹೃದಯೇ ಚೋದರೇ ನಾಭೌ ಲಿಂಗೇ ಮೂಲಸರೋರುಹೇ ।
ಕಟ್ಯಾಂ ಜಾನ್ವೋರ್ಜಂಘಯೋಶ್ಚ ಗುಲ್ಫಯೋಃ ಪಾದಯೋಸ್ತಥಾ ॥
ಮೂರ್ಧ್ನಿ ಕಪೋಲೇ ಭ್ರೂಮಧ್ಯೇ ನೇತ್ರಯೋಃ ಕರ್ಣಯೋರ್ನಸೋಃ ।
ವದನೇ ಚಿಬುಕೇ ಕಂಠೇ ದೋರ್ಮೂಲೇ ವಿನ್ಯಸೇತ್ಕ್ರಮಾತ್ ॥ ೧೬೯ ॥

ನಮೋಂತಾನ್ಮಂತ್ರವರ್ಣಾಂಶ್ಚ ಸ್ಥಿತಿನ್ಯಾಸೋಯಮೀರಿತಃ ।
ಪಾದಯೋರ್ಗುಲ್ಫಯೋಶ್ಚೈವ ಜಂಘಯೋರ್ಜಾನುನೋಸ್ತಥಾ ॥೧೭೦॥

ಕಟ್ಯಾಂ ಮೂಲೇ ಧ್ವಜೇ ನಾಭೌ ಜಠರೇ ಹೃದಯೇ ಪುನಃ ।
ದೋರ್ಮೂಲೇ ಕಂಠದೇಶೇ ಚ ಚಿಬುಕೇ ವದನೇ ನಸೋಃ ॥ ೧೭೧ ॥

---

ಕಣ್ಣು, ಕಿವಿ, ಮೂಗು, ಬಾಯಿ, ಗಡ್ಡ, ಕುತ್ತಿಗೆ, ಬಾಹುಮೂಲ, ಹೃದಯ, ಹೊಟ್ಟೆ, ಹೊಕ್ಕಳು, ಶಿಶ್ನ, ಮೂಲಾಧಾರ ಪದ್ಮ, ನಡುವು, ಮೊಣಕಾಲು, ಜಂಘೆಗಳು, ಗುಲ್ಫ, ಪಾದಗಳು ಇವುಗಳಲ್ಲಿ ಕ್ರಮವಾಗಿ ಒಂದೊಂದು ಮಂತ್ರಾಕ್ಷರವನ್ನು ಅದರ ಮುಂದೆ "ನಮಃ" ಎಂಬುದನ್ನು ಸೇರಿಸಿ ನ್ಯಾಸಮಾಡಬೇಕು. ಇದಕ್ಕೆ ಸೃಷ್ಟಿನ್ಯಾಸವೆಂದು ಹೆಸರು.

೧೬೮-೧೭೦. ಹೃದಯ, ಹೊಟ್ಟೆ, ನಾಭಿ, ಲಿಂಗ, ಮೂಲಾಧಾರ ಪದ್ಮ, ನಡು, ಮೊಣಕಾಲು, ಜಂಘೆ, ಗುಲ್ಫ, ಪಾದ, ಶಿರಸ್ಸು, ಕಪೋಲ, ಹುಬ್ಬಿನ ಮಧ್ಯ ಕಣ್ಣು, ಕಿವಿ, ಮೂಗು, ಮುಖ, ಗಡ್ಡ, ಕುತ್ತಿಗೆ ಮತ್ತು ಬಾಹುಮೂಲ ಈ ಸ್ಥಾನಗಳಲ್ಲಿ ಕೊನೆಯಲ್ಲಿ 'ನಮಃ' ಎಂಬ ಪದವನ್ನು ಸೇರಿಸಿಕೊಂಡು ಕ್ರಮವಾಗಿ ಮಾಡುವ ನ್ಯಾಸಕ್ಕೆ ಸ್ಥಿತಿನ್ಯಾಸವೆಂದು ಹೆಸರು.

೧೭೦-೧೭೩. ಪಾದ, ಗುಲ್ಫ, ಜಂಘೆ, ಮೊಣಕಾಲು, ನಡು, ಮೂಲಾಧಾರ, ಲಿಂಗ, ನಾಭಿ, ಉದರ, ಹೃದಯ, ಬಾಹುಮೂಲ, ಕುತ್ತಿಗೆ, ಗಡ್ಡ,

**ಕರ್ಣಯೋರ್ನೇತ್ರಯೋಶ್ಚೈವ ಭ್ರೂಮಧ್ಯೇ ನಿಟಿಲೇ ತಥಾ ।**
**ಮೂರ್ಧ್ನಿ ನ್ಯಸೇನ್ಮಂತ್ರವರ್ಣಾನ್ಸಂಹಾರಾಖ್ಯೋಯಮೀರಿತಃ ॥ ೧೭೨ ॥**

**ಪುನಃ ಸೃಷ್ಟಿಸ್ಥಿತಿನ್ಯಾಸೌ ವಿಧಾಯ ವೈಷ್ಣವೋತ್ತಮಃ ।**
**ಮೂರ್ತಿಪಂಜರನಾಮಾನಂ ವಿನ್ಯಸೇತ್ಪೂರ್ವವತ್ತತಃ ॥ ೧೭೩ ॥**

**ಪುನಃ ಷಡಂಗಂ ಕೃತ್ವಾಥ ಧ್ಯಾಯೇತ್ಕೃಷ್ಣಂ ಹೃದಂಬುಜೇ ।**
**ದ್ವಾರವತ್ಯಾಂ ಸಹಸ್ರಾರ್ಕಭಾಸ್ವರೈರ್ಭವನೋತ್ತಮೈಃ ॥ ೧೭೪ ॥**

**ಅನಲ್ಪೈಃ ಕಲ್ಪವೃಕ್ಷೈಶ್ಚ ಪರೀತೇ ಮಣಿಮಂಡಪೇ ।**
**ಜ್ವಲದ್ರತ್ನಮಯಸ್ತಂಭದ್ವಾರತೋರಣಕುಡ್ಯಕೇ ॥ ೧೭೫ ॥**

**ಫುಲ್ಲಸ್ರಗುಲ್ಲಸಚ್ಚಿತ್ರವಿತಾನಾಲಂಬಿಮೌಕ್ತಿಕೇ ।**
**ಪದ್ಮರಾಗಸ್ಥಲೀರಾಜದ್ರತ್ನಸಂಘೈಶ್ಚ ಮಧ್ಯತಃ ॥ ೧೭೬ ॥**

---

ಮುಖ, ಮೂಗು, ಕಿವಿ, ಕಣ್ಣು, ಹುಬ್ಬುಗಳ ಮಧ್ಯ, ಹಣೆ ಮತ್ತು ಶಿರಸ್ಸುಗಳಲ್ಲಿ ಕ್ರಮವಾಗಿ ಮಾಡುವ ನ್ಯಾಸವು "ಸಂಹಾರನ್ಯಾಸ" ವೆನಿಸುವುದು.

೧೭೩. ವೈಷ್ಣವಾಗ್ರೇಸರನು ಪುನಃ ಸೃಷ್ಟಿಸ್ಥಿತಿನ್ಯಾಸಗಳನ್ನು ಮಾಡಿ, ಪೂರ್ವೋಕ್ತವಾದ ಮೂರ್ತಿಪಂಜರ ನಾಮಕನ್ಯಾಸವನ್ನು ಮಾಡಬೇಕು.

೧೭೪–೧೮೧. ತರುವಾಯ ಪುನಃ ಷಡಂಗ ನ್ಯಾಸ ಮಾಡಿ, ಹೃದಯ ಕಮಲದಲ್ಲಿ ಶ್ರೀಕೃಷ್ಣನನ್ನು ಧ್ಯಾನಿಸಬೇಕು.

ಧ್ಯಾನ:—ದ್ವಾರಕಾಪಟ್ಟಣದಲ್ಲಿ ಸಾವಿರ ಸೂರ್ಯರಂತೆ ಪ್ರಕಾಶಿಸುತ್ತಿರುವ ಶ್ರೇಷ್ಠ ಭವನಗಳಿಂದಲೂ, ಅಧಿಕಸಂಖ್ಯಾಕಗಳಾದ ಕಲ್ಪವೃಕ್ಷಗಳಿಂದಲೂ ಸಹಿತವಾದ, ಮಣಿಮಂಟಪದಲ್ಲಿರುವ ಪ್ರಕಾಶಮಾನರತ್ನಮಯವಾದ ಕಂಬ ಬಾಗಿಲು, ತೋರಣ ಗೋಡೆಗಳುಳ್ಳ, ವಿಕಾಸಯುಕ್ತವಾದ ಪೂಮಾಲೆಯಂತೆ ಹೊಳೆಯುತ್ತಿರುವ ಚಿತ್ರವಿತಾನಗಳಿಂದ ಜೋಲುತ್ತಿರುವ ಮುತ್ತಿನ ಗೊಂಚಲುಗಳುಳ್ಳ, ಪದ್ಮರಾಗ ಮುಂತಾದ ವಿರಾಜಮಾನ ರತ್ನಸಂಘಗಳಿಂದಲೂ, ಮಧ್ಯದಲ್ಲಿ ಯಾವಾಗಲೂ ಪ್ರವಿಸುತ್ತಿರುವ ರತ್ನಧಾರೆಯಿಂದಲೂ ಯುಕ್ತವಾದ,

ಅನಾರತಗಲದ್ರತ್ನಧಾರಾಢ್ಯಸ್ಯಸ್ತರೋರಧಃ ।
ರತ್ನಪ್ರದೀಪಾವಲಿಭಿಃ ಪ್ರದೀಪಿತದಿಗಂತರೇ ॥ ೧೭೭ ॥

ಉದ್ಯದಾದಿತ್ಯಸಂಕಾಶಮಣಿಸಿಂಹಾಸನಾಂಬುಜೇ ।
ಸಮಾಸೀನೋಽಚ್ಯುತೋ ಧ್ಯೇಯೋ ದ್ರುತಹಾಟಕಸನ್ನಿಭಃ ॥ ೧೭೮ ॥

ಸಮಾನೋದಿತಚಂದ್ರಾರ್ಕತಡಿತ್ಕೋಟಿಸಮದ್ಯುತಿಃ ।
ಸರ್ವಾಂಗಸುಂದರಃ ಸೌಮ್ಯಃ ಸರ್ವಾಭರಣಭೂಷಿತಃ ॥ ೧೭೯ ॥

ಪೀತವಾಸಾಃ ಶಂಖಚಕ್ರಗದಾಂಭೋಜಲಸತ್ಕರಃ ।
ಅನಾಹತೋಚ್ಛಲದ್ರತ್ನಧಾರೌಘಕಲಶಂ ಸ್ಪೃಶನ್ ॥ ೧೮೦ ॥

ವಾಮಪಾದಾಂಬುಜಾಗ್ರೇಣ ಮುಷ್ಣತಾ ಪಲ್ಲವಚ್ಛವಿಂ ।
ರುಕ್ಮಿಣೀಸತ್ಯಭಾಮೇಽಸ್ಯ ಮೂರ್ಧ್ನಿ ರತ್ನೌಘಧಾರಯಾ ॥ ೧೮೧ ॥

---

ಕಲ್ಪವೃಕ್ಷದ ಕೆಳಭಾಗದಲ್ಲಿ ರತ್ನಮಯ ದೀಪಪಂಕ್ತಿಗಳಿಂದ ಪ್ರಜ್ವಲಿತವಾದ ದಿಕ್ಪ್ರದೇಶಗಳುಳ್ಳ, ಉದಯಿಸುತ್ತಿರುವ ಸೂರ್ಯನಿಗೆ ಸಮಾನವಾದ ಮಣಿ ಸಿಂಹಾಸನಪದ್ಮದಲ್ಲಿ ಕುಳಿತಿರುವ, ಕರಗಿಸಿದ ಬಂಗಾರಕ್ಕೆ ಸಮಾನವಾದ ಕಾಂತಿಯುಳ್ಳ, ಏಕಕಾಲದಲ್ಲಿ ಉದಯಿಸಿದ ಕೋಟ್ಯಂತರ ಚಂದ್ರಸೂರ್ಯರು ಮತ್ತು ಮಿಂಚುಗಳಿಗೆ ಸಮಾನವಾದ ಕಾಂತಿಯುಳ್ಳ, ಸರ್ವಾಂಗಸುಂದರನು, ಸೌಮ್ಯನು, ಸಕಲಾಭರಣಾಲಂಕೃತನು, ಪೀತಾಂಬರಧಾರಿಯೂ ಆಗಿರುವ, ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿರುವ, ತಡೆಯಿಲ್ಲದೇ ಸ್ರವಿಸುತ್ತಿರುವ ರತ್ನ ಧಾರೆಯ ಸಮೂಹವುಳ್ಳ ಕಲಶವನ್ನು ಪಲ್ಲವಪ್ರಭೆಯನ್ನೂ ಸಹ ತಿರಸ್ಕರಿಸುವಂತಹ ಪದ್ಮದಂತಿರುವ ಎಡಗಾಲಿನ ಅಗ್ರಭಾಗದಿಂದ ಸ್ಪರ್ಶಮಾಡುತ್ತಿರುವ ಅಚ್ಯುತನನ್ನು ಧ್ಯಾನಿಸಬೇಕು.

೧೮೧-೧೮೫. ಇಂತಹ ಕೃಷ್ಣನ ಶಿರಸ್ಸಿನಲ್ಲಿ ತಮ್ಮ ಭುಜಗಳಲ್ಲಿ ಸ್ಥಾಪಿತವಾದ ಕಲಶಗಳಿಂದ ಹೊರಡುತ್ತಿರುವ ರತ್ನಸಮೂಹಗಳ ಧಾರೆಯಿಂದ ಅಭಿಷೇಕ

**ಸಿಂಚಂತ್ಯೌ ದಕ್ಷವಾಮಸ್ಥೇ ಸ್ವದೋಸ್ಥಕಲಶೋತ್ಥಯಾ ।**
**ನಾಗ್ನಜಿತೀ ಸುನಂದಾ ಚ ದಿಶಂತ್ಯೌ ಕಲಶೌ ತಯೋಃ ॥ ೧೮೨ ॥**

**ತಾಭ್ಯಾಂ ಚ ದಕ್ಷವಾಮಸ್ಥಮಿತ್ರವಿಂದಾಸುಲಕ್ಷಣೇ ।**
**ರತ್ನನದ್ಯಾಃ ಸಮುದ್ಧೃತ್ಯ ರತ್ನಪೂರ್ಣೌ ಘಟೌ ತಯೋಃ ॥ ೧೮೩ ॥**

**ಜಾಂಬವತೀ ಸುಶೀಲಾ ಚ ದಿಶಂತ್ಯೌ ದಕ್ಷವಾಮಕೇ ।**
**ಬಹಿಃ ಷೋಡಶಸಾಹಸ್ರಸಂಖ್ಯಾಕಾಃ ಪರಿತಃ ಪ್ರಿಯಾಃ ॥ ೧೮೪ ॥**

**ಧ್ಯೇಯಾಃ ಕನಕರತ್ನೌಘಧಾರಾಯುಕ್ಕಲಶೋಜ್ವಲಾಃ ।**
**ತದ್ಬಹಿಶ್ಚಾಷ್ಟನಿಧಯಃ ಪೂರಯಂತೋ ಧನೈರ್ಧರಾಂ ॥ ೧೮೫ ॥**

**ತದ್ಬಹಿರ್ವೃಷ್ಣಯಃ ಸರ್ವೇ ಪುರೋವಚ್ಚ ಸುರಾದಯಃ ।**
**ಏವಂ ಧ್ಯಾತ್ವಾ ಜಪೇಲ್ಲಕ್ಷಪಂಚಕಂ ತದ್ದಶಾಂಶತಃ ॥ ೧೮೬ ॥**

---

ಮಾಡುತ್ತಿರುವ ರುಕ್ಮಿಣೀ ಸತ್ಯಭಾಮೆಯರು, ಅವರ ಎಡ ಬಲಪಾರ್ಶ್ವಗಳಲ್ಲಿ ನಿಂತು ಕಲಶಗಳನ್ನು ಕೊಡುತ್ತಿರುವ ನಾಗ್ನಜಿತೀ ಸುನಂದಾದೇವಿಯರು, ಅವರ ಎಡ ಬಲಗಳಲ್ಲಿರುವ ಮಿತ್ರವಿಂದಾ, ಸುಲಕ್ಷಣೆಯರು, ಅವರ ಬಲ ಎಡಭಾಗದಲ್ಲಿ ರತ್ನನದಿಯಿಂದ ರತ್ನಪೂರ್ಣ ಕುಂಭಗಳನ್ನು ತಂದುಕೊಡುತ್ತಿರುವ ಜಾಂಬುವತೀ ಸುಶೀಲೆಯರು, ಮತ್ತು ಹೊರಭಾಗದಲ್ಲಿ ಸುತ್ತಲೂ, ಸುವರ್ಣ ರತ್ನಸಮೂಹಗಳಿಂದ ತುಂಬಿದ ಕಲಶಗಳಿಂದ ಪ್ರಕಾಶಿಸುತ್ತಿರುವ ಹದಿನಾರು ಸಾವಿರ ಸ್ತ್ರೀಯರು ಇವರನ್ನೂ ಸಹ ಧ್ಯಾನಿಸಬೇಕು.

೧೮೫-೧೮೬. ಅದರ ಹೊರ ಆವರಣದಲ್ಲಿ ಭೂಮಿಯನ್ನು ಧನಗಳಿಂದ ತುಂಬುತ್ತಿರುವ ಅಷ್ಟನಿಧಿಗಳೂ, ಅದರ ಹೊರಭಾಗದಲ್ಲಿ ಸಕಲ ಯಾದವರೂ, ಹಿಂದಿನಂತೆ ದೇವಾದಿಗಳೂ ಸಹ ಧ್ಯಾನಿಸಲ್ಪಡಬೇಕು.

೧೮೬-೧೮೭. ಈ ರೀತಿ ಧ್ಯಾನಿಸಿ ಮಂತ್ರವನ್ನು ಐದು ಲಕ್ಷ 'ಜಪಿಸಬೇಕು. ಅದರ ಹತ್ತನೆಯ ಒಂದು ಭಾಗದಷ್ಟು ರಕ್ತಕಮಲಗಳಿಂದ ಹೋಮ

ಅರುಣೈಃ ಕಮಲೈರ್ಹುತ್ವಾ ಪೀಠೇ ಪೂರ್ವೋದಿತೇ ಯಜೇತ್ ।
ವಿಲಿಪ್ಯ ಗಂಧಪಂಕೇನ ಲಿಖೇದಷ್ಟದಲಾಂಬುಜಂ　　॥ ೧೮೭ ॥

ಕರ್ಣಿಕಾಯಾಂ ಚ ಷಟ್ಕೋಣಂ ಸಸಾಧ್ಯಂ ತತ್ರ ಮನ್ಮಥಂ ।
ಶಿಷ್ಟೈಸ್ತು ಸಪ್ತದಶಭಿರಕ್ಷರೈರ್ವೇಷ್ಟಯೇತ್ ಸ್ಮರಂ　　॥ ೧೮೮ ॥

ಪ್ರಾಗ್ರಕ್ಷೋನಿಲಕೋಣೇಷು ಶ್ರಿಯಂ ಶಿಷ್ಟೇಷು ಸಂವಿದಂ ।
ಷಡಕ್ಷರಂ ಸಂಧಿಷು ಚ ಕೇಸರೇಷು ತ್ರಿಶಸ್ತ್ರಿಶಃ　　॥ ೧೮೯ ॥

ವಿಲಿಖೇತ್ಸ್ಮರಗಾಯತ್ರೀಂ ಮಾಲಾಮಂತ್ರಂ ದಲಾಷ್ಟಕೇ ।
ಷಟ್ಶಃ ಸಂಲಿಖ್ಯ ತದ್ಬಾಹ್ಯೇ ವೇಷ್ಟಯೇನ್ಮಾತೃಕಾಕ್ಷರೈಃ　　॥ ೧೯೦ ॥

---

ಮಾಡಿ ಪೂರ್ವೋಕ್ತಪೀಠದಲ್ಲಿ ಪೂಜಿಸಬೇಕು. ಗಂಧಪಂಕದಿಂದ ಲೇಪನೆ ಮಾಡಿ ಅಷ್ಟದಳ ಪದ್ಮವನ್ನು ಬರೆಯಬೇಕು.

೧೮೮. ಅದರ ಕೋಶದಲ್ಲಿ ಸಾಧ್ಯನಾಮ ಸಹಿತವಾದ, "ಕ್ಲೀಂ" ಎಂಬ ಕಾಮಬೀಜಾಕ್ಷರವನ್ನೊಳಗೊಂಡ, ಆರು ಕೋಣಗಳುಳ್ಳ, ಷಟ್ಕೋಣ ಮಂಡಲವನ್ನು ಬರೆಯಬೇಕು. ಆ ಕಾಮಬೀಜದ ಸುತ್ತಲೂ ಅವಶಿಷ್ಟವಾದ ಮಂತ್ರದ ಹದಿನೇಳು ಅಕ್ಷರಗಳನ್ನು ಬರೆಯಬೇಕು.

೧೮೯-೧೯೦. ಪೂರ್ವ, ನೈರುತ್ಯ, ವಾಯುವ್ಯ ಕೋಣಗಳಲ್ಲಿ ಶ್ರೀಬೀಜ ತ್ರಯವನ್ನೂ, ಪಶ್ಚಿಮ, ಈಶಾನ್ಯ, ಆಗ್ನೇಯಕೋಣಗಳಲ್ಲಿ ಭುವನೇಶ್ವರೀ ಬೀಜಾಕ್ಷರತ್ರಯವನ್ನೂ ಬರೆಯಬೇಕು. ಷಟ್ಕೋಣಸಂಧಿಸ್ಥಾನಗಳಲ್ಲಿ, "ಕ್ಲೀಂ ಕೃಷ್ಣಾಯ ನಮಃ" ಎಂಬ ಆರು ಅಕ್ಷರಗಳನ್ನೂ, ಪದ್ಮ ದಳದ ಕುಸುರುಗಳಲ್ಲಿ, ಕಾಮಗಾಯತ್ರಿಯನ್ನೂ ಮೂರು ಮೂರು ಅಕ್ಷರವಾಗಿ ವಿಂಗಡಿಸಿಕೊಂಡು ಬರೆಯಬೇಕು. ಪದ್ಮದ ಎಂಟುದಳಗಳಲ್ಲಿ ಮಾಲಾಮಂತ್ರದ ವರ್ಣಗಳನ್ನು ಆರು ಆರಾಗಿ ವಿಂಗಡಿಸಿಕೊಂಡು ಬರೆಯಬೇಕು. ಪದ್ಮದ ಹೊರಭಾಗದಲ್ಲಿ ಸುತ್ತಲೂ ಮಾತೃಕಾಕ್ಷರಗಳನ್ನು ಬರೆಯಬೇಕು.

ಭೂಬಿಂಬಂ ಚ ಲಿಖೇದ್ಬಾಹ್ಯೇ ಶ್ರೀಮಾಯೇ ದಿಗ್ವಿದಿಕ್ಷ್ವಪಿ ।
ಭೂಗ್ರಹಂ ಚತುರಸ್ರಂ ಸ್ಯಾದಷ್ಟವಜ್ರವಿಭೂಷಿತಂ ॥ ೯೯೧ ॥

ಏತದ್ಯಂತ್ರಂ ಹಾಟಕಾದಿಪಟ್ಟೇಷ್ವಾಲಿಖ್ಯ ಪೂರ್ವವತ್ ।
ಸಂಸ್ಕೃತಂ ಧಾರಯೇದ್ಯೋ ವೈ ಸೋಽರ್ಚ್ಯತೇ ತ್ರಿದಶೈರಪಿ ॥ ೯೯೨ ॥

ಸ್ಯಾದ್ಗಾಯತ್ರೀ ಕಾಮದೇವಪುಷ್ಪಬಾಣೌ ತು ಙೇಂತಿಮೌ ।
ವಿದ್ಮಹೇ ಧೀಮಹಿ ಯುತೌ ತನ್ನೋಽನಂಗಃ ಪ್ರಚೋದಯಾತ್ ॥ ೯೯೩ ॥

ಜಪ್ಯಾ ಜಪಾದೌ ಗೋಪಾಲಮನೂನಾಂ ಜನರಂಜನೀ ।
ಹೃದಯಂ ಕಾಮದೇವಾಯ ಙೇಂತಂ ಸರ್ವಜನಪ್ರಿಯಂ ॥ ೯೯೪ ॥

ಉಕ್ತ್ವಾ ಸರ್ವಜನಾಂತೇ ತು ಸಂಮೋಹನಪದಂ ತಥಾ ।
ಜ್ವಲ ಜ್ವಲ ಪ್ರಜ್ವಲೇತಿ ಪ್ರೋಚ್ಯ ಸರ್ವಜನಸ್ಯ ಚ ॥ ೯೯೫ ॥

---

೯೯೧. ಅದರ ಹೊರಭಾಗದಲ್ಲಿ ಭೂಗೃಹವನ್ನೂ. ಅದರ ಹೊರಗೆ ದಿಕ್ಕುಗಳಲ್ಲಿ ಶ್ರೀಬೀಜ, ಕೋಣಗಳಲ್ಲಿ "ಹ್ರೀಂ" ಎಂಬ ಮಾಯಾಬೀಜವನ್ನೂ ಬರೆಯಬೇಕು. ಅಷ್ಟವಜ್ರಗಳಿಂದಲಂಕೃತವಾದ ಚದರವಾದ ಮಂಡಲವು "ಭೂಗೃಹ" ವೆನಿಸಿಕೊಳ್ಳುವುದು.

೯೯೨. ಈ ಯಂತ್ರವನ್ನು ಹಿಂದಿನಂತೆ ಬಂಗಾರ, ಬೆಳ್ಳಿ ಅಥವಾ ತಾಮ್ರದ ತಗಡಿನಲ್ಲಿ ಬರೆದು ಪ್ರಾಣಪ್ರತಿಷ್ಠಾಪನೆ ಮಾಡಿ ಧರಿಸುವವನು ದೇವತೆಗಳಿಂದಲೂ ಸತ್ಕರಿಸಲ್ಪಡುವನು.

೯೯೩. ಕಾಮಗಾಯತ್ರೀ ಮಂತ್ರವನ್ನು ಹೇಳುತ್ತಾರೆ:–"ಕಾಮದೇವಾಯ ವಿದ್ಮಹೇ ಪುಷ್ಪಬಾಣಾಯ ಧೀಮಹಿ ತನ್ನೋಽನಂಗಃ ಪ್ರಚೋದಯಾತ್" ಎಂಬುದು ಕಾಮಗಾಯತ್ರೀ ಮಂತ್ರವೆನಿಸುವುದು.

೯೯೪-೯೯೬. ಜನವಶ್ಯಕರವಾದ ಈ ಗಾಯತ್ರೀ ಮಂತ್ರವನ್ನು ಕೃಷ್ಣ ಮಂತ್ರವನ್ನು ಜಪಿಸುವುದಕ್ಕೆ ಮೊದಲು ಜಪಿಸಬೇಕು.

ಹೃದಯಂ ಮಮ ಚ ಬ್ರೂಯಾದ್ವಶಂ ಕುರು ಯುಗಂ ಶಿರಃ ।
ಪ್ರೋಕ್ತೋ ಮದನಮಂತ್ರೋಽಷ್ಟಚತ್ವಾರಿಂಶದ್ಭಿರಕ್ಷರೈಃ ॥ ೧೯೬ ॥

ಜಪಾದೌ ಸ್ಮರಬೀಜಾದ್ಯೋ ಜಗತ್ರಯವಶೀಕರಃ ।
ಪೀಠಂ ಪ್ರಾಗ್ವತ್ಸಮಭ್ಯರ್ಚ್ಯ ಮೂರ್ತಿಂ ಸಂಕಲ್ಪ್ಯ ಮೂಲತಃ ॥ ೧೯೭ ॥

ತತ್ರಾವಾಹ್ಯಾಚ್ಯುತಂ ಭಕ್ತ್ಯಾ ಸಕಲೀಕೃತ್ಯ ಪೂಜಯೇತ್ ।
ಆಸನಾದಿವಿಭೂಷಾಂತಂ ಪುನರ್ನ್ಯಾಸಕ್ರಮಾದ್ಯಜೇತ್ ॥ ೧೯೮ ॥

ಸೃಷ್ಟಿಂ ಸ್ಥಿತಿಂ ಷಡಂಗಂ ಚ ಕಿರೀಟಂ ಕುಂಡಲದ್ವಯಂ ।
ಶಂಖಂ ಚಕ್ರಂ ಗದಾಂ ಪದ್ಮಂ ಮಾಲಾಂ ಶ್ರೀವತ್ಸಕೌಸ್ತುಭೌ ॥ ೧೯೯ ॥

ಗಂಧಪುಷ್ಪೈಃ ಸಮಭ್ಯರ್ಚ್ಯ ಮೂಲೇನ ವೈಷ್ಣವೋತ್ತಮಃ ।
ಷಟ್ಕೋಣೇಷು ಷಡಂಗಾನಿ ದಿಗ್ದಲೇಷು ಕ್ರಮಾದ್ಯಜೇತ್ ॥ ೨೦೦ ॥

---

ಮಾಲಾಮಂತ್ರವನ್ನು ಹೇಳುತ್ತಾರೆ :-" ಕ್ಲೀಂ ನಮಃ ಕಾಮದೇವಾಯ ಸರ್ವಜನಪ್ರಿಯಾಯ ಸರ್ವಜನ ಸಂಮೋಹನ ಜ್ವಲ ಜ್ವಲ ಪ್ರಜ್ವಲ ಸರ್ವ ಜನಸ್ಯ ಹೃದಯಂ ಮಮ ವಶಂ ಕುರು ಕುರು ಸ್ವಾಹಾ " ಇದು ಕಾಮಬೀಜಾ ಕ್ಷರಾದಿಯಾದ ನಲವತ್ತೆಂಟು ಅಕ್ಷರಗಳ ಮದನಮಾಲಾ ಮಂತ್ರವು.

೧೯೭-೧೯೮. ಇದು ಜಪಾದಿಗಳಿಂದ ಮೂರು ಲೋಕಗಳನ್ನೂ ವಶ ಪಡಿಸುವುದು. ಪೂರ್ವದಂತೆ ಪೀಠವನ್ನು ಪೂಜಿಸಿ, ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ಅಚ್ಯುತನನ್ನು ಆವಾಹನೆ ಮಾಡಿ, ಕಳೆ ತುಂಬಿ, ಭಕ್ತಿಯಿಂದ ಆಸನಾದಿ ಭೂಷಣಾಂತವಾಗಿ ಪೂಜಿಸಬೇಕು.

೧೯೯-೨೦೧. ಹಿಂದೆ ಹೇಳಿದಂತೆ ಪುನಃ ಸೃಷ್ಟಿನ್ಯಾಸ, ಸ್ಥಿತಿನ್ಯಾಸ ಮತ್ತು ಷಡಂಗನ್ಯಾಸಗಳನ್ನು ಮಾಡಬೇಕು. ಬಳಿಕ ಕಿರೀಟ, ಕುಂಡಲದ್ವಯ, ಶಂಖ, ಚಕ್ರ, ಗದಾ, ಪದ್ಮ, ಶ್ರೀವತ್ಸ ಮತ್ತು ಕೌಸ್ತುಭಮಣಿಗಳನ್ನು ಗಂಧ ಪುಷ್ಪಾದಿಗಳಿಂದ ವೈಷ್ಣವೋತ್ತಮನು ಮೂಲಮಂತ್ರದಿಂದ ಪೂಜಿಸಿ ಷಟ್ಕೋಣ

ವಾಸುದೇವಾದಿಕಾನ್ಕೋಣೇಷು ತು ಶಾಂತ್ಯಾದಿಕಾಂಸ್ತತಃ |
ಪತ್ರಾಗ್ರಗಾ ಮಹಿಷ್ಯೋಷ್ಟೌ ಯಜೇತ್ಸಾಧಕಸತ್ತಮಃ || ೨೦೧ ||

ತತಃ ಷೋಡಶಸಾಹಸ್ರಂ ಸಕೃದೇವಾರ್ಚಯೇತ್ಸ್ತ್ರಿಯಃ |
ಇಂದ್ರನೀಲಮುಕುಂದಾಶ್ಚ ಕರಾಲಾನಂಗಕಚ್ಛಪಾನ್ || ೨೦೨ ||

ಶಂಖಪದ್ಮೌ ತತಃ ಪಶ್ಚಾತ್ ನಿಧೀನಷ್ಟೌ ಕ್ರಮಾದ್ಯಜೇತ್ |
ತದ್ಬಹಿರ್ಲೋಕಪಾಲಾಂಶ್ಚ ವಜ್ರಾದ್ಯಾನಪಿ ಪೂಜಯೇತ್ || ೨೦೩ ||

ಏವಂ ಸಪ್ತಾವೃತ್ತಿವೃತಂ ಕೃಷ್ಣಮಭ್ಯರ್ಚ್ಯ ಚಾದರಾತ್ |
ಪ್ರೀಣಯೇದ್ದಧಿಖಂಡಾಜ್ಯಮಿಶ್ರೇಣ ತು ಪಯೋಂಧಸಾ || ೨೦೪ ||

---

ಮಂಡಲದ ಆರು ಕೋಣಗಳಲ್ಲಿ ಹೃದಯಾದಿ ಷಡಂಗಗಳನ್ನೂ ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ನನ್ನೂ, ಆಗ್ನೇಯಾದಿ ವಿದಿಕ್ಕುಗಳಲ್ಲಿ ಶಾಂತ್ಯಾದಿಗಳನ್ನೂ ಅನಂತರ ಪದ್ಮ ಪತ್ರಗಳ ಅಗ್ರಭಾಗದಲ್ಲಿ ಇರುವ ಅಷ್ಟಮಹಿಷಿಯರನ್ನೂ ಪೂಜಿಸಬೇಕು.

೨೦೨-೨೦೩. ಅನಂತರ ಸಾಧಕಶ್ರೇಷ್ಠನು ಕೃಷ್ಣನ ಹದಿನಾರುಸಾವಿರ ಮಹಿಷಿಯರನ್ನು ಒಟ್ಟಿಗೆ ಪೂಜಿಸಬೇಕು. ತರುವಾಯ ಇಂದ್ರನೀಲ, ಮುಕುಂದ ಕರಾಲ, ಅನಂಗ, ಕಚ್ಛಪ, ಶಂಖ, ಮತ್ತು ಪದ್ಮ ಎಂಬ ಅಷ್ಟನಿಧಿಗಳನ್ನೂ "ಓಂ ಇಂದ್ರನಿಧಯೇ ನಮಃ" ಇತ್ಯಾದಿಯಾಗಿ ಕ್ರಮವಾಗಿ ಪೂಜಿಸಬೇಕು. ಅದರ ಹೊರಗೆ ಇಂದ್ರಾದಿ ಲೋಕಪಾಲಕರನ್ನೂ ವಜ್ರಾದ್ಯಾಯುಧಗಳನ್ನೂ ಪೂಜಿಸಬೇಕು.

೨೦೪. ಈ ರೀತಿ ಸಪ್ತಾವರಣವೇಷ್ಟಿತನಾದ ಕೃಷ್ಣನನ್ನು ಭಕ್ತಿಯಿಂದ ಪೂಜಿಸಿ ಮೊಸರು ಸಕ್ಕರೆ ತುಪ್ಪ ಸಹಿತವಾದ ಪಾಯಸಗಳನ್ನು ನೈವೇದ್ಯ ಮಾಡಿ ತೃಪ್ತಿಪಡಿಸಬೇಕು.

ದಿವ್ಯೋಪಚಾರಾನ್ ದತ್ವಾಽಥ ಸ್ತುತ್ವಾ ನತ್ವಾ ಚ ಕೇಶವಂ ।
ಉದ್ವಾಸಯೇತ್ಸ್ವಹೃದಯೇ ಪರಿವಾರಗಣೈಃ ಸಹ || ೨೦೫ ||

ನ್ಯಸ್ಯಾತ್ಮಾನಂ ಸಮಭ್ಯರ್ಚ್ಯ ತನ್ಮಯೋ ವಿಹರೇತ್ಸುಧೀಃ ।
ರತ್ನಾಭಿಷೇಕಧ್ಯಾನೇಜ್ಯಾ ವಿಂಶತ್ಯರ್ಣಾಶ್ರಿತೇರಿತಾ || ೨೦೬ ||

ಏವಂ ಯೋ ಭಜತೇ ಮಂತ್ರಂ ಸ ಸಮೃದ್ಧೇಃ ಪದಂ ಭವೇತ್ ।
ಜಪಹೋಮಾರ್ಚನಧ್ಯಾನೈರ್ಯೋ ಮನುಂ ಪ್ರಜಪೇದಮುಂ || ೨೦೭ ||

ತದ್ವೇಶ್ಮ ಪೂರ್ಯತೇ ರತ್ನೈಃ ಸ್ವರ್ಣಧಾನ್ಯೈರನಾರತಂ ।
ಪೃಥ್ವೀ ಪೃಥ್ವೀ ಕರೇ ತಸ್ಯ ಸರ್ವಸಸ್ಯಸಮಾಕುಲಾ || ೨೦೮ ||

ಪುತ್ರೈರ್ಮಿತ್ರೈಃ ಸುಸಂಪನ್ನಃ ಪ್ರಯಾತ್ಯಂತೇ ಪರಾಂ ಗತಿಂ ।
ವಹ್ನಾವಭ್ಯರ್ಚ್ಯ ಗೋವಿಂದಂ ಶುಕ್ಲಪುಷ್ಪೈಃ ಸತಂಡುಲೈಃ || ೨೦೯ ||

---

೨೦೫-೨೦೬. ದಿವ್ಯವಾದ ರಾಜೋಪಚಾರಗಳನ್ನು ಸಮರ್ಪಿಸಿ ಬಳಿಕ ಕೇಶವನನ್ನು ಸ್ತುತಿಸಿ, ನಮಸ್ಕರಿಸಿ, ಪೂಜಾಸ್ಥಾನದಿಂದ ವಿಸರ್ಜನೆಮಾಡಿ, ಪರಿವಾರಗಣಸಹಿತನಾದ ಕೃಷ್ಣನನ್ನು ತನ್ನ ಹೃದಯದಲ್ಲಿಟ್ಟುಕೊಂಡು, ಅಲ್ಲಿಯೂ ಪರಮಾತ್ಮನನ್ನು ಪೂಜಿಸಿ, ಜ್ಞಾನಿಯು ಆತ್ಮನಲ್ಲಿಯೇ ಲೀನನಾಗಿ ವಿಹರಿಸಬೇಕು. ರತ್ನಾಭಿಷೇಕ ಧ್ಯಾನಪೂಜೆಗಳು ವಿಂಶತ್ಯಕ್ಷರಕೃಷ್ಣಮಂತ್ರದ ಅಂಗಗಳಾಗಿ ಅದನ್ನು ಆಶ್ರಯಿಸಿರುತ್ತವೆ ಎಂದು ಉಕ್ತವಾಗಿದೆ.

೨೦೭-೨೦೯. ಈ ರೀತಿ ಮಂತ್ರವನ್ನು ಭಜಿಸುವವನು ಸಕಲೈಶ್ವರ್ಯಸಮೃದ್ಧಿಯನ್ನು ಹೊಂದುವನು. ಜಪ, ಹೋಮ, ಪೂಜೆ, ಧ್ಯಾನಗಳಿಂದ ಈ ಮಂತ್ರವನ್ನು ಜಪಿಸುವವನ ಮನೆಯು ಯಾವಾಗಲೂ ರತ್ನ, ಸುವರ್ಣ ಮತ್ತು ಧಾನ್ಯಗಳಿಂದ ತುಂಬಿರುವುದು. ಮತ್ತು ಸಕಲ ಸಸ್ಯಪರಿಪೂರ್ಣವಾದ ಮಹತ್ತಾದ ಭೂಮಿಯು ಈ ಮಂತ್ರಸಾಧಕನ ಹಸ್ತಗತವಾಗುವುದು. ಪುತ್ರ ಮಿತ್ರರುಗಳಿಂದ ಯುಕ್ತನಾಗಿ ಸಾಧಕನು ಕೊನೆಗೆ ಉತ್ತಮಗತಿ ಎಂದರೆ ಮುಕ್ತಿಯನ್ನು ಹೊಂದುವನು.

ಆಜ್ಯಾಕ್ತೈರಯುತಂ ಹುತ್ವಾ ಭಸ್ಮ ತೇನ್ಮೂರ್ಧ್ನಿ ಧಾರಯೇತ್ ।
ತಸ್ಯಾನ್ನಾದಿಸಮೃದ್ಧಿಸ್ಸ್ಯಾತ್ತದ್ವಶೇ ಸರ್ವಯೋಷಿತಃ ॥ ೨೧೦ ॥

ರಕ್ತಾಂಭೋಜೈಸ್ತ್ರಿಮಧ್ವಕ್ತೈಃ ಹುನೇಲ್ಲಕ್ಷಂ ಸಮಾಹಿತಃ ।
ಶ್ರಿಯಾ ತಸ್ಯೈಂದ್ರಮೈಶ್ವರ್ಯಂ ತೃಣಲೇಶಾಯತೇ ಧ್ರುವಂ ॥ ೨೧೧ ॥

ತ್ರಿಮಧ್ವಕ್ತೈಃ ಸಿತೈಃ ಪುಷ್ಪೈರಷ್ಟೋತ್ತರಸಹಸ್ರಕಂ ।
ಯೋ ಹುನೇತ್ಪ್ರತ್ಯಹಂ ಮಾಸಾತ್ಪುರೋಧಾ ನೃಪತೇರ್ಭವೇತ್ ॥ ೨೧೨ ॥

ಏವಮಾದಿಪ್ರಯೋಗಾಂಶ್ಚ ಸಾಧಯೇನ್ಮನುನಾಮುನಾ ।
ಮಂತ್ರರಾಜಮಥೋ ವಕ್ಷ್ಯೇ ದಶಾರ್ಣಂ ಸರ್ವಸಿದ್ಧಿದಂ ॥ ೨೧೩ ॥

---

೨೦೯-೨೧೦. ವಿಧಾನೋಕ್ತಪ್ರಕಾರ ಅಗ್ನ್ಯಾಧಾನಮಾಡಿ ಅದರಲ್ಲಿ ಕೃಷ್ಣನನ್ನು ಪೂಜಿಸಿ, ತುಪ್ಪದಲ್ಲಿ ನೆನೆಸಿದ ತಂಡುಲ ಸಹಿತ ಶ್ವೇತಪುಷ್ಪಗಳಿಂದ ಹತ್ತುಸಾವಿರ ಹೋಮ ಮಾಡಿ, ಹೋಮಾಗ್ನಿಯ ಭಸ್ಮವನ್ನು ಶಿರಸ್ಸಿನಲ್ಲಿ ಧರಿಸುವವನಿಗೆ ಅನ್ನಾದಿಸಮೃದ್ಧಿಯುಂಟಾಗುವುದು. ಮತ್ತು ಸಕಲ ಸ್ತ್ರೀಯರೂ ಅವನಿಗೆ ಅಧೀನರಾಗುವರು.

೨೧೧. ತುಪ್ಪ, ಜೇನುತುಪ್ಪ ಸಕ್ಕರೆಗಳಿಂದ ಸಹಿತವಾದ ಕೆಂಪು ಕಮಲಗಳಿಂದ ಸಮಾಧಾನಮನಸ್ಕನಾಗಿ ಒಂದು ಲಕ್ಷ ಹೋಮ ಮಾಡುವವನಿಗೆ ಅಧಿಕವಾದ ಐಶ್ವರ್ಯವುಂಟಾಗಿ, ದೇವೇಂದ್ರನ ಐಶ್ವರ್ಯವು ಹುಲ್ಲುಕಡ್ಡಿಗೆ ಸಮಾನವೆಂಬ ಭಾವನೆಯುಂಟಾಗುವುದು. ಖಂಡಿತ.

೨೧೨. ತುಪ್ಪ, ಜೇನುತುಪ್ಪ, ಸಕ್ಕರೆಗಳಿಂದ ಮಿಶ್ರವಾದ ಬಿಳಿಯ ಹೂಗಳಿಂದ ಪ್ರತಿದಿನವೂ ಸಾವಿರದೆಂಟು ಹೋಮ ಮಾಡುವವನು ಒಂದು ತಿಂಗಳಿನಲ್ಲಿ ರಾಜಪುರೋಹಿತನಾಗುವನು.

೨೧೩. ಇವೇ ಮುಂತಾದ ಪ್ರಯೋಗಗಳನ್ನು ಈ ಮಂತ್ರದಿಂದ ಸಾಧಿಸಬೇಕು. ಈಗ ಸಕಲಸಿದ್ಧಿಪ್ರದವಾದ ಉತ್ತಮ ದಶಾಕ್ಷರಮಂತ್ರವನ್ನು ಹೇಳುವೆನು

ಸ್ಮೃತಿಃ ಸಾಧ್ಯಾನ್ವಿತಾ ಸಾಕ್ಷಿರ್ಲೋಹಿತೋ ಜನವಲ್ಲಭಾ ।
ಪವನೋಽಗ್ನಿಪ್ರಿಯಾಂತೋಽಯಂ ದಶಾರ್ಣೋ ಮಂತ್ರ ಈರಿತಃ ॥೨೧೪॥

ನಾರದೋಽಸ್ಯ ಮುನಿಶ್ಛಂದೋ ವಿರಾಟ್ ಕೃಷ್ಣೋಽಸ್ಯ ದೇವತಾ ।
ಕಾಮೋ ಬೀಜಂ ವಹ್ನಿಜಾಯಾ ಶಕ್ತಿಃ ಪ್ರೋಕ್ತಾ ಮನೀಷಿಭಿಃ ॥ ೨೧೫ ॥

ಆಚಕ್ರಂ ಚ ವಿಚಕ್ರಂ ಚ ಸುಚಕ್ರಂ ತದನಂತರಂ ।
ತ್ರೈಲೋಕ್ಯರಕ್ಷಣಂ ಚಕ್ರಮಸುರಾಂತಕಚಕ್ರಕಂ ॥ ೨೧೬ ॥

ಏತೈರ್ಙೇತದ್ವಯಾಂತೈಶ್ಚ ಚಕ್ರೈಃ ಪಂಚಾಂಗಕಂ ಮನೋಃ ।
ತತಸ್ತಾರಪುಟಂ ಮಂತ್ರಂ ನ್ಯಾಸಯ್ಯ ಕರಯೋಸ್ತ್ರಿಶಃ ॥ ೨೧೭ ॥

---

೨೧೪. (ಸ್ಮೃತಿ= ಗ, ಸದ್ಯ= ಓ, ಅಕ್ಷಿ= ಈ, ಲೋಹಿತ= ಪ, ಪವನ= ಯ, ಅಗ್ನಿಪ್ರಿಯಾ= ಸ್ವಾಹಾ)

"ಗೋಪೀಜನವಲ್ಲಭಾಯ ಸ್ವಾಹಾ" ಎಂಬುದು ದಶಾಕ್ಷರಮಂತ್ರವೆಂದು ಉಕ್ತವಾಗಿದೆ.

೨೧೫. ಈ ಮಂತ್ರಕ್ಕೆ ನಾರದನು ಋಷಿ, ವಿರಾಟ್ ಛಂದಸ್ಸು, ಕೃಷ್ಣನು ದೇವತೆ, "ಕ್ಲೀಂ" ಎಂಬುದು ಬೀಜ, 'ಸ್ವಾಹಾ' ಎಂಬುದು ಶಕ್ತಿ ಎಂಬುದಾಗಿ ಜ್ಞಾನಿಗಳಿಂದ ಉಕ್ತವಾಗಿದೆ.

೨೧೬-೨೧೭. "ಆಚಕ್ರಾಯ ಸ್ವಾಹಾ ಹೃದಯಂ" ಎಂದು ಹೃದಯವನ್ನೂ, "ವಿಚಕ್ರಾಯ ಸ್ವಾಹಾ ಶಿರಃ" ಎಂದು ತಲೆಯನ್ನೂ, "ಸುಚಕ್ರಾಯ ಸ್ವಾಹಾ ಶಿಖಾ" ಎಂದು ಶಿಖೆಯನ್ನೂ, "ತ್ರೈಲೋಕ್ಯರಕ್ಷಣಚಕ್ರಾಯ ಸ್ವಾಹಾ ಕವಚಂ" ಎಂದು ಕವಚವನ್ನೂ, "ಅಸುರಾಂತಕಚಕ್ರಾಯ ಸ್ವಾಹಾ ಅಸ್ತ್ರಂ" ಎಂದು ಅಸ್ತ್ರವನ್ನೂ ನ್ಯಾಸಮಾಡಬೇಕು. ಇದೇ ಈ ಮಂತ್ರಾಂಗವಾದ ಪಂಚಾಂಗನ್ಯಾಸವು.

**ಸೇಂದೂನ್ ಹೃದಂತಾನ್ಮಂತ್ರಾರ್ಣಾನ್ಪ್ರಣವಾಂತರಿತಾನ್ ನ್ಯಸೇತ್ |**
**ದಕ್ಷಾಂಗುಷ್ಠಾಚ್ಚ ವಾಮಾಂಗುಷ್ಠಾಂತಮಂಗುಲಿಪರ್ವಸು || ೨೧೮ ||**

**ಸೃಷ್ಟಿನ್ಯಾಸೋಽಯಮುದಿತಃ ಸ್ಥಿತಿನ್ಯಾಸೋಽಧುನೋಚ್ಯತೇ |**
**ನ್ಯಸೇದ್ವಾಮಕನಿಷ್ಠಾದಿ ಕನಿಷ್ಠಾಂತಂ ಸ್ಥಿತೌ ಸುಧೀಃ || ೨೧೯ ||**

**ವಾಮಾಂಗುಷ್ಠಾನ್ನ್ಯಸೇದ್ದಕ್ಷಾಂಗುಷ್ಠಾಂತಂ ಸಂಹೃತೌ ತಥಾ |**
**ಸಂಹೃತಿರ್ದೋಷಸಂಘಾತಹಾರಿಣೀ ಪರಿಕೀರ್ತಿತಾ || ೨೨೦ ||**

---

ಈ ನ್ಯಾಸಮಾಡಿದನಂತರ ಆದ್ಯಂತಗಳಲ್ಲಿ ಓಂಕಾರವನ್ನು ಸೇರಿಸಿ "ಓಂ ಗೋಪೀಜನವಲ್ಲಭಾಯ ಸ್ವಾಹಾ ಓಂ" ಎಂಬುದಾಗಿ ಮೂರಾವರ್ತಿ ಕೈಗಳಲ್ಲಿ ಸಂಪೂರ್ಣನ್ಯಾಸಮಾಡಬೇಕು.

೨೧೮. (ಇಂದು= ಂ. ಹೃತ್= ನಮಃ. ಪ್ರಣವ= ಓಂ) "ಓಂ ಗೋಂ ಓಂ ನಮಃ, ಓಂ ಪೀಂ ಓಂ ನಮಃ" ಇತ್ಯಾದಿಯಾಗಿ ಈ ಮಂತ್ರದ ಹತ್ತುವರ್ಣಗಳನ್ನೂ ಬಲಗೈ ಹೆಬ್ಬೆಟ್ಟಿನಿಂದ ಎಡಗೈ ಹೆಬ್ಬೆಟ್ಟಿನವರೆಗೂ, ಪ್ರತಿ ಯೊಂದು ಬೆರಳಿನ ಪರ್ವಗಳಲ್ಲಿಯೂ ಒಂದೊಂದು ವರ್ಣಸಹಿತ ಮೇಲ್ಕಂಡ ಮಂತ್ರಗಳಿಂದ ನ್ಯಾಸಮಾಡಬೇಕು.

೨೧೯-೨೨೦. ಈ ರೀತಿ ಮಾಡುವ ನ್ಯಾಸಕ್ಕೆ ಸೃಷ್ಟಿನ್ಯಾಸವೆಂದು ಹೆಸರು. ಈಗ ಸ್ಥಿತಿನ್ಯಾಸವನ್ನು ಹೇಳುವೆನು :—ಸ್ಥಿತಿನ್ಯಾಸದಲ್ಲಿ ಎಡಗೈ ಕಿಬ್ಬೆಟ್ಟಿನಿಂದ ಬಲಗೈ ಕಿಬ್ಬೆರಳಿನವರೆಗೂ ಮೇಲ್ಕಂಡಂತೆ ವರ್ಣಗಳನ್ನು ನ್ಯಾಸ ಮಾಡಬೇಕು. ಸಂಹಾರನ್ಯಾಸದಲ್ಲಿ ಎಡಗೈ ಹೆಬ್ಬೆಟ್ಟಿನಿಂದ ಬಲಗೈ ಹೆಬ್ಬೆಟ್ಟಿನ ವರೆಗಿನ ಹತ್ತುಪರ್ವಗಳಲ್ಲಿ ಉಕ್ತರೀತಿಯಿಂದ ನ್ಯಾಸಮಾಡಬೇಕು. ಈ ಸಂಹಾರನ್ಯಾಸವು ದೋಷಸಮೂಹವನ್ನು ನಾಶಮಾಡುತ್ತದೆ ಎಂದು ಉಕ್ತ ವಾಗಿದೆ.

ವಿದ್ಯಾಪ್ರದಶ್ಚ ಸೃಷ್ಟ್ಯಂತೋ ವರ್ಣಿನಾಂ ಶುದ್ಧಚೇತಸಾಂ ।
ಸ್ಥಿತ್ಯಂತಸ್ಸ್ಯಾದ್ಗೃಹಸ್ಥಾನಾಂ ಏವಂ ಕಾಮ್ಯಾದಿರೂಪತಃ　　॥ ೨೨೧ ॥

ಸಂಹಾರಾಂತೋ ಮುನೀಂದ್ರಾಣಾಂ ವಿರಕ್ತಾನಾಂ ಚ ಸರ್ವಶಃ ।
ಪುನಃ ಸ್ಥಿತಿಕ್ರಮೇಣಾರ್ಣಾನ್ಮನೋರಂಗುಲಿಷು ನ್ಯಸೇತ್　　॥ ೨೨೨ ॥

ಪುನಶ್ಚಕ್ರೈಶ್ಚ ಪೂರ್ವೋಕ್ತೈಃ ಪಂಚಾಂಗಂ ಕರಯೋರ್ನ್ಯಸೇತ್ ।
ತತೋ ಮೂಲೇನಪುಟಿತಾನ್ಮಾತೃಕಾರ್ಣಾನ್ ಸಬಿಂದುಕಾನ್　　॥ ೨೨೩ ॥

ವಿನ್ಯಸೇನ್ಮಾತೃಕಾನ್ಯಾಸಸ್ಥಾನೇಷು ಪ್ರಣತಃ ಸುಧೀಃ ।
ತತಸ್ತಾರಪುಟಂ ಮೂಲಂ ವ್ಯಾಪಕತ್ವೇನ ವಿನ್ಯಸೇತ್　　॥ ೨೨೪ ॥

ಸಂಹಾರಸೃಷ್ಟಿಭೇದೇನ ದಶತತ್ವಾನಿ ವಿನ್ಯಸೇತ್ ।
ನಮೋಂತಮೂಲಮಂತ್ರಾರ್ಣ ಪರಾಯಾದ್ಯಾನಿ ಚಾತ್ಮನೇ　　॥ ೨೨೫ ॥

---

೨೨೧-೨೨೨. ಶುದ್ಧಾಂತಃಕರಣರಾದ ಬ್ರಹ್ಮಚಾರಿಗಳಿಗೆ ಸೃಷ್ಟ್ಯಂತ ನ್ಯಾಸವು ವಿದ್ಯಾದಾಯಕವಾಗುವುದು. ಗೃಹಸ್ಥರಿಗೆ ಸ್ಥಿತ್ಯಂತನ್ಯಾಸವು ಇಷ್ಟ ಕಾಮ್ಯದಾಯಕವಾಗುವುದು. ವೈರಾಗ್ಯಶಾಲಿಗಳಾದ ಸಕಲ ಮುನೀಂದ್ರರುಗಳಿಗೂ ಸಂಹಾರಾಂತನ್ಯಾಸವು ವಿಹಿತವಾಗಿದೆ. ಪುನಃ ಸ್ಥಿತಿನ್ಯಾಸ ಕ್ರಮದಿಂದ ಈ ಮಂತ್ರದ ಹತ್ತು ವರ್ಣಗಳನ್ನು ಬೆರಳುಗಳ ಪರ್ವದಲ್ಲಿ ನ್ಯಾಸಮಾಡಬೇಕು.

೨೨೩-೨೨೪. ಪುನಃ ಹಿಂದೆ ಹೇಳಿರುವ ಚಕ್ರಗಳಿಂದ ಪಂಚಾಂಗಗಳನ್ನು ಕೈಗಳಲ್ಲಿ ನ್ಯಾಸ ಮಾಡಬೇಕು. ಬಳಿಕ ಜ್ಞಾನಿಯು ನಮಸ್ಕಾರ ಮಾಡಿ, ಅನುಸ್ವಾರ ಸಹಿತವಾದ ಮಾತೃಕಾಕ್ಷರಗಳನ್ನು ಆದ್ಯಂತಗಳಲ್ಲಿ ಓಂಕಾರ ಸಹಿತವಾಗಿ ಮಾತೃಕಾಸ್ಥಾನಗಳಲ್ಲಿ ನ್ಯಾಸಮಾಡಬೇಕು. ಅನಂತರ ಆದ್ಯಂತಗಳಲ್ಲಿ ಓಂಕಾರ ಸಹಿತವಾದ ಮೂಲಮಂತ್ರದಿಂದ ಸರ್ವಾಂಗನ್ಯಾಸ ಮಾಡಬೇಕು.

೨೨೫-೨೨೬. ಮಂತ್ರದ ಒಂದೊಂದು ವರ್ಣಕ್ಕೂ ಮೊದಲು ಕೊನೆಗಳಲ್ಲಿ 'ಓಂ' ಎಂಬುದನ್ನು ಸೇರಿಸಿ ಅದರ ಮುಂದೆ 'ನಮಃ' ಎಂಬ ಪದ

**ನತ್ಯಂತಾನಿ ಚ ತತ್ವಾನಿ ಪೃಥಿವ್ಯಾದ್ಯಾನಿ ಚ ಕ್ರಮಾತ್ |**
**ಪೃಥ್ವೀ ಜಲಂ ತಥಾ ವಹ್ನಿರ್ವಾಯುರಾಕಾಶಮೇವ ಚ || ೨೨೬ ||**

**ಅಹಂಕಾರೋ ಮಹತ್ತತ್ತ್ವಂ ಪ್ರಕೃತಿಃ ಪುರುಷಃ ಪರಃ |**
**ಪ್ರವಿನ್ಯಸೇನ್ಮಸ್ತಕೇ ಚ ನೇತ್ರಯೋಃ ಶ್ರೋತ್ರಯೋರ್ನಸೋಃ || ೨೨೭ ||**

**ವದನೇ ಹೃದಯೇ ನಾಭೌ ಲಿಂಗೇ ಜಾನ್ವೋಃ ಪಾದಯೋಃ |**
**ಪ್ರಣವಾಂತರಿತಾನ್ವರ್ಣಾನ್ ಹೃದಂತಾನ್ವಿನ್ಯಸೇನ್ಮನೋಃ || ೨೨೮ ||**

**ಸೃಷ್ಟಿನ್ಯಾಸೋಽಯಮಾಖ್ಯಾತಃ ಸ್ಥಿತಿನ್ಯಾಸಂ ಶೃಣು ದ್ವಿಜ |**
**ಹೃದಿ ನಾಭೌ ಧ್ವಜೇ ಜಾನ್ವೋಃ ಪಾದಯೋರ್ಮಸ್ತಕೇ ಪುನಃ || ೨೨೯ ||**

---

ವನ್ನೂ ಬಳಿಕ 'ಪರಾಯ' ಎಂಬ ಪದವನ್ನೂ ಅದರ ಮುಂದೆ ಪೃಥಿವೀ ಮೊದಲಾದ ಹತ್ತು ತತ್ವಗಳಲ್ಲಿ ಕ್ರಮವಾಗಿ ಒಂದೊಂದು ತತ್ವದ ಹೆಸರು ಸಹಿತವಾದ 'ಆತ್ಮನೇ' ಎಂಬ ಪದವನ್ನೂ ಸೇರಿಸಿ ಕೊನೆಯಲ್ಲಿ 'ನಮಃ' ಎಂದು ಸಂಯೋಜನೆ ಮಾಡಿ ಭಿನ್ನವಾದ ಸಂಹಾರಕ್ರಮ ಮತ್ತು ಸೃಷ್ಟಿಕ್ರಮದಿಂದ ಮುಂದೆ ಹೇಳುವ ಹತ್ತು ಅವಯವಗಳಲ್ಲಿ ನ್ಯಾಸಮಾಡಬೇಕು. ಉದಾಹರಣೆ :—'ಓಂ ಗೋ ಓಂ ನಮಃ ಪರಾಯ ಪೃಥಿವ್ಯಾತ್ಮನೇ ನಮಃ' ಇತ್ಯಾದಿ ಮಂತ್ರದಿಂದ ಸಂಹಾರನ್ಯಾಸದಲ್ಲಿ ಪಾದಾದಿಯಾಗಿಯೂ, ಸೃಷ್ಟಿನ್ಯಾಸದಲ್ಲಿ ಶಿರಸ್ಸಿನಿಂದಲೂ ಆರಂಭಿಸಿ ನ್ಯಾಸಮಾಡಬೇಕು.

೨೨೬-೨೨೮. ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ವ, ಪ್ರಕೃತಿ, ಜೀವ ಮತ್ತು ಪರತತ್ವ ಈ ಹತ್ತು ತತ್ವಗಳನ್ನೂ ಕ್ರಮವಾಗಿ ಶಿರಸ್ಸು, ಕಣ್ಣುಗಳು, ಕಿವಿಗಳು, ಮೂಗು, ಮುಖ, ಹೃದಯ, ಹೊಕ್ಕಳು, ಶಿಶ್ನ, ಮೊಣಕಾಲುಗಳು, ಪಾದಗಳು, ಈ ಅಂಗಗಳಲ್ಲಿ ಕ್ರಮವಾಗಿ ಹಿಂದೆ ಹೇಳಿರುವ ಮಂತ್ರಗಳಿಂದ ಮಾಡುವ ನ್ಯಾಸವು ಸೃಷ್ಟಿನ್ಯಾಸವೆನಿಸುವುದು.

೨೨೯-೨೩೧. ದ್ವಿಜನೇ! ಸ್ಥಿತಿನ್ಯಾಸವನ್ನು ಹೇಳುವೆನು ಕೇಳು:— ಹೃದಯ, ನಾಭಿ, ಲಿಂಗ, ಮೊಣಕಾಲುಗಳು, ಪಾದಗಳು, ತಲೆ, ಕಣ್ಣುಗಳು,

ನೇತ್ರಯೋಃ ಕರ್ಣಯೋರ್ಘ್ರಾಣೇ ವದನೇ ವಿನ್ಯಸೇತ್ಕ್ರಮಾತ್ ।
ಪದೋರ್ಜಾನ್ವೋರ್ಲಿಂಗದೇಶೇ ನಾಭೌ ಹೃದಿ ಮುಖೇ ನಸೋಃ ॥೨೩೦ ॥

ಕರ್ಣಯೋರ್ನೇತ್ರಯೋರ್ಮೂರ್ಧ್ನಿ ಸಂಹಾರಾಖ್ಯೋಯಮೀರಿತಃ ।
ಸೃಷ್ಟ್ಯಂತೋ ವರ್ಣಿನಾಂ ನ್ಯಾಸಃ ಸ್ಥಿತ್ಯಂತೋ ಗೃಹಮೇಧಿನಾಂ ॥೨೩೧ ॥

ಯತೇರ್ವೈರಾಗ್ಯಯುಕ್ತಸ್ಯ ಸಂಹಾರಾಂತಃ ಪ್ರಕೀರ್ತಿತಃ ।
ಚತುರ್ಧಾ ವರ್ಣಿನಾಂ ಚೈವ ಗೃಹಸ್ಥಾನಾಂ ಚ ಪಂಚಧಾ ॥ ೨೩೨ ॥

ಯತೀನಾಂ ಚ ತ್ರಿಧಾ ನ್ಯಾಸಃ ಪ್ರೋಕ್ತೋಽಯಂ ಕ್ರಮತಃ ಶುಭಃ ।
ಕೇಚಿದ್ವಿರಕ್ತೇ ಗೃಹಗೇ ಸಂಹಾರಾಂತಂ ವಿದುರ್ಬುಧಾಃ ॥ ೨೩೩ ॥

---

ಕಿವಿಗಳು, ಮೂಗು ಮತ್ತು ಮುಖಗಳಲ್ಲಿ ಕ್ರಮವಾಗಿ ಉಕ್ತರೀತಿಯಿಂದ ನ್ಯಾಸಮಾಡಬೇಕು.

ಪಾದ, ಮೊಣಕಾಲು, ಶಿಶ್ನ, ಹೊಕ್ಕಳು, ಹೃದಯ, ಮುಖ, ಮೂಗು, ಕಿವಿ, ಕಣ್ಣು, ಶಿರಸ್ಸುಗಳಲ್ಲಿ ಕ್ರಮವಾಗಿ ಮಾಡುವ ನ್ಯಾಸವು ಸಂಹಾರ ನ್ಯಾಸವೆನಿಸುವುದು.

೨೩೧-೨೩೨. ಬ್ರಹ್ಮಚಾರಿಗಳಿಗೆ ಸೃಷ್ಟ್ಯಂತನ್ಯಾಸವೂ, ಗೃಹಸ್ಥರಿಗೆ ಸ್ಥಿತ್ಯಂತನ್ಯಾಸವೂ, ವೈರಾಗ್ಯಶಾಲಿಗಳಾದ ಯತಿಗಳಿಗೆ ಸಂಹಾರಾಂತನ್ಯಾಸವೂ ವಿಹಿತವಾಗಿದೆ.

೨೩೨-೨೩೩. ಬ್ರಹ್ಮಚಾರಿಗಳಿಗೆ ನಾಲ್ಕುಸಾರಿಯೂ, ಗೃಹಸ್ಥರಿಗೆ ಐದು ಸಾರಿಯೂ, ಯತಿಗಳಿಗೆ ಮೂರಾವರ್ತಿಯೂ ಈ ನ್ಯಾಸವು ವಿಹಿತವಾಗಿದೆ. ಈ ಕ್ರಮದಿಂದ ಮಾಡುವ ನ್ಯಾಸವು, ಶುಭಪ್ರದವು. ಕೆಲವರು ವಿರಕ್ತನಾದ ಗೃಹಸ್ಥನಿಗೂ ಸಹ ಸಂಹಾರಾಂತನ್ಯಾಸವು ವಿಹಿತವೆಂದು ಅಭಿಪ್ರಾಯಪಡುವರು.

ವಿಭೂತಿಪಂಜರಂ ನ್ಯಾಸಂ ಕುರ್ಯಾದಿಷ್ಟಾಪ್ತಯೇ ತತಃ ।
ಮನೋರ್ದಶಾವೃತ್ತಿಮಯಂ ಕೃಷ್ಣಸಾಂನಿಧ್ಯಕಾರಕಂ ॥ ೨೩೪ ॥

ಆಧಾರೇ ಚ ಧ್ವಜೇ ನಾಭೌ ಹೃದಿ ಕಂಠೇ ಮುಖೇ ಶಯೇ ।
ಊರ್ವೋಶ್ಚ ಕಂಧರಾಯಾಂ ಚ ನಾಭೌ ಕುಕ್ಷೌ ತಥಾ ಹೃದಿ ॥ ೨೩೫ ॥

ಸ್ತನಯೋಃ ಪಾರ್ಶ್ವಯೋಃ ಶ್ರೋಣ್ಯೋರ್ಮಸ್ತಕೇ ವದನೇ ತಥಾ ।
ನೇತ್ರಯೋಃ ಕರ್ಣಯೋರ್ನಾಸಾಪುಟಯೋಶ್ಚ ಕಪೋಲಯೋಃ ॥ ೨೩೬ ॥

ಏವಂ ದಕ್ಷಿಣದೋರ್ಮೂಲಸಂಧ್ಯಗ್ರೇಷ್ವಂಗುಲೀಷು ಚ ।
ತತಃ ಶಿರಸಿ ತತ್ಪೂರ್ವಾದ್ಯಾಶಾಸು ಸ್ವಕಲಾಸು ಚ ॥ ೨೩೭ ॥

ದೋಷ್ಣೋಃ ಸಕ್ಥ್ನೋಃ ಶಿರೋಕ್ಷ್ಯಾಸ್ಯಕಂಠಹೃಜ್ಜಠರೇಷು ಚ ।
ಮೂಲಾಧಾರೇ ಲಿಂಗದೇಶೇ ಜಾನುನೋಃ ಪಾದಯೋಸ್ತಥಾ ॥ ೨೩೮ ॥

---

೨೩೪. ಬಳಿಕ ಕೃಷ್ಣಸಾನ್ನಿಧ್ಯಹೊಂದಲು ಸಾಧಕವಾದ ಮಂತ್ರ ದಶಾವೃತ್ತಿಸ್ವರೂಪವಾದ ವಿಭೂತಿಪಂಜರ ನ್ಯಾಸವನ್ನು ಇಷ್ಟಾರ್ಥಪ್ರಾಪ್ತಿಗಾಗಿ ಆಚರಿಸಬೇಕು.

೨೩೫–೨೪೯. ಮೂಲಾಧಾರ, ಶಿಶ್ನ, ಹೊಕ್ಕಳು, ಹೃದಯ, ಕುತ್ತಿಗೆ, ಮುಖ, ಕೈ, ತೊಡೆ, ಕಂಧರ, ನಾಭಿ, ಉದರ, ಹೃದಯ, ಸ್ತನಗಳು, ಪಕ್ಕೆಗಳು, ಶ್ರೋಣಿಗಳು, ತಲೆ, ಮುಖ, ಕಣ್ಣು, ಕಿವಿ, ಮೂಗಿನ ಹೊಳ್ಳೆಗಳು, ಕೆನ್ನೆಗಳು, ಬಲಬಾಹುಮೂಲಸ್ಥಾನ, ಸಂಧಿ, ಅಗ್ರಭಾಗ, ಬೆರಳುಗಳು, ಶಿರಸ್ಸು, ಅದರ ಪೂರ್ವಾದಿ ದಿಗ್ಭಾಗಗಳು, ಸ್ವಕಲೆಗಳು, ಭುಜಗಳು, ಸಕ್ಥ್ನ, ತಲೆ, ಕಣ್ಣು, ಮುಖ, ಕುತ್ತಿಗೆ, ಹೃದಯ, ಉದರ, ಮೂಲಾಧಾರ, ಲಿಂಗ, ಮೊಣಕಾಲುಗಳು, ಪಾದಗಳು, ಕಿವಿ, ಗಂಡಸ್ಥಲ, ಭುಜ, ಸ್ತನ, ಪಕ್ಕೆಗಳು, ಲಿಂಗ, ತೊಡೆ, ಮೊಣ

ಶ್ರೋತ್ರಗಂಡಾಂಸವಕ್ಷೋಜಪಾರ್ಶ್ವಲಿಂಗೇಷು ವಿನ್ಯಸೇತ್ ।
ಊರ್ವ್ವೋರ್ಜಾನ್ವೋರ್ಜಂಘಯೋಶ್ಚ ಪಾದಯೋರ್ವಿನ್ಯಸೇತ್ಕ್ರಮಾತ್॥

ವಿಭೂತಿಪಂಜರಾಖ್ಯೋಽಯಂ ನ್ಯಾಸಃ ಸರ್ವಾರ್ಥಸಿದ್ಧಿದಃ ।
ಅನೇನ ನ್ಯಾಸವರ್ಯೇಣ ಸಾಕ್ಷಾತ್ಕೃಷ್ಣತನುರ್ಭವೇತ್ ॥ ೨೪೦ ॥

ಮೂರ್ತಿಪಂಜರನಾಮಾನಂ ನ್ಯಾಸಂ ಪೂರ್ವೋದಿತಂ ನ್ಯಸೇತ್ ।
ತತೋ ದಶಾಂಗಪಂಚಾಂಗೌ ನ್ಯಾಸವರ್ಯೌ ನ್ಯಸೇತ್ಕ್ರಮಾತ್ ॥ ೨೪೧ ॥

ಹೃದಿ ಮೂರ್ಧ್ನಿ ಶಿಖಾಯಾಂ ಚ ಸರ್ವಾಂಗೇ ದಿಕ್ಷು ಪಾರ್ಶ್ವಯೋಃ ।
ಕಟ್ಯಾಂ ಪೃಷ್ಠೇ ತಥಾ ಮೂರ್ಧ್ನಿ ವಿನ್ಯಸೇದ್ವೈಷ್ಣವೋತ್ತಮಃ ॥ ೨೪೨ ॥

ಪಂಚಾಂಗಾನಿ ನ್ಯಸೇದ್ಭೂಯಶ್ಚಕ್ರೈಃ ಪ್ರಾಗ್ವತ್ಸಮಾಹಿತಃ ।
ಅನ್ಯೋಽಪ್ಯಷ್ಟಾದಶಾರ್ಣೋಕ್ತಃ ಕರ್ತವ್ಯೋ ನ್ಯಾಸಸಂಚಯಃ ॥ ೨೪೩ ॥

---

ಕಾಲುಗಳು, ಜಂಘೆ ಮತ್ತು ಪಾದ ಇವುಗಳಲ್ಲಿ ಕ್ರಮವಾಗಿ ನ್ಯಾಸ ಮಾಡಬೇಕು.

೨೪೦. ಈ ನಾಸ್ಯಕ್ಕೆ ವಿಭೂತಿಪಂಜರನ್ಯಾಸವೆಂದು ಹೆಸರು. ಇದು ಸಕಲೇಷ್ಟಪ್ರದಾಯಕವು. ಉತ್ತಮವಾದ ಈ ನ್ಯಾಸದಿಂದ ಸಾಕ್ಷಾತ್ಕೃಷ್ಣನ ಸಾರೂಪ್ಯವನ್ನು ಪಡೆಯುವನು.

೨೪೧. ಅನಂತರ ಪೂರ್ವೋಕ್ತವಾದ ಮೂರ್ತಿಪಂಜರನ್ಯಾಸವನ್ನೂ ಮಾಡಬೇಕು. ತರುವಾಯ ಕ್ರಮವಾಗಿ ಶ್ರೇಷ್ಠವಾದ ದಶಾಂಗ ಪಂಚಾಂಗ ನ್ಯಾಸಗಳನ್ನು ಮಾಡಬೇಕು.

೨೪೨. ಹೃದಯ, ತಲೆ, ಶಿಖೆ, ಸರ್ವಾಂಗ, ದಿಕ್ಕುಗಳು, ಪಾರ್ಶ್ವಗಳು, ನಡುವು, ಪೃಷ್ಠ ಮತ್ತು ಶಿರಸ್ಸುಗಳಲ್ಲಿ ವೈಷ್ಣವೋತ್ತಮನು ನ್ಯಾಸ ಮಾಡಬೇಕು.

೨೪೩. ಹಿಂದೆ ಹೇಳಿರುವ ಪ್ರಕಾರ ಸಮಾಧಾನಚಿತ್ತನಾಗಿ ಚಕ್ರಗಳಿಂದ ಪಂಚಾಂಗ ನ್ಯಾಸವನ್ನು ಮಾಡಬೇಕು. ಇನ್ನೂ ಇತರವಾದ, ಅಷ್ಟಾದಶಾಕ್ಷರ ಕೃಷ್ಣಮಂತ್ರಕ್ಕೆ ವಿಹಿತವಾದ ನ್ಯಾಸವನ್ನೆಲ್ಲಾ ಆಚರಿಸಬೇಕು.

ತತಃ ಕಿರೀಟಮಂತ್ರೇಣ ವ್ಯಾಪಕಂ ರಚಯೇತ್ಸುಧೀಃ ।
ವೇಣುಬಿಲ್ವಾದಿಮುದ್ರಾಂಶ್ಚ ದರ್ಶಯೇತ್ಸಾಧಕೋತ್ತಮಃ ॥ ೨೪೪ ॥

ಸುದರ್ಶನಸ್ಯ ಮಂತ್ರೇಣ ಕುರ್ಯಾದ್ದಿಗ್ಬಂಧನಂ ತತಃ ।
ಅನಂಗುಷ್ಠಾಶ್ಚ ಋಜವಃ ಕರಶಾಖಾ ಭವಂತಿ ಚೇತ್ ॥ ೨೪೫ ॥

ಹೃನ್ಮುದ್ರೇಯಂ ಸಮಾಖ್ಯಾತಾ ಶಿರೋಮುದ್ರಾ ತಥಾ ಭವೇತ್ ।
ಅಧೋಂಗುಷ್ಠಾ ತು ಯಾ ಮುಷ್ಟಿಃ ಶಿಖಾಮುದ್ರೇಯಮೀರಿತಾ ॥ ೨೪೬ ॥

ನಾರಾಚಮುಷ್ಟ್ಯೋದ್ಧೃತಬಾಹುಯುಗ್ಮ-
ಕಾಂಗುಷ್ಠತರ್ಜನ್ಯುದಿತೋ ಧ್ವನಿಸ್ತು ।
ವಿಷ್ವಗ್ವಿಮುಕ್ತಾ ಕಥಿತಾಸ್ತ್ರಮುದ್ರಾ
ಯತ್ರಾಕ್ಷಿಣೀ ತರ್ಜನೀಮಧ್ಯಮೇ ಚ ॥ ೨೪೭ ॥

---

೨೪೪. ಅನಂತರ ಜ್ಞಾನಿಯು ಕಿರೀಟ ಮಂತ್ರದಿಂದ ಸರ್ವಾಂಗನ್ಯಾಸ ಮಾಡಬೇಕು. ಸಾಧಕವರ್ಯನು ವೇಣು ಬಿಲ್ವಾದಿ ಮುದ್ರೆಗಳನ್ನು ತೋರಿಸಬೇಕು.

೨೪೫-೨೪೭. ಬಳಿಕ ಸುದರ್ಶನ ಮಂತ್ರದಿಂದ ದಿಗ್ಬಂಧನೆ ಮಾಡಬೇಕು. ಹೃದಯಾದಿ ಅಂಗ ಮುದ್ರೆಗಳ ವಿಧಾನವನ್ನು ಹೇಳುತ್ತಾರೆ:- ಹೆಬ್ಬೆಟ್ಟನ್ನು ಬಿಟ್ಟು ಮಡಿಸದೆ ಉದ್ದವಾಗಿ ನೀಡಿದ ಉಳಿದ ಬೆರಳುಗಳು, ಹೃದಯಾದಿ ಸಂಬದ್ಧವಾದರೆ ಅದು ಹೃನ್ಮುದ್ರೆಯೆನಿಸುವುದು.

ಅದೇ ರೀತಿಯಾಗಿರುವ ಬೆರಳುಗಳನ್ನು ತಲೆಯ ಮೇಲಿಟ್ಟುಕೊಳ್ಳುವುದು ಶಿರೋಮುದ್ರೆಯೆನಿಸುವುದು.

ಕೆಳಗೆ ಹೆಬ್ಬೆಟ್ಟನ್ನು ಸೇರಿಸಿದ ಮುಷ್ಟಿಯು ಶಿಖಾಮುದ್ರೆಯೆನಿಸುವುದು.

ಹರಡಿದ ಕೈ ಬೆರಳುಗಳು ವರ್ಮ ಮುದ್ರೆಯೆಂದು ಉಕ್ತವಾಗಿದೆ.

ಕೈಗಳನ್ನು ಬಾಣಾಕಾರವಾಗಿ ಮೇಲಕ್ಕೆ ಎತ್ತಿ ಬಲಗೈಯಿನ ಹೆಬ್ಬೆರಳು ತರ್ಜನೀಬೆರಳುಗಳನ್ನುಸೇರಿಸಿ ಅದನ್ನು ತಲೆಯ ಸುತ್ತಲೂ ತಿರುಗಿಸಿ ಎಡಗೈಯ ಮೇಲೆ ಶಬ್ದವಾಗುವಂತೆ ಹೊಡೆಯುವುದೇ ಅಸ್ತ್ರಮುದ್ರೆಯು.

ಓಷ್ಠೇ ವಾಮಕರಾಂಗುಷ್ಠೋ ಲಗ್ನಸ್ತಸ್ಯ ಕನಿಷ್ಠಿಕಾ |
ದಕ್ಷಿಣಾಂಗುಷ್ಠಸಂಸಕ್ತಾ ತತ್ಕನಿಷ್ಠಾ ಪ್ರಸಾರಿತಾ || ೨೪೮ ||

ತರ್ಜನೀ ಮಧ್ಯಮಾನಾಮಾಃ ಕಿಂಚಿತ್ಸಂಕುಚ್ಯ ಚಾಲಿತಾಃ |
ವೇಣುಮುದ್ರೇಯಮುದಿತಾ ಸುಗುಪ್ತಾ ಪ್ರೇಯಸೀ ಹರೇಃ |
ನೋಚ್ಯಂತೇಽತ್ರ ಪ್ರಸಿದ್ಧತ್ವಾನ್ಮಾಲಾಶ್ರೀವತ್ಸಕೌಸ್ತುಭಾಃ || ೨೪೯ ||

ವಾಮಾಂಗುಷ್ಠಂ ಸಮುದ್ದಂಡಮಪರಕರಾಂಗುಷ್ಠಕೇನಾಥ ಬಧ್ವಾ |
ಸಂಪೀಡ್ಯಾಗ್ರಂ ಚ ದಕ್ಷಾಂಗುಲಿಭಿರಪಿ ಚ ತಾಂ ವಾಮಹಸ್ತಾಂಗುಲೀಭಿಃ ||
ಗಾಢಂ ಬಧ್ವಾ ಸ್ವಕೀಯೇ ಹೃದಯಸರಸಿಜೇ ಸ್ಥಾಪಯೇತ್ಕಾಮಬೀಜಂ |
ಪ್ರೋಚ್ಯಾರ್ಯೈರ್ಷಾ ತು ಗೋಪ್ಯಾ ಸಕಲಸುಖಕರೀ ಬಿಲ್ವಮುದ್ರಾ
ಮುನೀಂದ್ರೈಃ || ೨೫೦ ||

---

ತರ್ಜನೀ ಮತ್ತು ಮಧ್ಯದ ಬೆರಳುಗಳಿಂದ ಎರಡು ಕಣ್ಣುಗಳನ್ನೂ ಮುಟ್ಟುವುದು ನೇತ್ರಮುದ್ರೆಯೆನಿಸುವುದು.

೨೪೮-೨೪೯. ವೇಣುಮುದ್ರೆಯ ವಿಧಾನವನ್ನು ಹೇಳುತ್ತಾರೆ :-ಎಡಗೈ ಹೆಬ್ಬೆಟ್ಟನ್ನು ತುಟಿಯ ಮೇಲಿಟ್ಟು, ಆ ಕೈ ಕಿರುಬೆರಳುಗಳನ್ನು ಬಲಗೈ ಹೆಬ್ಬೆಟ್ಟಿನೊಡನೆ ಸೇರಿಸಿ, ಬಲ ಕಿರುಬೆರಳನ್ನು ಸರಿಯಾಗಿ ನೀಡಿ, ಎರಡು ಕೈಗಳ 2, 3, 4 ನೆಯ ಬೆಟ್ಟುಗಳನ್ನು ಸ್ವಲ್ಪ ಬಗ್ಗಿಸಿ ಅಲ್ಲಾಡಿಸುವುದಕ್ಕೆ "ವೇಣುಮುದ್ರೆ" ಎಂದು ಹೆಸರು. ಇದು ಶ್ರೀಕೃಷ್ಣನಿಗೆ ಅತ್ಯಂತಪ್ರಿಯವಾದುದರಿಂದ ಗ್ರಂಥಾಂತರಗಳಲ್ಲಿ ರಹಸ್ಯವಾಗಿಡಲ್ಪಟ್ಟಿದೆ. ಸ್ಫುಟವಾಗಿ ಹೇಳಿಲ್ಲ ವನಮಾಲಾ, ಶ್ರೀವತ್ಸ, ಕೌಸ್ತುಭ ಮುದ್ರೆಗಳು ಸುಪ್ರಸಿದ್ಧವಾಗಿರುವುದರಿಂದ ಅವನ್ನು ಇಲ್ಲಿ ಹೇಳಿಲ್ಲ.

೨೫೦. ಎಡಗೈ ಹೆಬ್ಬೆಟ್ಟನ್ನು ದಂಡಾಕಾರವಾಗಿ ಉದ್ದಕ್ಕೆ ನೀಡಿ, ಅದನ್ನು ಬಲಗೈ ಹೆಬ್ಬೆಟ್ಟಿನಿಂದ ಸುತ್ತಿಕೊಂಡು, ಆ ಬಲ ಹೆಬ್ಬೆಟ್ಟಿನ ಕೊನೆಯ ಭಾಗವನ್ನು ಬಲಗೈ ಬೆರಳುಗಳಿಂದ ಹಿಡಿದುಕೊಂಡು, ಅದನ್ನು ಎಡಗೈಬೆರಳುಗಳಿಂದ ಗಟ್ಟಿಯಾಗಿ ಹಿಡಿದುಕೊಂಡು ಹಾಗೆ ಹಿಡಿದ ಮುಷ್ಟಿಯನ್ನು "ಕ್ಲೀಂ"

ಕಾಯೇನ ಮನಸಾ ವಾಚಾ ಯತ್ಪಾಪಂ ಸಮುಪಾರ್ಜಿತಂ ।
ಮುದ್ರಾಯಾ ಜ್ಞಾನಮಾತ್ರೇಣ ಸರ್ವಂ ನಾಶಮುಪೈಷ್ಯತಿ ॥ ೨೫೧ ॥

ಧ್ಯಾನಂ ಜಪಸ್ತ್ರಿಕಾಲಾರ್ಚಾ ಕಾರ್ಯಾ ಪೂರ್ವೋದಿತಾ ಮನೋಃ ।
ಸರ್ವೇಷ್ವೇಕಃ ಕ್ರಮಃ ಪ್ರೋಕ್ತೋ ದಶಾರ್ಣಾಷ್ಟಾದಶಾರ್ಣಯೋಃ ॥

ಏವಂ ಸಿದ್ಧೇ ಮನೌ ಮಂತ್ರೀ ಪ್ರಯೋಗಾನ್ಕರ್ತುಮರ್ಹತಿ ।
ಉದ್ದಂಡವಾಮದೋರ್ದಂಡಧೃತಗೋವರ್ಧನಾಚಲಂ ॥ ೨೫೩ ॥

ಅನ್ಯಹಸ್ತಾಂಗುಲೀವ್ಯಕ್ತ ಸ್ವರವಂಶಾರ್ಪಿತಾನನಂ ।
ಧ್ಯಾಯನ್ಕೃಷ್ಣಂ ಜಪನ್ಮಂತ್ರಂ ವ್ರಜೇಚ್ಛತ್ರಂ ವಿನಾ ಸುಧೀಃ ॥ ೨೫೪ ॥

---

ಎಂಬ ಕಾಮಬೀಜಾಕ್ಷರವನ್ನು ಉಚ್ಚರಿಸುತ್ತಾ ತನ್ನ ಹೃದಯಕಮಲದಲ್ಲಿ ಇಡಬೇಕು. ಈ ವಿನ್ಯಾಸವೇ ಬಿಲ್ವಮುದ್ರೆಯೆನಿಸುವುದು. ಇದು ಮುನಿವರ್ಯರಿಂದ ಗೋಪ್ಯವಾಗಿಡಲ್ಪಟ್ಟಿದೆ. ಇದು ಸಕಲ ಸುಖಗಳನ್ನೂ ಉಂಟುಮಾಡುವುದು.

೨೫೧. ಶರೀರ, ಮನಸ್ಸು, ವಾಕ್ಕುಗಳಿಂದ ಸಂಪಾದಿತವಾದ ಪಾಪಗಳೆಲ್ಲವೂ ಈ ಮುದ್ರೆಯ ವಿಧಾನವನ್ನು ತಿಳಿಯುವ ಮಾತ್ರದಿಂದ ನಾಶವನ್ನು ಹೊಂದುತ್ತವೆ.

೨೫೨. ಈ ಮಂತ್ರಕ್ಕೆ ಅಂಗವಾದ ಧ್ಯಾನ, ಜಪ ಮತ್ತು ತ್ರಿಕಾಲಪೂಜೆ, ಇವುಗಳು ಹಿಂದಿನ ಮಂತ್ರಕ್ಕೆ ಹೇಳಿರುವ ಪ್ರಕಾರ ನಡೆಯಿಸಲ್ಪಡಬೇಕು. ದಶಾಕ್ಷರ ಮತ್ತು ಅಷ್ಟಾದಶಾಕ್ಷರ ಮಂತ್ರಗಳಿಗೆ ಧ್ಯಾನಾದಿ ಸಮಸ್ತವಿಷಯಗಳಲ್ಲಿಯೂ ಆಚರಿಸುವ ವಿಧಾನವು ಏಕರೀತಿಯಾದುದೆಂದು ಉಕ್ತವಾಗಿದೆ.

೨೫೩-೨೫೫. ಈ ರೀತಿ ಆಚರಿಸಿ ಮಂತ್ರಸಿದ್ಧಿಯನ್ನು ಪಡೆದ ಬಳಿಕ ಮಂತ್ರಿಯು ಪ್ರಯೋಗಗಳನ್ನು ಮಾಡಲರ್ಹನಾಗುವನು. ಈಗ ನಾನಾವಿಧ ಪ್ರಯೋಗಗಳನ್ನು ವಿವರಿಸುತ್ತಾರೆ :-

ದಂಡದಂತಿರುವ ಎಡಗೈಯಿಂದ ಗೋವರ್ಧನಪರ್ವತವನ್ನು ಎತ್ತಿ ಹಿಡಿದುಕೊಂಡಿರುವ, ಇನ್ನೊಂದು ಕೈಯಿಂದ ಕೊಳಲನ್ನು ಮುಖದಲ್ಲಿ ಇಟ್ಟುಕೊಂಡು

**ವರ್ಷವಾತಾಶನಿಭ್ಯೋಽಪಿ ಭಯಂ ತಸ್ಯ ನ ಜಾಯತೇ |**
**ಸೋಘಮೇಘೌಘಯತ್ನಾಪಗತೇಂದ್ರಂ ತಂ ಸ್ಮರನ್ಹುನೇತ್ || ೨೫೫ ||**

**ಲೋಣೈರಯುತಸಂಖ್ಯೈಃ ಸ್ಯಾದನಾವೃಷ್ಟಿರ್ನ ಸಂಶಯಃ |**
**ಕ್ರೀಡಂತಮರ್ಕಜಾತೀರೇ ಮಜ್ಜನಸ್ನಾಪನಾದಿಭಿಃ || ೨೫೬ ||**

**ತಚ್ಛೀಕರಜಲಾಧಾರೈಃ ಸಿಚ್ಯಮಾನಂ ಪ್ರಿಯಾಜನೈಃ |**
**ಧ್ಯಾತ್ವಾಽಯುತಂ ಪಯಃಸಿಕ್ತೈರ್ಹುನೇದ್ವಾ ನೀರತರ್ಪಣೈಃ || ೨೫೭ ||**

**ವೃಷ್ಟಿರ್ಭವತ್ಯಕಾಲೇಽಪಿ ಮಹತೀ ನಾತ್ರ ಸಂಶಯಃ |**
**ಸದಾಹನೋಽಹ್ಯರಾರ್ತಸ್ಯ ವಿಷಸ್ಫೋಟಜ್ವರಾದಿಭಿಃ || ೨೫೮ ||**

---

ಊದುತ್ತಿರುವ ಕೃಷ್ಣನನ್ನು ಧ್ಯಾನಿಸುತ್ತಾ ಮಂತ್ರವನ್ನು ಜಪಿಸುವ ಪಂಡಿತನು ಛತ್ರಿಯಿಲ್ಲದೇ ಸಂಚಾರ ಹೊರಟಾಗ್ಯೂ ಅವನಿಗೆ ಮಳೆ, ಗಾಳಿ, ಸಿಡಿಲುಗಳಿಂದ ಭಯವಾಗುವುದಿಲ್ಲ.

೨೫೫-೨೫೬. ದೇವೇಂದ್ರನು ಮೋಡಗಳ ಸಮೂಹದಿಂದ ಮಳೆಗರೆಯಲು ಮಾಡಿದ ಪ್ರಯತ್ನವನ್ನು ನಿಷ್ಫಲ ಮಾಡಿದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಉಪ್ಪಿನಿಂದ ಹತ್ತುಸಾವಿರ ಹೋಮ ಮಾಡಿದರೆ ಮಳೆಯು ಬರುವುದಿಲ್ಲ. ಖಂಡಿತ, ಸಂದೇಹವಿಲ್ಲ.

೨೫೭-೨೫೮. ಯಮುನಾ ನದಿಯ ಜಲದಲ್ಲಿ ಮುಳುಗುವುದು, ಇತರರನ್ನು ಮುಳುಗಿಸುವುದು ಮುಂತಾದುವುಗಳಿಂದ ಕ್ರೀಡಿಸುತ್ತಿರುವ, ರುಕ್ಮಿಣೀ ಮುಂತಾದ ಪ್ರಿಯಸ್ತ್ರೀಯರಿಂದ ಶೀತಲವಾದ ಯಮುನಾ ಜಲದ ಧಾರೆಗಳಿಂದ ಅಭಿಷೇಕಮಾಡಿಸಿಕೊಳ್ಳಲ್ಪಡುತ್ತಲಿರುವ ಶ್ರೀಕೃಷ್ಣನನ್ನು ಧ್ಯಾನಿಸಿ ಹಾಲಿನಲ್ಲಿ ನೆನೆಸಿದ ವೇತಸ (ಹೆಬ್ಬೇಗಿಡದ) ಸಮಿತ್ತುಗಳಿಂದ ಹತ್ತುಸಾವಿರ ಹೋಮ ಮಾಡಬೇಕು. ಅಥವಾ ಜಲ ತರ್ಪಣ ಮಾಡಬೇಕು. ಹಾಗೆ ಮಾಡಿದರೆ ಅಕಾಲದಲ್ಲಿಯೂ ಸಹ ದೊಡ್ಡ ಮಳೆಯಾಗುತ್ತದೆ. ಸಂಶಯವಿಲ್ಲ.

**ಅಮುಮೇವ ಸ್ಮರನ್ಮೂರ್ಧ್ನಿ ಜಪೇಚ್ಛಾಂತಿರ್ಭವೇತ್ ಕ್ಷಣಾತ್ ।**
**ಅಥವಾ ಗರುಡಾರೂಢಂ ಪ್ರದ್ಯುಮ್ನಬಲಸಂಯುತಂ ॥ ೨೫೯ ॥**

**ನಿಜಜ್ವರನಿಕ್ಷಿಪ್ತ ಜ್ವರಾಭಿಷ್ಟುತಮಚ್ಯುತಂ ।**
**ಧ್ಯಾತ್ವಾ ಮೂರ್ಧ್ನಿ ಜಪೇನ್ಮಂತ್ರಂ ಜ್ವರಮುಕ್ತೋ ಭವೇಜ್ಜ್ವರೀ ॥೨೬೦॥**

**ಧ್ಯಾತ್ವೈವಮಗ್ನಾವಭ್ಯರ್ಚ್ಯ ಯಥೋಕ್ತೈಶ್ಚತುರಂಗುಲೈಃ ।**
**ಜುಹುಯಾದಮೃತಾಖಂಡೈರಯುತಂ ಜ್ವರಶಾಂತಯೇ ॥ ೨೬೧ ॥**

**ಶಿಲೀಮುಖವಿನಿರ್ಭಿನ್ನ ಭೀಷ್ಮತಾಪಹರಂ ಹರಿಂ ।**
**ಧ್ಯಾತ್ವಾ ಜಪೇತ್ ಸ್ಪೃಶನ್ನಾರ್ತಂ ಪಾಣಿಭ್ಯಾಂ ಜ್ವರಶಾಂತಯೇ ॥ ೨೬೨ ॥**

---

೨೫೮–೨೫೯. ಬಾಯಾರಿಕೆ ಸನ್ನಿಗಳಿಂದ ಸಹಿತವಾದ ವಿಷ ಸ್ಫೋಟ (ಹುಣ್ಣು) ಜ್ವರ ಮುಂತಾದುವುಗಳಿಂದ ಬಾಧೆಪಡುತ್ತಿರುವವನು ಶಿರಸ್ಸಿನಲ್ಲಿ ಪೂರ್ವೋಕ್ತ ಗುಣಯುಕ್ತನಾದ ಶ್ರೀಕೃಷ್ಣನನ್ನೇ ಧ್ಯಾನಿಸುತ್ತಾ ಮಂತ್ರ ಜಪಮಾಡಿದರೆ ತಕ್ಷಣದಲ್ಲಿಯೇ ಬಾಧೆಯು ಹೋಗುವುದು.

೨೫೯–೨೬೦. ಅಥವಾ ಗರುಡವಾಹನನು, ಪ್ರದ್ಯುಮ್ನ ಬಲರಾಮರಿಂದ ಸಹಿತನು, ತನ್ನ ಶೀತಾಖ್ಯವಾದ ಆಯುಧದಿಂದ ಹೋಗಲಾಡಿಸಲ್ಪಟ್ಟ ಉಷ್ಣಾಖ್ಯ ಆಯುಧರೂಪ ಜ್ವರದಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಡುತ್ತಿರುವವನೂ ಆಗಿರುವ, ಅಚ್ಯುತನನ್ನು ಜ್ವರಾದಿ ಪೀಡಿತನ ಶಿರಸ್ಸಿನಲ್ಲಿ ಚಿಂತಿಸಿ ಮಂತ್ರವನ್ನು ಜಪಿಸಿದರೆ ತಕ್ಷಣದಲ್ಲಿಯೇ ಜ್ವರಾದಿಗಳು ಹೋಗುವುವು.

೨೬೧. ಇದೇ ರೀತಿಯಲ್ಲಿ ಧ್ಯಾನಿಸಿ, ಅಗ್ನಿಯಲ್ಲಿ ಪೂಜಿಸಿ ವಿಧಾನೋಕ್ತ ಪ್ರಕಾರ ನಾಲ್ಕುಅಂಗುಲ ಉದ್ದವಾದ ಅಮೃತಬಳ್ಳಿಯ ಸಮಿತ್ತುಗಳಿಂದ ಜ್ವರ ಪರಿಹಾರಕ್ಕಾಗಿ ಹತ್ತುಸಾವಿರ ಹೋಮ ಮಾಡಬೇಕು.

೨೬೨. ತೀಕ್ಷ್ಣಬಾಣದಿಂದ ಭೇದಿಸಲ್ಪಟ್ಟ, ಭೀಷ್ಮನ ತಾಪವನ್ನು ಪರಿಹರಿಸಿದ ಹರಿಯನ್ನು ಧ್ಯಾನಿಸಿ ಕೈಗಳಿಂದ ರೋಗಿಯನ್ನು ಮುಟ್ಟಿಕೊಂಡು ಜ್ವರಪರಿಹಾರಕ್ಕಾಗಿ ಜಪಿಸಬೇಕು.

ಸಾಂದೀಪನಾಯ ದದತಂ ಪುತ್ರಂ ಧ್ಯಾತ್ವಾಯುತಂ ಹುನೇತ್ ।
ಯಥೋಕ್ತೈರಮೃತಾಖಂಡೈರಪಮೃತ್ಯುನಿವೃತ್ತಯೇ || ೨೬೩ ||

ಸಪಾರ್ಥಂ ಮೃತಪುತ್ರಾಯಾರ್ಪಯಂತಂ ಚ ದ್ವಿಜನ್ಮನೇ ।
ಸುತಂ ಧ್ಯಾತ್ವಾ ಜಪೇಲ್ಲಕ್ಷಂ ಪುತ್ರಪೌತ್ರಾದಿವೃದ್ಧಯೇ || ೨೬೪ ||

ಪುತ್ರಜೀವಫಲೈರ್ಹುತ್ವಾಯುತಂ ಮಧುರಸಂಪ್ಲುತೈಃ ।
ತತ್ಕಾಷ್ಠೈರೇಧಿತೇ ವಹ್ನೌ ಸುತಾನ್ ದೀರ್ಘಾಯುಷೋ ಲಭೇತ್ ||೨೬೫ ||

ಕ್ಷೀರದ್ರುಕ್ವಾಥಸಂಪೂರ್ಣಮಭ್ಯರ್ಚ್ಯ ಕಲಶಂ ನಿಶಿ ।
ಪ್ರಾತರ್ಜಪ್ತ್ವಾಯುತಂ ನಾರೀಮಭಿಷಿಂಚೇದ್ದ್ವಿಷಟ್‌ದಿನಂ || ೨೬೬ ||

---

೨೬೩. ಗುರುವಾದ ಸಾಂದೀಪನಿಗೆ ಮಗನನ್ನು ಅನುಗ್ರಹಿಸಿದ ಶ್ರೀಕೃಷ್ಣನನ್ನು ಧ್ಯಾನಿಸಿ, ಅಪಮೃತ್ಯುಪರಿಹಾರಕ್ಕಾಗಿ ನಾಲ್ಕು ಅಂಗುಲ ಉದ್ದವುಳ್ಳ ಅಮೃತಬಳ್ಳಿಯ ಶಕಲಗಳಿಂದ ಹತ್ತುಸಾವಿರ ಹೋಮ ಮಾಡಬೇಕು.

೨೬೪. ಮಕ್ಕಳು ಸತ್ತ ಬ್ರಾಹ್ಮಣನಿಗೆ ಮಕ್ಕಳನ್ನು ಕೊಟ್ಟ, ಅರ್ಜುನ ಸಹಿತನಾದ ಶ್ರೀಕೃಷ್ಣನನ್ನು ಧ್ಯಾನಿಸಿ ಪುತ್ರಪೌತ್ರಾದಿ ಸಂತಾನಾಭಿವೃದ್ಧಿಗಾಗಿ ಮಂತ್ರವನ್ನು ಒಂದು ಲಕ್ಷಸಾರಿ ಜಪಿಸಬೇಕು.

೨೬೫. ಪುತ್ರಜೀವಕಾಷ್ಠಗಳಿಂದ ಹೊತ್ತಿಸಿದ ಬೆಂಕಿಯಲ್ಲಿ ಸಕ್ಕರೆ ಮುಂತಾದ ಮಧುರ ಪದಾರ್ಥದಲ್ಲಿ ನೆನೆಸಿದ ಪುತ್ರಜೀವ ಫಲಗಳಿಂದ ಹತ್ತು ಸಾವಿರ ಹೋಮ ಮಾಡಿದರೆ ದೀರ್ಘಾಯುಷ್ಮಂತರಾದ ಮಕ್ಕಳನ್ನು ಪಡೆಯುವನು.

೨೬೬-೨೬೭. ಕ್ಷೀರದ್ರು ಎಂಬ ಮೂಲಿಕೆಯ ಕಷಾಯದಿಂದ ತುಂಬಿದ ಕಲಶವನ್ನು ರಾತ್ರಿ ಪೂಜಿಸಿ, ಬೆಳಗ್ಗೆ ಹತ್ತುಸಾವಿರ ಜಪ ಮಾಡಿ ಹೆಂಗಸಿಗೆ

ಏವಂ ಕೃತೇತು ವಂಧ್ಯಾಽಪಿ ಲಭೇತ್ಪುತ್ರಾಂಶ್ಚಿರಾಯುಷಃ |
ಪ್ರಾತರ್ವಾಚಂಯಮ್ಯಾಽಶ್ವತ್ಥದಲಸಂಪುಟಗಂ ಜಲಂ || ೨೬೭ ||

ಅಷ್ಟೋತ್ತರಶತಂ ಜಪ್ತಂ ಮಾಸಂ ಪುತ್ರಾರ್ಥಿನೀ ಪಿಬೇತ್ |
ಸರ್ವಲಕ್ಷಣಸಂಪನ್ನಂ ವಂಧ್ಯಾಽಪಿ ಲಭತೇ ಸುತಂ || ೨೬೮ ||

ಛಿತ್ವಾ ಕೃತ್ಯಾಂ ಕಾಶಿರಾಜಪ್ರೋಷಿತಾಂ ಚ ನಿಜಾರಿಣಾ |
ತೇಜಸಾ ತಸ್ಯ ನಗರಂ ದಹಂತಂ ಭಾವಯನ್ ಹರಿಂ || ೨೬೯ ||

ಹುನೇತ್ಸಪ್ತದಿನಂ ಮಂತ್ರೀ ಸಸ್ನೇಹಾಕ್ತೈಶ್ಚ ಸರ್ಷಪೈಃ |
ಕೃತ್ಯಾಕರ್ತಾರಮೇವಾಸ್ಯ ಕುಪಿತಾ ನಾಶಯೇದ್ಧ್ರುವಂ || ೨೭೦ ||

---

ಹನ್ನೆರಡು ದಿನಗಳು ಅಭಿಷೇಕ ಮಾಡಬೇಕು. ಹೀಗೆ ಮಾಡಿದರೆ ಗೊಡ್ಡಿಯೂ ಸಹ ದೀರ್ಘಾಯುಷ್ಮಂತರಾದ ಮಕ್ಕಳುಗಳನ್ನು ಪಡೆಯುವಳು.

೨೬೭-೨೬೮. ಮಕ್ಕಳಾಗಬೇಕೆಂದು ಬಯಸುವ ನಾರೀಮಣಿಯು ಪ್ರಾತಃಕಾಲದಲ್ಲಿ ಮೌನದಿಂದ ಅರಳೀ ಎಲೆಯ ದೊನ್ನೆಯಲ್ಲಿ ನೀರನ್ನು ಹಾಕಿ, ಅದನ್ನು ನೂರೆಂಟುಸಾರಿ ಮಂತ್ರಜಪಪೂರ್ವಕವಾಗಿ ಅಭಿಮಂತ್ರಿಸಿ ಒಂದು ತಿಂಗಳು ಕುಡಿಯಬೇಕು. ಹಾಗೆ ಕುಡಿದರೆ ಗೊಡ್ಡಿಯಾದರೂ ಸಹ ಸಮಸ್ತ ಲಕ್ಷಣಸಂಪನ್ನರಾದ ಮಕ್ಕಳನ್ನು ಪಡೆಯುವಳು.

೨೬೯-೨೭೦. ಕಾಶಿರಾಜನಿಂದ ಕಳುಹಿಸಲ್ಪಟ್ಟ ಮಾಟದ ಬೊಂಬೆಯನ್ನು ತನ್ನ ಚಕ್ರದಿಂದ ಕತ್ತರಿಸಿ ಅದರ ತೇಜಸ್ಸಿನಿಂದಲೇ ಕಾಶಿರಾಜನ ಪಟ್ಟಣವನ್ನು ಸುಡುತ್ತಿರುವ ಹರಿಯನ್ನು ಧ್ಯಾನಿಸುತ್ತಾ ಮಂತ್ರಿಯು ತೈಲದಲ್ಲಿ ನೆನೆಸಿದ ಸಾಸುವೆಗಳಿಂದ ಏಳು ದಿನಗಳು ಹೋಮಮಾಡಿದರೆ ಆ ಬೊಂಬೆಯು ಕೋಪಗೊಂಡು ಅದನ್ನು ಪ್ರಯೋಗಿಸಿದವನನ್ನೇ ನಾಶಪಡಿಸುತ್ತದೆ. ಖಂಡಿತ.

ಬದರೀದ್ರುಮಸಂಕೀರ್ಣೇ ಸ್ಥಿತಂ ದಿವ್ಯಾಶ್ರಮೇ ಶುಭೇ ।
ಸ್ಪೃಶಂತಂ ಕರಪದ್ಮಾಭ್ಯಾಂ ಘಂಟಾಕರ್ಣಕಲೇವರಂ || ೨೭೧ ||

ಧ್ಯಾತ್ವೈವಂ ಜುಹುಯಾಲ್ಲಕ್ಷಂ ತಿಲೈಸ್ತ್ರಿಮಧುರಾಪ್ಲುತೈಃ ।
ಮಹಾಪಾಪಯುತೋಽಪ್ಯೇವಂ ಪೂತೋ ಭವತಿ ತತ್ ಕ್ಷಣಾತ್ || ೨೭೨ ||

ದ್ಯೂತಾಸಕ್ತೌ ರುಕ್ಮಿಬಲೌ ದ್ವೇಷಯಂತಂ ಹರಿಂ ಸ್ಮರನ್ ।
ಜುಹುಯಾದಿಷ್ಟಯೋರ್ದ್ವಿಷ್ಟ್ಯೈ ಗುಲಿಕಾ ಗೋಮಯೋದ್ಭವಾಃ ||೨೭೩||

ನಿತ್ಯಂ ಸಹಸ್ರಂ ಸಪ್ತಾಹಾನ್ಮಿಥೋ ವಿದ್ವೇಷಯೇದರೀನ್ ।
ವರ್ಷಂತಂ ಗರುಡಾರೂಢಂ ಜ್ವಲದಗ್ನಿಮುಖೈಃ ಶರೈಃ || ೨೭೪ ||

---

೨೭೧-೨೭೨. ಎಳಚೀಮರಗಳಿಂದ ತುಂಬಿರುವ ಮಂಗಳಕರವಾದ, ದಿವ್ಯವಾದ ಬದರಿಕಾಶ್ರಮದಲ್ಲಿರುವ, ತನ್ನ ಹಸ್ತಕಮಲಗಳಿಂದ ಘಂಟಾಕರ್ಣರೆಂಬ ಭಕ್ತರ ಶರೀರವನ್ನು ಸ್ಪರ್ಶ ಮಾಡುತ್ತಿರುವ ಕೃಷ್ಣನನ್ನು ಧ್ಯಾನಿಸಿ, ಸಕ್ಕರೆಜೇನುತುಪ್ಪಗಳಲ್ಲಿ ನೆನೆಸಿದ ಎಳ್ಳುಗಳಿಂದ ಒಂದು ಲಕ್ಷ ಹೋಮ ಮಾಡಬೇಕು. ಹಾಗೆ ಮಾಡಿದರೆ ಕೂಡಲೇ ಮಹಾ ಪಾತಕಿಯೂ ಸಹ ಪರಿಶುದ್ಧನಾಗುವನು.

೨೭೩-೨೭೪. ಪಗಡೆಯ ಆಟದಲ್ಲಿ ಆಸಕ್ತರಾದ ರುಕ್ಮಿಬಲರಾಮರಿಗೆ ಪರಸ್ಪರ ದ್ವೇಷವನ್ನು ಹುಟ್ಟಿಸುವ ಕೃಷ್ಣನನ್ನು ಧ್ಯಾನಿಸುವವನಾಗಿ ಹಸುವಿನ ಸಗಣಿಯ ಗುಳಿಗೆಗಳನ್ನು ಮಿತ್ರರಿಗೆ ದ್ವೇಷ ಹುಟ್ಟಿಸುವಸಲುವಾಗಿ ಈ ಮಂತ್ರದಿಂದ ಒಂದು ಸಾವಿರ ಹೋಮ ಮಾಡಬೇಕು. ಹೀಗೆ ಪ್ರತಿದಿನವೂ ಮಾಡುತ್ತಾ ಏಳು ದಿನಗಳು ಆಚರಿಸಿದರೆ ಶತ್ರುಗಳಿಗೆ ಪರಸ್ಪರ ದ್ವೇಷವುಂಟಾಗುವುದು.

೨೭೪-೨೭೬. ಪ್ರಕಾಶಮಾನವಾದ ಅಗ್ನಿಯಂತೆ ಮುಖವುಳ್ಳ ಬಾಣಗಳಿಂದ ಹೊಡೆಯುತ್ತಿರುವ, ಗರುಡನ ಮೇಲೆ ಕುಳಿತಿರುವ, ಓಡಿಹೋಗು

ಧಾವಂತಂ ರಿಪುಸಂಘಾತಮನುಧಾವಂತಮಚ್ಯುತಂ ।
ಧ್ಯಾತ್ವಾ ಸಪ್ತಸಹಸ್ರಂ ತು ಜಪೇನ್ಮಂತ್ರಮನನ್ಯಧೀಃ ॥ ೨೭೫ ॥

ಉಚ್ಚಾಟನಂ ಭವತ್ಯೇವ ಶತ್ರೂಣಾಂ ಸಪ್ತಭಿರ್ದಿನೈಃ ।
ಧ್ಯಾಯನ್ನುತ್‌ಕ್ಷಿಪ್ತವತ್ಸಂ ತು ಕಪಿತ್ಥಫಲಹಾರಿಣಂ ॥ ೨೭೬ ॥

ಪ್ರಜಪೇದಯುತಂ ಶತ್ರುಮುಚ್ಚಾಟಯತಿ ಕ್ಷಣಾತ್ ।
ಆತ್ಮಾನಂ ಕಂಸಮಥನಂ ಧ್ಯಾಯನ್ಮಂಚಾನ್ನಿಪಾತಿತಂ ॥ ೨೭೭ ॥

ಕಂಸಾತ್ಮಾನಂ ವ್ಯಕರ್ಷಂತಂ ಗತಾಸುಂ ತಂ ಜಪೇನ್ಮನುಂ ।
ರಿಪುಜನ್ಮರ್ಕ್ಷವೃಕ್ಷೋತ್ಥಸಮಿದ್ಭಿರಯುತಂ ನಿಶಿ ॥ ೨೭೮ ॥

ಜುಹುಯಾದೇವಮುಗ್ರೋsಪಿ ಸಪತ್ನೋ ನಿಧನಂ ವ್ರಜೇತ್ ।
ಅಥವಾ ನಿಂಬತೈಲಾಕ್ತೈರ್ಹುನೇದೇಧೋಭಿರಕ್ಷಜೈಃ ॥ ೨೭೯ ॥

---

ತ್ತಿರುವ ಶತ್ರುಸಂಘವನ್ನು ಹಿಂಬಾಲಿಸಿ ಓಡುತ್ತಿರುವ ಕೃಷ್ಣನನ್ನು ಧ್ಯಾನಿಸಿ, ಏಕಾಗ್ರಮನಸ್ಸಿನಿಂದ ಏಳುಸಾವಿರ ಮಂತ್ರಜಪವನ್ನು ಏಳು ದಿನಗಳು ಮಾಡಿದರೆ ಶತ್ರುಗಳಿಗೆ ತನ್ನ ದೇಶದಿಂದ ಉಚ್ಚಾಟನೆಯಾಗುವುದು.

೨೭೬-೨೭೭. ವತ್ಸಕಾಸುರನನ್ನು ಮೇಲಕ್ಕೆಸೆದ, ಕಪಿತ್ಥಫಲಾಹಾರಿಯಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಹತ್ತುಸಾವಿರಮಂತ್ರಜಪಮಾಡಿದರೆ ಕೂಡಲೇ ಶತ್ರೂಚ್ಚಾಟನೆಯಾಗುವುದು.

೨೭೭-೨೭೯ ಕಂಸ ಸಂಹಾರಕನಾದ ಕೃಷ್ಣಪರಮಾತ್ಮನನ್ನು ಧ್ಯಾನಿಸುತ್ತಾ, ಮಂಚದಿಂದ ಕೆಳಗೆ ಕೆಡಹಲ್ಪಟ್ಟ ಕಂಸನೆಂಬ ಶತ್ರುವಿಗೆ ಪ್ರಾಣ ಹೋದಂತೆ ಭಾವಿಸಿ, ಹತ್ತುಸಾವಿರಮಂತ್ರಜಪಮಾಡಿ ಶತ್ರುವಿನ ಜನ್ಮನಕ್ಷತ್ರ ವೃಕ್ಷದ ಸಮಿತ್ತುಗಳಿಂದ ರಾತ್ರಿಯ ಕಾಲದಲ್ಲಿ ಹತ್ತುಸಾವಿರ ಹೋಮ ಮಾಡಿದರೆ ಭಯಂಕರಶತ್ರುವೂ ಸಹ ನಾಶವಾಗುವನು.

೨೭೯-೨೮೦. ಅಥವಾ ಬೇವಿನ ಎಣ್ಣೆಯಲ್ಲಿ ನೆನೆಸಿದ ತಾರೇಗಿಡದ

**ಅಯುತಂ ನಿಯತೋ ರಾತ್ರೌ ಮಾರಯೇದಚಿರಾದರೀನ್ ।**
**ನಿಶಾರಿಷ್ಟದಲವ್ಯೋಷಕಾರ್ಪಾಸಾಸ್ಥಿಕಣೈರ್ನಿಶಿ ॥ ೨೮೦ ॥**

**ಹುನೇದೇರಂಡತೈಲಾಕ್ತೈಃ ಶ್ಮಶಾನೇ ರಿಪುಶಾಂತಯೇ ।**
**ನ ಶಸ್ತಂ ಮಾರಣಂ ಕರ್ಮ ಕುರ್ಯಾಚ್ಚೇದಯುತಂ ಜಪೇತ್ ॥ ೨೮೧ ॥**

**ಪಾಯಸೈರ್ವಾ ಹುನೇತ್ತ್ವಾವಚ್ಛಾಂತಯೇ ಶಾಂತಮಾನಸಃ ।**
**ಪಾರಿಜಾತಹರಂ ಕೃಷ್ಣಂ ಧ್ಯಾಯನ್ ಲಕ್ಷಂ ಜಪೇನ್ಮನುಂ ॥ ೨೮೨ ॥**

**ಸರ್ವತ್ರೈವ ಜಯಸ್ತಸ್ಯ ನ ಕದಾಚಿತ್ಪರಾಜಯಃ ।**
**ವ್ಯಾಖ್ಯಾಮುದ್ರಾಕರಂ ಕೃಷ್ಣಂ ರಥಸ್ಥಂ ಭಾವಯನ್ ಜಪೇತ್ ॥ ೨೮೩ ॥**

---

ಸಮಿತ್ತುಗಳಿಂದ ನಿಯಮ ಯುಕ್ತನಾಗಿ ರಾತ್ರಿಯ ಕಾಲದಲ್ಲಿ ಹತ್ತುಸಾವಿರ ಹೋಮ ಮಾಡಿದರೆ ಭಯಂಕರ ಶತ್ರುವೂ ಸಹ ನಾಶವನ್ನು ಹೊಂದುವನು.

೨೮೦-೨೮೧. ಹರಳೆಣ್ಣೆಯಲ್ಲಿ ನೆನೆಸಿದ ಅರಸಿನ, ಬೇವಿನೆಲೆ, ತ್ರಿಕಟು (ಶುಂಠಿ ಹಿಪ್ಪಲಿ ಮೆಣಸು) ಮತ್ತು ಹತ್ತಿಯ ಬೀಜ ಇವುಗಳಿಂದ ರಾತ್ರಿಯ ಹೊತ್ತು ಸ್ಮಶಾನದಲ್ಲಿ ಶತ್ರುನಾಶಕ್ಕಾಗಿ ಹೋಮ ಮಾಡಬೇಕು.

೨೮೧-೨೮೨. ಸಾಯಬೇಕೆಂಬ ಉದ್ದೇಶದಿಂದ ಮಾಡುವ ಕರ್ಮವು ಪ್ರಶಸ್ತವಲ್ಲ. ಒಂದು ವೇಳೆ ರಾಗಾದಿಗಳಿಂದ ಮಾಡಿದರೆ ಅದರ ಶಾಂತಿಗಾಗಿ ನಿರ್ಮತ್ಸರಮನಸ್ಸಿನಿಂದ ಹತ್ತುಸಾವಿರ ಮಂತ್ರಜಪಮಾಡಬೇಕು. ಅಥವಾ ಮಂತ್ರದಿಂದ ಹತ್ತುಸಾವಿರ ಪಾಯಸಹೋಮವನ್ನು ಮಾಡಬೇಕು.

೨೮೨-೨೮೩. ಪಾರಿಜಾತವನ್ನಪಹರಿಸಿದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಒಂದು ಲಕ್ಷ ಮಂತ್ರಜಪಮಾಡುವವನಿಗೆ ಎಲ್ಲಾ ಸ್ಥಳಗಳಲ್ಲಿಯೂ, ಯಾವಾಗಲೂ ಜಯವೇ ಲಭಿಸುವುದು. ಅವನಿಗೆ ಎಲ್ಲಿಯೂ ಯಾವಾಗಲೂ ಪರಾಜಯವಾಗುವುದಿಲ್ಲ.

ಪಾರ್ಥೇ ದಿಶಂತಂ ಗೀತಾರ್ಥಂ ಧರ್ಮವೃದ್ಧ್ಯೈ ಸುಮಾನವಃ ।
ಪಾಲಾಶಪುಷ್ಪೈರ್ಮಧ್ವಕ್ತೈರ್ಲಕ್ಷಂ ವಿದ್ಯಾಪ್ತಯೇ ಹುನೇತ್ ॥ ೨೮೪ ॥

ರಾಷ್ಟ್ರಪೂಗ್ರಾಮವಸ್ತೂನಾಂ ಶರೀರಸ್ಯಾಪಿ ರಕ್ಷಣೇ ।
ವಿಶ್ವರೂಪಧರಂ ಪ್ರೋದ್ಯದ್ಭಾನುಕೋಟಿಸಮಪ್ರಭಂ ॥ ೨೮೫ ॥

ಅಗ್ನೀಷೋಮಾತ್ಮಕಂ ಕೃಷ್ಣಂ ದ್ರುತಚಾಮೀಕರಪ್ರಭಂ ।
ಅರ್ಕಾಗ್ನಿದ್ಯೋತಿತಾಸ್ಯಾಂಘ್ರಿಪಂಕಜಂ ದಿವ್ಯಭೂಷಣಂ ॥ ೨೮೬ ॥

ನಾನಾಯುಧಧರಂ ವ್ಯಾಪ್ತವಿಶ್ವಾಕಾಶಾವಕಾಶಕಂ ।
ಧ್ಯಾತ್ವಾ ಲಕ್ಷಂ ಜಪೇನ್ಮಂತ್ರಂ ರಕ್ಷಣಾಯ ಸಮಾಹಿತಃ ॥ ೨೮೭ ॥

---

೨೮೩-೨೮೪. ರಥದಲ್ಲಿ ಕುಳಿತು ಅರ್ಜುನನಿಗೆ ಗೀತೋಪದೇಶವನ್ನು ಮಾಡುತ್ತಿರುವ, ಕೈಯಲ್ಲಿ ವ್ಯಾಖ್ಯಾನಮುದ್ರೆಯನ್ನು ಧರಿಸಿರುವ ಕೃಷ್ಣನನ್ನು ಧ್ಯಾನಿಸುತ್ತಾ ಸಜ್ಜನರು ಧರ್ಮ ಬುದ್ಧಿಯನ್ನು ಪಡೆಯುವುದಕ್ಕಾಗಿ ಈ ಮಂತ್ರ ಜಪಮಾಡಬೇಕು. ವಿದ್ಯೆಯನ್ನು ಸಂಪಾದಿಸುವುದಕ್ಕಾಗಿ ಆಜ್ಯಾದಿಮಧು ಪದಾರ್ಥಗಳಲ್ಲಿ ನೆನೆಸಿದ ಮುತ್ತುಗದ ಹೂವುಗಳಿಂದ ಒಂದು ಲಕ್ಷ ಹೋಮ ಮಾಡಬೇಕು.

೨೮೫-೨೮೭. ವಿಶ್ವರೂಪವನ್ನು ತಾಳಿದ, ಉದಯಿಸುತ್ತಿರುವ ಕೋಟಿ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಅಗ್ನಿಸೋಮಾಂತರ್ಗತನಾದ, ಕರಗಿಸಿದ ಬಂಗಾರದಂತೆ ಹೊಳೆಯುತ್ತಿರುವ, ಸೂರ್ಯಾಗ್ನಿಗಳಿಂದ ಪ್ರಕಾಶಿಸಲ್ಪಟ್ಟ ಮುಖ ಮತ್ತು ಪಾದ ಕಮಲಗಳುಳ್ಳ, ಮನೋಹರವಾದ ಆಭರಣಗಳನ್ನೂ ಮತ್ತು ನಾನಾವಿಧವಾದ ಆಯುಧಗಳನ್ನೂ ಧರಿಸಿರುವ, ವ್ಯಾಪಕವಾದ ಜಗದಾಕಾಶದೊಳಗೆ ವ್ಯಾಪಿಸಿರುವ ಕೃಷ್ಣನನ್ನು ಧ್ಯಾನಿಸಿ, ದೇಶ, ಪಟ್ಟಣ, ಹಳ್ಳಿ, ಸುವರ್ಣ ಮುಂತಾದ ವಸ್ತು ಮತ್ತು ಶರೀರ ಇವುಗಳ ರಕ್ಷಣೆಗಾಗಿ ಸಮಾಧಾನ ಚಿತ್ತದಿಂದ ಒಂದು ಲಕ್ಷ ಜಪಮಾಡಬೇಕು.

**ರಕ್ತೈರ್ವನ್ಯಪ್ರಸೂನೈರ್ಯೋ ದಿನಾದೌ ಪೂಜಯೇದ್ಧರಿಂ ।**
**ದಿನಮಧ್ಯೋಕ್ತವಿಧಿನಾ ಜಪೇದಷ್ಟೋತ್ತರಂ ಮನುಂ　　॥ ೨೮೮ ॥**

**ಸಹಸ್ರಂ ಮಂಡಲಾನ್ಮಂತ್ರೀ ವಶಯೇನ್ಮುಖರಾನ್ದ್ವಿಜಾನ್ ।**
**ಜಾತಿಪುಷ್ಪೈಃ ಕ್ಷತ್ರಿಯಾಂಶ್ಚ ಗೋಪವೇಷಧರಂ ಸ್ಮರನ್　　॥ ೨೮೯ ॥**

**ಧ್ಯಾಯನ್ ಕ್ರೀಡಾರತಂ ಕೃಷ್ಣಂ ರಕ್ತೈರಶ್ವಾರಿಪುಷ್ಪಕೈಃ ।**
**ವಶಯೇದ್ವೈಶ್ಯಜಾತೀಯಾನ್ ಶೂದ್ರಾನ್ನೀಲೋತ್ಪಲೈಃ ಸ್ಮರನ್ ॥ ೨೯೦ ॥**

---

೨೮೮-೨೮೯. ಅಡವಿಯಲ್ಲಿ ಬೆಳೆದ ಕೆಂಪುಹೂವುಗಳಿಂದ ಪ್ರತಿದಿನವೂ ಪ್ರಾತಃಕಾಲದಲ್ಲಿ ಮಧ್ಯಾಹ್ನ ಪೂಜೆಯ ವಿಧಾನದಿಂದ ಹರಿಯನ್ನು ಪೂಜಿಸಿ, ಒಂದು ಸಾವಿರದೆಂಟುಮಂತ್ರಜಪವನ್ನು ಪ್ರತಿದಿನವೂ ಮಾಡುತ್ತಾ ನಲವತ್ತು ದಿನಗಳು ಆಚರಿಸುವ ಮಂತ್ರಿಯು, ಪ್ರಧಾನರಾದ ಬ್ರಾಹ್ಮಣರುಗಳನ್ನು ವಶಪಡಿಸಿಕೊಳ್ಳುವನು.

೨೮೯. ಗೋಪಾಲಕ ವೇಷವನ್ನು ಧರಿಸಿದ ಕೃಷ್ಣನನ್ನು ಧ್ಯಾನಿಸುತ್ತಾ ಜಾಜೀ ಹೂವುಗಳಿಂದ ಹಿಂದೆ ಹೇಳಿದ ಪ್ರಕಾರ ಪೂಜೆ ಮಾಡಿ ದಶಾಕ್ಷರ ಮಂತ್ರವನ್ನು ಸಾವಿರದೆಂಟು ಸಾರಿ ಜಪ ಮಾಡುವವನು ಕ್ಷತ್ರಿಯರನ್ನು ಸ್ವಾಧೀನಪಡಿಸಿಕೊಳ್ಳುವನು.

೨೯೦. ಕ್ರೀಡಾಸಕ್ತನಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಕೆಂಪು ಕರವೀರ ಪುಷ್ಪಗಳಿಂದ ಪೂರ್ವೋಕ್ತವಿಧಾನಾನುಸಾರ ಪೂಜಿಸಿ ಸಾವಿರದೆಂಟು ಜಪಮಾಡಿದರೆ ವೈಶ್ಯರನ್ನೂ, ಗಾನ ನರ್ತನಗಳಲ್ಲಿ ಆಸಕ್ತನಾದ ಕೃಷ್ಣನನ್ನು ಧ್ಯಾನಿಸುವವನಾಗಿ ಕನ್ನೈದಿಲೆ ಹೂವುಗಳಿಂದ ಪೂಜಿಸಿ ಸಾವಿರದೆಂಟು ಮಂತ್ರಜಪಮಾಡಿದರೆ ಶೂದ್ರರನ್ನೂ ವಶಪಡಿಸಿಕೊಳ್ಳಬಹುದು.

ಗೀತನೃತ್ಯರತಂ ಶ್ವೇತಪುಷ್ಪೈಃ ಸಾಜ್ಯೈಶ್ಚ ತಂಡುಲೈಃ ।
ಹುತ್ವಾಽನ್ವಹಂ ಸಪ್ತದಿನಂ ಭಸ್ಮ ಭಾಲೇ ಚ ಮೂರ್ಧನಿ ॥ ೨೯೧ ॥

ಧಾರಯನ್ವಶಯೇತ್ಕಾಂತಾಂ ಸಾಪಿ ತದ್ವತ್ಪತಿಂ ಧ್ರುವಂ ।
ತಾಂಬೂಲಂ ಕುಸುಮಂ ವಾಸೋಂಜನಂ ಚಂದನಮೇವ ಚ ॥ ೨೯೨ ॥

ಸಹಸ್ರಂ ಮನುನಾ ಜಪ್ತಂ ದದ್ಯಾದ್ಯಸ್ಮೈ ನರಾಯ ಚ ।
ಸೋಽಚಿರಾದೇವ ವಶಗಃ ಸಪುತ್ರಪಶುಬಾಂಧವಃ ॥ ೨೯೩ ॥

ವೃಂದಾರಣ್ಯಸ್ಥಿತಂ ಧ್ಯಾಯನ್ಬಲ್ಲವೀಸಂಯುತಂ ಹರಿಂ ।
ಅಪಾಮಾರ್ಗಸಮಿದ್ಭಿಸ್ತು ಹುತ್ವಾ ತು ವಶಯೇಜ್ಜಗತ್ ॥ ೨೯೪ ॥

ಸಂಪ್ರಾಪ್ಯ ಸದ್ಗುರೋರ್ದೀಕ್ಷಾಂ ಕೃಷ್ಣಂ ಯೋ ವಿಧಿನಾಽಮುನಾ ।
ಅರ್ಚಯೇದ್ವೈಷ್ಣವಶ್ರೇಷ್ಠಃ ಸೋಷ್ಟಸಿದ್ಧೀಶ್ವರೋ ಭವೇತ್ ॥ ೨೯೫ ॥

---

೨೯೧-೨೯೨. ತುಪ್ಪ ಅಕ್ಕಿಗಳಿಂದ ಸಹಿತವಾದ ಶ್ವೇತಪುಷ್ಪಗಳಿಂದ ಪ್ರತಿದಿನವೂ ಒಂದುಸಾವಿರ ಹೋಮ ಮಾಡುತ್ತಾ ಏಳು ದಿನಗಳು ಆಚರಿಸಿ ಅದರ ಭಸ್ಮವನ್ನು ಹಣೆ ಮತ್ತು ಶಿರಸ್ಸಿನಲ್ಲಿ ಧರಿಸುವವನು ಹೆಂಡತಿಯನ್ನೂ, ಈ ರೀತಿ ಆಚರಿಸುವ ಹೆಂಡತಿಯು ಗಂಡನನ್ನೂ ವಶಪಡಿಸಿಕೊಳ್ಳುವರು.

೨೯೨-೨೯೩. ತಾಂಬೂಲ, ಹೂವು, ವಸ್ತ್ರ, ಅಂಜನ (ಕಾಡಿಗೆ) ಮತ್ತು ಗಂಧ, ಇವುಗಳನ್ನು ದಶಾಕ್ಷರಮಂತ್ರದಿಂದ ಸಾವಿರಸಾರಿ ಅಭಿಮಂತ್ರಿಸಿ ಅದನ್ನು ಮಂತ್ರಿಯು ಯಾರಿಗೆ ಕೊಡುವನೋ ಅವನು ಕೂಡಲೇ ಪುತ್ರ, ಪಶು ಬಂಧುಗಳ ಸಹಿತನಾಗಿ ಮಂತ್ರಿಗೆ ವಶನಾಗುವನು.

೨೯೪. ವೃಂದಾರಣ್ಯದಲ್ಲಿ ಗೋಪಸ್ತ್ರೀಯರಿಂದ ಯುಕ್ತನಾಗಿ ಕ್ರೀಡಿಸುತ್ತಿದ್ದ ಕೃಷ್ಣನನ್ನು ಧ್ಯಾನಿಸುತ್ತಾ ಉತ್ತರಣೆಯ ಸಮಿತ್ತುಗಳಿಂದ ಹೋಮ ಮಾಡುವವನು ಲೋಕವನ್ನೇ ಸ್ವಾಧೀನಪಡಿಸಿಕೊಳ್ಳುವನು.

೨೯೫. ಸದ್ಗುರುವಿನಿಂದ ದೀಕ್ಷೆಯನ್ನು ಹೊಂದಿ ಈ ವಿಧಾನದಿಂದ ಕೃಷ್ಣನನ್ನು ಪೂಜಿಸುವ ವೈಷ್ಣವಶ್ರೇಷ್ಠನು ಅಷ್ಟಸಿದ್ಧೀಶ್ವರನಾಗುವನು.

ತಸ್ಯ ದರ್ಶನಮಾತ್ರೇಣ ವಾದಿನೋ ನಿಷ್ಪ್ರಭಾಃ ಸ್ಮೃತಾಃ ।
ವಸೇತ್ಸರಸ್ವತೀ ವಕ್ತ್ರೇ ಗೃಹೇ ಚಾಪಿ ಸಭಾಸದಃ ॥ ೨೯೬ ॥

ಭುಕ್ತ್ವಾ ನಾನಾವಿಧಾನ್ಭೋಗಾನಂತೇ ವಿಷ್ಣುಪದಂ ವ್ರಜೇತ್ ॥ ೨೯೭ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ತೃತೀಯಪಾದೇ
ಕೃಷ್ಣಮಂತ್ರನಿರೂಪಣಂ ನಾಮಾಶೀತಿತಮೋಽಧ್ಯಾಯಃ

---

೨೯೬-೨೯೭. ಅಂತಹ ಕೃಷ್ಣಪೂಜಕನ ದರ್ಶನಮಾತ್ರದಿಂದ ವಾದಿಗಳು ವಿಷಯ ತೋರದೇ ಪ್ರತ್ಯುತ್ತರಹೇಳಲು ಅಸಮರ್ಥರಾಗಿ ಪರಾಜಿತರಾಗುವರು. ಅವನ ಬಾಯಿಯಲ್ಲಿಯೇ ಸರಸ್ವತಿಯೂ, ಮನೆಯಲ್ಲಿ ಸಭಾಸದರೂ ವಾಸ ಮಾಡುವರು. ಅಂತಹವನು ಈ ಲೋಕದಲ್ಲಿ ನಾನಾವಿಧವಾದ ಭೋಗಗಳನ್ನನುಭವಿಸಿ ಕೊನೆಗೆ ವಿಷ್ಣುಸ್ಥಾನವಾದ ವೈಕುಂಠಕ್ಕೆ ಹೋಗುವನು. ಎಂದರೆ ಮುಕ್ತನಾಗುವನೆಂದು ತಾತ್ಪರ್ಯ.

ಇಂತು ಶ್ರೀ ನಾರದೀಯಪುರಾಣದೊಳು ಪೂರ್ವಭಾಗದ ತೃತೀಯ
ಪಾದದಲ್ಲಿ ಕೃಷ್ಣಮಂತ್ರನಿರೂಪಣವೆಂಬ ಎಂಬತ್ತನೆಯ
ಅಧ್ಯಾಯವು ಮುಗಿದುದು.

## ವಿಷಯ ಸಂಗ್ರಹ

ಅಷ್ಟಾದಶಾಕ್ಷರ ಮತ್ತು ದಶಾಕ್ಷರ ಕೃಷ್ಣಮಂತ್ರಗಳು ಅದರ ಅಂಗವಾದ ಮೂರ್ತಿಪಂಜರನ್ಯಾಸ, ವಿಭೂತಿಪಂಜರನ್ಯಾಸ, ಅಂಗನ್ಯಾಸ, ವರ್ಣನ್ಯಾಸ, ಪೂಜೆ ಹೋಮ ನಾನಾವಿಧ ವಶೀಕರಣಾದಿ ಪ್ರಯೋಗ ಮುಂತಾದುವೆಲ್ಲವೂ ಸಪರಿಕರವಾಗಿ ನಿರೂಪಿಸಲ್ಪಟ್ಟಿವೆ. ಕಿರೀಟಮಂತ್ರ, ಸುದರ್ಶನಮಂತ್ರಗಳೂ ಸಹ ಉಕ್ತವಾಗಿವೆ.

---

# ಏಕಾಶೀತಿತಮೋಽಧ್ಯಾಯಃ

---

### ಶ್ರೀಸನತ್ಕುಮಾರ ಉವಾಚ

ಅಥ ಕೃಷ್ಣಸ್ಯ ಮಂತ್ರಾಣಾಂ ವಕ್ಷ್ಯೇ ಭೇದಾನ್ ಮುನೀಶ್ವರ ।
ಯಾನ್ಸಮಾರಾಧ್ಯ ಮನುಜಾಃ ಸಾಧಯಂತೀಷ್ಟಮಾತ್ಮನಃ ॥ ೧ ॥

ಶಕ್ತಿಶ್ರೀಮಾರಪೂರ್ವಶ್ಚ ಶ್ರೀಶಕ್ತಿಸ್ಮರಪೂರ್ವಕಃ ।
ಮಾರಶಕ್ತಿರಮಾಪೂರ್ವೋ ದಶಾರ್ಣಾ ಮನವಸ್ತ್ರಯಃ ॥ ೨ ॥

ಮುನಿಃ ಸ್ಯಾನ್ನಾರದಃ ಛಂದೋ ಗಾಯತ್ರೀ ದೇವತಾ ಪುನಃ ।
ಕೃಷ್ಣೋ ಗೋವಿಂದನಾಮಾತ್ರ ಸರ್ವಕಾಮಪ್ರದೋ ನೃಣಾಂ ॥ ೩ ॥

---

### ಎಂಬತ್ತೊಂದನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :-ಮುನೀಶ್ವರನೇ! ಈಗ ಮನುಷ್ಯರು ಜಪಪೂಜಾದಿಗಳಿಂದ ತಮ್ಮ ಇಷ್ಟಾರ್ಥವನ್ನು ಸಾಧಿಸಿಕೊಳ್ಳಲನುಕೂಲವಾದ ನಾನಾವಿಧ ಕೃಷ್ಣಮಂತ್ರಗಳನ್ನು ಹೇಳುವೆನು.

೨. (ಶಕ್ತಿ= ಹ್ರೀಂ, ಶ್ರೀ= ಶ್ರೀಂ, ಮಾರ= ಕ್ಲೀಂ) "ಗೋಪೀಜನವಲ್ಲಭಾಯ ಸ್ವಾಹಾ" ಎಂಬುದು ದಶಾಕ್ಷರ ಕೃಷ್ಣಮಂತ್ರವು. ಇದು "ಹ್ರೀಂ ಶ್ರೀಂ ಕ್ಲೀಂ ಗೋಪೀಜನವಲ್ಲಭಾಯ ಸ್ವಾಹಾ, ಶ್ರೀಂ ಹ್ರೀಂ ಕ್ಲೀಂ ಗೋಪೀಜನವಲ್ಲಭಾಯ ಸ್ವಾಹಾ, ಕ್ಲೀಂ ಹ್ರೀಂ ಶ್ರೀಂ ಗೋಪೀಜನವಲ್ಲಭಾಯ ಸ್ವಾಹಾ" ಎಂಬುದಾಗಿ ಶಕ್ತ್ಯಾದಿ ಬೀಜಾಕ್ಷರಗಳ ಸ್ಥಾನ ವ್ಯತ್ಯಾಸದಿಂದ ಮೂರುಮಂತ್ರಗಳಾಗುವುವು.

೩. ಈ ಮಂತ್ರಕ್ಕೆ ನಾರದನು ಋಷಿ, ಗಾಯತ್ರಿಯು ಛಂದಸ್ಸು, ಗೋವಿಂದನಾಮಕನಾದ ಕೃಷ್ಣನು ದೇವತೆಯು. ಇದು ಮನುಷ್ಯರಿಗೆ ಸಕಲೇಷ್ಟಾರ್ಥಗಳನ್ನೂ ಕೊಡುತ್ತದೆ.

**ಚಕ್ರೈಃ ಪೂರ್ವವದಂಗಾನಿ ತ್ರಯಾಣಾಮಪಿ ಕಲ್ಪಯೇತ್ |**
**ತತಃ ಕಿರೀಟಮನುನಾ ವ್ಯಾಪಕಂ ಹಿ ಸಮಾಚರೇತ್ || ೪ ||**

**ಸುದರ್ಶನಸ್ಯ ಮನುನಾ ಕುರ್ಯಾದ್ದಿಗ್ಬಂಧನಂ ತಥಾ |**
**ವಿಂಶತ್ಯರ್ಣೋಕ್ತವತ್ಕುರ್ಯಾದಾದ್ಯೇ ಧ್ಯಾನಾರ್ಚನಾದಿಕಂ || ೫ ||**

**ದ್ವಿತೀಯೇ ತು ದಶಾರ್ಣೋಕ್ತಂ ಧ್ಯಾನಪೂಜಾದಿಕಂ ಚರೇತ್ |**
**ತೃತೀಯೇ ತು ಹರಿಂ ಧ್ಯಾಯೇತ್ಸಮಾಹಿತಮನಾಃ ಸುಧೀಃ || ೬ ||**

**ಶಂಖಚಕ್ರಧನುರ್ಬಾಣ ಪಾಶಾಂಕುಶಧರಾರುಣಂ |**
**ದೋರ್ಭ್ಯಾಂ ಧೃತಂ ಧಮಂತಂ ಚ ವೇಣುಂ ಕೃಷ್ಣಂ ದಿವಾಕರೇ || ೭ ||**

---

೪. ಮೂರುಮಂತ್ರಗಳಿಗೂ ಹಿಂದೆ ಹೇಳಿರುವಂತೆ ಚಕ್ರಗಳಿಂದ ಅಂಗಗಳನ್ನು ನ್ಯಾಸಮಾಡಬೇಕು. ಬಳಿಕ ಕಿರೀಟಮಂತ್ರದಿಂದ ಸರ್ವಾಂಗನ್ಯಾಸ ಮಾಡಬೇಕು.

೫. ಅಂತೆಯೇ ಸುದರ್ಶನಮಂತ್ರದಿಂದ ದಿಗ್ಬಂಧನೆ ಮಾಡಬೇಕು. ಮೊದಲನೆಯ ಮಂತ್ರಕ್ಕೆ ಅಂಗವಾದ ಧ್ಯಾನಪೂಜಾದಿಗಳನ್ನು ಇಪ್ಪತ್ತು ಅಕ್ಷರಗಳ ಮಂತ್ರಕ್ಕೆ ವಿಹಿತವಾಗಿರುವ ರೀತಿಯಲ್ಲಿ ಮಾಡಬೇಕು.

೬. ಎರಡನೆಯ ಮಂತ್ರಕ್ಕೆ ದಶಾಕ್ಷರಮಂತ್ರಕ್ಕೆ ವಿಹಿತವಾದ ರೀತಿಯಿಂದ ಧ್ಯಾನಪೂಜಾದಿಗಳನ್ನಾಚರಿಸಬೇಕು. ಮೂರನೆಯಮಂತ್ರವನ್ನು ಜಪಿಸುವಾಗ ಸಮಾಧಾನಚಿತ್ತದಿಂದ ಜ್ಞಾನಿಯು ಹೀಗೆ ಧ್ಯಾನಿಸಬೇಕು.

೭. ಧ್ಯಾನ:-ಶಂಖ, ಚಕ್ರ, ದನುಸ್ಸು, ಬಾಣ, ಪಾಶ, ಅಂಕುಶಗಳನ್ನು ಧರಿಸಿರುವ, ಕೆಂಪಗಿರುವ, ಕೊಳಲನ್ನು ಕೈಗಳಿಂದ ಹಿಡಿದುಕೊಂಡು ಊದುತ್ತಿರುವ ಕೃಷ್ಣನನ್ನು ಸೂರ್ಯಮಂಡಲದಲ್ಲಿ ಧ್ಯಾನಿಸಬೇಕು.

**ಏವಂ ಧ್ಯಾತ್ವಾ ಜಪೇನ್ಮಂತ್ರಾನ್ಪಂಚಲಕ್ಷಂ ಪೃಥಕ್ ಸುಧೀಃ |**
**ಜುಹುಯಾತ್ತದ್ದಶಾಂಶೇನ ಪಾಯಸೇನ ಸಸರ್ಪಿಷಾ ॥ ೮ ॥**

**ಏವಂ ಸಿದ್ಧೇ ಮನೌ ಮಂತ್ರೀ ಕುರ್ಯಾತ್ಕಾಮ್ಯಾನಿ ಪೂರ್ವವತ್ |**
**ಶ್ರೀಶಕ್ತಿಃ ಕಾಮಃ ಕೃಷ್ಣಾಯ ಗೋವಿಂದಾಯಾಗ್ನಿಸುಂದರೀ ॥ ೯ ॥**

**ರವ್ಯರ್ಣೋ ಬ್ರಹ್ಮಗಾಯತ್ರೀಕೃಷ್ಣಾ ಋಷ್ಯಾದಯೋಽಸ್ಯ ತು |**
**ಬೀಜೈರ್ರಾಮಾಬ್ಧಿಯುಗ್ಮಾರ್ಣೈಃ ಷಡಂಗಾನಿ ಪ್ರಕಲ್ಪಯೇತ್ ॥ ೧೦ ॥**

**ವಿಂಶತ್ಯರ್ಣೋದಿತಜಪಧ್ಯಾನಹೋಮಾರ್ಚನಾದಿಕಂ |**
**ಕಿಂ ಬಹೂಕ್ತೇನ ಮಂತ್ರೋಽಯಂ ಸರ್ವಾಭೀಷ್ಟಫಲಪ್ರದಃ ॥ ೧೧ ॥**

---

೮. ಈ ರೀತಿಯಾಗಿ ಧ್ಯಾನಿಸಿ ಈ ಮಂತ್ರಗಳಲ್ಲಿ ಒಂದೊಂದನ್ನೂ ಐದು ಲಕ್ಷಗಳಂತೆ ಜಪಿಸಬೇಕು. ಆದರ ಹತ್ತನೆಯ ಒಂದುಭಾಗದಷ್ಟು ಘೃತ ಸಹಿತ ಪಾಯಸದಿಂದ ಹೋಮಮಾಡಬೇಕು.

೯. ಈರೀತಿ ಆಚರಿಸಿ ಸಿದ್ಧಿಯನ್ನು ಪಡೆದ ಮಂತ್ರಿಯು ಹಿಂದೆ ಹೇಳಿರುವಂತೆ ಕಾಮ್ಯಪ್ರಯೋಗಗಳನ್ನಾಚರಿಸಬೇಕು.

(ಶ್ರೀ= ಶ್ರೀಂ, ಶಕ್ತಿ= ಹ್ರೀಂ, ಕಾಮ= ಕ್ಲೀಂ, ಅಗ್ನಿಸುಂದರೀ= ಸ್ವಾಹಾ, ರವಿ= ಹನ್ನೆರಡು) "ಶ್ರೀಂ ಹ್ರೀಂ ಕ್ಲೀಂ ಕೃಷ್ಣಾಯ ಗೋವಿಂದಾಯ ಸ್ವಾಹಾ" ಎಂಬುದು ದ್ವಾದಶಾಕ್ಷರ ಕೃಷ್ಣಮಂತ್ರವು.

೧೦. ಇದಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು, ಕೃಷ್ಣನೇ ದೇವತೆಯು. ಮೂರುಬೀಜಾಕ್ಷರಗಳು, "ಕೃಷ್ಣಾಯ" ಎಂಬ ಪದ "ಗೋವಿಂದಾಯ" ಎಂಬ ನಾಲ್ಕಕ್ಷರಗಳ ಪದ ಮತ್ತು "ಸ್ವಾಹಾ" ಎಂಬ ಎರಡು ಅಕ್ಷರಗಳ ಪದ ಈ ಆರರಿಂದ ಷಡಂಗನ್ಯಾಸ ಮಾಡಬೇಕು.

೧೧. ಹಿಂದೆ ಹೇಳಿದ ಇಪ್ಪತ್ತು ಅಕ್ಷರಮಂತ್ರದ ಅಂಗವಾಗಿ ವಿಧಿಸಿರುವ ರೀತಿಯಿಂದ ಜಪ, ಧ್ಯಾನ, ಹೋಮ, ಪೂಜೆ ಮುಂತಾದುವುಗಳನ್ನು ಈ ಮಂತ್ರಕ್ಕೂ ಆಚರಿಸಬೇಕು. ಹೆಚ್ಚುಹೇಳಿದುದರಿಂದೇನು ? ಈ ಮಂತ್ರವು ಸಮಸ್ತಾಭಿಷ್ಟಗಳನ್ನೂ ಕೊಡುತ್ತದೆ.

ಶ್ರೀಶಕ್ತಿಸ್ಮರಪೂರ್ವೋಽಂಗಜನ್ಮಶಕ್ತಿರಮಾಂತಿಕಃ |
ದಶಾಕ್ಷರಃ ಸ ಏವಾದೌ ಪ್ರೋಕ್ತಃ ಶಕ್ತಿರಮಾಯುತಃ || ೧೨ ||

ಮಂತ್ರೌ ಷೋಡಶರವ್ಯರ್ಣೌ ಚಕ್ರೈರಂಗಾನಿ ಕಲ್ಪಯೇತ್ |
ವರದಾಭಯಹಸ್ತಾಭ್ಯಾಂ ಶ್ಲಿಷ್ಯಂತಂ ಸ್ವಾಂಕಗೇ ಪ್ರಿಯೇ || ೧೩ ||

ಪದ್ಮೋತ್ಪಲಕರೇ ತಾಭ್ಯಾಂ ಶ್ಲಿಷ್ಟಂ ಚಕ್ರದರೋಜ್ಜ್ವಲಂ |
ಧ್ಯಾತ್ವೈವಂ ಪ್ರಜಪೇಲ್ಲಕ್ಷದಶಕಂ ತದ್ದಶಾಂಶತಃ || ೧೪ ||

ಆಜ್ಯೈರ್ಹುತ್ವಾ ತತಃ ಸಿದ್ಧೌ ಭವೇತಾಂ ಮಂತ್ರನಾಯಕೌ |
ಸರ್ವಕಾಮಪ್ರದೌ ಸರ್ವಸಂಪತ್ಸೌಭಾಗ್ಯದೌ ನೃಣಾಂ || ೧೫ ||

---

೧೨-೧೩. (ಸ್ಮರ= ಕ್ಲೀಂ, ಅಂಗಜನ್ಮ= ಕ್ಲೀಂ, ರಮಾ= ಶ್ರೀಂ, ದಶಾಕ್ಷರ= ಗೋಪೀಜನವಲ್ಲಭಾಯ ಸ್ವಾಹಾ) "ಶ್ರೀಂ ಹ್ರೀಂ ಕ್ಲೀಂ ಗೋಪೀಜನವಲ್ಲಭಾಯ ಸ್ವಾಹಾ) ಕ್ಲೀಂ ಹ್ರೀಂ ಶ್ರೀಂ" ಎಂಬುದು ಹದಿನಾರು ಅಕ್ಷರಗಳ ಕೃಷ್ಣಮಂತ್ರವು. "ಹ್ರೀಂ ಶ್ರೀಂ ಗೋಪೀಜನವಲ್ಲಭಾಯ ಸ್ವಾಹಾ" ಎಂಬುದು ಹನ್ನೆರಡಕ್ಷರಗಳ ಕೃಷ್ಣಮಂತ್ರವು. ಇವೆರಡಕ್ಕೂ ಹಿಂದೆ ಹೇಳಿರುವಂತೆ ಚಕ್ರಗಳಿಂದ ಅಂಗಗಳನ್ನು ನ್ಯಾಸಮಾಡಬೇಕು.

೧೩-೧೪. ಧ್ಯಾನ:-ಪದ್ಮ ಮತ್ತು ನೀಲೋತ್ಪಲಗಳನ್ನು ಕರದಲ್ಲಿ ಪಿಡಿದಿರುವ, ತನ್ನ ತೊಡೆಯಮೇಲೆ ಕುಳಿತಿರುವ ರುಕ್ಮಿಣೀ ಸತ್ಯಭಾಮೆಯರನ್ನು ವರದಾಭಯಹಸ್ತಗಳಿಂದ ಆಲಂಗಿಸಿಕೊಂಡಿರುವ, ಆ ರುಕ್ಮಿಣೀ ಸತ್ಯಭಾಮೆಯರಿಂದ ಆಲಿಂಗನಮಾಡಿಸಿಕೊಳ್ಳಲ್ಪಟ್ಟಿರುವ, ಚಕ್ರಶಂಖಗಳಿಂದ ಪ್ರಕಾಶಮಾನನಾದ ಕೃಷ್ಣನನ್ನು ಧ್ಯಾನಿಸಬೇಕು.

೧೪-೧೫. ಈ ಮಂತ್ರಗಳನ್ನು ಹತ್ತುಲಕ್ಷಜಪಮಾಡಿ, ಒಂದುಲಕ್ಷ ಘೃತಹೋಮಮಾಡಿದರೆ ಮಂತ್ರದೇವತೆಗಳು ಸಂತುಷ್ಟರಾಗಿ ಸಕಲಸಂಪತ್ತು, ಸೌಭಾಗ್ಯ ಹೆಚ್ಚೇನು? ಇಷ್ಟಾರ್ಥಗಳೆಲ್ಲವನ್ನೂ ಆರಾಧಕಮನುಜರಿಗೆ ಕೊಡುವರು.

ಅಷ್ಟಾದಶಾರ್ಣಃ ಕಾಮಾಂತೋ ಮನುಃ ಸುತಧನಪ್ರದಃ ।
ನಾರದೋಽಸ್ಯ ಮುನಿಶ್ಛಂದೋ ಗಾಯತ್ರೀ ದೇವತಾ ಮನೋಃ ॥ ೧೬ ॥

ಕೃಷ್ಣಃ ಕಾಮೋ ಬೀಜಮುಕ್ತಂ ಶಕ್ತಿರ್ವಹ್ನಿಪ್ರಿಯಾ ಮತಾ ।
ಷಡ್ದೀರ್ಘಾಢ್ಯೇನ ಬೀಜೇನ ಷಡಂಗಾನಿ ಸಮಾಚರೇತ್ ॥ ೧೭ ॥

ಪಾಣೌ ಪಾಯಸಪಕ್ವಂ ಚ ದಕ್ಷೇ ಹೈಯಂಗವೀನಕಂ ।
ವಾಮೇ ದಧದ್ದಿವ್ಯದಿಗಂಬರೋ ಗೋಪೀಸುತೋಽವತು ॥ ೧೮ ॥

ಧ್ಯಾತ್ವೈವಂ ಪ್ರಜಪೇನ್ಮಂತ್ರಂ ದ್ವಾತ್ರಿಂಶಲ್ಲಕ್ಷಮಾನತಃ ।
ದಶಾಂಶಂ ಜುಹುಯಾದಗ್ನೌ ಸಿತಾಢ್ಯೇನ ಪಯೋಂಧಸಾ ॥ ೧೯ ॥

---

೧೬. ಕೊನೆಯಲ್ಲಿ ' ಕ್ಲೀಂ ' ಎಂಬ ಕಾಮಬೀಜವನ್ನು ಸೇರಿಸಿದ, ಹಿಂದೆ ಹೇಳಿರುವ ಹದಿನೆಂಟುಅಕ್ಷರಗಳ ಮಂತ್ರ ಎಂದರೆ " ಕ್ಲೀಂ ಕೃಷ್ಣಾಯ ಗೋವಿಂದಾಯ, ಗೋಪೀಜನವಲ್ಲಭಾಯ ಸ್ವಾಹಾ ಕ್ಲೀಂ " ಎಂಬ ಮಂತ್ರವು ಜಪಿಸುವವನಿಗೆ ಮಕ್ಕಳು ಮತ್ತು ಐಶ್ವರ್ಯವನ್ನು ಕೊಡುವುದು. ಈ ಮಂತ್ರಕ್ಕೆ ನಾರದನು ಋಷಿ, ಗಾಯತ್ರೀ ಛಂದಸ್ಸು, ಕೃಷ್ಣನೇ ದೇವತೆಯು.

೧೭. " ಕ್ಲೀಂ " ಎಂಬುದು ಬೀಜ, ' ಸ್ವಾಹಾ ' ಎಂಬುದು ಶಕ್ತಿಯು " ಕ್ಲಾಂ, ಕ್ಲೀಂ " ಇತ್ಯಾದಿಯಾಗಿ ಆರು ದೀರ್ಘಸ್ವರಯುಕ್ತವಾದ ಬೀಜಾಕ್ಷರ ಗಳಿಂದ ಷಡಂಗನ್ಯಾಸಮಾಡಬೇಕು.

೧೮. ಧ್ಯಾನ:-ಒಲಗೈಯಲ್ಲಿ ಪಕ್ವವಾಗಿ ರುಚಿಕರವಾದ ಪಾಯಸವನ್ನೂ ಎಡಗೈಯಲ್ಲಿ ಹಸುವಿನ ಮೊಸರಿನಿಂದ ಆಗಲೇ ತೆಗೆದ ಬೆಣ್ಣೆಕಾಯಿಸಿದ ತುಪ್ಪ ವನ್ನೂ ಧರಿಸಿರುವ, ಮನೋಹರಸ್ವರೂಪನು, ದಿಗಂಬರನೂ ಆಗಿರುವ ಗೋಪೀ ಕುಮಾರನು ನಮ್ಮನ್ನು ರಕ್ಷಿಸಲಿ ಎಂದು ಧ್ಯಾನಿಸಬೇಕು.

೧೯. ಈ ಮಂತ್ರವನ್ನು ಮೂವತ್ತೆರಡುಲಕ್ಷಜಪಿಸಿ, ಸಕ್ಕರೆ ಮತ್ತು ಕ್ಷೀರಾನ್ನಗಳಿಂದ ಜಪದ ಹತ್ತನೆಯ ಒಂದುಭಾಗದಷ್ಟು ಅಗ್ನಿಯಲ್ಲಿ ಹೋಮ ಮಾಡಬೇಕು.

ಪೂರ್ವೋಕ್ತೇ ವೈಷ್ಣವೇ ಪೀಠೇ ಯಜೇದಷ್ಟಾದಶಾರ್ಣವತ್ ।
ಪದ್ಮಸ್ಥಂ ಕೃಷ್ಣಮಭ್ಯರ್ಚ್ಯ ತರ್ಪಯೇತ್ತನ್ಮುಖಾಂಬುಜೇ ॥ ೨೦ ॥

ಕ್ಷೀರೇಣ ಕದಲೀಪಕ್ವೈರ್ದಧ್ನಾ ಹೈಯಂಗವೇನ ಚ ।
ಪುತ್ರಾರ್ಥೀ ತರ್ಪಯೇದೇವಂ ವತ್ಸರಾಲ್ಲಭತೇ ಸುತಂ ॥ ೨೧ ॥

ಯದ್ಯದಿಚ್ಛತಿ ತತ್ಸರ್ವಂ ತರ್ಪಣಾದೇವ ಸಿಧ್ಯತಿ ।
ವಾಕ್ಕಾಮೋ ಙೇಯುತಂ ಕೃಷ್ಣಪದಂ ಮಾಯಾ ತತಃ ಪರಂ ॥ ೨೨ ॥

ಗೋವಿಂದಾಯ ರಮಾ ಪಶ್ಚಾದ್ದಶಾರ್ಣಂ ಚ ಸಮುದ್ಧರೇತ್ ।
ಮನುಸ್ವರಯುತಃ ಸರ್ಗಯುಕ್ತೋಂತೇ ಭೃಗುರೀರಿತಃ ॥ ೨೩ ॥

ದ್ವಾವಿಂಶತ್ಯಕ್ಷರೋ ಮಂತ್ರೋ ವಾಗೀಶತ್ವಪ್ರದಾಯಕಃ ।
ಋಷಿಃ ಸ್ಯಾನ್ನಾರದಶ್ಛಂದೋ ಗಾಯತ್ರೀ ದೇವತಾ ಪುನಃ ॥ ೨೪ ॥

---

೨೦. ಅಷ್ಟಾದಶಾಕ್ಷರ ಮಂತ್ರಕ್ಕೆ ಹೇಳಿರುವಂತೆ ಪೂರ್ವೋಕ್ತವೈಷ್ಣವ ಪೀಠದಲ್ಲಿ ಪದ್ಮಸ್ಥನಾದ ಕೃಷ್ಣನನ್ನು ಪೂಜಿಸಿ ಅವನ ಮುಖಕಮಲದಲ್ಲಿ ತರ್ಪಣಮಾಡಬೇಕು.

೨೧. ಪುತ್ರರನ್ನು ಬಯಸುವವನು ಹಾಲು, ಪಕ್ವವಾದ ಬಾಳೇಹಣ್ಣು, ಮೊಸರು, ಗೋಘೃತ ಇವುಗಳಿಂದ ತರ್ಪಣಕೊಡಬೇಕು. ಹೀಗೆಮಾಡಿದರೆ ಒಂದುವರ್ಷದೊಳಗಾಗಿ ಮಗನನ್ನು ಪಡೆಯುವನು.

೨೨-೨೪. ಅವನಿಗೆ ಇಷ್ಟವಾದುದೆಲ್ಲವೂ ತರ್ಪಣದಿಂದಲೇ ಸಿದ್ಧಿಸುತ್ತದೆ.

(ವಾಕ್= ಐಂ, ಕಾಮ= ಕ್ಲೀಂ, ಮಾಯಾ= ಹ್ರೀಂ, ರಮಾ= ಶ್ರೀಂ, ಮನುಸ್ವರ= ಔ, ಸರ್ಗ= ಃ, ಭೃಗು= ಸ) "ಐಂ ಕ್ಲೀಂ ಕೃಷ್ಣಾಯ ಹ್ರೀಂ ಗೋವಿಂದಾಯ ಶ್ರೀಂ ಗೋಪೀಜನವಲ್ಲಭಾಯ ಸ್ವಾಹಾ ಸೌಃ" ಎಂಬುದು ಇಪ್ಪತ್ತೆರಡುಅಕ್ಷರಗಳಮಂತ್ರವು, ಇದು ವಾಕ್ಸಿದ್ಧಿಯನ್ನುಂಟುಮಾಡುತ್ತದೆ.

ವಿದ್ಯಾಪ್ರದಶ್ಚ ಗೋಪಾಲಃ ಕಾಮೋ ಬೀಜಂ ಪ್ರಕೀರ್ತಿತಂ ।
ಶಕ್ತಿಸ್ತು ವಾಗ್ಭವಂ ವಿದ್ಯಾಪ್ರಾಪ್ತ್ಯೇ ವಿನಿಯೋಜನಾ ॥ ೨೫ ॥

ವಾಮೋರ್ಧ್ವಹಸ್ತೇ ದಧತಂ ವಿದ್ಯಾಪುಸ್ತಕಮುತ್ತಮಂ ।
ಅಕ್ಷಮಾಲಾಂ ಚ ದಕ್ಷೋರ್ಧ್ವೇ ಸ್ಫಾಟಿಕೀಂ ಮಾತೃಕಾಮಯೀಂ ॥ ೨೬ ॥

ಶಬ್ದಬ್ರಹ್ಮಮಯಂ ವೇಣುಮಧಃ ಪಾಣಿದ್ವಯೇ ಪುನಃ ।
ಗಾಯಂತಂ ಪೀತವಸನಂ ಶ್ಯಾಮಲಂ ಕೋಮಲಛವಿಂ ॥ ೨೭ ॥

ಬರ್ಹಾವತಂಸಂ ಸರ್ವಜ್ಞಂ ಸೇವಿತಂ ಮುನಿಪುಂಗವೈಃ ।
ಧ್ಯಾತ್ವೈವಂ ಪ್ರಮದಾವೇಶವಿಲಾಸಂ ಭುವನೇಶ್ವರಂ ॥ ೨೮ ॥

ವೇದಲಕ್ಷಂ ಜಪೇನ್ಮಂತ್ರಂ ಕಿಂಶುಕೈಸ್ತದ್ದಶಾಂಶತಃ ।
ಹುತ್ವಾ ತು ಪೂಜಯೇನ್ಮಂತ್ರೀ ವಿಂಶತ್ಯರ್ಣವಿಧಾನತಃ ॥ ೨೯ ॥

---

೨೪-೨೫. ಇದಕ್ಕೆ ನಾರದನು ಋಷಿ, ಗಾಯತ್ರೀ ಛಂದಸ್ಸು, ವಿದ್ಯಾಪ್ರದನಾದ ಗೋಪಾಲನೇ ದೇವತೆ, "ಕ್ಲೀಂ" ಎಂಬುದು ಬೀಜ, "ಐಂ" ಎಂಬುದು ಶಕ್ತಿ, ಇದರ ಜಪಾದಿಗಳಿಗೆ ವಿದ್ಯಾಲಾಭವೇ ಪ್ರಯೋಜನವು.

೨೬-೨೮. ಧ್ಯಾನ:-ಮೇಲಿನ ಎಡಗೈಯಲ್ಲಿ ಉತ್ಕೃಷ್ಟವಾದ ವೇದಾಂತ ಪುಸ್ತಕವನ್ನೂ, ಮೇಲಿನ ಬಲಗೈಯಲ್ಲಿ ಐವತ್ತು ಮಾತೃಕಾಕ್ಷರಗಳಂತಿರುವ ಸ್ಫಟಿಕಮಣಿಗಳ ಅಕ್ಷಮಾಲೆಯನ್ನೂ ಧರಿಸಿರುವ, ಕೆಳಗಣ ಎರಡು ಕೈಗಳಿಂದಲೂ ಶಬ್ದಬ್ರಹ್ಮಮಯವಾದ ವೇಣುರಂಧ್ರವನ್ನು ಹಿಡಿದು ಬಾರಿಸುತ್ತಿರುವ, ಪೀತಾಂಬರಧಾರಿಯು, ನೀಲಮೇಘಶ್ಯಾಮನು, ಮನೋಹರಕಾಂತಿಯುಳ್ಳವನು, ನವಿಲುಗರಿಯಿಂದ ನಿರ್ಮಿತವಾದ ಶಿರೋಭೂಷಣವುಳ್ಳವನು, ಸರ್ವಜ್ಞನು, ಮುನಿವರ್ಯರಿಂದ ಸೇವಿಸಲ್ಪಡುತ್ತಿರುವವನು ಮತ್ತು ಸ್ತ್ರೀವೇಷಧಾರಿಯೂ ಆದ ಚತುರ್ದಶಲೋಕಾಧಿಪತಿ ಶ್ರೀಕೃಷ್ಣನನ್ನು ಧ್ಯಾನಿಸಬೇಕು.

೨೯. ಈ ಮಂತ್ರವನ್ನು ನಾಲ್ಕುಲಕ್ಷ ಜಪಮಾಡಬೇಕು. ಬಳಿಕ ಮುತ್ತುಗದಹೂವಿನಿಂದ ನಲವತ್ತುಸಾವಿರ ಹೋಮಮಾಡಿ, ವಿಶಂತ್ಯಕ್ಷರ

ಏವಂ ಯೋ ಭಜತೇ ಮಂತ್ರಂ ಭವೇದ್ವಾಗೀಶ್ವರಸ್ತು ಸಃ |
ಅದೃಷ್ಟಾನ್ಯಪಿ ಶಾಸ್ತ್ರಾಣಿ ತಸ್ಯ ಗಂಗಾತರಂಗವತ್ || ೩೦ ||

ತಾರಃ ಕೃಷ್ಣಯುಗಂ ಪಶ್ಚಾನ್ಮಹಾಕೃಷ್ಣ ಇತೀರಯೇತ್ |
ಸರ್ವಜ್ಞಸ್ತ್ವಂ ಪ್ರಶಬ್ದಾಂತೇ ಸೀದಮೇಽಗ್ನಿಶ್ಚ ಮಾರಮ || ೩೧ ||

ಣಾಂತೇ ವಿದ್ಯೇಶ ವಿದ್ಯಾಮಾಶು ಪ್ರಯಚ್ಛ ತತಶ್ಚ ಮೇ |
ತ್ರಯಸ್ತ್ರಿಂಶದಕ್ಷರೋಽಯಂ ಮಹಾವಿದ್ಯಾಪ್ರದೋ ಮನುಃ || ೩೨ ||

ನಾರದೋಽಸ್ಯ ಮುನಿಶ್ಛಂದೋಽನುಷ್ಟುಪ್ ಕೃಷ್ಣೋಽಸ್ಯ ದೇವತಾ |
ಪಾದೈಃ ಸರ್ವೇಣ ಪಂಚಾಂಗಂ ಕೃತ್ವಾ ಧ್ಯಾಯೇತ್ತತೋ ಹರಿಂ || ೩೩ ||

---

ಮಂತ್ರೋಕ್ತ ವಿಧಾನಾನುಸಾರವಾಗಿ ಮಂತ್ರಿಯು ಮಂತ್ರದೇವತೆಯನ್ನು ಪೂಜಿಸಬೇಕು.

೩೦. ಈರೀತಿಯಾಗಿ ಈ ಮಂತ್ರವನ್ನು ಜಪಾದಿಗಳಿಂದ ಆರಾಧಿಸುವವನು ವಾಗೀಶ್ವರನಾಗುವನು. ಅಂತಹವನ ಮುಖದಿಂದ ಓದದಿರುವ ಶಾಸ್ತ್ರಗಳೂ ಸಹ ಗಂಗಾನದಿಯ ಅಲೆಗಳಂತೆ ನಿರರ್ಗಳವಾಗಿ ಹೊರಡುವುವು.

೩೧-೩೨. 'ಓಂ ಕೃಷ್ಣಕೃಷ್ಣ ಮಹಾಕೃಷ್ಣ ಸರ್ವಜ್ಞ ತ್ವಂ ಪ್ರಸೀದ ಮೇ | ರಮಾರಮಣ ವಿದ್ಯೇಶ ವಿದ್ಯಾಮಾಶು ಪ್ರಯಚ್ಛ ಮೇ' ಇದು ಮೂವತ್ತು ಮೂರು ಅಕ್ಷರಗಳ ಕೃಷ್ಣಮಂತ್ರವು, ಮಹಾವಿದ್ಯೆಯನ್ನು ಕೊಡುತ್ತದೆ.

೩೩. ಈ ಮಂತ್ರಕ್ಕೆ ನಾರದನು ಋಷಿ, ಅನುಷ್ಟುಪ್ ಛಂದಸ್ಸು, ಕೃಷ್ಣನು ದೇವತೆ. ನಾಲ್ಕುಪಾದಗಳು ಮತ್ತು ಸಮಗ್ರಮಂತ್ರದಿಂದ ಪಂಚಾಂಗ ನ್ಯಾಸಮಾಡಿ ಹರಿಯನ್ನು ಹೀಗೆ ಧ್ಯಾನಿಸಬೇಕು.

ದಿವ್ಯೋದ್ಯಾನೇ ವಿವಸ್ವತ್ಪ್ರತಿಮಮಣಿಮಯೇ ಮಂಡಪೇ ಯೋಗಪೀಠೇ
ಮಧ್ಯೇ ಯಃ ಸರ್ವವೇದಾಂತಮಯಸುರತರೋಃ ಸಂನಿವಿಷ್ಟೋ-
ಮುಕುಂದಃ ।
ವೇದೈಃ ಕಲ್ಪದ್ರುರೂಪೈಃ ಶಿಖರಿಶತಸಮಾಲಂಬಿಕೋಶೈಶ್ಚತುರ್ಭಿಃ
ನ್ಯಾಯೈಸ್ತರ್ಕೈಃ ಪುರಾಣೈಃ ಸ್ಮೃತಿಭಿರಭಿವೃತಸ್ತಾದೃಶೈಶ್ಚಾಮರಾದ್ಯೈಃ ॥

ದದ್ಯಾದ್ದ್ವಿಭ್ರತ್ಕರಾಗ್ರೈರಪಿ ದರಮುರಲೀಪುಷ್ಪಬಾಣೇಕ್ಷುಚಾಪಾ
ನಕ್ಷಸ್ರಕ್ಪೂರ್ಣಕುಂಭೌ ಸ್ಮರಲಲಿತವಪುರ್ದಿವ್ಯಭೂಷಾಂಗರಾಗಃ ।
ವ್ಯಾಖ್ಯಾಂ ವಾಮೇ ವಿತನ್ವನ್ ಸ್ಫುಟರುಚಿರಪದೋ ವೇಣುನಾ ವಿಶ್ವಮಾತ್ರೇ
ಶಬ್ದಬ್ರಹ್ಮೋದ್ಭವೇನ ಶ್ರಿಯಮರುಣರುಚಿರ್ವಲ್ಲವೀವಲ್ಲಭೋ ನಃ ॥ ೩೫ ॥

---

೩೪-೩೫. ಮನೋಹರವಾದ ವಿಹಾರ ವನದಲ್ಲಿ ಸೂರ್ಯನಿಗೆ ಸಮಾನವಾದ ರತ್ನಗಳಿಂದ ರಚಿಸಿದ ಮಂಟಪದಲ್ಲಿ ಸಮಸ್ತ ವೇದಾಂತಗಳೆಂಬ ಕಲ್ಪವೃಕ್ಷದ ಅಡಿಯಲ್ಲಿ ಹಾಕಿದ್ದ ಯೋಗಪೀಠಮಧ್ಯದಲ್ಲಿ ಕುಳಿತಿರುವ, ನೂರಾರು ವೃಕ್ಷಗಳಲ್ಲಿ ಜೋಲುತ್ತಿರುವ ಮಗ್ಗುಗಳಂತೆ ನೂರಾರುಶಾಖೆಗಳನ್ನೊಳಗೊಂಡ ಕಲ್ಪವೃಕ್ಷದಂತಿರುವ ನಾಲ್ಕುವೇದಗಳು ನ್ಯಾಯ ತರ್ಕ ಪುರಾಣ ಮತ್ತು ಸ್ಮೃತಿ ಇವುಗಳಿಂದ ಹೊಗಳಿಸಿಕೊಳ್ಳಲ್ಪಡುತ್ತಿರುವ, ಅಂತಹ ದೇವತೆಗಳೇ ಮುಂತಾದವರಿಂದ ಪರಿವೃತನಾದ, ಕರಾಗ್ರಗಳಲ್ಲಿ ಶಂಖ, ವೇಣು, ಪದ್ಮ, ಬಾಣ, ಕಬ್ಬಿನ ಬಿಲ್ಲು, ಅಕ್ಷಮಾಲೆ, ಪೂರ್ಣಕುಂಭ ಇವುಗಳನ್ನು ಧರಿಸಿರುವ, ಮನ್ಮಥನಂತೆ ಮನೋಹರಶರೀರನಾದ, ಉತ್ತಮಾಲಂಕಾರಗಳಿಂದ ಅಂಗರಾಗವನ್ನು ಹೊಂದಿರುವ, ಎಡಪಾರ್ಶ್ವದಲ್ಲಿ ವ್ಯಾಖ್ಯಾನನೂಡುತ್ತಿರುವ, ಜಗತ್ತಿನಲ್ಲೆಲ್ಲಾ ಶಬ್ದಬ್ರಹ್ಮವ್ಯಂಜಕವಾದ ಕೊಳಲಿನಿಂದ ಸ್ಫುಟ ಮತ್ತು ಮನೋಹರವಾಗಿ ಹಾಡುತ್ತಿರುವ, ಅರುಣನಂತೆ ಕಾಂತಿಯುಳ್ಳ, ಗೋಪೀಜನಪ್ರಿಯನಾದ ಮುಕುಂದನು ನಮಗೆ ಸಂಪತ್ತನ್ನು ಕೊಡಲಿ.

ಏವಂ ಧ್ಯಾತ್ವಾ ಜಪೇಲ್ಲಕ್ಷಂ ದಶಾಂಶಂ ಪಾಯಸೈರ್ಹುನೇತ್ ।
ಅಷ್ಟಾದಶಾರ್ಣವತ್ಕುರ್ಯಾದ್ಯಜನಂ ಚಾಸ್ಯ ಮಂತ್ರವಿತ್ ॥ ೩೬ ॥

ತಾರೋ ನಮೋ ಭಗವತೇ ನಂದಪುತ್ರಾಯ ಸಂವದೇತ್ ।
ಆನಂದವಪುಷೇ ಪಶ್ಚಾದ್ದಶಾರ್ಣಂತ್ತದನಂತರಂ ॥ ೩೭ ॥

ಅಷ್ಟಾವಿಂಶತಿವರ್ಣೋಽಯಂ ಮಂತ್ರಃ ಸರ್ವೇಷ್ಟದಾಯಕಃ ।
ನಂದಪುತ್ರಪದಂ ಙೇಂತಂ ಶ್ಯಾಮಲಾಂಗಪದಂ ತಥಾ ॥ ೩೮ ॥

ತಥಾ ಬಾಲವಪುಃ ಕೃಷ್ಣಂ ಗೋವಿಂದಂ ಚ ತಥಾ ಪುನಃ ।
ದಶಾರ್ಣೋಽಂತೋ ಭವೇನ್ಮಂತ್ರೋ ದ್ವಾತ್ರಿಂಶದಕ್ಷರಾನ್ವಿತಃ ॥ ೩೯ ॥

ಅನಯೋರ್ನಾರದಋಷಿಶ್ಛಂದಸ್ತೂಷ್ಣಿಗನುಷ್ಟುಭೌ ।
ದೇವತಾ ನಂದಪುತ್ರಸ್ತು ವಿನಿಯೋಗೋಽಖಿಲಾಪ್ತಯೇ ॥ ೪೦ ॥

---

೩೬. ಹೀಗೆ ಧ್ಯಾನಿಸಿ, ಒಂದುಲಕ್ಷ ಮಂತ್ರ ಜಪಮಾಡಬೇಕು. ಬಳಿಕ ಪಾಯಸದಿಂದ ಹತ್ತುಸಾವಿರ ಹೋಮಮಾಡಬೇಕು. ಈ ಮಂತ್ರಾಂಗವಾದ ಪೂಜೆಯುನ್ನು ಅಷ್ಟಾದಶಾಕ್ಷರಮಂತ್ರದ ಪೂಜಾವಿಧಾನದಂತೆ ಮಂತ್ರಜ್ಞನು ನಡೆಯಿಸಬೇಕು.

೩೭-೩೮. ಇನ್ನೊಂದು ಮಂತ್ರವನ್ನು ಹೇಳುತ್ತಾರೆ-"ಓಂ ನಮೋ ಭಗವತೇ ನಂದಪುತ್ರಾಯ ಆನಂದವಪುಷೇ ಗೋಪೀಜನವಲ್ಲಭಾಯ ಸ್ವಾಹಾ" ಇದು ಸಕಲಾಭೀಷ್ಟಪ್ರದವಾದ ಇಪ್ಪತ್ತೆಂಟಕ್ಷರಗಳ ಕೃಷ್ಣಮಂತ್ರವು.

೩೮-೩೯. "ನಂದಪುತ್ರಾಯ ಶ್ಯಾಮಲಾಂಗಾಯ ಬಾಲವಪುಷೇ ಕೃಷ್ಣಾಯ ಗೋವಿಂದಾಯ ಗೋಪೀಜನವಲ್ಲಭಾಯ ಸ್ವಾಹಾ" ಇದು ಮೂವತ್ತೆರಡಕ್ಷರಗಳನ್ನೊಳಗೊಂಡ ಕೃಷ್ಣಮಂತ್ರವು.

೪೦. ಈ ಎರಡು ಮಂತ್ರಗಳಿಗೂ ನಾರದನು ಋಷಿ. ಕ್ರಮವಾಗಿ ಉಷ್ಣಿಕ್, ಅನುಷ್ಟುಪ್ ಛಂದಸ್ಸುಗಳು. ನಂದಪುತ್ರನೇ ದೇವತೆ. ಸಕಲೇಷ್ಟಾರ್ಥ ಲಾಭಕ್ಕಾಗಿ ಜಪಾದಿಗಳನ್ನು ನಡೆಯಿಸಬೇಕು.

ಚಕ್ರೈಃ ಪಂಚಾಂಗಮರ್ಚಾಸ್ಯಾದಂಗದಿಕ್ಪಾಲಹೇತಿಭಿಃ |
ದಕ್ಷಿಣೇ ರತ್ನಚಷಕಂ ವಾಮೇ ಸೌವರ್ಣವೇತ್ರಕಂ || ೪೧ ||

ಕರೇ ದಧಾನಂ ದೇವೀಭ್ಯಾಂ ಶ್ಲಿಷ್ಟಂ ಸಂಚಿಂತಯೇದ್ವಿಭುಂ |
ಲಕ್ಷಂ ಜಪೋ ದಶಾಂಶೇನ ಜುಹುಯಾತ್ಪಾಯಸೇನ ತು || ೪೨ ||

ಏತಾಭ್ಯಾಂ ಸಿದ್ಧಮಂತ್ರಾಭ್ಯಾಂ ಮಂತ್ರೀ ಕುರ್ಯಾದ್ಯಥೇಪ್ಸಿತಂ |
ಪ್ರಣವಃ ಕಮಲಾ ಮಾಯಾ ನಮೋ ಭಗವತೇ ತತಃ || ೪೩ ||

ನಂದಪುತ್ರಾಯ ತತ್ಪಶ್ಚಾದ್ಬಾಲಾಂತೇ ವಪುಷೇ ಪದಂ |
ಊನವಿಂಶತಿವರ್ಣೋಯಂ ಮುನಿರ್ಬ್ರಹ್ಮಾ ಸಮೀರಿತಃ || ೪೪ ||

---

೪೧-೪೨. ಪೂರ್ವೋಕ್ತ ಚಕ್ರಗಳಿಂದ ಪಂಚಾಂಗನ್ಯಾಸವನ್ನೂ ಅಂಗ, ಇಂದ್ರಾದಿ ದಿಕ್ಪಾಲಕರು ಮತ್ತು ವಜ್ರಾದ್ಯಾಯುಧಗಳ ಪೂಜೆ ಇವನ್ನು ನಡೆಯಿಸಬೇಕು.

ಧ್ಯಾನ:— ಬಲಗೈಯಲ್ಲಿ ರತ್ನಪಾತ್ರೆ, ಎಡಗೈಯಲ್ಲಿ ಬಂಗಾರದಕಟ್ಟು ಹಾಕಿರುವ ಬೆತ್ತ ಇವನ್ನು ಧರಿಸಿರುವ, ರುಕ್ಮಿಣೀ ಸತ್ಯಭಾಮಾದೇವಿಯರಿಂದ ಆಲಂಗಿಸಿಕೊಳ್ಳಲ್ಪಟ್ಟಿರುವ ಶ್ರೀಕೃಷ್ಣಸ್ವಾಮಿಯನ್ನು ಧ್ಯಾನಿಸಬೇಕು.

೪೨-೪೩. ಈ ಮಂತ್ರವನ್ನು ಒಂದುಲಕ್ಷಸಾರಿ ಜಪಿಸಿ, ಪಾಯಸದಿಂದ ಹತ್ತುಸಾವಿರ ಹೋಮಮಾಡಬೇಕು. ಈ ಎರಡು ಮಂತ್ರಗಳನ್ನೂ ವಿಧಿವತ್ತಾಗಿ ಜಪಿಸಿ ಸಿದ್ಧಿಯನ್ನು ಪಡೆದ ಮಂತ್ರಿಯು ಇಷ್ಟಾರ್ಥವೆಲ್ಲವನ್ನೂ ಸಾಧಿಸಿಕೊಳ್ಳಬಹುದು.

೪೩-೪೫. ಪ್ರಣವ = ಓಂ, ಕಮಲಾ = ಶ್ರೀಂ, ಮಾಯಾ = ಹ್ರೀಂ "ಓಂ ಶ್ರೀಂ ಹ್ರೀಂ ನಮೋ ಭಗವತೇ ನಂದಪುತ್ರಾಯ ಬಾಲವಪುಷೇ" ಇದು

ಛಂದೋನುಷ್ಟುಪ್ ದೇವತಾ ಚ ಕೃಷ್ಣೋ ಬಾಲವಪುಃ ಸ್ವಯಂ ।
ಮಂತ್ರೋಯಂ ಸರ್ವಸಂಪತ್ತಿಸಿದ್ಧಯೇ ಸೇವ್ಯತೇ ಬುಧೈಃ ॥ ೪೫ ॥

ತಾರೋ ಹೃದ್ಭಗವಾನ್ ಙೇಂತೋ ರುಕ್ಮಿಣೀವಲ್ಲಭಾಯ ಚ ।
ವಹ್ನಿಜಾಯಾವಧಿಃ ಪ್ರೋಕ್ತೋ ಮಂತ್ರಃ ಷೋಡಶವರ್ಣವಾನ್ ॥ ೪೬ ॥

ನಾರದೋಸ್ಯ ಮುನಿಶ್ಛಂದೋನುಷ್ಟುಪ್ ಚ ದೇವತಾ ಮನೋಃ ।
ರುಕ್ಮಿಣೀವಲ್ಲಭಶ್ಚಂದ್ರದೃಗ್ವೇದಾಗಾಕ್ಷಿವರ್ಣಕೈಃ ।
ಪಂಚಾಂಗಾನಿ ಪ್ರಕುರ್ವೀತ ತತೋ ಧ್ಯಾಯೇತ್ಸುರೇಶ್ವರಂ ॥ ೪೭ ॥

ತಾಪಿಚ್ಛಛವಿರಂಕಗಾಂ ಪ್ರಿಯತಮಾಂ ಸ್ವರ್ಣಪ್ರಭಾಮಂಬುಜ
ಪ್ರೋದ್ಯದ್ವಾಮಭುಜಾಂ ಸ್ವವಾಮಭುಜಯಾಶ್ಲಿಷ್ಯನ್ಸ್ವಚಿತ್ತಾಶಯಾ ।
ಶ್ಲಿಷ್ಯಂತೀಂ ಸ್ವಯಮನ್ಯಹಸ್ತವಿಲಸತ್ಸೌವರ್ಣವೇತ್ರಶ್ಚಿರಂ
ಪಾಯಾನ್ನಃ ಸುವಿಶುದ್ಧಪೀತವಸನೋ ನಾನಾವಿಭೂಷೋ ಹರಿಃ ॥ ೪೮ ॥

---

ಹತ್ತೊಂಬತ್ತುವರ್ಣಗಳ ಮಂತ್ರವು. ಇದಕ್ಕೆ ಬ್ರಹ್ಮನೇ ಋಷಿ, ಅನುಷ್ಟುಪ್ ಛಂದಸ್ಸು, ಬಾಲರೂಪಿ ಕೃಷ್ಣನೇ ದೇವತೆಯು. ಈ ಮಂತ್ರವು ಸಕಲೈಶ್ವರ್ಯ ಸಿದ್ಧಿಗಾಗಿ ಜ್ಞಾನಿಗಳಿಂದ ಆರಾಧಿಸಲ್ಪಡುತ್ತದೆ.

೪೬. (ತಾರ = ಓಂ, ಹೃತ್ = ನಮಃ, ವಹ್ನಿಜಾಯಾ = ಸ್ವಾಹಾ) "ಓಂ ನಮೋ ಭಗವತೇ ರುಕ್ಮಿಣೀವಲ್ಲಭಾಯ ಸ್ವಾಹಾ" ಇದು ಹದಿನಾರು ವರ್ಣಗಳ ಕೃಷ್ಣಮಂತ್ರವೆಂದು ಉಕ್ತವಾಗಿದೆ.

೪೭. ಈ ಮಂತ್ರಕ್ಕೆ ನಾರದನು ಋಷಿ, ಅನುಷ್ಟುಪ್ ಛಂದಸ್ಸು, ರುಕ್ಮಿಣೀ ವಲ್ಲಭನೇ ದೇವತೆ, ಈ ಮಂತ್ರದ ಒಂದು, ಎರಡು, ನಾಲ್ಕು, ಏಳು, ಎರಡು ಅಕ್ಷರಗಳಿಂದ ಹೃದಯಾದಿ ಪಂಚಾಂಗನ್ಯಾಸಮಾಡಿ ಅನಂತರ ದೇವ ಸ್ವಾಮಿಯಾದ ಕೃಷ್ಣನನ್ನು ಧ್ಯಾನಿಸಬೇಕು.

೪೮. ಧ್ಯಾನ:- ಹೊಂಗೆಯ ಹೂವಿನಂತೆ ಹೊಳೆಯುತ್ತಿರುವ, ತೊಡೆಯಮೇಲೆ ಕುಳಿತು ಸುವರ್ಣದಂತೆ ವಿರಾಜಿಸುತ್ತಿರುವ ಪದ್ಮಪ್ರಭೆಯಿಂದ

ಧ್ಯಾತ್ವೈವಂ ಪ್ರಜಪೇಲ್ಲಕ್ಷಂ ರಕ್ತೈಃ ಪದ್ಮೈರ್ದಶಾಂಶತಃ || ೪೯ ||
ತ್ರಿಮಧ್ವಕ್ತೈರ್ಹುನೇತ್ಪೀಠೇ ಪೂರ್ವೋಕ್ತೇ ಪೂಜಯೇದ್ಧರಿಂ |
ಅಂಗೈರ್ನಾರದಮುಖ್ಯೈಶ್ಚ ಲೋಕೇಶೈಶ್ಚ ತದಾಯುಧೈಃ || ೫೦ ||

ಏವಂ ಸಿದ್ಧೋ ಮನುರ್ದದ್ಯಾತ್ಸರ್ವಾನ್ಕಾಮಾಂಶ್ಚ ಮಂತ್ರಿಣೇ |
ಲೀಲಾದಂಡಪದಾದ್ಗೋಪೀಜನಸಂಸಕ್ತದೋಃ ಪದಂ || ೫೧ ||

ದಂಡಾಂತೇ ಬಾ ಧರಾ ವಹ್ನಿರರ್ಧೀಶಾಢ್ಯೋಥ ಲೋಹಿತಃ |
ಮೇಘಶ್ಯಾಮಪದಂ ಪಶ್ಚಾತ್ ಭಗವರ್ನ ಸಲಿಲಂ ಸದೃಕ್ || ೫೨ ||

---

ಮನೋಹರವಾದ ಎಡಗೈಯುಳ್ಳ, ಬಲಗೈಯಿಂದ ತನ್ನನ್ನು ಆಲಂಗಿಸಿಕೊಂಡಿರುವ ಅತ್ಯಂತಪ್ರಿಯಳಾದ ದೇವಿಯನ್ನು ಆತ್ಮಮನೋಭಿಲಾಷೆಯಿಂದ ಎಡಭುಜದಿಂದಾಲಿಂಗನಮಾಡಿಕೊಂಡಿರುವ, ಬಲಗೈಯಲ್ಲಿ ಹೊಳೆಯುತ್ತಿರುವ ಸುವರ್ಣದಂಡವನ್ನು ಧರಿಸಿರುವ, ಅತ್ಯಂತ ನಿರ್ಮಲ ಪೀತಾಂಬರವನ್ನುಟ್ಟಿರುವ, ನಾನಾವಿಧಾಭರಣಗಳಿಂದಲಂಕೃತನಾದ ಹರಿಯು ನಮ್ಮನ್ನು ಕಾಪಾಡಲಿ.

೪೯–೫೦. ಹೀಗೆ ಧ್ಯಾನಿಸಿ, ಒಂದುಲಕ್ಷ ಮಂತ್ರ ಜಪಮಾಡಿ, ಸಕ್ಕರೆ, ತುಪ್ಪ, ಜೇನುತುಪ್ಪಗಳಿಂದ ಸಹಿತವಾದ ಕೆಂದಾವರೆಹೂವುಗಳಿಂದ ಹತ್ತುಸಾವಿರ ಹೋಮಮಾಡಬೇಕು. ಪೂರ್ವೋಕ್ತ ವೈಷ್ಣವಪೀಠದಲ್ಲಿ ಹರಿಯನ್ನು ಪೂಜಿಸಿ, ಆ ಚಕ್ರಾದ್ಯಂಗಗಳು, ನಾರದಪ್ರಭೃತಿಗಳು, ಇಂದ್ರಾದಿ ದಿಕ್ಪಾಲಕರು, ವಜ್ರಾದ್ಯಾಯುಧಗಳು ಇವುಗಳಿಂದ ಆವರಣಪೂಜೆಯನ್ನು ಮಾಡಬೇಕು.

೫೧–೫೨. ಈ ರೀತಿ ಸಿದ್ಧಿಸಿದ ಮಂತ್ರವು ಜಪಕರ್ತನಿಗೆ ಸಕಲೇಷ್ಟಾರ್ಥಗಳನ್ನೂ ಕೊಡುತ್ತದೆ.

ಇನ್ನೊಂದು ಮಂತ್ರವನ್ನು ಹೇಳುತ್ತಾರೆ :– (ಧರಾ = ಲ, ವಹ್ನಿ = ರ, ಅರ್ಧೀಶ = ಊ, ಲೋಹಿತ = ಪ, ಸಲಿಲ = ವ, ದೃಕ್ = ಇ, ಠದ್ವಯ = ಸ್ವಾಹಾ) "ಲೀಲಾದಂಡ ಗೋಪೀಜನಸಂಸಕ್ತದೋರ್ದಂಡ ಬಾಲರೂಪ ಮೇಘ

ಷ್ಣೋ ಇತ್ಯುಕ್ತ್ವಾ ತದ್ವಯಂ ಸ್ಯಾದೇಕೋನತ್ರಿಂಶದರ್ಣವಾಕ್ |
ನಾರದೋಸ್ಯ ಮುನಿಚ್ಛಂದೋನುಷ್ಟುಪ್ ದೇವತಾ ಮನೋಃ || ೫೩ ||

ಲೀಲಾದಂಡಹರಿಃ ಪ್ರೋಕ್ತೋ ಮನ್ವಬ್ಧಿಯುಗವಹ್ನಿಭಿಃ |
ವೇದೈಃ ಪಂಚಾಂಗಕಂ ಭಾಗೈರ್ಮಂತ್ರವರ್ಣೋತ್ಥಿತೈಃ ಕ್ರಮಾತ್ || ೫೪ ||

ಸಂಮೋಹಯಂಶ್ಚ ನಿಜವಾಮಕರಸ್ಥಲೀಲಾ
ದಂಡೇನ ಗೋಪಯುವತೀಃ ಪರಸುಂದರೀಶ್ಚ |
ದಿಶ್ಯಾನ್ನಿಜಪ್ರಿಯಸಖಾಂಸಗದಕ್ಷಹಸ್ತೋ
ದೇವಃ ಶ್ರಿಯಂ ನಿಹತಕಂಸ ಉರುಕ್ರಮೋ ನಃ || ೫೫ ||

ಲಕ್ಷಂ ಜಪೋ ದಶಾಂಶೇನ ಜುಹುಯಾತ್ತಿಲತಂಡುಲೈಃ |
ತ್ರಿಮಧ್ವಕ್ತೈಸ್ತತೋಭ್ಯರ್ಚ್ಯೇದಂಗಂ ದಿಕ್ಪಾಲಹೇತಿಭಿಃ || ೫೬ ||

---

ಶ್ಯಾಮ ಭಗವನ್ವಿಷ್ಣೋ ಸ್ವಾಹಾ” ಇದು ಇಪ್ಪತ್ತೊಂಬತ್ತು ಅಕ್ಷರಗಳ ಕೃಷ್ಣ ಮಂತ್ರವು.

೫೩-೫೪. ಇದಕ್ಕೆ ನಾರದನು ಋಷಿ, ಅನುಷ್ಟುಪ್ ಛಂದಸ್ಸು, ಲೀಲಾ ದಂಡಧರನಾದ ಹರಿಯು ದೇವತೆ. ಕ್ರಮವಾಗಿ ಈ ಮಂತ್ರದ ೧೪, ೪, ೪, ೩, ೪ ವರ್ಣಗಳಿಂದ ಪಂಚಾಂಗನ್ಯಾಸಮಾಡಬೇಕು.

೫೫. ಧ್ಯಾನ:- ತನ್ನ ಎಡಗೈಯಲ್ಲಿರುವ ವಿಹಾರದಂಡದಿಂದ ಯುವತಿಯರಾದ ಗೋಪಸ್ತ್ರೀಯರು ಮತ್ತು ದೇವಸ್ತ್ರೀಯರನ್ನೂ ಸಹ ಮೋಹಪಡಿಸುತ್ತಿರುವ, ತನ್ನ ಪ್ರಿಯಸ್ನೇಹಿತನ ಭುಜದಮೇಲೆ ಬಲಗೈಯನ್ನು ಇಟ್ಟಿರುವ ಕಂಸಸಂಹಾರಕನೂ, ಉತ್ಕೃಷ್ಟಪರಾಕ್ರಮಿಯೂ ಆದ ಕೃಷ್ಣದೇವನು ನಮಗೆ ಸಂಪತ್ತನ್ನು ಕೊಡಲಿ ಎಂದು ಧ್ಯಾನಿಸಬೇಕು.

೫೬. ಈ ಮಂತ್ರವನ್ನು ಒಂದುಲಕ್ಷ ಜಪಮಾಡಿ, ಸಕ್ಕರೆ, ತುಪ್ಪ, ಜೇನುತುಪ್ಪಮಿಶ್ರವಾದ ಎಳ್ಳುಅಕ್ಕಿಗಳಿಂದ ಹತ್ತುಸಾವಿರ ಹೋಮಮಾಡಬೇಕು.

ಲೀಲಾದಂಡಂ ಹರಿಂ ಯೋ ನ್ವೈ ಭಜತೇ ನಿತ್ಯಮಾದರಾತ್ ।
ಸ ಸರ್ವೈಃ ಪೂಜ್ಯತೇ ಲೋಕೈಸ್ತಸ್ಯ ಗೇಹೇ ಸ್ಥಿರಾ ರಮಾ ॥ ೫೭ ॥

ಸದ್ಯಾರೂಢಾ ಸ್ಮೃತಿಸ್ತೋಯಂ ಕೇಶವಾಢ್ಯಧರಾಯುಗಂ ।
ಭಾಯೋಗ್ನಿವಲ್ಲಭಾಮಂತ್ರಃ ಸಪ್ತಾರ್ಣಃ ಸರ್ವಸಿದ್ಧಿದಃ ॥ ೫೮ ॥

ಋಷಿಃ ಸ್ಯಾನ್ನಾರದಶ್ಛಂದ ಉಷ್ಣಿಗ್ಗೋವಲ್ಲಭೋಽಸ್ಯ ತು ।
ದೇವತಾ ಪೂರ್ವವಚ್ಚಕ್ರೈಃ ಪಂಚಾಂಗಾನಿ ತು ಕಲ್ಪಯೇತ್ ॥ ೫೯ ॥

ಧ್ಯೇಯೋ ಹರಿಃ ಸಕಪಿಲಾಗಣಮಧ್ಯಸಂಸ್ಥ
ಸ್ತಾ ಆಹ್ವಯನ್ ದಧದ್ವಕ್ಷಿಣದೋಷ್ಣಿ ವೇಣುಂ ।
ಪಾಶಂ ಸ ಯಷ್ಟಿಮಪರತ್ರ ಪಯೋದನೀಲಃ
ಪೀತಾಂಬರೋಽಹಿರಿಪುಪಿಚ್ಛಕೃತಾವತಂಸಃ ॥ ೬೦ ॥

---

ತರುವಾಯ ಅಂಗಪೂಜೆ ಮತ್ತು ಇಂದ್ರಾದಿದಿಕ್ಪಾಲಕರ ಪೂಜೆ, ವಜ್ರಾದ್ಯಾಯುಧ ಪೂಜೆಗಳನ್ನು ಮಾಡಬೇಕು.

೫೭. ಲೀಲಾದಂಡಧಾರಿಯಾದ ಹರಿಯನ್ನು ಪ್ರತಿದಿನವೂ ಭಕ್ತಿಯಿಂದ ಈ ರೀತಿ ಆರಾಧಿಸುವವನು ಸರ್ವಲೋಕ ಪೂಜ್ಯನಾಗುವನು ಮತ್ತು ಅವನ ಮನೆಯಲ್ಲಿ ಲಕ್ಷ್ಮಿಯೂ ನೆಲೆಯಾಗಿ ನಿಲ್ಲುವಳು ಎಂದರೆ ಐಶ್ವರ್ಯವು ಸ್ಥಿರವಾಗುವುದು ಎಂದು ಭಾವ.

೫೮. ಇನ್ನೊಂದು ಮಂತ್ರವನ್ನು ಹೇಳುತ್ತಾರೆ :- (ಸದ್ಯ = ಓ, ಸ್ಮೃತಿ = ಗ, ತೋಯ = ವ, ಕೇಶವ = ಅ, ಧರಾಯುಗ = ಲ್ಲ, ಅಗ್ನಿವಲ್ಲಭಾ = ಸ್ವಾಹಾ) "ಗೋವಲ್ಲಭಾಯಸ್ವಾಹಾ" ಎಂಬುದು ಸರ್ವಸಿದ್ಧಿದಾಯಕವಾದ ಸಪ್ತಾಕ್ಷರ ಕೃಷ್ಣಮಂತ್ರವು.

೫೯. ಈ ಮಂತ್ರಕ್ಕೆ ನಾರದನು ಋಷಿ, ಉಷ್ಣಿಕ್ ಛಂದಸ್ಸು, ಗೋವಲ್ಲಭನೇ ದೇವತೆ. ಹಿಂದಿನಂತೆ ಚಕ್ರಗಳಿಂದ ಪಂಚಾಂಗಗಳನ್ನು ನ್ಯಾಸಮಾಡಬೇಕು.

೬೦. ಧ್ಯಾನ :— ಕಪಿಲಗೋವುಗಳ ಸಮೂಹಮಧ್ಯದಲ್ಲಿ ನಿಂತು ಅವು

ಸಪ್ತಲಕ್ಷಂ ಜಪೇನ್ಮಂತ್ರಂ ದಶಾಂಶಂ ಜುಹುಯಾತ್ತತಃ ।
ಗೋದುಗ್ಧೈಃ ಪೂಜಯೇತ್ಪೀಠೇ ಸ್ಯಾದಂಗೈಃ ಪ್ರಥಮಾವೃತಿಃ ॥ ೬೧ ॥

ಸುವರ್ಣಪಿಂಗಲಾಂ ಗೌರಪಿಂಗಲಾಂ ರಕ್ತಪಿಂಗಲಾಂ ।
ಗುಡಪಿಂಗಾಂ ಬಭ್ರುವರ್ಣಾಂ ಚೋತ್ತಮಾಂ ಕಪಿಲಾಂ ತಥಾ ॥ ೬೨ ॥

ಚತುಷ್ಕಪಿಂಗಲಾಂ ಪೀತಪಿಂಗಲಾಂ ಚೋತ್ತಮಾಂ ಶುಭಾಂ ।
ಗೋಗಣಾಷ್ಟಕಮಭ್ಯರ್ಚ್ಯ ಲೋಕೇಶಾನಾಯುಧೈರ್ಯುತಾನ್ ॥ ೬೩ ॥

ಸಂಪೂಜ್ಯೈವಂ ಮನೌ ಸಿದ್ಧೇ ಕುರ್ಯಾತ್ಕಾಮ್ಯಾನಿ ಮಂತ್ರವಿತ್ ।
ಅಷ್ಟೋತ್ತರಸಹಸ್ರಂ ಯಃ ಪಯೋಭಿರ್ದಿನಶೋ ಹುನೇತ್ ॥ ೬೪ ॥

---

ಗಳನ್ನು ಕರೆಯುತ್ತಿರುವ, ಬಲಗೈಯಲ್ಲಿ ಕೋಳಲನ್ನು ಎಡಗೈಯಲ್ಲಿ ಹಂಡಸಹಿತ ಹಗ್ಗವನ್ನೂ ಹಿಡಿದುಕೊಂಡಿರುವ, ಮೇಘಶ್ಯಾಮನು, ಪೀತಾಂಬರಧಾರಿಯು, ನವಿಲುಗರಿಯಿಂದ ಮಾಡಲ್ಪಟ್ಟ ಶಿರೋಭೂಷಣವನ್ನು ಧರಿಸಿರುವವನೂ ಆದ ಹರಿಯನ್ನು ಧ್ಯಾನಿಸಬೇಕು.

೬೧. ಈ ಮಂತ್ರವನ್ನು ಏಳುಲಕ್ಷ ಜಪಮಾಡಿ ಗೋಕ್ಷೀರದಿಂದ ಎಪ್ಪತ್ತುಸಾವಿರ ಹೋಮಮಾಡಬೇಕು. ಬಳಿಕ ವೈಷ್ಣವಪೀಠದಲ್ಲಿ ಪೂಜೆ ಮಾಡಬೇಕು. ಅಂಗಪೂಜೆಯೇ ಪ್ರಥಮಾವರಣ ಪೂಜೆಯು.

೬೨-೬೩. ಅನಂತರ ಬಂಗಾರದಂತೆ ಪಿಂಗಳವರ್ಣದ ಗೋವು, ಬೆಲ್ಲದಂತೆ ಪಿಂಗಳವರ್ಣದ ಗೋವು, ಕೆಂಪುಮಿಶ್ರ ಪಿಂಗಳವರ್ಣದ ಗೋವು, ಗೌರಮಿಶ್ರ ಪಿಂಗಳವರ್ಣದ ಗೋವು, ಬಭ್ರುವರ್ಣದ ಗೋವು, ಉತ್ತಮ ಕಪಿಲ ಗೋವು, ಚತುಷ್ಕಪಿಂಗಳ ಗೋವು ಮತ್ತು ಪೀತವರ್ಣಮಿಶ್ರವಾದ ಉತ್ತಮ ಪಿಂಗಳವರ್ಣದ ಗೋವು ಈರೀತಿ ಗೋಗಣಾಷ್ಟಕವನ್ನು ಪೂಜಿಸಿ ಇಂದ್ರಾದಿ ಲೋಕಪಾಲಕರನ್ನೂ ವಜ್ರಾದ್ಯಾಯುಧಸಹಿತವಾಗಿ ಪೂಜಿಸಬೇಕು.

೬೪-೬೫. ಈರೀತಿಯಾಗಿ ಪೂಜಿಸಿ ಮಂತ್ರಸಿದ್ಧಿಯನ್ನು ಪಡೆದಮೇಲೆ ಮಂತ್ರಜ್ಞನು ಕಾಮ್ಯಪ್ರಯೋಗಗಳನ್ನು ಮಾಡಬೇಕು. ಪ್ರತಿದಿನವೂ ಕ್ಷೀರ

ಪಕ್ಷಾತ್ಸಗೋಗಣೈರ್ಯುಕ್ತೋ ದಶಾರ್ಣೇ ಚಾಪ್ಯಯಂ ವಿಧಿಃ ।
ತಾರೋ ಹೃದ್ಭಗವಾನ್ ಜೇಂತಃ ಶ್ರೀಗೋವಿಂದಸ್ತಥಾ ಭವೇತ್ ॥ ೬೫ ॥

ದ್ವಾದಶಾರ್ಣೋ ಮನುಃ ಪ್ರೋಕ್ತೋ ನಾರದೋಸ್ಯ ಮುನಿರ್ಮತಃ ।
ಛಂದಃ ಪ್ರೋಕ್ತಂ ಚ ಗಾಯತ್ರೀ ಶ್ರೀಗೋವಿಂದೋಸ್ಯ ದೇವತಾ ।
ಚಂದ್ರಾಕ್ಷಿಯುಗಭೂತಾರ್ಣೈಃ ಸರ್ವೈಃ ಪಂಚಾಂಗಕಲ್ಪನಂ ॥ ೬೬ ॥

ಧ್ಯಾಯೇತ್ಕಲ್ಪದ್ರುಮೂಲಾಶ್ರಿತಮಣಿವಿಲಸದ್ದಿವ್ಯಸಿಂಹಾಸನಸ್ಥಂ ।
ಮೇಘಶ್ಯಾಮಂ ಪಿಶಂಗಾಂಶುಕಮತಿಸುಭಗಂ ಶಂಖವೇತ್ರೇ ಕರಾಭ್ಯಾಂ ॥

ಬಿಭ್ರಾಣಂ ಗೋಸಹಸ್ರೈರ್ವೃತಮಮರಪತಿಪ್ರೌಢಹಸ್ತಸ್ಥಕುಂಭ ।
ಪ್ರಚ್ಯೋತತೌಷಧಧಾರಾಸ್ನಪಿತಮಭಿನವಾಂಭೋಜಪತ್ರಾಭನೇತ್ರಂ ॥೬೮ ॥

---

ದಿಂದ ಸಾವಿರದೆಂಟರಂತೆ ಹೋಮಮಾಡುವವನು ಒಂದುಪಕ್ಷದೊಳಗೆ ಗೋಸಮೂಹಗಳಿಂದ ಯುಕ್ತನಾಗುವನು. ದಶಾಕ್ಷರ ಮಂತ್ರದಲ್ಲಿಯೂ ಸಹ ಇದೇ ವಿಧಾನವನ್ನಾಚರಿಸಬೇಕು.

೬೫-೬೬. "ಓಂ ನಮೋ ಭಗವತೇ ಶ್ರೀ ಗೋವಿಂದಾಯ" ಎಂಬುದು ದ್ವಾದಶಾಕ್ಷರ ಕೃಷ್ಣಮಂತ್ರ, ಇದಕ್ಕೆ ನಾರದನು ಋಷಿ, ಗಾಯತ್ರಿ ಛಂದಸ್ಸು. ಶ್ರೀಗೋವಿಂದನೇ ದೇವತೆ. ೧, ೨, ೪, ೫ ಈಪ್ರಕಾರ ಮಂತ್ರವರ್ಣಗಳಿಂದಲೂ ಮತ್ತು ಸಮಸ್ತ ಮಂತ್ರದಿಂದಲೂ ಸಹ ಪಂಚಾಂಗಗಳನ್ನು ನ್ಯಾಸಮಾಡಬೇಕು.

೬೭-೬೮. ಧ್ಯಾನ:- ಕಲ್ಪವೃಕ್ಷದಕೆಳಗೆ ರತ್ನಗಳಿಂದ ಪ್ರಕಾಶಮಾನವಾದ ದಿವ್ಯ ಸಿಂಹಾಸನದಲ್ಲಿ ಕುಳಿತಿರುವ, ನೀಲಮೇಘಶ್ಯಾಮನು, ಪೀತಾಂಬರಧಾರಿಯು ಅತ್ಯಂತ ಮನೋಹರನು, ಶಂಖ ಮತ್ತು ಬೆತ್ತಗಳನ್ನು ಕೈಗಳಲ್ಲಿ ಹಿಡಿದಿರುವವನು, ಸಾವಿರಾರು ಗೋವುಗಳಿಂದ ಪರಿವೃತನು, ದೇವೇಂದ್ರನ ಬಲಿಷ್ಠವಾದ ಹಸ್ತದಲ್ಲಿರುವ ಕಲಶದಿಂದ ಸುರಿಯುತ್ತಿರುವ ಅಮೃತಧಾರೆಯಿಂದ ಅಭಿಷೇಕಮಾಡಿಸಿಕೊಳ್ಳಲ್ಪಡುತ್ತಿರುವವನು, ನೂತನ ಕಮಲದಳದಂತೆ ಪ್ರಕಾಶಮಾನವಾದ ಕಣ್ಣುಗಳುಳ್ಳವನೂ ಆಗಿರುವ ಕೃಷ್ಣನನ್ನು ಧ್ಯಾನಿಸಬೇಕು.

ರವಿಲಕ್ಷಂ ಜಪೇನ್ಮಂತ್ರಂ ದುಗ್ಧೈರ್ಹುತ್ವಾ ದಶಾಂಶತಃ ।
ಯಜೇಚ್ಚ ಪೂರ್ವವದ್ಗೋಷ್ಠಸ್ಥಿತಂ ವಾ ಪ್ರತಿಮಾದಿಷು　　|| ೭೯ ||

ಪೂರ್ವೋಕ್ತೇ ವೈಷ್ಣವೇ ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ।
ತತ್ರಾವಾಹ್ಯ ಯಜೇತ್ಕೃಷ್ಣಂ ಗುರುಪೂಜನಪೂರ್ವಕಂ　　|| ೭೦ ||

ರುಕ್ಮಿಣೀಂ ಸತ್ಯಭಾಮಾಂ ಚ ಪಾರ್ಶ್ವಯೋರಿಂದ್ರಮಗ್ರತಃ ।
ಪೃಷ್ಠತಃ ಸುರಭಿಂ ಚೇಷ್ಟ್ವಾ ಕೇಸರೇಷ್ವಂಗಪೂಜನಂ　　|| ೭೧ ||

ಕಾಲಿಂದ್ಯಾದ್ಯಾ ಮಹಿಷ್ಯೋಷ್ಟೌ ವಸುಪತ್ರೇಷು ಸಂಸ್ಥಿತಾಃ ।
ಪೀಠಕೋಣೇಷು ಬದ್ಧಾದಿಕಿಂಕಿಣೀಂ ಚ ತಥಾ ಪುನಃ　　|| ೭೨

---

೬೯. ಈ ಮಂತ್ರವನ್ನು ಹನ್ನೆರಡುಲಕ್ಷ ಜಪಿಸಿ, ಅದರ ಹತ್ತರಲ್ಲೊಂದು ಭಾಗ ಕ್ಷೀರದಿಂದ ಹೋಮಮಾಡಿ, ಹಿಂದಿನಂತೆ ಗೋಷದಲ್ಲಿರುವ ಕೃಷ್ಣನನ್ನು ಅಥವಾ ಮನೆಯಲ್ಲಿರುವ ಪ್ರತಿಮಾದಿಗಳಲ್ಲಿ ಸನ್ನಿಹಿತನಾಗಿರುವ ಕೃಷ್ಣನನ್ನು ಪೂಜಿಸಬೇಕು.

೭೦. ಪೂರ್ವೋಕ್ತ ವೈಷ್ಣವ ಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ಆವಾಹನೆಮಾಡಿ, ಗುರುಪೂಜೆ ಪೂರ್ವಕವಾಗಿ ಕೃಷ್ಣನನ್ನು ಪೂಜೆಮಾಡಬೇಕು.

೭೧. ಉಭಯಪಾರ್ಶ್ವಗಳಲ್ಲಿ ರುಕ್ಮಿಣೀ ಸತ್ಯಭಾಮೆಯರನ್ನೂ, ಮುಂಭಾಗದಲ್ಲಿ ಇಂದ್ರನನ್ನೂ, ಹಿಂಭಾಗದಲ್ಲಿ ಸುರಭಿಯನ್ನೂ ಪೂಜಿಸಿ ಕೇಸರಗಳಲ್ಲಿ ಅಂಗಪೂಜೆಯನ್ನು ಮಾಡಬೇಕು.

೭೨-೭೩. ಎಂಟುದಳಗಳಲ್ಲಿರುವ ಕಾಳಿಂದೀ ಮುಂತಾದ ಅಷ್ಟಮಹಿಷಿಯರನ್ನು ಪೂಜಿಸಬೇಕು. ಪೀಠದಮೂಲೆಗಳಲ್ಲಿ ಕೃಷ್ಣನ ಕಿರುಗೆಜ್ಜೆಯನ್ನೂ,

ದಾಮಾನಿ ಪೃಷ್ಠಯೋರ್ವೇಣುಂ ಪುರಃ ಶ್ರೀವತ್ಸಕೌಸ್ತುಭೌ ।
ಅಗ್ರತೋ ವನಮಾಲಾದಿರ್ದಿಕ್ಷ್ವಷ್ಟಸು ತಥಾ ಸ್ಥಿತಾಃ ॥ ೭೩ ॥

ಪಾಂಚಜನ್ಯಂ ಗದಾ ಚಕ್ರಂ ವಸುದೇವಶ್ಚ ದೇವಕೀ ।
ನಂದಗೋಪೋ ಯಶೋದಾ ಚ ಸಗೋಗೋಪಾಲಗೋಪಿಕಾಃ ॥ ೭೪ ॥

ಇಂದ್ರಾದ್ಯಾಶ್ಚ ಸ್ಥಿತಾ ಬಾಹ್ಯೇ ವಜ್ರಾದ್ಯಾಶ್ಚ ತತಃ ಪರಂ ।
ಕುಮುದಃ ಕುಮುದಾಕ್ಷಶ್ಚ ಪುಂಡರೀಕೋಽಥ ವಾಮನಃ ॥ ೭೫ ॥

ಶಂಕುಕರ್ಣಃ ಸರ್ವನೇತ್ರಃ ಸುಮುಖಃ ಸುಪ್ರತಿಷ್ಠಿತಃ ।
ವಿಷ್ವಕ್ಸೇನಶ್ಚ ಸಂಪೂಜ್ಯಾಃ ಸ್ವಾತ್ಮಾ ಚಾರ್ಚ್ಯಸ್ತತಃ ಪರಂ ॥ ೭೬ ॥

ಏಕಕಾಲಂ ತ್ರಿಕಾಲಂ ವಾ ಯೋ ಗೋವಿಂದಂ ಯಜೇನ್ನರಃ ।
ಸ ಚಿರಾಯುರ್ನಿರಾತಂಕೋ ಧನಧಾನ್ಯಪತಿರ್ಭವೇತ್ ॥ ೭೭ ॥

---

ಹಾಗೆಯೇ ಪೃಷ್ಠಗಳಲ್ಲಿ ದಾಮುಗಳನ್ನೂ, ಮುಂಭಾಗದಲ್ಲಿ ಶ್ರೀವತ್ಸ ಕೌಸ್ತುಭಗಳನ್ನೂ, ಅಗ್ರಭಾಗದಲ್ಲಿ ವನಮಾಲಾದಿಗಳನ್ನೂ ಪೂಜಿಸಬೇಕು.

೭೪. ಅಷ್ಟದಿಕ್ಕುಗಳಲ್ಲಿರುವ ಪಾಂಚಜನ್ಯ, ಗದೆ, ಚಕ್ರ, ವಸುದೇವ, ದೇವಕೀ, ನಂದಗೋಪ, ಯಶೋದಾದೇವೀ ಮತ್ತು ಗೋಪಾಲಗೋಪಿಯರಿಂದ ಸಹಿತವಾದ ಗೋವು ಇವುಗಳನ್ನು ಪೂಜಿಸಬೇಕು.

೭೫-೭೬. ಹೊರಭಾಗದಲ್ಲಿರುವ ಇಂದ್ರಾದಿಗಳು, ವಜ್ರಾದ್ಯಾಯುಧಗಳು, ಬಳಿಕ ಕುಮುದ, ಕುಮುದಾಕ್ಷ, ಪುಂಡರೀಕ, ವಾಮನ, ಶಂಕುಕರ್ಣ, ಸರ್ವನೇತ್ರ, ಸುಮುಖ, ಸುಪ್ರತಿಷ್ಠಿತ ಮತ್ತು ವಿಷ್ವಕ್ಸೇನ ಇವರನ್ನು ಪೂಜಿಸಬೇಕು. ಅನಂತರ ತನ್ನಲ್ಲಿ ಅಂತರ್ಯಾಮಿಯಾಗಿರುವ ಆತ್ಮನನ್ನೂ ಪೂಜಿಸಬೇಕು.

೭೭. ಪ್ರತಿದಿನವೂ ಒಂದುವೇಳೆ ಅಥವಾ ಮೂರುಕಾಲಗಳಲ್ಲಿಯಾದರೂ ಗೋವಿಂದನನ್ನು ಈರೀತಿ ಭಜಿಸುವ ಮನುಷ್ಯನು ಚಿರಾಯುವಾಗಿ ಧನಧಾನ್ಯಾಧಿಪತಿಯಾಗಿ ನಿರಾತಂಕನಾಗಿ ಬಾಳುವನು.

ಸ್ಮೃತಿಃ ಸದ್ಯಾನ್ವಿತಾ ಚಕ್ರೀ ದಕ್ಷಕರ್ಣಯುತೋ ಧರಾ |
ನಾಥಾಯ ಹೃದಯಾಂತೋಽಯಂ ವಸುವರ್ಣೋ ಮಹಾಮನುಃ || ೭೮ ||

ಮುನಿರ್ಬ್ರಹ್ಮಾಸ್ಯ ಗಾಯತ್ರೀ ಛಂದಃ ಕೃಷ್ಣೋಽಸ್ಯ ದೇವತಾ |
ವರ್ಣದ್ವಂದ್ವೈಶ್ಚ ಸರ್ವೇಣ ಪಂಚಾಂಗಾನ್ಯಸ್ಯ ಕಲ್ಪಯೇತ್ || ೭೯ ||

ಪಂಚವರ್ಷಮತಿದೃಪ್ತಮಂಗಣೇ
ಧಾವಮಾನಮತಿಚಂಚಲೇಕ್ಷಣಂ |
ಕಿಂಕಿಣೀವಲಯಹಾರನೂಪುರೈ
ರಂಜತಂ ನಮತ ಗೋಪಬಾಲಕಂ || ೮೦ ||

ಏವಂ ಧ್ಯಾತ್ವಾ ಜಪೇದಷ್ಟಲಕ್ಷಂ ಮಂತ್ರೀ ದಶಾಂಶತಃ |
ಬ್ರಹ್ಮವೃಕ್ಷಸಮಿದ್ಭಿಶ್ಚ ಜುಹುಯಾತ್ಪಾಯಸೇನ ವಾ || ೮೧ ||

---

೭೮. ಇನ್ನೊಂದು ಮಂತ್ರವನ್ನು ಹೇಳುತ್ತಾರೆ :—(ಸದ್ಯಾನ್ವಿತಾ ಸ್ಮೃತಿಃ= ಗೋ, ದಕ್ಷಕರ್ಣಯುತಚಕ್ರೀ= ಗು, ಧರಾ= ಲ, ಹೃದಯ= ನಮಃ) "ಗೋಕುಲನಾಥಾಯ ನಮಃ" ಎಂಬುದು ಅಷ್ಟಾಕ್ಷರಮಹಾ ಮಂತ್ರವು.

೭೯. ಈ ಮಂತ್ರಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು, ಕೃಷ್ಣನೇ ದೇವತೆಯು. ಈ ಮಂತ್ರದ ಎರಡೆರಡಕ್ಷರಗಳು ಮತ್ತು ಸಮಗ್ರಮಂತ್ರ ಇವುಗಳಿಂದ ಪಂಚಾಂಗನ್ಯಾಸ ಮಾಡಬೇಕು.

೮೦. ಧ್ಯಾನ :—ಐದುವರ್ಷದವನು, ಅತ್ಯಂತಬಲಿಷ್ಠನು, ಅಂಗಳದಲ್ಲಿ ಓಡಾಡುತ್ತಿರುವವನು, ಅತಿಚಂಚಲದೃಷ್ಟಿಯುಳ್ಳವನು, ಕಿರುಗೆಜ್ಜೆ, ಮುತ್ತಿನ ಹಾರ, ಕಾಲುರುಳಿಗಳಿಂದ ಅಲಂಕೃತನೂ ಆಗಿರುವ ಗೋಪಾಲಕನನ್ನು ನಮಸ್ಕರಿಸುವೆನು.

೮೧. ಹೀಗೆ ಧ್ಯಾನಿಸಿ ಮಂತ್ರಿಯು ಎಂಟುಲಕ್ಷಜಪಮಾಡಬೇಕು. ಬಳಿಕ ಮುತ್ತಗದಗಿಡದ ಸಮಿತ್ತುಗಳಿಂದ ಅಥವಾ ಪಾಯಸದಿಂದ ಜಪದ ಹತ್ತನೆಯ ಒಂದುಭಾಗ ಹೋಮಮಾಡಬೇಕು.

ಪ್ರಾಗುಕ್ತೇ ವೈಷ್ಣವೇ ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ।
ತತ್ರಾವಾಹ್ಯಾರ್ಚಯೇತ್ಕೃಷ್ಣಂ ಮಂತ್ರೀ ವೈ ಸ್ಥಿರಮಾನಸಃ ॥ ೮೨ ॥

ಕೇಸರೇಷು ಚತುರ್ದಿಕ್ಷು ವಿದಿಕ್ಷ್ವಂಗಾನಿ ಪೂಜಯೇತ್ ।
ವಾಸುದೇವಂ ಬಲಂ ದಿಕ್ಷು ಪ್ರದ್ಯುಮ್ನಮನಿರುದ್ಧಕಂ ॥ ೮೩ ॥

ವಿದಿಕ್ಷು ರುಕ್ಮಿಣೀಸತ್ಯಭಾಮೇ ವೈ ಲಕ್ಷಣಾರ್ಕ್ಷಜೇ ।
ಲೋಕೇಶಾನ್ಸಾಯುಧಾನ್ಬಾಹ್ಯೇ ಏವಂ ಸಿದ್ಧೋ ಭವೇನ್ಮನುಃ ॥ ೮೪ ॥

ತಾರಃ ಶ್ರೀ ಭುವನಾಕಾಮೋ ಙೇಂತಂ ಶ್ರೀಕೃಷ್ಣಮೀರಯೇತ್ ।
ಶ್ರೀಗೋವಿಂದಂ ತತಃ ಪ್ರೋಚ್ಯ ಗೋಪೀಜನಪದಂ ತತಃ ॥ ೮೫ ॥

---

೮೨. ಬಳಿಕ ಮಂತ್ರಿಯು ಹಿಂದೆ ಹೇಳಿರುವ ವೈಷ್ಣವಪೀಠದಲ್ಲಿ ಮೂರ್ತಿಯನ್ನು ಸ್ಥಾಪಿಸಿ ಪದ್ಮಮಧ್ಯದಲ್ಲಿ ಮೂಲಮಂತ್ರದಿಂದ ಕೃಷ್ಣನನ್ನು ಆವಾಹನೆಮಾಡಿ ಸ್ಥಿರಮನಸ್ಕನಾಗಿ ಪೂಜಿಸಬೇಕು.

೮೩-೮೪. ಪೂರ್ವಾದಿನಾಲ್ಕುದಿಕ್ಕುಗಳು ಮತ್ತು ಆಗ್ನೇಯಾದಿ ವಿದಿಕ್ಕುಗಳಲ್ಲಿ ಅಂಗಗಳನ್ನೂ, ದಿಕ್ಕುಗಳಲ್ಲಿ ವಾಸುದೇವ, ಬಲರಾಮ, ಪ್ರದ್ಯುಮ್ನ ಮತ್ತು ಅನಿರುದ್ಧರನ್ನೂ, ವಿದಿಕ್ಕುಗಳಲ್ಲಿ ರುಕ್ಮಿಣೀ, ಸತ್ಯಭಾಮೆ, ಲಕ್ಷಣಾ, ಜಾಂಬವತಿಯರನ್ನೂ ಪೂಜಿಸಿ, ಬಹಿರ್ಭಾಗದಲ್ಲಿ ಇಂದ್ರಾದಿದಿಕ್ಪಾಲಕರನ್ನು ವಜ್ರಾದ್ಯಾಯುಧಸಹಿತವಾಗಿ ಪೂಜಿಸಬೇಕು. ಈರೀತಿಯಾಗಿ ಆಚರಿಸಿದರೆ ಮಂತ್ರಸಿದ್ಧಿಯಾಗುವುದು.

೮೫-೮೬. ಮಂತ್ರಾಂತರವನ್ನು ಹೇಳುತ್ತಾರೆ :—(ತಾರಃ= ಓಂ, ಶ್ರೀ= ಶ್ರೀಂ, ಭುವನಾ= ಹ್ರೀಂ, ಕಾಮಃ= ಕ್ಲೀಂ, ಪದ್ಮಾತ್ರಯಂ= ಶ್ರೀಂ, ಶ್ರೀಂ, ಶ್ರೀಂ) " ಓಂ ಶ್ರೀಂ ಹ್ರೀಂ ಕ್ಲೀಂ ಶ್ರೀಕೃಷ್ಣಾಯ ಶ್ರೀಗೋವಿಂದಾಯ ಗೋಪೀಜನವಲ್ಲಭಾಯ ಶ್ರೀಂಶ್ರೀಂಶ್ರೀಂ " ಇದು ಇಪ್ಪತ್ತುನಾಲ್ಕು ಅಕ್ಷರಗಳ

ವಲ್ಲಭಾಯ ತತಃ ಪದ್ಮಾತ್ರಯಂ ತತ್ವಾಕ್ಷರೋ ಮನುಃ ।
ಮುನ್ಯಾದಿಕಂ ಚ ಪೂರ್ವೋಕ್ತಂ ಸಿದ್ಧಗೋಪಾಲಕಂ ಸ್ಮರೇತ್ || ೮೬ ||

ಮಾಧವೀಮಂಡಪಾಸೀನೌ ಗರುಡೇನಾಭಿಪಾಲಿತೌ ।
ದಿವ್ಯಕ್ರೀಡಾಸು ನಿರತೌ ರಾಮಕೃಷ್ಣೌ ಸ್ಮರನ್ ಜಪೇತ್ || ೮೭ ||

ಪೂಜನಂ ಪೂರ್ವವಚ್ಚಾಸ್ಯ ಕರ್ತವ್ಯಂ ವೈಷ್ಣವೋತ್ತಮೈಃ ।
ಚಕ್ರೀ ಮುನಿಸ್ವರೋಪೇತಃ ಸರ್ಗೀ ಚೈಕಾಕ್ಷರೋ ಮನುಃ || ೮೮ ||

ಕೃಷ್ಣೇತಿ ದ್ವ್ಯಕ್ಷರಃ ಪ್ರೋಕ್ತಃ ಕಾಮಾದಿಃ ಸ್ಯಾತ್ರಿವರ್ಣಕಃ ।
ಸೈವ ಚಾಂತೋ ಯುಗಾರ್ಣಃ ಸ್ಯಾತ್ಕೃಷ್ಣಾಯ ನಮ ಇತ್ಯಪಿ || ೮೯ ||

ಪಂಚಾಕ್ಷರಶ್ಚ ಕೃಷ್ಣಾಯ ಕಾಮರುದ್ಧಸ್ತಥಾಪರಃ ।
ಗೋಪಾಲಾಯಾಗ್ನಿಜಾಯಾಂತೋ ರಸವರ್ಣಃ ಪ್ರಕೀರ್ತಿತಃ || ೯೦ ||

---

ಕೃಷ್ಣಮಂತ್ರವು. ಹಿಂದಿನಮಂತ್ರಕ್ಕೆ ಹೇಳಿರುವ ಋಷ್ಯಾದಿಗಳೇ ಈಮಂತ್ರಕ್ಕೂ ಋಷ್ಯಾದಿಗಳೆಂದು ತಿಳಿಯಬೇಕು. ಸಿದ್ಧಗೋಪಾಲನನ್ನು ಹೀಗೆ ಧ್ಯಾನಿಸ. ಬೇಕು.

೮೭-೮೮. ಧ್ಯಾನ :—ಮಾಧವೀಲತೆಯ ಮಂಟಪದಲ್ಲಿ ಕುಳಿತಿರುವ, ಗರುಡನಿಂದ ಸೇವಿಸಲ್ಪಡುತ್ತಿರುವ, ಮನೋಹರಕ್ರೀಡೆಗಳಲ್ಲಾಸಕ್ತರಾದ ಬಲ ರಾಮಕೃಷ್ಣರನ್ನು ಧ್ಯಾನಿಸುತ್ತಾ ಮಂತ್ರಜಪಮಾಡಬೇಕು. ಈ ಮಂತ್ರಕ್ಕೂ ಸಹ ಪೂಜೆಯನ್ನು ವೈಷ್ಣವೋತ್ತಮರು ಪೂರ್ವೋಕ್ತ ವಿಧಾನದಿಂದಲೇ ಮಾಡಬೇಕು.

೮೮. ಭಿನ್ನ ಭಿನ್ನ ಮಂತ್ರಗಳನ್ನು ಹೇಳುತ್ತಾರೆ :–ಮುನಿಸ್ವರೋ ಪೇತಃ ಸರ್ಗೀ ಚಕ್ರೀ= ಕೃಃ ಇದು ಏಕಾಕ್ಷರ ಕೃಷ್ಣಮಂತ್ರವು.

೮೯-೯೩. "ಕೃಷ್ಣ" ಎಂಬುದು ಎರಡಕ್ಷರಗಳಮಂತ್ರವು.

"ಕ್ಲೀಂ ಕೃಷ್ಣ" ಎಂಬುದು ಮೂರಕ್ಷರಮಂತ್ರವು.

**ಕಾಮಃ ಕೃಷ್ಣಪದಂ ಙೇಂತಂ ವಹ್ನಿಜಾಯಾಂತಕಃ ಪರಃ ।**
**ಕೃಷ್ಣಗೋವಿಂದಕೌ ಙೇಂತೌ ಸಪ್ತಾರ್ಣಃ ಸರ್ವಸಿದ್ಧಿದಃ ॥ ೯೧ ॥**

**ಶ್ರೀಶಕ್ತಿಕಾಮಾಃ ಕೃಷ್ಣಾಯ ಕಾಮಃ ಸಪ್ತಾಕ್ಷರಃ ಪರಃ ।**
**ಕೃಷ್ಣಗೋವಿಂದಕೌ ಙೇಂತೌ ಹೃದಂತೋಽನ್ಯೋ ನವಾಕ್ಷರಃ ॥ ೯೨ ॥**

**ಙೇಂತೌ ಚ ಕೃಷ್ಣಗೋವಿಂದೌ ತಥಾ ಕಾಮಃ ಪುಟಃ ಪರಃ ।**
**ಕಾಮಃ ಶಾರ್ಙ್ಗೀ ಧರಾಸಂಸ್ಥೋ ಮನ್ವಿಂದ್ವಾಢ್ಯಶ್ಚ ಮನ್ಮಥಃ ॥ ೯೩ ॥**

---

" ಕ್ಲೀಂ ಕೃಷ್ಣಾಯ " ಎಂಬುದು ನಾಲ್ಕಕ್ಷರಮಂತ್ರವು.

" ಕೃಷ್ಣಾಯನಮಃ, ಕ್ಲೀಂ ಕೃಷ್ಣಾಯಕ್ಲೀಂ " ಎಂಬೆರಡುಮಂತ್ರಗಳು ಪಂಚಾಕ್ಷರ ಕೃಷ್ಣಮಂತ್ರಗಳು.

" ಗೋಪಾಲಾಯಸ್ವಾಹಾ " ಎಂಬುದು ಷಡಕ್ಷರಮಂತ್ರವೆಂದು ಉಕ್ತವಾಗಿದೆ.

" ಕ್ಲೀಂ ಕೃಷ್ಣಾಯಸ್ವಾಹಾ " ಎಂಬುದೂ ಒಂದು ಷಡಕ್ಷರಮಂತ್ರವು.

" ಕೃಷ್ಣಾಯಗೋವಿಂದಾಯ " ಇದು ಸಕಲಸಿದ್ಧಿಪ್ರದಾಯಕವಾದ ಸಪ್ತಾಕ್ಷರಮಂತ್ರವು.

" ಶ್ರೀಂ ಹ್ರೀಂ ಕ್ಲೀಂ ಕೃಷ್ಣಾಯಕ್ಲೀಂ " ಎಂಬುದೂ ಒಂದು ಸಪ್ತಾಕ್ಷರಮಂತ್ರವು.

" ಕೃಷ್ಣಾಯ ಗೋವಿಂದಾಯನಮಃ " ಇದೊಂದು ನವಾಕ್ಷರಮಂತ್ರವು.

" ಕ್ಲೀಂ ಕೃಷ್ಣಾಯ ಗೋವಿಂದಾಯ ಕ್ಲೀಂ " ಇದೂ ಒಂದು ನವಾಕ್ಷರಮಂತ್ರವು.

(ಮನ್ವಿಂದ್ವಾಢ್ಯಃ ಧರಾಸಂಸ್ಥಃ ಶಾರ್ಙ್ಗೀ= ಗ್ಲೌಂ) " ಕ್ಲೀಂ ಗ್ಲೌಂ ಕ್ಲೀಂ ಶ್ಯಾಮಲಾಂಗಾಯ ನಮಃ " ಎಂಬುದು ಸಕಲಸಿದ್ಧಿದಾಯಕವಾದ ದಶಾಕ್ಷರಮಂತ್ರವು.

ಶ್ಯಾಮಲಾಂಗಾಯ ಹೃದಯಂ ದಶಾರ್ಣಃ ಸರ್ವಸಿದ್ಧಿದಃ |
ಬಾಲಾಂತೇ ವಪುಷೇ ಕೃಷ್ಣಾಯಾಗ್ನಿಜಾಯಾಂತಿಮೋ ಪರಃ || ೯೪ ||

ದ್ವಿಠಾಂತೇ ಬಾಲವಪುಷೇ ಕಾಮಃ ಕೃಷ್ಣಾಯ ಸಂವದೇತ್ |
ತತೋ ಧ್ಯಾಯನ್ಸ್ವಹೃದಯೇ ಗೋಪೀಜನಮನೋಹರಂ || ೯೫ ||

ಶ್ರೀವೃಂದಾವಿಪಿನಪ್ರತೋಲಿಷು ನಮತ್ಸಂಫುಲ್ಲವಲ್ಲೀತತಿ
ಷ್ವಂತರ್ಜಾಲವಿಘಟ್ಟನೈಃ ಸುರಭಿಣಾ ವಾತೇನ ಸಂಸೇವಿತೇ |
ಕಾಲಿಂದೀಪುಲಿನೇ ವಿಹಾರಿಣಮಥೋ ರಾಧೈಕಜೀವಾತುಕಂ
ವಂದೇ ನಂದಕಿಶೋರಮಿಂದುವದನಂ ಸ್ನಿಗ್ಧಾಂಬುದಾಡಂಬರಂ || ೯೬ ||

ಪೂರ್ವೋಕ್ತವರ್ತ್ಮನಾ ಪೂಜಾ ಜ್ಞೇಯಾ ಹ್ಯೇಷಾಂ ಮುನೀಶ್ವರ |
ದೇವಕೀಸುತವರ್ಣಾಂತೇ ಗೋವಿಂದಪದಮುಚ್ಚರೇತ್ || ೯೭ ||

---

"ಬಾಲವಪುಷೇ ಕೃಷ್ಣಾಯ ಸ್ವಾಹಾ" ಎಂಬುದು ಇನ್ನೊಂದು ದಶಾಕ್ಷರಮಂತ್ರವು.

"ಸ್ವಾಹಾ ಬಾಲವಪುಷೇ ಕ್ಲೀಂ ಕೃಷ್ಣಾಯ" ಇದು ಏಕಾದಶಾಕ್ಷರಮಂತ್ರವು.

೯೫-೯೬. ಮಂತ್ರಿಯು ಗೋಪಿಕಾಸ್ತ್ರೀಯರ ಚಿತ್ತಾಪಹಾರಿಯಾದ ಕೃಷ್ಣನನ್ನು ತನ್ನ ಹೃದಯದಲ್ಲಿ ಧ್ಯಾನಿಸಬೇಕು:—ಶ್ರೀವೃಂದಾವನದ ಒಳಗಿನ ಪೊದೆಗಳ ಪರಸ್ಪರ ಸಂಘರ್ಷದಿಂದ ಸುಗಂಧಯುಕ್ತವಾದ ವಾಯುವಿನಿಂದ ವ್ಯಾಪ್ತವಾದ ಯಮುನಾನದಿಯದಡದಲ್ಲಿ ವಿಹರಿಸುತ್ತಿರುವ, ರಾಧೆಗೆ ಪ್ರಾಣಪ್ರಿಯನಾದ, ಚಂದ್ರನಂತೆ ಹೊಳೆಯುತ್ತಿರುವ ಮುಖವುಳ್ಳ, ನಿಬಿಡ ಮೇಘಧ್ವನಿಯೋಪಾದಿಯಲ್ಲಿ ತೋರುತ್ತಿರುವ, ನಂದಕುಮಾರನನ್ನು ನಮಸ್ಕರಿಸುವೆನು.

೯೭-೯೯. ಮುನೀಶ್ವರನೇ! ಈ ಮಂತ್ರಗಳಿಗೆಲ್ಲಾ ಪೂಜೆಯ ವಿಧಾನವನ್ನು ಹಿಂದೆ ಹೇಳಿರುವಂತೆ ತಿಳಿಯಬೇಕು.

ವಾಸುದೇವಪದಂ ಪ್ರೋಚ್ಯ ಸಂಬುಧ್ಯಂತಂ ಜಗತ್ಪತಿಂ |
ದೇಹಿ ಮೇ ತನಯಂ ಪಶ್ಚಾತ್ ಕೃಷ್ಣ ತ್ವಾಮಹಮೀರಯೇತ್ ॥ ೯೮ ॥

ಶರಣಂ ಗತ ಇತ್ಯಂತೋ ಮಂತ್ರೋ ದ್ವಾತ್ರಿಂಶದಕ್ಷರಃ |
ನಾರದೋಽಸ್ಯ ಮುನಿಚ್ಛಂದೋ ಗಾಯತ್ರೀಚಾಪ್ಯನುಷ್ಟುಭಂ ॥
ದೇವಃ ಸುತಪ್ರದಃ ಕೃಷ್ಣಃ ಪಾದ್ಯೈಃ ಸರ್ವೇಣ ಚಾಂಗಕಂ ॥ ೯೯ ॥

ವಿಜಯೇನ ಯುತೋ ರಥಸ್ಥಿತಃ
ಪ್ರಸಮಾನೀಯ ಸಮುದ್ರಮಧ್ಯತಃ |
ಪ್ರದದತ್ತನಯಾನ್ ದ್ವಿಜನ್ಮನೇ
ಸ್ಮರಣೀಯೋ ವಸುದೇವನಂದನಃ ॥ ೧೦೦ ॥

ಲಕ್ಷಂ ಜಪೋಽಯುತಂ ಹೋಮಸ್ತಿಲೈರ್ಮಧುರಸಂಪ್ಲುತೈಃ |
ಅರ್ಚಾ ಪೂರ್ವೋದಿತೇ ಪೀಠೇ ಅಂಗಲೋಕೇಶ್ವರಾಯುಧೈಃ ॥ ೧೦೧ ॥

---

ಈಗ ಪುತ್ರಪ್ರದ ಕೃಷ್ಣಮಂತ್ರವನ್ನು ಹೇಳುತ್ತಾರೆ :—

ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ |
ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ ॥

ಇದು ಮೂವತ್ತೆರಡಕ್ಷರಗಳ ಕೃಷ್ಣಮಂತ್ರವು. ಈ ಮಂತ್ರಕ್ಕೆ ನಾರದನು ಋಷಿ, ಗಾಯತ್ರೀ ಮತ್ತು ಅನುಷ್ಟುಪ್ ಛಂದಸ್ಸು, ಸುತಪ್ರದಕೃಷ್ಣನೇ ದೇವತೆ. ನಾಲ್ಕು ಪಾದಗಳು ಮತ್ತು ಸಮಸ್ತಮಂತ್ರದಿಂದ ಅಂಗನ್ಯಾಸವು ವಿಹಿತವಾಗಿದೆ.

೧೦೦. ಧ್ಯಾನ :—ಅರ್ಜುನನಿಂದ ಸಹಿತವಾಗಿ ರಥದಲ್ಲಿ ಕುಳಿತಿರುವ, ಸಮುದ್ರ... ರ ಮಕ್ಕಳನ್ನು ತಂದು ಬ್ರಾಹ್ಮಣನಿಗೆ ಕೊಡುತ್ತಿರುವ ವಸುದೇವ... ಷ್ಣನನ್ನು ಧ್ಯಾನಿಸಬೇಕು.

ಒಂದುಲಕ್ಷ ಜಪ, ಮಧುರಮಿಶ್ರವಾದ ಎಳ್ಳಿನಿಂದ ಹತ್ತು ಸಾವಿರ ...ಮ, ಪೂರ್ವೋಕ್ತಪೀಠದಲ್ಲಿ ಪೂಜೆ, ಪರಿವಾರಭೂತರಾದ

ಏವಂ ಸಿದ್ಧೇ ಮನೌ ಮಂತ್ರೀ ವಂಧ್ಯಾಯಾಮಪಿ ಪುತ್ರವಾನ್ ।
ತಾರೋ ಮಾಯಾ ತತಃ ಸಾಂತಃ ಸೇಂದುಷ್ಷಾಂತಶ್ಚ ಸರ್ಗವಾನ್ ॥೧೦೨ ॥

ಸೋಽಹಂ ವಹ್ನಿಪ್ರಿಯಾಂತೋಽಯಂ ಮಂತ್ರೋ ವಸ್ವಕ್ಷರಃ ಪರಃ ।
ಪಂಚಬ್ರಹ್ಮಾತ್ಮಕಸ್ಯಾಸ್ಯ ಮಂತ್ರಸ್ಯ ಮುನಿಸತ್ತಮ ॥ ೧೦೩ ॥

ಋಷಿರ್ಬ್ರಹ್ಮಾ ಚ ಪರಮಾ ಗಾಯತ್ರೀ ಛಂದ ಈರಿತಂ ।
ಪರಂ ಜ್ಯೋತಿಃ ಪರಂ ಬ್ರಹ್ಮ ದೇವತಾ ಪರಿಕೀರ್ತಿತಂ ॥ ೧೦೪ ॥

ಪ್ರಣವೋ ಬೀಜಮಾಖ್ಯಾತಂ ಸ್ವಾಹಾ ಶಕ್ತಿರುದಾಹೃತಾ ।
ಸ್ವಾಹೇತಿ ಹೃದಯಂ ಪ್ರೋಕ್ತಂ ಸೋಽಹಂ ವೇತಿ ಶಿರೋ ಮತಂ ॥ ೧೦೫ ॥

ಹಂಸಶ್ಚೇತಿ ಶಿಖಾ ಪ್ರೋಕ್ತಾ ಹೃಲ್ಲೇಖಾ ಕವಚಂ ಸ್ಮೃತಂ ।
ಪ್ರಣವೋ ನೇತ್ರಮಾಖ್ಯಾತಮಸ್ತ್ರಂ ಹರಿಹರೇತಿ ಚ ॥ ೧೦೬ ॥

---

ಇಂದ್ರಾದಿಲೋಕಪಾಲಕರ ಮತ್ತು ಅವರ ವಜ್ರಾದ್ಯಾಯುಧಗಳ ಪೂಜೆ ಇವೆಲ್ಲವನ್ನೂ ಈ ಮಂತ್ರಜಪಾಂಗವಾಗಿ ಮಾಡಬೇಕು. ಈರೀತಿ ಆಚರಿಸಿ ಮಂತ್ರಸಿದ್ಧಿಯನ್ನು ಪಡೆದವನು ಗೊಡ್ಡಿಯಲ್ಲಿಯೂ ಸಹ ಮಕ್ಕಳನ್ನು ಪಡೆಯುವನು.

೧೦೨-೧೦೩. ಇನ್ನೊಂದು ಮಂತ್ರವನ್ನು ಹೇಳುತ್ತಾರೆ :-(ತಾರ= ಓಂ. ಮಾಯಾ= ಹ್ರೀಂ, ಸಾಂತ= ಹ, ಸರ್ಗ= ಃ, ವಹ್ನಿಪ್ರಿಯಾ= ಸ್ವಾಹಾ) "ಓಂ ಹ್ರೀಂ ಹಂಸಃ ಸೋಽಹಂ ಸ್ವಾಹಾ" ಇದೊಂದು ಅಷ್ಟಾಕ್ಷರ ಮಂತ್ರವು.

೧೦೩-೧೦೫. ಶ್ರೇಷ್ಠಮುನಿಯೇ! ಪಂಚಬಹ್ಮಾತ್ಮಕವಾದ ಈ ಮಂತ್ರಕ್ಕೆ ಋಷಿಯು ಬ್ರಹ್ಮನು, ಪರಮಗಾಯತ್ರೀ ಛಂದಸ್ಸು, ಪರಂಜ್ಯೋತಿಸ್ವರೂಪನಾದ ಪರಬ್ರಹ್ಮನು ದೇವತೆ ಎಂದು ಉಕ್ತವಾಗಿದೆ. ಓಂ ಎಂಬುದು ಬೀಜ, ಸ್ವಾಹಾ ಎಂಬುದು ಶಕ್ತಿಯು.

೧೦೫-೧೦೬. ಸ್ವಾಹಾ ಎಂಬುದಾಗಿ ಹೃದಯ, ಸೋಽಹಂ ಎಂಬುದಾಗಿ ಶಿರಸ್ಸು, ಹಂಸಃ ಎಂದು ಶಿಖೆ, ಹ್ರೀಂ ಎಂದು ಕವಚ, ಓಂ ಎಂದು ನೇತ್ರ, ಹರಿಹರ ಎಂದು ಅಸ್ತ್ರ ಈರೀತಿ ಷಡಂಗಗಳನ್ನು ನ್ಯಾಸಮಾಡಬೇಕು.

ಸ ಬ್ರಹ್ಮಾ ಸ ಶಿವೋ ವಿಪ್ರ ಸ ಹರಿಃ ಸ ಚ ದೇವರಾಟ್ ।
ಸ ಸರ್ವರೂಪಃ ಸರ್ವಾಕ್ಷಃ ಸೋಽಕ್ಷರಃ ಪರಮಃ ಸ್ವರಾಟ್ ॥ ೧೦೭ ॥

ಏವಂ ಧ್ಯಾತ್ವಾ ಜಪೇದಷ್ಟಲಕ್ಷಹೋಮೋ ದಶಾಂಶಕೈಃ ।
ಪೂಜಾ ಪ್ರಣವಪೀಠೇಽಸ್ಯ ಸಾಂಗಾವರಣಕೈರ್ಮತಾ ॥ ೧೦೮ ॥

ಏವಂ ಸಿದ್ಧೇ ಮನೌ ಜ್ಞಾನೀ ಸಾಧಕೇಂದ್ರಸ್ಯ ನಾರದ ।
ಜಾಯತೇ ತತ್ವಮಸ್ಯಾದಿವಾಕ್ಯೋಕ್ತಂ ನಿರ್ವಿಕಲ್ಪಕಂ ॥ ೧೦೯ ॥

ಕಾಮೋ ಙೇಂತೋ ಹೃಷೀಕೇಶೋ ಹೃದಯಾಂತೋ ಗಜಾಕ್ಷರಃ ।
ಋಷಿರ್ಬ್ರಹ್ಮಾಸ್ಯ ಗಾಯತ್ರೀ ಛಂದೋ ಗಾಯತ್ರಮೀರಿತಂ ॥ ೧೧೦ ॥

ದೇವತಾ ತು ಹೃಷೀಕೇಶೋ ವಿನಿಯೋಗೋಽಖಿಲಾಪ್ತಯೇ ।
ಕಾಮೋ ಬೀಜಂ ತಥಾ ಯೇತಿ ಶಕ್ತಿರಸ್ಯ ಹ್ಯುದಾಹೃತಾ ॥ ೧೧೧ ॥

---

೧೦೭. ಧ್ಯಾನ :—ಅವನೇ ಬ್ರಹ್ಮ, ಶಿವನಾಮಕನು, ವಿಪ್ರಾಂತರ್ಗತನು, ಅವನೇ ಹರಿಯು, ಅವನೇ ದೇವರಾಜನು, ಸರ್ವರೂಪಿಯು, ಸರ್ವನಾಮನು, ಅಕ್ಷರನು, ಉತ್ತಮನು, ಸ್ವತಂತ್ರನು ಎಂಬುದಾಗಿ ಧ್ಯಾನಿಸಬೇಕು.

೧೦೮. ಬಳಿಕ ಎಂಟುಲಕ್ಷ ಜಪಮಾಡಿ ಎಂಬತ್ತುಸಾವಿರ ಹೋಮಮಾಡಬೇಕು. ಈ ಮಂತ್ರದೇವತೆಗೆ ಅಂಗ ಆವರಣಸಹಿತವಾಗಿ ಓಂಕಾರಪೀಠದಲ್ಲಿ ಪೂಜೆಯು ವಿಹಿತವಾಗಿದೆ.

೧೦೯. ನಾರದನೇ! ಈರೀತಿ ಆಚರಿಸಿ ಮಂತ್ರಸಿದ್ಧಿಯನ್ನು ಪಡೆದ ಜ್ಞಾನಿಯಾದ ಸಾಧಕವರ್ಯನಿಗೆ ತತ್ವಮಸ್ಯಾದಿ ವಾಕ್ಯೋಕ್ತ ನಿರ್ವಿಕಲ್ಪಕ ವುಂಟಾಗುತ್ತದೆ.

೧೧೦-೧೧೩. ಇನ್ನೊಂದು ಮಂತ್ರವನ್ನು ಹೇಳುತ್ತಾರೆ :—" ಕ್ಲೀಂ ಹೃಷೀಕೇಶಾಯನಮಃ " ಇದೊಂದು ಅಷ್ಟಾಕ್ಷರಮಂತ್ರವು. ಈ ಮಂತ್ರಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು, ಹೃಷೀಕೇಶನೇ ದೇವತೆ, ಇದರ

ಬೀಜೇನೈವ ಷಡಂಗಾನಿ ಕೃತ್ವಾ ಧ್ಯಾನಂ ಸಮಾಚರೇತ್ ।
ಪುರುಷೋತ್ತಮಮಂತ್ರೋಕ್ತಂ ಸರ್ವಂ ವ್ಯಾಸ್ಯ ಪ್ರಕೀರ್ತಿತಂ ॥ ೧೧೨ ॥

ಲಕ್ಷಂ ಜಪೋಽಯುತಂ ಹೋಮೋ ಘೃತೇನೈವ ಪ್ರಕೀರ್ತಿತಃ ।
ತರ್ಪಣಂ ಸರ್ವಕಾಮಾಪ್ತ್ಯೈ ಪ್ರೋಕ್ತಂ ಸಂಮೋಹಿನೀಸುಮೈಃ ॥೧೧೩॥

ಶ್ರೀಬೀಜಂ ಚ ಚತುರ್ಥ್ಯಂತಃ ಶ್ರೀಧರೋ ಙೇಂತಕಸ್ತಥಾ ।
ತ್ರೈಲೋಕ್ಯಮೋಹನಃ ಶಬ್ದೋ ನಮೋಂತೋ ಮನುರೀರಿತಃ ॥ ೧೧೪ ॥

ಋಷಿರ್ಬ್ರಹ್ಮಾ ಚ ಗಾಯತ್ರೀ ಛಂದಃ ಶ್ರೀಧರದೇವತಾ ।
ಶ್ರೀಬೀಜಂ ಶಕ್ತಿರಸ್ಯೇತಿ ಬೀಜೇನೈವ ಷಡಂಗಕಂ ॥ ೧೧೫ ॥

---

ಅನುಷ್ಠಾನವು ಸಕಲೇಷ್ಟಾರ್ಥಸಾಧಕವು. "ಕ್ಲೀಂ ಎಂಬುದೇ ಬೀಜ, 'ಯ' ಎಂಬುದು ಶಕ್ತಿಯು. ಬೀಜಾಕ್ಷರದಿಂದಲೇ ಷಡಂಗಗಳ ನ್ಯಾಸವನ್ನಾಚರಿಸಿ ಧ್ಯಾನಮಾಡಬೇಕು. ಈ ಮಂತ್ರಕ್ಕೆ ಪೂಜಾದಿಗಳೆಲ್ಲವನ್ನೂ ಪುರುಷೋತ್ತಮಮಂತ್ರಕ್ಕೆ ವಿಹಿತವಾಗಿರುವ ರೀತಿಯಿಂದ ಆಚರಿಸಬೇಕು.

೧೧೩. ಇದನ್ನು ಒಂದುಲಕ್ಷಜಪಮಾಡಿ ತುಪ್ಪದಿಂದ ಹತ್ತುಸಾವಿರ ಹೋಮಮಾಡಬೇಕು. ಸಕಲೇಷ್ಟಾರ್ಥಗಳನ್ನೂ ಪಡೆಯುವುದಕ್ಕಾಗಿ ಸಂಮೋಹಿನೀಪುಷ್ಪಗಳಿಂದ ತರ್ಪಣವು ಉಕ್ತವಾಗಿದೆ.

೧೧೪–೧೧೫. ಬೇರೆ ಮಂತ್ರವನ್ನು ಹೇಳುತ್ತಾರೆ :—'ಶ್ರೀಂ ಶ್ರೀಧರಾಯ ತ್ರೈಲೋಕ್ಯಮೋಹನಾಯ ನಮಃ' ಇದೊಂದು ಮಂತ್ರವು.

ಇದಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು, ಶ್ರೀಧರನೇ ದೇವತೆ, ಶ್ರೀಂ ಎಂಬುದೇ ಶಕ್ತಿಯು, ಬೀಜಾಕ್ಷರದಿಂದಲೇ ಷಡಂಗನ್ಯಾಸವು.

ಪುರುಷೋತ್ತಮವದ್ಧ್ಯಾನಪೂಜಾದಿಕಮಿಹೋದಿತಂ ।
ಲಕ್ಷಂ ಜಪಸ್ತಥಾ ಹೋಮ ಆಜ್ಯೇನೈವ ದಶಾಂಶತಃ ॥ ೧೧೬ ॥

ಸುಗಂಧಶ್ವೇತಪುಷ್ಪೈಸ್ತು ಪೂಜಾಂ ಹೋಮಾದಿಕಂ ಚರೇತ್ ।
ಏವಂ ಕೃತೇ ತು ವಿಪ್ರೇಂದ್ರ ಸಾಕ್ಷಾತ್ ಸ್ಯಾಚ್ಛ್ರೀಧರಃ ಸ್ವಯಂ ॥೧೧೭॥

ಅಚ್ಯುತಾನಂತಗೋವಿಂದಪದಂ ಜೇಂತಂ ನಮೋಂತಿಮಂ ।
ಮಂತ್ರೋಽಸ್ಯ ಶೌನಕಋಷಿರ್ವಿರಾಟ್ ಛಂದಃ ಪ್ರಕೀರ್ತಿತಂ ॥ ೧೧೮ ॥

ಏಷಾಂ ಪರಾಶರವ್ಯಾಸನಾರದಾ ಋಷಯಃ ಸ್ಮೃತಾಃ ।
ವಿರಾಟ್‌ಛಂದಃ ಸಮಾಖ್ಯಾತಂ ಪರಬ್ರಹ್ಮಾತ್ಮಕೋ ಹರಿಃ ॥ ೧೧೯ ॥

ದೇವತಾ ಬೀಜಶಕ್ತೀ ತು ಪೂರ್ವೋಕ್ತೇ ಸಾಧಕೈರ್ಮತೇ ।
ಶಂಖಚಕ್ರಧರಂ ದೇವಂ ಚತುರ್ಬಾಹುಂ ಕಿರೀಟಿನಂ ॥ ೧೨೦ ॥

---

೧೧೬. ಪುರುಷೋತ್ತಮಮಂತ್ರದಂತೆ ಈ ಮಂತ್ರಕ್ಕೂ ಸಹ ಧ್ಯಾನ ಪೂಜಾದಿಗಳು ಉಕ್ತವಾಗಿವೆ. ಇದನ್ನು ಒಂದುಲಕ್ಷ ಜಪಮಾಡಿ, ತುಪ್ಪದಿಂದ ಹತ್ತುಸಾವಿರ ಹೋಮಮಾಡಬೇಕು.

೧೧೭. ಸುವಾಸನೆಯುಳ್ಳ ಬಿಳಿಯಹೂವುಗಳಿಂದ ಪೂಜೆ, ಹೋಮ ಮುಂತಾದುವನ್ನು ಮಾಡಬೇಕು. ಶ್ರೇಷ್ಠಬ್ರಾಹ್ಮಣನೇ ! ಈರೀತಿಯಾಗಿ ಅನುಷ್ಠಾನಮಾಡುವವನು ಸಾಕ್ಷಾಚ್ಛ್ರೀಧರನ ಪರಮಾನುಗ್ರಹಕ್ಕೆ ಪಾತ್ರ ನಾಗುವನು.

೧೧೮. 'ಅಚ್ಯುತಾನಂತಗೋವಿಂದೇಭ್ಯೋ ನಮಃ' ಇದೊಂದು ಮಂತ್ರವು. ಇದಕ್ಕೆ ಶೌನಕನು ಋಷಿ, ವಿರಾಟ್ ಎಂಬುದು ಛಂದಸ್ಸು.

೧೧೯-೧೨೦. ಈ ಮಂತ್ರಗಳಿಗೆ ಪರಾಶರ ವ್ಯಾಸನಾರದರು ಋಷಿಗಳು, ವಿರಾಟ್ ಛಂದಸ್ಸು ಪರಬ್ರಹ್ಮಾತ್ಮಕನಾದ ಹರಿಯು ದೇವತೆ, ಹಿಂದೆ ಹೇಳಿರು ವುದೇ ಬೀಜಶಕ್ತಿಗಳು.

ಸರ್ವೈರಪ್ಯಾಯುಧೈರ್ಯುಕ್ತಂ ಗರುಡೋಪರಿ ಸಂಸ್ಥಿತಂ ।
ಸನಕಾದಿಮುನೀಂದ್ರೈಸ್ತು ಸರ್ವದೇವೈರುಪಾಸಿತಂ ॥ ೧೨೧ ॥

ಶ್ರೀಭೂಮಿಸಹಿತಂ ದೇವಮುದಯಾದಿತ್ಯಸನ್ನಿಭಂ ।
ಪ್ರಾತರುದ್ಯತ್ಸಹಸ್ರಾಂಶುಮಂಡಲೋಪಮಕುಂಡಲಂ ॥ ೧೨೨ ॥

ಸರ್ವಲೋಕಸ್ಯ ರಕ್ಷಾರ್ಥಮನಂತಂ ನಿತ್ಯಮೇವ ಹಿ ।
ಅಭಯಂ ವರದಂ ದೇವಂ ಪ್ರಯಚ್ಛಂತಂ ಮುದಾನ್ವಿತಂ ॥ ೧೨೩ ॥

ಏವಂ ಧ್ಯಾತ್ವಾರ್ಚಯೇತ್ಪೀಠೇ ವೈಷ್ಣವೇ ಸುಸಮಾಹಿತಃ ।
ಆದ್ಯಾವರಣಮಂಗೈಃ ಸ್ಯಾಚ್ಚಕ್ರಶಂಖಗದಾಸಿಭಿಃ ॥ ೧೨೪ ॥

---

೧೨೦-೧೨೩. ಧ್ಯಾನ :—ಶಂಖಚಕ್ರಧಾರಿಯು, ನಾಲ್ಕುಬಾಹುಗಳುಳ್ಳವನು, ಕಿರೀಟವನ್ನಿಟ್ಟುಕೊಂಡಿರುವವನು, ಸಕಲಾಯುಧ ಸಮೇತನು, ಗರುಡನಮೇಲೆ ಕುಳಿತಿರುವವನು, ಸನಕಾದಿಮುನೀಂದ್ರರು ಮತ್ತು ಸಕಲದೇವತೆಗಳಿಂದಲೂ ಉಪಾಸನೆಮಾಡಿಸಿಕೊಳ್ಳಲ್ಪಡುತ್ತಿರುವವನು, ಶ್ರೀಭೂದೇವಿಗಳಿಂದ ಸಹಿತನು, ಉದಯಕಾಲದ ಸೂರ್ಯನಂತೆ ಹೊಳೆಯುತ್ತಿರುವವನು, ಪ್ರಾತಃಕಾಲದಲ್ಲಿ ಉದಯಿಸುತ್ತಿರುವ ಸೂರ್ಯಮಂಡಲಸದೃಶವಾದ ಕಡಕುಗಳನ್ನು ಧರಿಸಿರುವವನು, ಲೋಕಗಳಿಗೆಲ್ಲಾ ರಕ್ಷಕನು, ನಾಶರಹಿತನು, ಯಾವಾಗಲೂ ಅಭಯಪ್ರದನು, ವರದಾತೃವು, ಕ್ರೀಡಾದಿಗುಣವಿಶಿಷ್ಟನು, ಇಷ್ಟಾರ್ಥದಾಯಕನು, ಸಂತೋಷಚಿತ್ತನೂ ಆಗಿರುವ ದೇವನನ್ನು ಧ್ಯಾನಿಸಬೇಕು.

೧೨೪-೧೨೬. ಬಳಿಕ ಸಮಾಧಾನಮನಸ್ಕನಾಗಿ ವೈಷ್ಣವಪೀಠದಲ್ಲಿ ಮಂತ್ರದೇವತೆಯನ್ನು ಪೂಜಿಸಬೇಕು. ಶಂಖಚಕ್ರಗದಾಖಡ್ಗಗಳಿಂದ ಪ್ರಥಮಾವರಣಪೂಜೆ, ಮುಸಲ ಅಂಕುಶ ಪಾಶ ಧನುಸ್ಸುಗಳಿಂದ ದ್ವಿತೀಯಾವರಣ

ಮುಸಲಾಢ್ಯಧನುಃ ಪಾಶಾಂಕುಶೈಃ ಪ್ರೋಕ್ತಂ ದ್ವಿತೀಯಕಂ ।
ಸನಕಾದಿಕಶಾಕ್ತೇಯ ವ್ಯಾಸನಾರದಶೌನಕೈಃ ॥ ೧೨೫ ॥

ತೃತೀಯಂ ಲೋಕಪಾಲೈಸ್ತು ಚತುರ್ಥಂ ಪರಿಕೀರ್ತಿತಂ ।
ಲಕ್ಷಂ ಜಪೋ ದಶಾಂಶೇನ ಘೃತೇನ ಹವನಂ ಸ್ಮೃತಂ ॥ ೧೨೬ ॥

ಏವಂ ಸಿದ್ಧೇ ಮನೌ ಮಂತ್ರೀ ಪ್ರಯೋಗಾನಪ್ಯುಪಾಚರೇತ್ ।
ಶ್ರೀವೃಕ್ಷಮೂಲೇ ದೇವೇಶಂ ಧ್ಯಾಯನ್ವೈ ರೋಗಿಣಂ ಸ್ಮರನ್ ॥ ೧೨೭ ॥

ಸ್ಪೃಷ್ಟ್ವಾ ಜಪ್ತ್ವಾಽಯುತಂ ಸಾಧ್ಯಂ ಸ್ಮೃತ್ವಾ ವಾ ಮನಸಾ ದ್ವಿಜ ।
ರೋಗಿಣಾಂ ರೋಗನಿರ್ಮುಕ್ತಿಂ ಕುರ್ಯಾನ್ಮಂತ್ರೀ ತು ಮಂಡಲಾತ್ ॥

ಕನ್ಯಾರ್ಥೀ ಜುಹುಯಾಲ್ಲಾಜೈರ್ಬಿಲ್ವೈಶ್ಚಾಪಿ ಧನಾಪ್ತಯೇ ।
ವಸ್ತ್ರಾರ್ಥೀ ಗಂಧಕುಸುಮೈರಾರೋಗ್ಯಾಯ ತಿಲೈರ್ಹುನೇತ್ ॥ ೧೨೯ ॥

---

ಪೂಜೆ, ಸನಕಾದಿಗಳು ಶಾಕ್ತೇಯ ವ್ಯಾಸ ನಾರದ ಶೌನಕರುಗಳಿಂದ ತೃತೀಯಾವರಣಪೂಜೆ, ಇಂದ್ರಾದಿಲೋಕಪಾಲಕರಿಂದ ನಾಲ್ಕನೆಯ ಆವರಣಪೂಜೆ ಇವನ್ನು ಮಾಡಬೇಕು. ಈ ಮಂತ್ರವನ್ನು ಒಂದುಲಕ್ಷಜಪಮಾಡಿ ತುಪ್ಪದಿಂದ ಹೋಮ ಮಾಡಬೇಕು.

೧೨೭-೧೨೮. ಈಪ್ರಕಾರ ಆಚರಿಸಿ ಮಂತ್ರಸಿದ್ಧಿಯನ್ನು ಹೊಂದಿದ ಮೇಲೆ ಮಂತ್ರಿಯು ಪ್ರಯೋಗಗಳನ್ನೂ ಸಹ ಮಾಡಬೇಕು.

ಶ್ರೀವೃಕ್ಷದ ಕೆಳಗೆ ದೇವೇಶನನ್ನು ಧ್ಯಾನಿಸುತ್ತಾ ರೋಗಿಯನ್ನು ಸ್ಮರಣೆ ಮಾಡಿ ಅವನನ್ನು ಮುಟ್ಟಿಕೊಂಡು ಹತ್ತುಸಾವಿರ ಜಪಮಾಡಬೇಕು. ಅಥವಾ ರೋಗಿಯನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡು ಹತ್ತುಸಾವಿರ ಜಪಮಾಡಬೇಕು. ಹೀಗೆ ನಲವತ್ತುದಿನಗಳು ಅನುಷ್ಠಾನಮಾಡಿದರೆ ಮಂತ್ರಿಯು ರೋಗಿಗಳ ರೋಗಗಳನ್ನು ವಾಸಿಮಾಡಲು ಶಕ್ತನಾಗುವನು.

೧೨೯. ಕನ್ಯಾರ್ಥಿಯಾದ ಮಂತ್ರಿಯು ಅರಳಿನಿಂದಲೂ, ಧನಾರ್ಥಿಯು ಬಿಲ್ವಪತ್ರೆಗಳಿಂದಲೂ, ವಸ್ತ್ರಾರ್ಥಿಯು ಸುಗಂಧಪುಷ್ಪಗಳಿಂದಲೂ, ಆರೋಗ್ಯವನ್ನು ಬಯಸುವವನು ಎಳ್ಳಿನಿಂದಲೂ ಹೋಮಮಾಡಬೇಕು.

ರವಿವಾರೇ ಜಲೇ ಸ್ಥಿತ್ವಾ ನಾಭಿಮಾತ್ರೇ ಜಪೇತ್ತು ಯಃ ।
ಅಷ್ಟೋತ್ತರಸಹಸ್ರಂ ವೈ ಸ ಜ್ವರಂ ನಾಶಯೇದ್ಧ್ರುವಂ ॥ ೧೩೦ ॥

ವಿವಾಹಾರ್ಥಂ ಜಪೇನ್ಮಾಸಂ ಶಶಿಮಂಡಲಮಧ್ಯಗಂ ।
ಧ್ಯಾತ್ವಾ ಕೃಷ್ಣಂ ಲಭೇತ್ಕನ್ಯಾಂ ವಾಂಛಿತಾಂ ಚಾಪಿ ನಾರದ ॥ ೧೩೧ ॥

ವಸುದೇವಪದಂ ಪ್ರೋಚ್ಯ ನಿಗಡಚ್ಛೇದಶಬ್ದತಃ ।
ವಾಸುದೇವಾಯ ವರ್ಮಾಸ್ತ್ರೇ ಸ್ವಾಹಾಂತೋ ಮನುರೀರಿತಃ ॥ ೧೩೨ ॥

ನಾರದೋಽಸ್ಯ ಋಷಿಶ್ಛಂದೋ ಗಾಯತ್ರೀ ಕೃಷ್ಣದೇವತಾ ।
ವರ್ಮ ಬೀಜಂ ಶಿರಃ ಶಕ್ತಿರನ್ಯತ್ಸರ್ವಂ ದಶಾರ್ಣವತ್ ॥ ೧೩೩ ॥

---

೧೩೦. ಭಾನುವಾರದದಿನ ನಡುವಿಗೆಬರುವಷ್ಟು ನೀರಿನಲ್ಲಿ ನಿಂತು ಈ ಮಂತ್ರವನ್ನು ಸಾವಿರದೆಂಟುಸಾರಿ ಜಪಮಾಡುವವನು ನಿಜವಾಗಿಯೂ ಜ್ವರವನ್ನು ನಾಶಪಡಿಸುವನು.

೧೩೧. ನಾರದನೇ! ವಿವಾಹಾಪೇಕ್ಷೆಯಿಂದ ಚಂದ್ರಮಂಡಲಮಧ್ಯಸ್ಥನಾದ ಕೃಷ್ಣನನ್ನು ಒಂದುತಿಂಗಳು ಧ್ಯಾನಮಾಡಿದರೆ ಇಷ್ಟಕನ್ಯೆಯನ್ನು ಪಡೆಯುವನು.

೧೩೨. ಬೇರೆಮಂತ್ರವನ್ನು ಹೇಳುತ್ತಾರೆ:—(ವರ್ಮ = ಹುಂ, ಅಸ್ತ್ರ= ಫಟ್) 'ವಸುದೇವನಿಗಡಚ್ಛೇದವಾಸುದೇವಾಯ ಹುಂ ಫಟ್‌ಸ್ವಾಹಾ' ಇದೊಂದು ಕೃಷ್ಣಮಂತ್ರವು.

೧೩೩. ಇದಕ್ಕೆ ನಾರದನು ಋಷಿ, ಗಾಯತ್ರೀ ಛಂದಸ್ಸು, ಕೃಷ್ಣನೇ ದೇವತೆ 'ಹುಂ' ಎಂಬುದು ಬೀಜ, 'ಸ್ವಾಹಾ' ಎಂಬುದು ಶಕ್ತಿ. ಉಳಿದುದೆಲ್ಲವನ್ನೂ ದಶಾಕ್ಷರ ಕೃಷ್ಣಮಂತ್ರದಂತೆ ಆಚರಿಸಬೇಕು.

ಬಾಲಃ ಪವನದೀರ್ಘೇಂದುಯುಕ್ತೋ ಝಿಂಟೀಶಯುಕ್ ಜಲಂ ।
ಅತ್ರಿರ್ವ್ಯಾಸಾಯ ಹೃದಯಂ ಮನುರಷ್ಟಾಕ್ಷರೋಽವತು ॥ ೧೩೪ ॥

ಬ್ರಹ್ಮಾನುಷ್ಟುಪ್ ಮುನಿಶ್ಛಂದೋ ದೇವಃ ಸತ್ಯವತೀಸುತಃ ।
ಆದ್ಯಂ ಬೀಜಂ ನಮಃ ಶಕ್ತಿರ್ದೀರ್ಘಾಢ್ಯೇನಾದಿನಾಂಗಕಂ ॥ ೧೩೫ ॥

ವ್ಯಾಖ್ಯಾಮುದ್ರಿಕಯಾ ಲಸತ್ಕರತಲಂ ಸದ್ಯೋಗಪೀಠಸ್ಥಿತಂ
ವಾಮೇ ಜಾನುತಲೇ ದಧಾನಮಪರಂ ಹಸ್ತಂ ಸುವಿದ್ಯಾನಿಧಿಂ ।
ವಿಪ್ರವ್ರಾತವೃತಂ ಪ್ರಸನ್ನಮನಸಂ ಪಾಥೋರುಹಾಂಗದ್ಯುತಿಂ
ಪಾರಾಶರ್ಯಮತೀವ ಪುಣ್ಯಚರಿತಂ ವ್ಯಾಸಂ ಸ್ಮರೇತ್ಸಿದ್ಧಯೇ ॥ ೧೩೬ ॥

---

೧೩೪. ವೇದವ್ಯಾಸಮಂತ್ರವನ್ನು ಹೇಳುತ್ತಾರೆ :—(ಪವನದೀರ್ಘೇಂದುಯುಕ್ತೋ ಬಾಲಃ= ವ್ಯಾಂ, ಝಿಂಟೀಶಯುಗ್ಜಲ= ವೇ, ಅತ್ರಿ= ದ, ಹೃದಯ= ನಮಃ) 'ವ್ಯಾಂ ವೇದವ್ಯಾಸಾಯನಮಃ' ಇದು ವೇದವ್ಯಾಸಾಷ್ಟಾಕ್ಷರಮಂತ್ರವು.

೧೩೫. ಇದಕ್ಕೆ ಬ್ರಹ್ಮನು ಋಷಿ, ಅನುಷ್ಟುಪ್ ಛಂದಸ್ಸು, ಸತ್ಯವತೀ ಕುಮಾರನೇ ದೇವತೆ, 'ವ್ಯಾಂ' ಎಂಬುದು ಬೀಜ, 'ನಮಃ' ಎಂಬುದು ಶಕ್ತಿ, ದೀರ್ಘಯುಕ್ತವಾದ ಆದ್ಯಕ್ಷರದಿಂದ ಅಂಗನ್ಯಾಸಮಾಡಬೇಕು.

೧೩೬. ಧ್ಯಾನ :—ವ್ಯಾಖ್ಯಾನಮುದ್ರೆಯಿಂದ ಶೋಭಿಸುತ್ತಿರುವ ಕೈಯುಳ್ಳ, ಸಮೀಚೀನಯೋಗಪೀಠದಲ್ಲಿ ಕುಳಿತಿರುವ, ಎಡಮೊಣಕಾಲಿನ ಕೆಳಗೆ ಇನ್ನೊಂದು ಕೈಯನ್ನು ಧರಿಸಿರುವ, ಸದ್ವಿದ್ಯಾಕರರಾದ, ಬ್ರಾಹ್ಮಣಸಂಘ ಪರಿವೃತರಾದ, ಸಂತುಷ್ಟಮನಸ್ಸುಳ್ಳ, ಕಮಲದಂತೆ ಅಂಗಕಾಂತಿಯುಳ್ಳ, ಅತ್ಯಂತ ಪುಣ್ಯಚರಿತನು, ಪರಾಶರಪುತ್ರನೂ ಆದ ವ್ಯಾಸರನ್ನು ಸಿದ್ಧಿಗಾಗಿ ಧ್ಯಾನಿಸಬೇಕು.

ಜಪೇದಷ್ಟಸಹಸ್ರಾಣಿ ಪಾಯಸೈರ್ಹೋಮಮಾಚರೇತ್ ।
ಪೂರ್ವೋಕ್ತಪೀಠೇ ವ್ಯಾಸಸ್ಯ ಪೂರ್ವಮಂಗಾನಿ ಪೂಜಯೇತ್ ॥ ೧೩೭ ॥

ಪ್ರಾಚ್ಯಾದಿಷು ಯಜೇತ್ಪೈಲಂ ವೈಶಂಪಾಯನಜೈಮಿನೀ ।
ಸುಮಂತುಂ ಕೋಣಭಾಗೇಷು ಶ್ರೀಶುಕಂ ರೋಮಹರ್ಷಣಂ ॥ ೧೩೮ ॥

ಉಗ್ರಶ್ರವಸಮನ್ಯಾಂಶ್ಚ ಮುನೀನ್ಸೇಂದ್ರಾದಿಕಾಯುಧಾನ್ ।
ಏವಂ ಸಿದ್ಧಮನುರ್ಮಂತ್ರೀ ಕವಿತ್ವಂ ಶೋಭನಾಃ ಪ್ರಜಾಃ ॥ ೧೩೯ ॥

ವ್ಯಾಖ್ಯಾನಶಕ್ತಿಂ ಕೀರ್ತಿಂ ಚ ಲಭತೇ ಸಂಪದಾಂ ಚಯಂ ।
ನೃಸಿಂಹೋ ಮಾಧವಾರೂಢೋ ಲೋಹಿತೋ ನಿಗಮಾದಿಮಃ ॥ ೧೪೦ ॥

---

೧೩೭. ಈ ಮಂತ್ರವನ್ನು ಎಂಟುಸಾವಿರ ಜಪಮಾಡಿ ಪಾಯಸದಿಂದ ಹೋಮಮಾಡಬೇಕು. ಪೂರ್ವೋಕ್ತಪೀಠದಲ್ಲಿ ಮೊದಲು ವೇದವ್ಯಾಸರ ಅಂಗಗಳನ್ನು ಪೂಜಿಸಬೇಕು.

೧೩೮-೧೪೦. ಪೂರ್ವಾದಿದಿಕ್ಕುಗಳಲ್ಲಿ ಪೈಲ, ವೈಶಂಪಾಯನ, ಜೈಮಿನಿ, ಸುಮಂತುಗಳನ್ನೂ, ಆಗ್ನೇಯಾದಿಕೋಣಗಳಲ್ಲಿ ಶ್ರೀಶುಕ, ರೋಮಹರ್ಷಣ, ಉಗ್ರಶ್ರವಸ್ಸು, ಇತರಮುನೀಂದ್ರರು ಇವರನ್ನೂ, ಆಯುಧಸಹಿತರಾದ ಇಂದ್ರಾದಿಗಳನ್ನೂ ಸಹ ಪೂಜಿಸಬೇಕು. ಈರೀತಿ ಮಂತ್ರಸಿದ್ಧಿಯನ್ನು ಪಡೆದ ಮಂತ್ರಿಯು ಕವಿತ್ವ, ಸತ್ಸಂತಾನ, ವ್ಯಾಖ್ಯಾನಶಕ್ತಿ, ಕೀರ್ತಿ ಮತ್ತು ಸಂಪತ್ಸಮೂಹಗಳನ್ನು ಪಡೆಯುವನು.

೧೪೦-೧೪೧. ಗರುಡಮಂತ್ರವನ್ನು ಹೇಳುತ್ತಾರೆ :—(ನೃಸಿಂಹ= ಕ್ಷ, ಮಾಧವಾರೂಢ = ಇಯುತ, ಲೋಹಿತ = ಪ, ನಿಗಮಾದಿಮ = ಓಂ, ಕೃಶಾನುಜಾಯಾ = ಸ್ವಾಹಾ) 'ಕ್ಷಿಪ ಓಂ ಸ್ವಾಹಾ' ಎಂಬುದು ವಿಷಹರ

ಕೃಶಾನುಜಾಯೊ ಪಂಚಾರ್ಣೋ ಮನುರ್ವಿಷಹರಃ ಪರಃ ।
ಅನಂತಪಂಕ್ತಿಪಕ್ಷೀಂದ್ರಾ ಮುನಿಶ್ಛಂದಃ ಸುರಾ ಮತಾಃ ॥ ೧೪೧ ॥

ತಾರವಹ್ನಿಪ್ರಿಯೇಬೀಜಶಕ್ತೀ ಮಂತ್ರಸ್ಯ ಕೀರ್ತಿತೇ ।
ಜ್ವಲಜ್ವಲ ಮಹಾಮತಿ ಸ್ವಾಹಾ ಹೃದಯಮೀರಿತಂ ॥ ೧೪೨ ॥

ಗರುಡೇತಿ ಪದಸ್ಯಾಂತೇ ಚೂಡಾನನಶುಚಿಪ್ರಿಯಾ ।
ಶಿರೋಮಂತ್ರೋ ಗರುಡತಃ ಶಿಖೇ ಸ್ವಾಹಾ ಶಿಖಾ ಮನುಃ ॥ ೧೪೩ ॥

ಗರುಡೇತಿ ಪದಂ ಪ್ರೋಚ್ಯ ಪ್ರಭಂಜಯ ಯುಗಂ ವದೇತ್ ।
ಪ್ರಭೇದಯ ಯುಗಂ ಪಶ್ಚಾದ್ವಿತ್ರಾಸಯ ವಿಮರ್ದಯ ॥ ೧೪೪ ॥

ಪ್ರತ್ಯೇಕಂ ದ್ವಿಸ್ತತಃ ಸ್ವಾಹಾ ಕವಚಸ್ಯ ಮನುರ್ಮತಃ ।
ಉಗ್ರರೂಪಧರಾಂತೇ ತು ಸರ್ವವಿಷಹರೇತಿ ಚ ॥ ೧೪೫ ॥

---

ಗರುಡಮಂತ್ರ. ಇದಕ್ಕೆ ಅನಂತನು ಋಷಿ, ಪಂಕ್ತಿ ಛಂದಸ್ಸು, ಪಕ್ಷಿರಾಜನು ದೇವತೆಯು.

೧೪೨-೧೪೭. 'ಓಂ' ಎಂಬುದು ಬೀಜ, 'ಸ್ವಾಹಾ' ಎಂಬುದು ಶಕ್ತಿ ಎಂದು ಉಕ್ತವಾಗಿದೆ.

'ಜ್ವಲಜ್ವಲ ಮಹಾಮತಿ ಸ್ವಾಹಾ' ಎಂಬುದಾಗಿ ಹೃದಯಮಂತ್ರವು.

'ಗರುಡಚೂಡಾನನ ಸ್ವಾಹಾ' ಎಂಬುದಾಗಿ ಶಿರೋಮಂತ್ರವು.

'ಗುರುಡಶಿಖೇ ಸ್ವಾಹಾ' ಎಂಬುದೇ ಶಿಖಾಮಂತ್ರವು.

'ಗರುಡ ಪ್ರಭಂಜಯ ಪ್ರಭಂಜಯ ಪ್ರಭೇದಯ ಪ್ರಭೇದಯ ವಿತ್ರಾಸಯ ವಿತ್ರಾಸಯ ವಿಮರ್ದಯ ವಿಮರ್ದಯ ಸ್ವಾಹಾ ಹುಂ' ಎಂಬುದು ಕವಚಮಂತ್ರವು.

'ಉಗ್ರರೂಪಧರ ಸರ್ವವಿಷಹರ ಭೀಷಯ ಭೀಷಯ ಸರ್ವಂ ದಹದಹ ಭಸ್ಮೀಕುರುಕುರು ಸ್ವಾಹಾ' ಎಂಬುದು ನೇತ್ರಮಂತ್ರವು.

ಭೀಷಯದ್ವಿತಯಂ ಪ್ರೋಚ್ಯ ಸರ್ವಂ ದಹದಹೇತಿ ಚ ।
ಭಸ್ಮೀಕುರು ತತಃ ಸ್ವಾಹಾ ನೇತ್ರಮಂತ್ರೋಯಮೀರಿತಃ ॥ ೧೪೬ ॥

ಅಪ್ರತಿಹತವರ್ಣಾಂತೇ ಬಲಾಪ್ರತಿಹತೇತಿ ಚ ।
ಶಾಸನಾಂತೇ ತಥಾ ಹುಂ ಫಟ್ ಸ್ವಾಹಾಸ್ತ್ರಮನುರೀರಿತಃ ॥ ೧೪೭ ॥

ಪಾದೇ ಕಟೌ ಹೃದಿ ಮುಖೇ ಮೂರ್ಧ್ನಿ ವರ್ಣಾನ್ ಪ್ರವಿನ್ಯಸೇತ್ ॥೧೪೮॥

ತಪ್ತಸ್ವರ್ಣನಿಭಂ ಫಣೀಂದ್ರನಿಕರೈಃ ಕ್ಲೃಪ್ತಾಂಗಭೂಷಂ ಪ್ರಭುಂ ।
ಸ್ಮರ್ತೄಣಾಂ ಶಮಯಂತಮುಗ್ರಮಖಿಲಂ ನೃಣಾಂ ವಿಷಂ ತತ್ಕ್ಷಣಾತ್।
ಚಂಚ್ವಗ್ರಪ್ರಚಲದ್ಭುಜಂಗಮಭಯಂ ಪಾಣ್ಯೋರ್ವರಂ ಬಿಭ್ರತಂ
ಪಕ್ಷೋಚ್ಚಾರಿತಸಾಮಗೀತಮಮಲಂ ಶ್ರೀಪಕ್ಷಿರಾಜಂ ಭಜೇ ॥ ೧೪೯ ॥

ಪಂಚಲಕ್ಷಂ ಜಪೇನ್ಮಂತ್ರಂ ದಶಾಂಶಂ ಜುಹುಯಾತ್ತಿಲೈಃ ।
ಪೂಜಯೇನ್ಮಾತೃಕಾಪೀಠೇ ಗರುಡಂ ವೇದವಿಗ್ರಹಂ ॥ ೧೫೦ ॥

---

'ಅಪ್ರತಿಹತ ಬಲಾಪ್ರತಿಹತ ಶಾಸನ ಹುಂ ಫಟ್ ಸ್ವಾಹಾ' ಎಂಬುದು ಅಸ್ತ್ರಮಂತ್ರವು. ಈ ಮಂತ್ರಗಳಿಂದ ಷಡಂಗಗಳನ್ನು ನ್ಯಾಸಮಾಡಬೇಕು.

೧೪೮. ಈ ಮಂತ್ರದ ವರ್ಣಗಳನ್ನು ಕ್ರಮವಾಗಿ ಪಾದ, ನಡುವು, ಹೃದಯ, ಮುಖ, ಶಿರಸ್ಸು ಇವುಗಳಲ್ಲಿ ನ್ಯಾಸಮಾಡಬೇಕು.

೧೪೯. ಧ್ಯಾನ :—ಕಾಯಿಸಿದ ಬಂಗಾರಕ್ಕೆ ಸಮಾನನು, ಶ್ರೇಷ್ಠಸರ್ಪ ಸಮೂಹಗಳಿಂದ ರಚಿಸಲ್ಪಟ್ಟ ಅಂಗಭೂಷಣಗಳುಳ್ಳವನು, ಸ್ವಾಮಿಯು, ತನ್ನನ್ನು ಸ್ಮರಿಸುವ ಜನರಿಗೆ ಸಕಲಕ್ರೂರವಿಷವನ್ನೂ ತಕ್ಷಣದಲ್ಲಿ ಪರಿಹರಿಸುವವನು, ಕೊಕ್ಕಿನ ಅಗ್ರಭಾಗದಿಂದ ಸರ್ಪವನ್ನು ಹಿಡಿಯುವವನು, ಕೈಗಳಲ್ಲಿ ಅಭಯವರಗಳನ್ನು ಧರಿಸಿರುವವನು, ರೆಕ್ಕೆಗಳಿಂದ ಉಚ್ಚರಿಸಲ್ಪಡುತ್ತಿರುವ ಬೃಹತ್, ರಥಂತರ ನಾಮಕ ಸಾಮಗಾನವುಳ್ಳವನು, ಪರಿಶುದ್ಧನೂ ಆದ ಪಕ್ಷಿರಾಜನನ್ನು ಸೇವಿಸುವೆನು ಎಂಬುದಾಗಿ ಧ್ಯಾನಿಸಬೇಕು.

೧೫೦. ಈ ಮಂತ್ರವನ್ನು ಐದುಲಕ್ಷ ಜಪಿಸಿ, ಎಳ್ಳಿನಿಂದ ಐವತ್ತುಸಾವಿರ ಹೋಮಮಾಡಬೇಕು. ಬಳಿಕ ವೇದ ವಿಗ್ರಹನಾದ ಗರುಡನನ್ನು ಮಾತೃಕಾಪೀಠದಲ್ಲಿ ಪೂಜಿಸಬೇಕು.

**ಚತುರ್ಥ್ಯಂತಃ ಪಕ್ಷಿರಾಜಃ ಸ್ವಾಹಾ ಪೀಠಮನುಃ ಸ್ಮೃತಃ ।**
**ಇಷ್ಟ್ವಾಂಗಂ ಕರ್ಣಿಕಾಮಧ್ಯೇ ನಾಗಾನ್ಯಂತ್ರೇಷು ಪೂಜಯೇತ್ ॥೧೫೧॥**
**ತದ್ಬಹಿರ್ಲೋಕಪಾಲಾಂಶ್ಚ ವಜ್ರಾದ್ಯೈರ್ವಿಲಸತ್ಕರಾನ್ ।**
**ಏವಂ ಸಿದ್ಧಮನುರ್ಮಂತ್ರೀ ನಾಶಯೇದ್ಗರಲದ್ವಯಂ ।**
**ದೇಹಾಂತೇ ಲಭತೇ ಚಾಪಿ ಶ್ರೀವಿಷ್ಣೋಃ ಪರಮಂ ಪದಂ ॥ ೧೫೨ ॥**

**ಇತಿ ಶ್ರೀನಾರದೀಯಮಹಾಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಕೃಷ್ಣಾದಿಮಂತ್ರಭೇದನಿರೂಪಣಂ ನಾಮೈಕಾಶೀತಿತಮೋಽಧ್ಯಾಯಃ**

---

೧೫೧. 'ಪಕ್ಷಿರಾಜಾಯ ಸ್ವಾಹಾ' ಎಂಬುದೇ ಪೀಠಮಂತ್ರವು. ಕೋಶ ಮಧ್ಯದಲ್ಲಿ ಅಂಗಪೂಜೆಮಾಡಿ ಯಂತ್ರಗಳಲ್ಲಿ ನಾಗಗಳನ್ನು ಪೂಜಿಸಬೇಕು.

೧೫೨. ಅದರ ಹೊರಭಾಗದಲ್ಲಿ ವಜ್ರಾದ್ಯಾಯುಧಗಳನ್ನು ಕರದಲ್ಲಿ ಪಿಡಿದಿರುವ ಇಂದ್ರಾದಿಲೋಕಪಾಲಕರನ್ನು ಪೂಜಿಸಬೇಕು. ಈರೀತಿ ಸಿದ್ಧಿಯನ್ನು ಹೊಂದಿದ ಮಂತ್ರಿಯು ಸ್ಥಾವರಜಂಗಮಾಖ್ಯವಾದ ವಿಷದ್ವಯವನ್ನೂ ನಾಶಪಡಿಸುವನು. ಮರಣಾನಂತರ ಶ್ರೀವಿಷ್ಣುವಿನ ಪರಮಪದ ಎಂದರೆ ವೈಕುಂಠಲೋಕವನ್ನು ಪಡೆಯುವನು.

ಇಂತು ಶ್ರೀನಾರದೀಯಪುರಾಣದಲ್ಲಿ ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ನಾನಾವಿಧ ಕೃಷ್ಣಮಂತ್ರ ನಿರೂಪಣವೆಂಬ ಎಂಬತ್ತೊಂದನೆಯ ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ

ಈ ಅಧ್ಯಾಯದಲ್ಲಿ ಏಕಾಕ್ಷರ ಕೃಷ್ಣಮಂತ್ರದಿಂದ ಮೂವತ್ತುಮೂರು ಅಕ್ಷರಗಳವರೆಗೂ ಕೃಷ್ಣಮಂತ್ರಗಳು, ಅವುಗಳ ನ್ಯಾಸ, ಧ್ಯಾನ, ಜಪ, ಹೋಮ, ಪೂಜೆ ಮುಂತಾದುವು ವಿಸ್ತಾರವಾಗಿ ಉಕ್ತವಾಗಿವೆ. ಮತ್ತು ಹಂಸಮಂತ್ರ, ಹೃಷೀಕೇಶಮಂತ್ರ, ವೇದವ್ಯಾಸಮಂತ್ರಗಳೂ ಸಹ ಸಪರಿಕರವಾಗಿ ಹೇಳಲ್ಪಟ್ಟಿವೆ. ವಿಷ್ಣುವಾಹನ ಗರುಡಮಂತ್ರ, ಅದರ ಅಂಗಮಂತ್ರ, ಧ್ಯಾನಾದಿಗಳು ಫಲ ಮುಂತಾದುವು ಸಂಗ್ರಹಿಸಲ್ಪಟ್ಟಿವೆ.

# ದ್ವ್ಯಶೀತಿತಮೋಽಧ್ಯಾಯಃ

---

ಸನತ್ಕುಮಾರ ಉವಾಚ

ಕಿಂ ತ್ವಂ ನಾರದ ಜಾನಾಸಿ ಪೂರ್ವಜನ್ಮನಿ ಯತ್ತ್ವಯಾ ।
ಪ್ರಾಪ್ತಂ ಭಗವತಃ ಸಾಕ್ಷಾಚ್ಛೂಲಿನೋ ಯುಗಲಾತ್ಮಕಂ ॥ ೧ ॥

ಕೃಷ್ಣಮಂತ್ರರಹಸ್ಯಂ ಚ ಸ್ಮರ ವಿಸ್ಮೃತಿಮಾಗತಂ ।

ಸೂತ ಉವಾಚ

ಇತ್ಯುಕ್ತೋ ನಾರದೋ ವಿಪ್ರಾಃ ಕುಮಾರೇಣ ತು ಧೀಮತಾ ॥ ೨ ॥

ಧ್ಯಾನಂ ವಿವೇದಾಶು ಚಿರಂ ಚರಿತಂ ಪೂರ್ವಜನ್ಮನಃ ।
ತತಶ್ಚಿರಂ ಧ್ಯಾನಪರೋ ನಾರದೋ ಭಗವತ್ಪ್ರಿಯಃ ॥ ೩ ॥

---

## ಎಂಬತ್ತೆರಡನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ನಾರದನೇ! ಪೂರ್ವಜನ್ಮದಲ್ಲಿ ಸಾಕ್ಷಾದ್ರುದ್ರಭಗವಂತನು ನಿನಗೆ ಉಪದೇಶಿಸಿದ ಯುಗಲಾತ್ಮಕತತ್ತ್ವವು ಈಗ ಜ್ಞಾಪಕವಿರುವುದೇನು ?

೨-೩. ಮರೆತುಹೋಗಿರುದ ಕೃಷ್ಣಮಂತ್ರರಹಸ್ಯವನ್ನು ಈಗ ಸ್ಮರಿಸು! ಸೂತನು ಹೇಳಿದನು :—ಶೌನಕಾದಿ ಬ್ರಾಹ್ಮಣರುಗಳಿರಾ! ಬುದ್ಧಿಮಂತನಾದ ಸನತ್ಕುಮಾರನಿಂದ ಉಕ್ತವಾದುದನ್ನು ಕೇಳಿ ನಾರದನು ಕೂಡಲೇ ಪೂರ್ವಜನ್ಮವೃತ್ತಾಂತವನ್ನು ತಿಳಿಯಲು ಬಹುಕಾಲದವರೆಗೆ ಚಿಂತಿಸಿದನು.

೩-೪. ಭಗವಂತನಿಗೆ ಪ್ರಿಯನಾದ ನಾರದನು ಹೀಗೆ ಬಹುಕಾಲ

ಜ್ಞಾತ್ವಾ ಸರ್ವಂ ಸುವೃತ್ತಾಂತಂ ಸುಪ್ರಸನ್ನಾನನೋಽಬ್ರವೀತ್ ।
ಭಗವನ್ಸರ್ವವೃತ್ತಾಂತಃ ಪೂರ್ವಕಲ್ಪಸಮುದ್ಭವಃ ॥ ೪ ॥

ಮಮ ಸ್ಮೃತಿಮನುಪ್ರಾಪ್ತೋ ವಿನಾ ಯುಗಲಲಂಭನಂ ।
ತಚ್ಛ್ರುತ್ವಾ ವಚನಂ ತಸ್ಯ ನಾರದಸ್ಯ ಮಹಾತ್ಮನಃ ॥ ೫ ॥

ಸನತ್ಕುಮಾರೋ ಭಗವಾನ್ ವ್ಯಾಜಹಾರ ಯಥಾತಥಂ ।

ಸನತ್ಕುಮಾರ ಉವಾಚ

ಶೃಣು ವಿಪ್ರ ಪ್ರವಕ್ಷ್ಯಾಮಿ ಯಸ್ಮಿನ್ ಜನ್ಮನಿ ಶೂಲಿನಃ ॥ ೬ ॥

ಪ್ರಾಪ್ತಂ ಕೃಷ್ಣರಹಸ್ಯಂ ವೈ ಸಾವಧಾನೋ ಭವಾಧುನಾ ।
ಅಸ್ಮಾತ್ಸಾರಸ್ವತಾತ್ಕಲ್ಪಾತ್ಪೂರ್ವಸ್ಮಿನ್ಪಂಚವಿಂಶಕೇ ॥ ೭ ॥

ಕಲ್ಪೇ ತ್ವಂ ಕಾಶ್ಯಪೋ ಜಾತೋ ನಾರದೋ ನಾಮ ನಾಮತಃ ।
ತತ್ರೈಕದಾ ತ್ವಂ ಕೈಲಾಸಂ ಪ್ರಾಪ್ತಃ ಕೃಷ್ಣಸ್ಯ ಯೋಗಿನಃ ॥ ೮ ॥

---

ಚಿಂತಿಸಿ ಸಮಿಾಚೀನವೃತ್ತಾಂತವೆಲ್ಲವನ್ನೂ ತಿಳಿದು ಅತ್ಯಂತ ಪ್ರಸನ್ನಮುಖನಾಗಿ ಹೀಗೆ ಮಾತನಾಡಿದನು.

೪-೫. ಪೂಜ್ಯರೇ! ಯುಗಲಲಂಭನವೊಂದು ಹೊರತು ಉಳಿದ ಪೂರ್ವಜನ್ಮದಲ್ಲಿ ನಡೆದ ಸಕಲವೃತ್ತಾಂತವೂ ನನಗೆ ಜ್ಞಾಪಕಕ್ಕೆ ಬಂದಿತು, ಎಂಬುದಾಗಿ ನಾರದನು ಸನತ್ಕುಮಾರನಿಗೆ ಹೇಳಿದನು.

೫-೭. ಮಹಾತ್ಮನಾದ ನಾರದನ ಆ ಮಾತನ್ನು ಕೇಳಿ ಪೂಜ್ಯನಾದ ಸನತ್ಕುಮಾರನು ಅದನ್ನು ಯಥಾವತ್ತಾಗಿ ಹೇಳಿದನು.

ಸನತ್ಕುಮಾರನು ಹೇಳಿದನು :—ಬ್ರಾಹ್ಮಣನಾದ ನಾರದನೇ! ಯಾವ ಜನ್ಮದಲ್ಲಿ ನಿನಗೆ ರುದ್ರನಿಂದ ಶ್ರೀಕೃಷ್ಣರಹಸ್ಯವು ಹೇಗೆ ಉಪದೇಶಿಸಲ್ಪಟ್ಟಿತೆಂಬುದನ್ನು ಈಗ ಹೇಳುವೆನು, ಸಾವಧಾನಚಿತ್ತನಾಗಿ ಕೇಳು.

ಸಂಪ್ರಷ್ಟುಂ ಪರಮಂ ತತ್ವಂ ಶಿವಂ ಕೈಲಾಸವಾಸಿನಂ ।
ತ್ವಯಾ ಪೃಷ್ಟೋ ಮಹಾದೇವೋ ರಹಸ್ಯಂ ಸ್ವಪ್ರಕಾಶಿತಂ ॥ ೯ ॥

ಕಥಯಾಮಾಸ ತತ್ವೇನ ನಿತ್ಯಲೀಲಾನುಗಂ ಹರೇಃ ।
ತತಸ್ತದಂತೇ ತು ಪುನಸ್ತ್ವಯಾ ವಿಜ್ಞಾಪಿತೋ ಹರಃ ॥ ೧೦ ॥

ನಿತ್ಯಾಂ ಲೀಲಾಂ ಹರೇರ್ದ್ರಷ್ಟುಂ ತತಃ ಪ್ರಾಹ ಸದಾಶಿವಃ ।
ಗೋಪೀಜನಪದಸ್ಯಾಂತೇ ವಲ್ಲಭೇತಿ ಪದಂ ತತಃ ॥ ೧೧ ॥

ಚರಣಾಚ್ಛರಣಂ ಪಶ್ಚಾತ್ಪ್ರಪದ್ಯೇ ಇತಿ ವೈ ಮನುಃ ।
ಮಂತ್ರಸ್ಯಾಸ್ಯ ಋಷಿಃ ಪ್ರೋಕ್ತೋ ಸುರಭಿಶ್ಛಂದ ಏವ ಚ ॥ ೧೨ ॥

---

೭-೯. ಈ ಸಾರಸ್ವತಕಲ್ಪಕ್ಕೆ ಹಿಂದೆ ಇಪ್ಪತ್ತೈದನೆಯ ಕಲ್ಪದಲ್ಲಿ ನೀನು ನಾರದನೆಂಬ ಹೆಸರಿನಿಂದ ಕಶ್ಯಪಕುಲದಲ್ಲಿ ಹುಟ್ಟಿದ್ದೆ. ಆಗ ಒಂದುದಿನ ನೀನು ಯೋಗಿಯಾದ ಕೃಷ್ಣನ ಪರಮ ತತ್ವವನ್ನು ಕೈಲಾಸವಾಸಿಯಾದ ಶಿವನಿಂದ ಕೇಳಲು ಕೈಲಾಸಕ್ಕೆ ಹೋಗಿದ್ದೆ.

೯-೧೦. ನೀನು ಶಿವನನ್ನು ಕೇಳಲು ಅವನು ತನ್ನಿಂದ ಪ್ರಕಾಶಿತವಾದ ಹರಿಯ ನಿತ್ಯಲೀಲಾ ರಹಸ್ಯವನ್ನು ಯಥಾವತ್ತಾಗಿ ಹೇಳಿದನು.

೧೦-೧೧. ಆ ಉಪದೇಶವು ಮುಗಿದಮೇಲೆ ಹರಿಯ ನಿತ್ಯಲೀಲೆಯನ್ನು ನೋಡಬೇಕೆಂದು ನೀನು ಪುನಃ ವಿಜ್ಞಾಪಿಸಲಾಗಿ ಸದಾಶಿವನು ಅದನ್ನೂ ಹೇಳಿದನು.

೧೧-೧೩. "ಗೋಪೀಜನವಲ್ಲಭಚರಣಾಚ್ಛರಣಂ ಪ್ರಪದ್ಯೇ" ಎಂಬುದೊಂದು ಪ್ರಸಿದ್ಧಮಂತ್ರವು. ಇದಕ್ಕೆ ಸುರಭಿಯೇ ಋಷಿ, ಗಾಯತ್ರೀ

ಗಾಯತ್ರೀ ದೇವತಾ ಚಾಸ್ಯ ವಲ್ಲವೀವಲ್ಲಭೋ ವಿಭುಃ |
ಪ್ರಪನ್ನೋಽಸ್ಮೀತಿ ತದ್ಭಕ್ತೌ ವಿನಿಯೋಗ ಉದಾಹೃತಃ || ೧೩ ||

ನಾಸ್ಯ ಸಿದ್ಧಾದಿಕಂ ವಿಪ್ರ ಶೋಧನಂ ನ್ಯಾಸಕಲ್ಪನಂ |
ಕೇವಲಂ ಚಿಂತನಂ ಸದ್ಯೋ ನಿತ್ಯಲೀಲಾಪ್ರಕಾಶಕಂ || ೧೪ ||

ಅಭ್ಯಂತರಸ್ಯ ಧರ್ಮಸ್ಯ ಸಾಧನಂ ವಚ್ಮಿ ಸಾಂಪ್ರತಂ || ೧೫ ||

ಸಂಗೃಹ್ಯ ಮಂತ್ರಂ ಗುರುಭಕ್ತಿಯುಕ್ತೋ
ವಿಚಿಂತ್ಯ ಸರ್ವಂ ಮನಸಾ ತದೀಹಿತಂ |
ಕೃಪಾಂ ತದೀಯಾಂ ನಿಜಧರ್ಮಸಂಸ್ಥೋ
ವಿಭಾವಯನ್ನಾತ್ಮನಿ ತೋಷಯೇದ್ಗುರುಂ || ೧೬ ||

---

ಛಂದಸ್ಸು, ಗೋಪೀಜನವಲ್ಲಭನಾದ ಸ್ವಾಮಿಯೇ ದೇವತೆಯು. ಈ ಮಂತ್ರಕ್ಕೆ "ಪ್ರಪನ್ನೋಽಸ್ಮಿ" ಎಂಬುದಾಗಿ ಕೃಷ್ಣಭಕ್ತಿಸಂಪಾದನೆಯಲ್ಲಿ ವಿನಿಯೋಗವು ಉಕ್ತವಾಗಿದೆ.

೧೪. ಬ್ರಾಹ್ಮಣನಾದ ನಾರದನೇ! ಇದಕ್ಕೆ ಇತರ ಮಂತ್ರಗಳಂತೆ ಸಿದ್ಧಾದಿ ಶೋಧನೆ, ನ್ಯಾಸ ಮುಂತಾದುವುಗಳಿಲ್ಲ. ಈ ಮಂತ್ರದ ಚಿಂತನೆ ಮಾತ್ರವೇ ಶ್ರೇಯಸ್ಕರವಾದುದು. ಅದರಿಂದ ಕೂಡಲೇ ನಿತ್ಯಲೀಲಾ ಪ್ರಕಾಶವಾಗುವುದು.

ಈಗ ಅಂತರಂಗ ಧರ್ಮಕ್ಕೆ ಸಾಧನವನ್ನು ಹೇಳುವೆನು:—

೧೬. ಗುರುಭಕ್ತಿಸಂಪನ್ನನಾಗಿ ಮಂತ್ರವನ್ನು ಸಂಗ್ರಹಿಸಿ, ಗುರುಗಳ ವ್ಯಾಪಾರವೆಲ್ಲವನ್ನೂ ಮನಸ್ಸಿನಲ್ಲಿ ಚಿಂತಿಸಿ, ಅವರ ದಯೆಯನ್ನು ಮನಸ್ಸಿನಲ್ಲಿ ಪರಿಭಾವನೆಮಾಡುತ್ತಾ, ಸ್ವಧರ್ಮನಿಷ್ಠನಾಗಿ ಗುರುಗಳನ್ನು ಸಂತೋಷ ಪಡಿಸಬೇಕು.

**ಸತಾಂ ಶಿಕ್ಷೇತ ವೈ ಧರ್ಮಾನ್ಪ್ರಪನ್ನಾನಾಂ ಭಯಾಪಹಾನ್ ।**
**ಐಹಿಕಾಮುಷ್ಮಿಕೀ ಚಿಂತಾವಿಧುರಾನ್ ಸಿದ್ಧಿದಾಯಕಾನ್ ॥ ೧೭ ॥**

**ಸ್ವೇಷ್ಟದೇವಧಿಯಾ ನಿತ್ಯಂ ತೋಷಯೇದ್ವೈಷ್ಣವಾಂಸ್ತಥಾ ।**
**ಭರ್ತ್ಸನಾದಿಕಮೇತೇಷಾಂ ನ ಕದಾಚಿದ್ವಿಚಿಂತಯೇತ್ ॥ ೧೮ ॥**

**ಪೂರ್ವಕರ್ಮವಶಾದ್ಭವ್ಯಮೈಹಿಕಂ ಭೋಗಮೇವ ಚ ।**
**ಆಮುಷ್ಮಿಕಂ ತಥಾ ಕೃಷ್ಣಃ ಸ್ವಯಮೇವ ಕರಿಷ್ಯತಿ ॥ ೧೯ ॥**

**ಶ್ರೀಕೃಷ್ಣಂ ನಿತ್ಯಲೀಲಾಸ್ಥಂ ಚಿಂತಯೇತ್ಸ್ವಧಿಯಾನಿಶಂ ।**
**ಶ್ರೀಮದರ್ಚಾವತಾರೇಣ ಕೃಷ್ಣಂ ಪರಿಚರೇತ್ಸದಾ ॥ ೨೦ ॥**

**ಅನನ್ಯಚಿಂತನೀಯೋಽಸೌ ಪ್ರಪನ್ನೈಃ ಶರಣಾರ್ಥಿಭಿಃ ।**
**ಸ್ಥೇಯಂ ಚ ದೇಹಗೇಹಾದಾವುದಾಸೀನತಯಾ ಬುಧೈಃ ॥ ೨೧ ॥**

---

೧೭. ಶರಣಾಗತರಾದ ಸಜ್ಜನರಿಗೆ ಭಯಪರಿಹಾರಕವು, ಐಹಿಕಾಮುಷ್ಮಿಕಚಿಂತಾರಹಿತವು, ಸಿದ್ಧಿಪ್ರದಗಳೂ ಆದ ಧರ್ಮಗಳನ್ನು ಆಚರಿಸಬೇಕು.

೧೮. ಇಷ್ಟದೇವತೆಯೆಂಬ ಭಾವನೆಯಿಂದ ಯಾವಾಗಲೂ ವಿಷ್ಣುಭಕ್ತರನ್ನು ಸಂತೋಷಪಡಿಸಬೇಕು. ಯಾವಾಗಲೂ ಇವರಿಗೆ ಗದರಿಸುವುದೇ ಮುಂತಾದ ಧಿಕ್ಕಾರವನ್ನು ಮಾಡಬೇಕೆಂದು ಮನಸ್ಸಿನಲ್ಲಿಯೂ ಯೋಚಿಸಬಾರದು.

೧೯. ಪ್ರಾಚೀನಕರ್ಮಗಳಿಗನುಸಾರವಾಗಿ ಅನುಭವಿಸಬೇಕಾದ ಐಹಿಕಾಮುಷ್ಮಿಕ ಭೋಗಗಳನ್ನು ಕೃಷ್ಣನು ತಾನಾಗಿಯೇ ಒದಗಿಸಿಕೊಡುವನು.

೨೦. ಸರ್ವದಾ ವಿಹಾರಶೀಲನಾದ ಶ್ರೀಕೃಷ್ಣನನ್ನು ಯಾವಾಗಲೂ ಸ್ವೇಷ್ಟದೇವತೆಯೆಂಬ ಬುದ್ಧಿಯಿಂದ ಧ್ಯಾನಿಸಬೇಕು. ಸಂಪದ್ಯುಕ್ತ ಅರ್ಚಾವತಾರವಿಶಿಷ್ಟನಾದ ಕೃಷ್ಣನನ್ನು ಯಾವಾಗಲೂ ಸೇವಿಸಬೇಕು.

೨೧. ರಕ್ಷಣೆಯನ್ನು ಬಯಸುವ ಪ್ರಸನ್ನಜನರು ಶ್ರೀಕೃಷ್ಣನನ್ನು ಪ್ರಧಾನವಾಗಿ ಧ್ಯಾನಿಸಬೇಕು. ಜ್ಞಾನಿಗಳು ತಮ್ಮ ಶರೀರ, ಮನೆ ಮುಂತಾದುವುಗಳಲ್ಲಿ ಅಭಿಮಾನಬಿಟ್ಟು ಉದಾಸೀನಭಾವವನ್ನು ತಾಳಬೇಕು.

ಗುರೋರವಜ್ಞಾಂ ಸಾಧೂನಾಂ ನಿಂದಾಂ ಭೇದಂ ಹರೇ ಹರೌ |
ವೇದನಿಂದಾಂ ಹರೇರ್ನಾಮ ಬಲಾತ್ಪಾಪಸಮೀಹನಂ || ೨೨ ||

ಅರ್ಥವಾದಂ ಹರೇರ್ನಾಮ್ನಿ ಪಾಷಂಡಂ ನಾಮಸಂಗ್ರಹೇ |
ಅಲಸೇ ನಾಸ್ತಿಕೇ ಚೈವ ಹರಿನಾಮೋಪದೇಶನಂ || ೨೩ ||

ನಾಮವಿಸ್ಮರಣಂ ಚಾಪಿ ನಾಮ್ನ್ಯನಾದರಮೇವ ಚ |
ಸಂತ್ಯಜೇದ್ದೂರತೋ ವತ್ಸ ದೋಷಾನೇತಾನ್ಸುದಾರುಣಾನ್ || ೨೪ ||

ಪ್ರಪನ್ನೋಽಸ್ಮೀತಿ ಸತತಂ ಚಿಂತಯೇದ್ಧೃದ್ಗತಂ ಹರಿಂ |
ಸ ಏವ ಪಾಲನಂ ನಿತ್ಯಂ ಕರಿಷ್ಯತಿ ಮಮೇತಿ ಚ || ೨೫ ||

ತವಾಸ್ಮಿ ರಾಧಿಕಾನಾಥ ಕರ್ಮಣಾ ಮನಸಾ ಗಿರಾ |
ಕೃಷ್ಣಕಾಂತೇತಿ ಚೈವಾಸ್ಮಿ ಯುವಾಮೇವ ಗತಿರ್ಮಮ || ೨೬ ||

---

೨೨-೨೪. ವತ್ಸ! ಗುರುಗಳತಿರಸ್ಕಾರ, ಸಾಧುಗಳನಿಂದೆ, ಹರಿಹರ ಶಬ್ದವಾಚ್ಯನಾದ ಆತ್ಮನಿಗೆ ಭೇದ, ವೇದನಿಂದೆ, ಹರಿಯನಾಮಬಲದಿಂದ ಎಂದರೆ ಹರಿನಾಮವನ್ನು ಹೇಳಿಕೊಂಡು ಪಾಪಕೃತ್ಯಾಚರಣೆ, ಹರಿನಾಮದಲ್ಲಿ ಅರ್ಥವಾದ, ನಾಮಸಂಗ್ರಹದಲ್ಲಿ ಪಾಷಂಡಿತನ, ಸೋಮಾರಿಯಾದ ನಾಸ್ತಿಕನಿಗೆ ಹರಿನಾಮೋಪದೇಶ, ಹರಿನಾಮವನ್ನು ಮರೆಯುವುದು ಮತ್ತು ನಾಮದಲ್ಲಿ ಅನಾದರ ಎಂಬೀ ಅತ್ಯಂತ ಭಯಂಕರಗಳಾದ ದೋಷಗಳನ್ನು ದೂರ ಮಾಡಬೇಕು.

೨೫. "ನನ್ನ ಹೃದಯದಲ್ಲಿರುವ ಹರಿಗೆ ಶರಣಾಗತನಾಗಿರುವೆನು. ಅವನೇ ಯಾವಾಗಲೂ ನನ್ನನ್ನು ರಕ್ಷಿಸುವನು" ಎಂಬುದಾಗಿ ಯಾವಾಗಲೂ ಚಿಂತಿಸಬೇಕು.

೨೬. ರಾಧಾಪತಿಯಾದ ಕೃಷ್ಣನೇ! ನಾನು ಮಾಡುವ ವ್ಯಾಪಾರ, ನನ್ನ ಮನಸ್ಸು, ವಾಕ್ಕು ಇವುಗಳಲ್ಲೆಲ್ಲಾ ನಾನು ನಿನ್ನ ಅಧೀನನಾಗಿರುವೆನು. ಕೃಷ್ಣ ರಾಧಾದೇವಿಯೆಂಬ ನೀವಿಬ್ಬರೇ ನನಗೆ ಗತಿ ಎಂಬುದಾಗಿಯೂ ಚಿಂತಸಬೇಕು.

ದಾಸಾಃ ಸಖಾಯಃ ಪಿತರೋ ಪ್ರೇಯಸ್ಯಶ್ಚ ಹರೇರಿಹ ।
ಸರ್ವೇ ನಿತ್ಯಾ ಮುನಿಶ್ರೇಷ್ಠ ಚಿಂತನೀಯಾ ಮಹಾತ್ಮಭಿಃ ॥ ೨೭ ॥

ಗಮನಾಗಮನೇ ನಿತ್ಯಂ ಕರೋತಿ ವನಗೋಷ್ಠಯೋಃ ।
ಗೋಚಾರಣಂ ವಯಸ್ಯೈಶ್ಚ ವಿನಾ ಸುರವಿಘಾತನಂ ॥ ೨೮ ॥

ಸಖಾಯೋ ದ್ವಾದಶಾಖ್ಯಾತಾ ಹರೇಃ ಶ್ರೀದಾಮಪೂರ್ವಕಾಃ ।
ರಾಧಿಕಾಯಾಃ ಸುಶೀಲಾದ್ಯಾಃ ಸಖ್ಯೋ ದ್ವಾತ್ರಿಂಶದೀರಿತಾಃ ॥ ೨೯ ॥

ಆತ್ಮಾನಂ ಚಿಂತಯೇದ್ವತ್ಸ ತಾಸಾಂ ಮಧ್ಯೇ ಮನೋರಮಾಂ ।
ರೂಪಯೌವನಸಂಪನ್ನಾಂ ಕಿಶೋರೀಂ ಚ ಸ್ವಲಂಕೃತಾಂ ॥ ೩೦ ॥

---

೨೭. ಮುನಿಶ್ರೇಷ್ಠನೇ ! ಸಜ್ಜನರು ಈ ಲೋಕದಲ್ಲಿನ ಸ್ನೇಹಿತರು, ಪಿತೃಗಳು, ಕಾಂತೆಯರು ಇವರೆಲ್ಲರೂ ಹರಿಯ ದಾಸರೆಂದು ಯಾವಾಗಲೂ ಧ್ಯಾನಿಸಬೇಕು.

೨೮. ಶ್ರೀಕೃಷ್ಣನು ತನ್ನ ಜೊತೆಯ ಬಾಲಕರೊಡನೆ ಪ್ರತಿನಿತ್ಯವೂ ಗೋವುಗಳನ್ನು ವನಕ್ಕೆ ಕರೆದುಕೊಂಡು ಹೋಗಿ ಮೇಯಿಸಿ ಗೋಕುಲಕ್ಕೆ ತಿರುಗಿ ಕರೆದುಕೊಂಡು ಬರುತ್ತಿದ್ದನು. ಅವನು ದೇವತೆಗಳಿಗೆ ಯಾವಬಾಧೆಯೂ ಆಗದಂತೆ ವರ್ತಿಸುತ್ತಿದ್ದನು.

೨೯. ಸುದಾಮ ಮುಂತಾದ ಹನ್ನೆರಡು ಜನರು ಕೃಷ್ಣನ ಸ್ನೇಹಿತರು ಎಂದು ಅನುಸಂಧಾನಮಾಡಬೇಕು. ಸುಶೀಲಾ ಮುಂತಾದ ಮೂವತ್ತೆರಡು ಜನರು ರಾಧಾದೇವಿಗೆ ಸಖಿಯರು.

೩೦-೩೧. ವತ್ಸ! ಆ ಮೂವತ್ತೆರಡು ಸಖಿಯರ ಮಧ್ಯದಲ್ಲಿ ರಾಧಾದೇವಿಯನ್ನು ಮನೋಹರಳು, ರೂಪಯೌವ್ವನಸಂಪನ್ನಳು, ಬಾಲೆಯು, ಚೆನ್ನಾಗಿ ಅಲಂಕಾರಮಾಡಿಕೊಂಡಿರುವವಳು, ನಾನಾವಿಧ ಶಿಲ್ಪಕಲೆಗಳನ್ನು ಚೆನ್ನಾಗಿ ತಿಳಿದುಕೊಂಡಿರುವವಳು, ಶ್ರೀಕೃಷ್ಣನ ಭೋಗಕ್ಕೆ ಯೋಗ್ಯಳು ಮತ್ತು ಆ

ನಾನಾಶಿಲ್ಪಕಲಾಭಿಜ್ಞಾಂ ಕೃಷ್ಣಭೋಗಾನುರೂಪಿಣೀಂ |
ತತ್ಸೇವನಸುಖಾಹ್ಲಾದಭಾವೇನಾತಿಸುನಿರ್ವೃತಾಂ || ೩೧ ||

ಬ್ರಾಹ್ಮಂ ಮುಹೂರ್ತಮಾರಭ್ಯ ಯಾವದರ್ಧನಿಶಾ ಭವೇತ್ |
ತಾವತ್ಪರಿಚರೇತ್ತೌ ತು ಯಥಾಕಾಲಾನುಸೇವಯಾ || ೩೨ ||

ಸಹಸ್ರಂ ಚ ತಯೋರ್ನಾಮ್ನಾಂ ಪಠೇನ್ನಿತ್ಯಂ ಸಮಾಹಿತಃ |
ಏತತ್ಸಾಧನಮುದ್ದಿಷ್ಟಂ ಪ್ರಪನ್ನಾನಾಂ ಮುನೀಶ್ವರ || ೩೩ ||

ನಾಖ್ಯೇಯಂ ಕಸ್ಯಚಿತ್ತುಭ್ಯಂ ಮಯಾ ತತ್ವಂ ಪ್ರಕಾಶಿತಂ |

ಸನತ್ಕುಮಾರ ಉವಾಚ

ತತಸ್ತ್ವಂ ನಾರದ ಪುನಃ ಪೃಷ್ಟವಾನ್ಸೈ ಸದಾಶಿವಂ || ೩೪ ||

ನಾಮ್ನಾಂ ಸಹಸ್ರಂ ತಚ್ಚಾಪಿ ಪ್ರೋಕ್ತವಾಂಸ್ತಚ್ಛೃಣುಷ್ವ ಮೇ |
ಧ್ಯಾತ್ವಾ ವೃಂದಾವನೇ ರಮ್ಯೇ ಯಮುನಾತೀರಸಂಗತಂ || ೩೫ ||

---

ಕೃಷ್ಣನ ಸೇವೆಯಿಂದ ಲಬ್ಧವಾದ ಸುಖಾಸ್ವಾದಭಾವದಿಂದ ಅತ್ಯಂತ ಸುಖಪಡುತ್ತಿರುವವಳೂ ಆಗಿರುವಳೆಂದು ಚಿಂತಿಸಬೇಕು.

೩೨. ಬ್ರಾಹ್ಮಮೂಹೂರ್ತ ಎಂದರೆ ಅರುಣೋದಯಕಾಲದಿಂದ ಅರ್ಧರಾತ್ರಿಯವರೆಗೆ ಆಯಾ ಕಾಲಕ್ಕನುಗುಣವಾದ ಸೇವೆಗಳಿಂದ ಆ ರಾಧಾಕೃಷ್ಣರನ್ನು ಸೇವಿಸಬೇಕು.

೩೩. ಮುನೀಶ್ವರನೇ! ಪ್ರತಿದಿನವೂ ರಾಧಾಕೃಷ್ಣರ ಸಹಸ್ರನಾಮವನ್ನು ಏಕಾಗ್ರಚಿತ್ತದಿಂದ ಪಠನೆಮಾಡುವುದು ಭಕ್ತರಿಗೆ ಶ್ರೇಯಸ್ಸಾಧನವೆಂದು ಉಕ್ತವಾಗಿದೆ.

೩೪-೩೫. ನಾನು ನಿನಗೆ ಹೇಳಿರುವ ಈ ರಹಸ್ಯ ತತ್ವವನ್ನು ಯಾರಿಗೂ ಹೇಳಕೂಡದು.

ಸನತ್ಕುಮಾರನು ಹೇಳಿದನು—ನಾರದನೇ !, ನೀನು ಸದಾಶಿವನನ್ನು ಪುನಃ ಕೇಳಿದೆಯಷ್ಟೆ. ಆಗ ಸದಾಶಿವನು ಹೇಳಿದ್ದ ಸಹಸ್ರನಾಮವನ್ನು ಈಗ ನಾನು ನಿನಗೆ ಹೇಳುವೆನು ಕೇಳು.

ಕಲ್ಪವೃಕ್ಷಂ ಸಮಾಶ್ರಿತ್ಯ ತಿಷ್ಠಂತಂ ರಾಧಿಕಾಯುತಂ ।
ಪಠೇನ್ನಾಮಸಹಸ್ರಂತು ಯುಗಲಾಖ್ಯಂ ಮಹಾಮುನೇ ॥ ೩೬ ॥

ದೇವಕೀನಂದನಃ ಶೌರಿರ್ವಾಸುದೇವೋ ಬಲಾನುಜಃ ।
ಗದಾಗ್ರಜಃ ಕಂಸಮೋಹಃ ಕಂಸಸೇವಕಮೋಹನಃ ॥ ೩೭ ॥

ಭಿನ್ನಾರ್ಗಲೋ ಭಿನ್ನಲೋಹಃ ಪಿತೃವಾಹ್ಯಃ ಪಿತೃಸ್ತುತಃ ।
ಮಾತೃಸ್ತುತಃ ಶಿವಧ್ಯೇಯೋ ಯಮುನಾಜಲಭೇದನಃ ॥ ೩೮ ॥

ವ್ರಜವಾಸೀ ವ್ರಜಾನಂದೀ ನಂದಬಾಲೋ ದಯಾನಿಧಿಃ ।
ಲೀಲಾಬಾಲಃ ಪದ್ಮನೇತ್ರೋ ಗೋಕುಲೋತ್ಸವ ಈಶ್ವರಃ ॥ ೩೯ ॥

---

೩೫-೩೬. ಮಹಾಮುನಿಯೇ ! ಮನೋಹರವಾದ ವೃಂದಾವನದಲ್ಲಿ ಯಮುನಾನದಿಯ ತೀರದಲ್ಲಿದ್ದ ಕಲ್ಪವೃಕ್ಷವನ್ನಾಶ್ರಯಿಸಿಕೊಂಡಿರುವ ರಾಧಾ ಸಹಿತನಾದ ಕೃಷ್ಣನನ್ನು ಧ್ಯಾನಿಸಿ ಯುಗಲಾಖ್ಯವಾದ ನಾಮಸಹಸ್ರವನ್ನು ಪಠನೆ ಮಾಡಬೇಕು.

೩೭. (ಇನ್ನು ಮುಂದಿನ ತ್ತೊಂಬತ್ತೊಂದು ಶ್ಲೋಕಗಳಿಂದ ಶ್ರೀಕೃಷ್ಣ ಸಹಸ್ರನಾಮಗಳನ್ನು ಸಂಗ್ರಹಿಸಿರುತ್ತಾರೆ. ಅದನ್ನು ಹಾಗೆಯೇ ಪಾರಾಯಣ ಮಾಡುವುದರಿಂದ ಪುಣ್ಯ ಬರುತ್ತದೆ. ಆ ನಾಮಗಳ ಅರ್ಥವನ್ನು ತಿಳಿದು ಪಠನೆಮಾಡುವುದು ವಿಶೇಷಫಲಕಾರಿಯು. ಆದುದರಿಂದ ಅವುಗಳ ಅರ್ಥವನ್ನು ವಿವರಿಸಿದೆ). ದೇವಕೀದೇವಿಯ ಪುತ್ರನು, ಶೂರಸೇನಕುಲೋತ್ಪನ್ನನು, ವಸು ದೇವನ ಕುಮಾರ, ಬಲರಾಮನ ತಮ್ಮ, ಗದಾಗ್ರಜ, ಕಂಸಮೋಹಕ, ಕಂಸ ಸೇವಕಮೋಹಕ.

೩೮. ಅಗಳಿಯನ್ನು ತೆಗೆದವನು, ಲೋಹವನ್ನು ಭೇದಿಸಿದವನು, ಪಿತೃವಿನಿಂದ ಹೊರಲ್ಪಟ್ಟವನು, ತಂದೆಯಿಂದ ಸ್ತುತಿಸಲ್ಪಟ್ಟವನು, ತಾಯಿಯಿಂದ ಸ್ತುತಿಸಲ್ಪಟ್ಟವನು, ಶಿವನಿಂದ ಧ್ಯಾನಿಸಲ್ಪಟ್ಟವನು, ಯಮುನಾನದಿಯ ಜಲ ಭೇದಕನು.

೩೯. ಗೋಕುಲವಾಸಿ, ಗೋಕುಲಾನಂದಪ್ರದ, ನಂದಗೋಪಬಾಲ, ದಯಾ ನಿಧಿ, ಲೀಲಾಬಾಲ, ಕಮಲನಯನ, ಗೋಕುಲೋತ್ಸವಪ್ರದ, ಸರ್ವಸ್ವಾಮಿ.

ಗೋಪಿಕಾನಂದನಃ ಕೃಷ್ಣೋ ಗೋಪಾನಂದಃ ಸತಾಂಗತಿಃ ।
ಬಕಪ್ರಾಣಹರೋ ವಿಷ್ಣುರ್ಬಕಮುಕ್ತಿಪ್ರದೋ ಹರಿಃ ॥ ೪೦ ॥

ಬಲದೋಲಾಶಯಶಯಃ ಶ್ಯಾಮಲಃ ಸರ್ವಸುಂದರಃ ।
ಪದ್ಮನಾಭೋ ಹೃಷೀಕೇಶಃ ಕ್ರೀಡಾಮನುಜಬಾಲಕಃ ॥ ೪೧ ॥

ಲೀಲಾವಿಧ್ವಸ್ತ ಶಕಟೋ ವೇದಮಂತ್ರಾಭಿಷೇಚಿತಃ ।
ಯಶೋದಾನಂದನಃ ಕಾಂತೋ ಮುನಿಕೋಟಿನಿಷೇವಿತಃ ॥ ೪೨ ॥

ನಿತ್ಯಂ ಮಧುವನಾವಾಸೀ ವೈಕುಂಠಃ ಸಂಭವಃ ಕ್ರತುಃ ।
ರಮಾಪತಿರ್ಯದುಪತಿರ್ಮುರಾರಿರ್ಮಧುಸೂದನಃ ॥ ೪೩ ॥

ಮಾಧವೋ ಮಾನಹಾರೀ ಚ ಶ್ರೀಪತಿರ್ಭೂಧರಃ ಪ್ರಭುಃ ।
ಬೃಹದ್ವನಮಹಾಲೀಲೋ ನಂದಸೂನುರ್ಮಹಾಸನಃ ॥ ೪೪ ॥

---

೪೦. ಗೋಪಿಕಾಪುತ್ರ, ಕೃಷ್ಣ, ಗೋಪಾಲಕರಿಗೆ ಆನಂದಕಾರಕ, ಸಜ್ಜನರಿಗೆ ಸದ್ಗತಿಪ್ರದ, ಬಕನ ಪ್ರಾಣಾಪಹಾರಿ, ವಿಷ್ಣು, ಬಕನಿಗೆ ಮೋಕ್ಷಪ್ರದ, ಹರಿ.

೪೧. ಬಲರಾಮನ ತೊಟ್ಟಿಲಕೆಳಗೆ ಮಲಗಿರುವವನು, ಶ್ಯಾಮವರ್ಣೋಪೇತನು, ಸರ್ವಾಂಗಸುಂದರನು, ಹೊಕ್ಕಳಲ್ಲಿ ಪದ್ಮವುಳ್ಳವನು, ಇಂದ್ರಿಯಗಳಿಗೊಡೆಯನು, ಕ್ರೀಡಾಮಾನುಷಬಾಲವಿಗ್ರಹನು.

೪೨. ಅನಾಯಾಸವಾಗಿ ಶಕಟಾಸುರನನ್ನು ಕೊಂದವನು, ವೇದಮಂತ್ರಗಳಿಂದ ಅಭಿಷೇಕಮಾಡಿಸಿಕೊಳ್ಳಲ್ಪಟ್ಟವನು, ಯಶೋದೆಯ ಮಗ, ಮನೋಹರ, ಕೋಟ್ಯಂತರ ಮುನಿಗಳಿಂದ ಸೇವಿಸಲ್ಪಟ್ಟವನು.

೪೩. ಯಾವಾಗಲೂ ಮಧುವನವಾಸಿಯು, ವೈಕುಂಠನಾಮಕನು, ಜಗದುತ್ಪತ್ತಿಕಾರಣನು, ಯಜ್ಞಪ್ರಿಯನಾಮಕನು, ಲಕ್ಷ್ಮೀಪತಿ, ಯದುಪತಿ, ಮುರಶತ್ರು, ಮಧುನಾಮಕ ದೈತ್ಯಸಂಹಾರಿ.

೪೪. ರಮಾಪತಿ, ಗೋಪಿಯರ ಮಾನವನ್ನು ಅಪಹರಿಸಿದವನು, ಶ್ರೀಪತಿ, ಭೂಮಿಯನ್ನು ಧರಿಸಿರುವವನು, ಸಮರ್ಥನು, ಬೃಹದ್ವನದಲ್ಲಿ ಮಹಾಲೀಲೆಯನ್ನು ತೋರಿಸಿದವನು, ನಂದಕುಮಾರ, ಮಹಾಸನ.

ತೃಣಾವರ್ತಪ್ರಾಣಹಾರೀ ಯಶೋದಾವಿಸ್ಮಯಪ್ರದಃ ।
ತ್ರೈಲೋಕ್ಯವಕ್ತ್ರಃ ಪದ್ಮಾಕ್ಷಃ ಪದ್ಮಹಸ್ತಃ ಪ್ರಿಯಂಕರಃ ॥ ೪೫ ॥

ಬ್ರಹ್ಮಣ್ಯೋ ಧರ್ಮಗೋಪ್ತಾ ಚ ಭೂಪತಿಃ ಶ್ರೀಧರಃ ಸ್ವರಾಟ್ ।
ಅಜಾಧ್ಯಕ್ಷಃ ಶಿವಾಧ್ಯಕ್ಷೋ ಧರ್ಮಾಧ್ಯಕ್ಷೋ ಮಹೇಶ್ವರಃ ॥ ೪೬ ॥

ವೇದಾಂತವೇದ್ಯೋ ಬ್ರಹ್ಮಸ್ಥಃ ಪ್ರಜಾಪತಿರಮೋಘದೃಕ್ ।
ಗೋಪೀಕರಾವಲಂಬೀ ಚ ಗೋಪಬಾಲಕಸುಪ್ರಿಯಃ ॥ ೪೭ ॥

ಬಾಲಾನುಯಾಯೀ ಬಲವಾನ್ ಶ್ರೀದಾಮಪ್ರಿಯ ಆತ್ಮವಾನ್ ।
ಗೋಪೀಗೃಹಾಂಗಣರತಿರ್ಭದ್ರಃ ಸುಶ್ಲೋಕಮಂಗಲಃ ॥ ೪೮ ॥

ನವನೀತಹರೋ ಬಾಲೋ ನವನೀತಪ್ರಿಯಾಶನಃ ।
ಬಾಲವೃಂದೀ ಮರ್ಕವೃಂದೀ ಚಕಿತಾಕ್ಷಃ ಪಲಾಯಿತಃ ॥ ೪೯ ॥

---

೪೫. ತೃಣಾವರ್ತನೆಂಬುವನ ಪ್ರಾಣವನ್ನಪಹರಿಸಿದವನು, ಯಶೋದೆಗೆ ಆಶ್ಚರ್ಯವನ್ನುಂಟುಮಾಡಿದವನು, ಮೂರುಲೋಕಗಳನ್ನೂ ಬಾಯಿಯಲ್ಲಿ ತೋರಿಸಿದವನು, ಕಮಲನೇತ್ರ, ಕೈಯಲ್ಲಿ ಪದ್ಮವನ್ನು ಧರಿಸದವನು, ಪ್ರಿಯಕಾರಿ.

೪೬. ಗುಣಪರಿಪೂರ್ಣ, ಧರ್ಮರಕ್ಷಕ, ಭೂಪಾಲ, ಶ್ರೀಧರ, ಸ್ವತಂತ್ರ ಬ್ರಹ್ಮನಿಯಾಮಕ, ಶಿವಸ್ವಾಮಿ, ಧರ್ಮಪ್ರವರ್ತಕ, ಮಹೇಶ್ವರ.

೪೭. ವೇದಾಂತವೇದ್ಯನು, ಬ್ರಹ್ಮಾಂತರ್ಗತ, ಪ್ರಜಾಸ್ವಾಮಿ, ಪೂರ್ಣಜ್ಞಾನಿ, ಗೋಪಿಯ ಹಸ್ತವನ್ನವಲಂಬಿಸಿರುವವನು, ಗೋಪಾಲರಿಗತ್ಯಂತ ಪ್ರಿಯನು.

೪೮. ಬಾಲಕರನ್ನನುಸರಿಸುವವನು, ಶಕ್ತನು, ಸುದಾಮಮಿತ್ರನು, ಆತ್ಮಗುಣಸಂಪನ್ನನು, ಗೋಪಸ್ತ್ರೀಯರ ಮನೆಗಳ ಅಂಗಳದಲ್ಲಿ ಕ್ರೀಡಿಸುವವನು ಭದ್ರನು, ಮಂಗಳಕರ, ಸುಚರಿತನು.

೪೯. ಬೆಣ್ಣೆಯನ್ನು ಅಪಹರಿಸಿದವನು, ಬಾಲನು, ಬೆಣ್ಣೆಯನ್ನು ತಿನ್ನುವುದರಲ್ಲಿ ಪ್ರೀತಿಯುಳ್ಳವನು, ಬಾಲಸಂಘವುಳ್ಳವನು, ಮರ್ಕಟಸಮೂಹದಿಂದ ಸಹಿತನು, ಚಕಿತಾಕ್ಷನು, ಓಡುವವನು.

ಯಶೋದಾತರ್ಜಿತಃ ಕಂಪೀ ಮಾಯಾರುದಿತಶೋಭನಃ ।
ದಾಮೋದರೋಽಪ್ರಮೇಯಾತ್ಮಾ ದಯಾಲುರ್ಭಕ್ತವತ್ಸಲಃ ॥ ೫೦ ॥

ಸುಬದ್ಧೋಲೂಖಲೇ ನಮ್ರಶಿರಾ ಗೋಪೀಕದರ್ಥಿತಃ ।
ವೃಕ್ಷಭಂಗೀ ಶೋಕಭಂಗೀ ಧನದಾತ್ಮಜಮೋಕ್ಷಣಃ ॥ ೫೧ ॥

ದೇವರ್ಷಿವಚನಶ್ಲಾಘೀ ಭಕ್ತವಾತ್ಸಲ್ಯಸಾಗರಃ ।
ವ್ರಜಕೋಲಾಹಲಕರೋ ವ್ರಜಾನಂದವಿವರ್ಧನಃ ॥ ೫೨ ॥

ಗೋಪಾತ್ಮಾ ಪ್ರೇರಕಃ ಸಾಕ್ಷೀ ವೃಂದಾವನನಿವಾಸಕೃತ್ ।
ವತ್ಸಪಾಲೋ ವತ್ಸಪತಿರ್ಗೋಪದಾರಕಮಂಡನಃ ॥ ೫೩ ॥

---

೫೦. ಯಶೋದೆಯು ಗದರಿಸಿದರೆ ನಡಗುವವನು, ಮಾಯಾರೋದನದಿಂದ ಶೋಭಿಸುವವನು, ದಾಮೋದರ, ಪ್ರಮಾಣಕ್ಕೆ ಸಿಲುಕದ ಸ್ವರೂಪವುಳ್ಳವನು, ದಯಾಲು, ಭಕ್ತಪ್ರಿಯ.

೫೧. ಚೆನ್ನಾಗಿ ಒರಳಿನಲ್ಲಿ ಕಟ್ಟಲ್ಪಟ್ಟವನು, ತಲೆಯನ್ನು ಬಾಗಿಸಿರುವವನು, ಗೋಪಿಕಾಸ್ತ್ರೀಯರಿಂದ ನಿಂದಿತನು, ವೃಕ್ಷಭಂಜಕ, ಶೋಕಭಂಜಕ, ಕುಬೇರಪುತ್ರರನ್ನು ಬಿಡುಗಡೆಮಾಡಿದವನು.

೫೨. ನಾರದನ ಮಾತನ್ನು ಹೊಗಳುವವನು, ಭಕ್ತವಾತ್ಸಲ್ಯನಿಧಿ, ವೃಂದಾವನದಲ್ಲಿ ಕೋಲಾಹಲವನ್ನುಂಟುಮಾಡುವವನು, ವ್ರಜಾನಂದಾಭಿವರ್ಧಕನು.

೫೩. ಗೋಪವೇಷಧಾರಿ, ಸರ್ವಪ್ರೇರಕ, ಸರ್ವಸಾಕ್ಷಿ, ವೃಂದಾವನದಲ್ಲಿ ವಾಸಿಸುವನು, ಕರುವನ್ನು ಪಾಲಿಸುವವನು, ವತ್ಸಪತಿಯು, ಗೋಪಸ್ತ್ರೀಯರಿಗೆ ಅಲಂಕಾರಪ್ರಾಯನು.

ಬಾಲಕ್ರೀಡೋ ಬಾಲರತಿರ್ಬಾಲಕಃ ಕನಕಾಂಗದೀ |
ಪೀತಾಂಬರೋ ಹೇಮಮಾಲೀ ಮಣಿಮುಕ್ತಾವಿಭೂಷಣಃ || ೫೪ ||

ಕಿಂಕಿಣೀ ಕಟಕೀ ಸೂತ್ರೀ ನೂಪುರೀ ಮುದ್ರಿಕಾನ್ವಿತಃ |
ವತ್ಸಾಸುರಪತಿಧ್ವಂಸೀ ಬಕಾಸುರವಿನಾಶನಃ || ೫೫ ||

ಅಘಾಸುರವಿನಾಶೀ ಚ ವಿನಿದ್ರೀಕೃತಬಾಲಕಃ |
ಆದ್ಯ ಆತ್ಮಪ್ರದಃ ಸಂಜ್ಞೀ ಯಮುನಾತೀರಭೋಜನಃ || ೫೬ ||

ಗೋಪಾಲಮಂಡಲೀಮಧ್ಯಃ ಸರ್ವಗೋಪಾಲಭೂಷಣಃ |
ಕೃತಹಸ್ತತಲಗ್ರಾಸೋ ವ್ಯಂಜನಾಶ್ರಿತಶಾಕಿಕಃ || ೫೭ ||

---

೫೪–೫೫. ಹುಡುಗರಂತೆ ಆಟವಾಡುವವನು, ಬಾಲಾಸಕ್ತನು, ಬಾಲಕನು. ಸುವರ್ಣಾಭರಣಧಾರಿ, ಪೀತಾಂಬರವನ್ನುಟ್ಟಿರುವವನು, ಸ್ವರ್ಣಮಾಲೆಯನ್ನು ಹಾಕಿಕೊಂಡಿರುವವನು, ರತ್ನಮುತ್ತುಗಳಿಂದ ಅಲಂಕೃತನು, ಕಿರುಗೆಜ್ಜೆಯನ್ನು ಕಟ್ಟಿಕೊಂಡಿರುವವನು, ಕಡಗ, ಉಡುದಾರ, ಕಾಲಂದಿಗೆ, ಉಂಗುರಗಳನ್ನು ಧರಿಸಿರುವವನು, ವತ್ಸನೆಂಬ ಅಸುರರಾಜನನ್ನು ನಾಶಮಾಡಿದವನು, ಬಕಾಸುರಸಂಹಾರಕನು.

೫೬. ಅಘಾಸುರವಿನಾಶಕನು, ಬಾಲಕರಿಗೆ ನಿದ್ರೆಯಿಲ್ಲದಂತೆ ಮಾಡಿದವನು, ಜಗದಾದಿಕಾರಣನು, ಸ್ವರೂಪದಾತೃವು, ನಾಮಧೇಯವುಳ್ಳವನು, ಯಮುನಾನದಿಯ ತೀರದಲ್ಲಿ ಊಟಮಾಡುತ್ತಿರುವವನು.

೫೭. ಗೋಪಾಲಕಸಮೂಹದ ಮಧ್ಯದಲ್ಲಿ ಇರುವವನು, ಸಕಲ ಗೋಪಾಲಕರಿಗೂ ಅಲಂಕಾರಪ್ರಾಯನು, ಅಂಗೈಯಲ್ಲಿ ತರಕಾರಿಗಳಿಂದ ರಚಿತ ವ್ಯಂಜನಸಹಿತವಾದ ಗ್ರಾಸವನ್ನು ರಚಿಸಿದವನು.

ಕೃತೆಬಾಹುಶ್ರಂಗಯಷ್ಟಿರ್ಗುಂಜಾಲಂಕೃತಕಂಠಕಃ ।
ಮಯೂರಪಿಚ್ಛಮುಕುಟೋ ವನಮಾಲಾವಿಭೂಷಿತಃ ॥ ೫೮ ॥

ಗೈರಿಕಾಚಿತ್ರಿತವಪುರ್ನವಮೇಘವಪುಃ ಸ್ಮರಃ ।
ಕೋಟಿಕಂದರ್ಪಲಾವಣ್ಯೋ ಲಸನ್ಮಕರಕುಂಡಲಃ ॥ ೫೯ ॥

ಆಜಾನುಬಾಹುರ್ಭಗವಾನ್ ನಿದ್ರಾರಹಿತಲೋಚನಃ ।
ಕೋಟಿಸಾಗರಗಾಂಭೀರ್ಯಃ ಕಾಲಕಾಲಃ ಸದಾಶಿವಃ ॥ ೬೦ ॥

ವಿರಂಚಿಮೋಹನವಪುರ್ಗೋಪವತ್ಸವಪುರ್ಧರಃ ।
ಬ್ರಹ್ಮಾಂಡಕೋಟಿಜನಕೋ ಬ್ರಹ್ಮಮೋಹವಿನಾಶಕಃ ॥ ೬೧ ॥

---

೫೮. ದಂಡಾಕಾರವಾದ ಕೊಂಬುಗಳಂತೆ ಬಾಹುಗಳನ್ನು ಮಾಡಿಕೊಂಡಿರುವವನು, ಗುಂಜೆಗಳಿಂದ ಅಲಂಕರಿಸಲ್ಪಟ್ಟ ಕಂಠವುಳ್ಳವನು, ನವಿಲಗರಿಯ ಕಿರೀಟವುಳ್ಳವನು, ವನಮಾಲೆಯಿಂದ ಅಲಂಕೃತನು.

೫೯. ಗೈರಿಕೆಯೆಂಬ ಧಾತುವಿನಿಂದ ಬರೆಯಲ್ಪಟ್ಟ ಚಿತ್ರಗಳುಳ್ಳ ಶರೀರವುಳ್ಳವನು, ನೂತನಮೇಘದಂತೆ ಹೊಳೆಯುವ ಶರೀರವುಳ್ಳವನು, ಮನ್ಮಥನು, ಕೋಟಿಮನ್ಮಥರಿಗೆ ಸಮಾನವಾದ ಲಾವಣ್ಯವುಳ್ಳವನು,ಹೊಳೆಯುತ್ತಿರುವ ಮಕರಕುಂಡಲಗಳುಳ್ಳವನು.

೬೦. ಆಜಾನುಬಾಹುಗಳುಳ್ಳವನು, ಷಡ್ಗುಣೈಶ್ವರ್ಯಸಂಪನ್ನನು, ನಿದ್ರೆಯಿಲ್ಲದ ಕಣ್ಣುಗಳುಳ್ಳವನು, ಕೋಟಿಸಮುದ್ರಗಳಂತೆ ಗಂಭೀರನಾಗಿರುವವನು, ಕಾಲನಿಗೂ ಕಾಲಪ್ರಾಯನು, ಸದಾಶಿವನು.

೬೧. ಚತುರ್ಮುಖಬ್ರಹ್ಮನಿಗೆ ಮೋಹಪಡಿಸುವ ಶರೀರವುಳ್ಳವನು, ಗೋಪಾಲಕರ ಮಕ್ಕಳಂತೆ ಶರೀರವನ್ನು ಧರಿಸಿರುವವನು, ಕೋಟಿ ಬ್ರಹ್ಮಾಂಡಸೃಷ್ಟಿಕರ್ತನು, ಬ್ರಹ್ಮನ ಮೋಹವನ್ನು ನಾಶಪಡಿಸಿದವನು.

ಬ್ರಹ್ಮಾ ಬ್ರಹ್ಮೇಡಿತಃ ಸ್ವಾಮೀ ಶಕ್ರದರ್ಪಾದಿನಾಶನಃ ।
ಗಿರಿಪೂಜೋಪದೇಷ್ಟಾ ಚ ಧೃತಗೋವರ್ಧನಾಚಲಃ ॥ ೬೨ ॥

ಪುರಂದರೇಡಿತಃ ಪೂಜ್ಯಃ ಕಾಮಧೇನುಪ್ರಪೂಜಿತಃ ।
ಸರ್ವತೀರ್ಥಾಭಿಷಿಕ್ತಶ್ಚ ಗೋವಿಂದೋ ಗೋಪರಕ್ಷಕಃ ॥ ೬೩ ॥

ಕಾಲಿಯಾರ್ತಿಕರಃ ಕ್ರೂರೋ ನಾಗಪತ್ನೀಡಿತೋ ವಿರಾಟ್ ।
ಧೇನುಕಾರಿಃ ಪ್ರಲಂಬಾರಿರ್ವೃಷಾಸುರವಿಮರ್ದನಃ ॥ ೬೪ ॥

ಮಾಯಾಸುರಾತ್ಮಜಧ್ವಂಸೀ ಕೇಶಿಕಂಠವಿದಾರಕಃ ।
ಗೋಪಗೋಪ್ತಾ ಧೇನುಗೋಪ್ತಾ ದಾವಾಗ್ನಿಪರಿಶೋಷಕಃ ॥ ೬೫ ॥

---

೬೨. ಪರಬ್ರಹ್ಮನು, ಚತುರ್ಮುಖನಿಂದ ಸ್ತುತಿಸಲ್ಪಟ್ಟವನು, ಸ್ವಾಮಿಯು, ಇಂದ್ರನ ಗರ್ವಾದಿಗಳನ್ನು ಅಪಹಾರಮಾಡಿದವನು, ಗಿರಿಪೂಜೋಪದೇಶಕ, ಗೋವರ್ಧನಪರ್ವತವನ್ನು ಎತ್ತಿದವನು.

೬೩. ಪುರಂದರನಿಂದ ಸ್ತುತನು, ಪೂಜ್ಯನು, ಕಾಮಧೇನುಪೂಜಿತನು, ಸಕಲತೀರ್ಥಗಳಿಂದಲೂ ಅಭಿಷೇಕಮಾಡಿಸಿಕೊಳ್ಳಲ್ಪಟ್ಟಿರುವವನು, ವೇದವೇದ್ಯನು, ಗೋಪಾಲರಕ್ಷಕನು.

೬೪. ಕಾಲಿಯವೆಂಬ ಸರ್ಪವನ್ನು ಮರ್ದನಮಾಡಿದವನು, ಭಯಂಕರನು, ನಾಗಪತ್ನಿಯಿಂದ ಸ್ತುತನು, ವಿರಾಡ್ರೂಪನು, ಧೇನುಕಾಸುರವೈರಿ, ಪ್ರಲಂಬಾಸುರನ ಶತ್ರು, ವೃಷಾಸುರಮರ್ದನಕಾರಿ.

೬೫. ಮಾಯಾಸುರಪುತ್ರವಿನಾಶಕ, ಕೇಶಿಯ ಕಂಠವನ್ನು ಸೀಳಿದವನು, ಗೋಪರಕ್ಷಕ, ಗೋರಕ್ಷಕ, ಕಾಡುಗಿಚ್ಚನ್ನು ನುಂಗಿದವನು.

ಗೋಪಕನ್ಯಾವಸ್ತ್ರಹಾರೀ ಗೋಪಕನ್ಯಾವರಪ್ರದಃ ।
ಯಜ್ಞಪತ್ನ್ಯನ್ನಭೋಜೀ ಚ ಮುನಿಮಾನಾಪಹಾರಕಃ ॥ ೬೬ ॥

ಜಲೇಶಮಾನಮಥನೋ ನಂದಗೋಪಾಲಜೀವನಃ ।
ಗಂಧರ್ವಶಾಪಮೋಕ್ತಾ ಚ ಶಂಖಚೂಡಶಿರೋಹರಃ ॥ ೬೭ ॥

ವಂಶೀ ವಟೀ ವೇಣುವಾದೀ ಗೋಪೀಚಿಂತಾಪಹಾರಕಃ ।
ಸರ್ವಗೋಪ್ತಾ ಸಮಾಹ್ವಾನಃ ಸರ್ವಗೋಪೀಮನೋರಥಃ ॥ ೬೮ ॥

ವ್ಯಂಗಧರ್ಮಪ್ರವಕ್ತಾ ಚ ಗೋಪೀಮಂಡಲಮೋಹನಃ ।
ರಾಸಕ್ರೀಡಾರಸಾಸ್ವಾದೀ ರಸಿಕೋ ರಾಧಿಕಾಧವಃ ॥ ೬೯ ॥

---

೬೬. ಗೋಪಕನ್ಯೆಯರ ವಸ್ತ್ರಗಳನ್ನು ಅಪಹರಿಸಿದವನು, ಗೋಪಕನ್ಯೆಯರಿಗೆ ವರದನು, ಯಜ್ಞಪತ್ನಿಯರು ಕೊಟ್ಟ ಅನ್ನವನ್ನು ತಿಂದವನು, ಮುನಿಗಳ ಮಾನವನ್ನು ಅಪಹರಿಸಿದವನು.

೬೭. ವರುಣನ ಮಾನವನ್ನು ಮಥನಮಾಡಿದವನು, ನಂದಗೋಪಾಲನನ್ನು ಬದುಕಿಸಿದವನು, ಗಂಧರ್ವಶಾಪವಿಮೋಚಕ, ಶಂಖಚೂಡನ ಶಿರಸ್ಸನ್ನು ಕತ್ತರಿಸಿದವನು.

೬೮. ಕೊಳಲನ್ನು ಧರಿಸಿರುವವನು, ಆಲದೆಲೆಯ ಮೇಲೆ ಮಲಗಿರುವವನು, ಕೊಳಲೂದುತ್ತಿರುವವನು, ಗೋಪಿಯರ ಚಿಂತೆಯನ್ನು ಪರಿಹರಿಸಿದವನು, ಸರ್ವರಕ್ಷಕ, ಸಮಾಹ್ವಾನನು, ಸಕಲಗೋಪಿಯರ ಮನೋರಥವನ್ನು ಈಡೇರಿಸಿದವನು.

೬೯. ವ್ಯಂಗಧರ್ಮೋಪದೇಶಕ, ಗೋಪೀಸಮೂಹಮೋಹಕ, ರಾಸಕ್ರೀಡೆಯ ರಸವನ್ನು ಅನುಭವಿಸಿರುವವನು, ರಸಿಕನು, ರಸಿಕೆಯಾದ ರಾಧಾಪತಿಯು.

ಕಿಶೋರೀ ಪ್ರಾಣನಾಥಶ್ಚ ವೃಷಭಾನುಸುತಾಪ್ರಿಯಃ ।
ಸರ್ವಗೋಪೀಜನಾನಂದೀ ಗೋಪೀಜನವಿಮೋಹನಃ ॥ ೭೦ ॥

ಗೋಪಿಕಾಗೀತಚರಿತೋ ಗೋಪೀನರ್ತನಲಾಲಸಃ ।
ಗೋಪೀಸ್ಕಂಧಾಶ್ರಿತಕರೋ ಗೋಪಿಕಾಚುಂಬನಪ್ರಿಯಃ ॥ ೭೧ ॥

ಗೋಪಿಕಾಮಾರ್ಜಿತಮುಖೋ ಗೋಪೀವ್ಯಜನವೀಜಿತಃ ।
ಗೋಪಿಕಾಕೇಶಸಂಸ್ಕಾರೀ ಗೋಪಿಕಾಪುಷ್ಪಸಂಸ್ತರಃ ॥ ೭೨ ॥

ಗೋಪಿಕಾಹೃದಯಾಲಂಬೀ ಗೋಪೀವಹನತತ್ಪರಃ ।
ಗೋಪಿಕಾಮದಹಾರೀ ಚ ಗೋಪಿಕಾಪರಿಮಾರ್ಜಿತಃ ॥ ೭೩ ॥

ಗೋಪಿಕಾಕೃತಸಂಲೀಲೋ ಗೋಪಿಕಾಸಂಸ್ಮೃತಪ್ರಿಯಃ ।
ಗೋಪಿಕಾವಂದಿತಪದೋ ಗೋಪಿಕಾವಶವರ್ತನಃ ॥ ೭೪ ॥

---

೭೦. ಬಾಲಿಕೆಯರ ಪ್ರಾಣಕಾಂತನು, ಜಾಂಬವತೀಪ್ರಿಯನು, ಸಕಲ ಗೋಪಿಕಾಸ್ತ್ರೀಯರನ್ನೂ ಸಂತೋಷಪಡಿಸತಕ್ಕವನು, ಗೋಪಸ್ತ್ರೀಮೋಹಕನು.

೭೧. ಗೋಪಿಕೆಯರಿಂದ ಗಾನಮಾಡಲ್ಪಟ್ಟ ಚರಿತ್ರೆಯುಳ್ಳವನು, ಗೋಪಿಯರ ನರ್ತನಲಾಲಸನು, ಗೋಪಿಯರ ಭುಜದಮೇಲೆ ಕೈ ಹಾಕಿಕೊಂಡಿರುವವನು, ಗೋಪಿಯರನ್ನು ಮುದ್ದಾಡುವುದರಲ್ಲಿ ಆಸಕ್ತನು.

೭೨. ಗೋಪಿಯಿಂದ ತೊಳೆಸಲ್ಪಟ್ಟ ಮುಖವುಳ್ಳವನು, ಗೋಪಸ್ತ್ರೀಯರಿಂದ ಬೀಸಣಿಗೆಯಿಂದ ಬೀಸಿಸಿಕೊಳ್ಳುತ್ತಿರುವವನು, ಗೋಪಿಯರಿಂದ ಕೂದಲನ್ನು ಬಾಚಿಸಿಕೊಳ್ಳುತ್ತಿರುವವನು, ಗೋಪಿಯರಿಂದ ಹೂವನ್ನು ಮುಡಿಸಿಕೊಳ್ಳುತ್ತಿರುವವನು.

೭೩. ಗೋಪಿಯರ ಮನಸ್ಸನ್ನು ಅವಲಂಬಿಸಿರುವವನು, ಗೋಪೀವಹನಾಸಕ್ತನು, ಗೋಪೀಮದಪರಿಹಾರಕ, ಗೋಪಸ್ತ್ರೀಪರಿಮಾರ್ಜಿತನು.

೭೪. ಗೋಪಸ್ತ್ರೀಯರಿಂದ ವಿರಚಿತ ಸದ್ವಿಹಾರವುಳ್ಳವನು, ಗೋಪಿಯರಿಂದ ಸ್ಮರಿಸಲ್ಪಡುತ್ತಿರುವ ಪ್ರಿಯನು, ಗೋಪಿಯರಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳವನು, ಗೋಪಿಯರ ಅಧೀನದಲ್ಲಿರುವವನು.

ರಾಧಾಪರಾಜಿತಃ ಶ್ರೀಮಾನ್ನಿಕುಂಜೇಷು ವಿಹಾರವಾನ್ ।
ಕುಂಜಪ್ರಿಯಃ ಕುಂಜವಾಸೀ ವೃಂದಾವನವಿಕಾಸನಃ ॥ ೭೫ ॥

ಯಮುನಾಜಲಸಿಕ್ತಾಂಗೋ ಯಮುನಾಸೌಖ್ಯದಾಯಕಃ ।
ಶಶಿಸಂಸ್ತಂಭನಃ ಶೂರಃ ಕಾಮೀ ಕಾಮವಿಮೋಹನಃ ॥ ೭೬ ॥

ಕಾಮಾದ್ಯಃ ಕಾಮನಾಥಶ್ಚ ಕಾಮಮಾನಸಭೇದನಃ ।
ಕಾಮದಃ ಕಾಮರೂಪಶ್ಚ ಕಾಮಿನೀಕಾಮಸಂಚಯಃ ॥ ೭೭ ॥

ನಿತ್ಯಕ್ರೀಡೋ ಮಹಾಲೀಲಃ ಸರ್ವಃ ಸರ್ವಗತಸ್ತಥಾ ।
ಪರಮಾತ್ಮಾ ಪರಾಧೀಶಃ ಸರ್ವಕಾರಣಕಾರಣಃ ॥ ೭೮ ॥

---

೭೫. ರಾಧಾದೇವಿಗೆ ಸೋತಿರುವವನು, ಸಂಪದ್ಯುಕ್ತನು, ಲತಾಗೃಹದಲ್ಲಿ ವಿಹರಿಸುವವನು, ಲತಾಗೃಹಪ್ರಿಯ, ಲತಾಗೃಹನಿವಾಸಿ, ವೃಂದಾವನ ಪ್ರಕಾಶಕನು.

೭೬. ಯಮುನಾನದಿಯ ಉದಕದಿಂದ ಸೇಚನೆಮಾಡಿಸಿಕೊಳ್ಳಲ್ಪಟ್ಟ ಶರೀರವುಳ್ಳವನು, ಯಮುನಾದೇವಿಗೆ ಸೌಖ್ಯದಾತೃವು, ಚಂದ್ರನನ್ನು ಸ್ತಂಭನ ಮಾಡಿದವನು, ಪರಾಕ್ರಮಿ, ಕಾಮುಕ, ಕಾಮಮೋಹಕ.

೭೭. ಕಾಮನಿಗೂ ಮೂಲಕಾರಣ, ಕಾಮಸ್ವಾಮಿ, ಕಾಮಮನೋಭೇದಕ, ಕಾಮಪ್ರದ, ಕಾಮರೂಪಿ, ಕಾಮಿನಿಯರ ಕಾಮಸಮೂಹ ಸ್ವರೂಪನು.

೭೮. ಯಾವಾಗಲೂ ಕ್ರೀಡಿಸುತ್ತಿರುವವನು, ಮಹಾಲೀಲನು, ಸರ್ವಸ್ವಾಮಿ, ಸರ್ವಾಂತರ್ಗತ, ಪರಮಾತ್ಮ, ಪರಾಧೀಶ, ಸಕಲಕಾರಣಗಳಿಗೂ ಕಾರಣ.

ಗೃಹೀತನಾರದವಚಾ ಹ್ಯಕ್ರೂರಪರಿಚಿಂತಿತಃ |
ಅಕ್ರೂರವಂದಿತಪದೋ ಗೋಪಿಕಾತೋಷಕಾರಕಃ || ೭೯ ||

ಅಕ್ರೂರವಾಕ್ಯಸಂಗ್ರಾಹೀ ಮಥುರಾವಾಸಕಾರಣಃ |
ಅಕ್ರೂರತಾಪಶಮನೋ ರಜಕಾಯುಃ ಪ್ರಣಾಶನಃ || ೮೦ ||

ಮಥುರಾನಂದದಾಯೀ ಚ ಕಂಸವಸ್ತ್ರವಿಲುಂಠನಃ |
ಕಂಸವಸ್ತ್ರಪರೀಧಾನೋ ಗೋಪವಸ್ತ್ರಪ್ರದಾಯಕಃ || ೮೧ ||

ಸುದಾಮಗೃಹಗಾಮೀ ಚ ಸುದಾಮಪರಿಪೂಜಿತಃ |
ತಂತುವಾಯಕಸಂಪ್ರೀತಃ ಕುಬ್ಜಾಚಂದನಲೇಪನಃ || ೮೨ ||

---

೭೯. ನಾರದನ ವಚನವನ್ನು ಗ್ರಹಿಸಿದವನು, ಅಕ್ರೂರನಿಂದ ಧ್ಯಾನಿಸಲ್ಪಟ್ಟಿರುವವನು, ಅಕ್ರೂರನಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳವನು, ಗೋಪಸ್ತ್ರೀಯರಿಗೆ ಸಂತೋಷಕಾರಕನು.

೮೦. ಅಕ್ರೂರನ ವಚನವನ್ನು ಸಂಗ್ರಹಿಸಿದವನು, ಮಥುರಾವಾಸಕಾರಣನು, ಅಕ್ರೂರನ ದುಃಖಪರಿಹಾರಕನು, ರಜಕನ ಆಯುಸ್ಸನ್ನು ಪರಿಹರಿಸಿದವನು.

೮೧. ಮಥುರೆಯಲ್ಲಿನ ಜನರಿಗೆ ಆನಂದದಾಯಕನು, ಕಂಸನ ವಸ್ತ್ರವನ್ನು ಹಾರಿಸಿದವನು, ಕಂಸವಸ್ತ್ರಪರೀಧಾನನು, ಗೋಪವಸ್ತ್ರಪ್ರದಾಯಕನು.

೮೨. ಸುದಾಮನ ಮನೆಗೆ ಹೋಗಿದ್ದವನು, ಸುದಾಮನಿಂದ ಸತ್ಕರಿಸಲ್ಪಟ್ಟವನು, ನೆಯ್ಗೆಯವನಿಗೆ ಪ್ರಸನ್ನನಾದವನು, ಕುಬ್ಜೆಯು ಕೊಟ್ಟ ಗಂಧವನ್ನು ಹಚ್ಚಿಕೊಂಡವನು.

ಕುಬ್ಜಾರೂಪಪ್ರದೋ ವಿಜ್ಞೋ ಮುಕುಂದೋ ವಿಷ್ಟರಶ್ರವಾಃ |
ಸರ್ವಜ್ಞೋ ಮಥುರಾಲೋಕೀ ಸರ್ವಲೋಕಾಭಿನಂದನಃ || ೮೩ ||

ಕೃಪಾಕಟಾಕ್ಷದರ್ಶೀ ಚ ದೈತ್ಯಾರಿರ್ದೇವಪಾಲಕಃ |
ಸರ್ವದುಃಖಪ್ರಶಮನೋ ಧನುರ್ಭಂಗೀ ಮಹೋತ್ಸವಃ || ೮೪ ||

ಕುವಲಯಾಪೀಡಹಂತಾ ದಂತಸ್ಕಂಧಬಲಾಗ್ರಣೀಃ |
ಕಲ್ಪರೂಪಧರೋ ಧೀರೋ ದಿವ್ಯವಸ್ತ್ರಾನುಲೇಪನಃ || ೮೫ ||

ಮಲ್ಲರೂಪೋ ಮಹಾಕಾಲಃ ಕಾಮರೂಪೀ ಬಲಾನ್ವಿತಃ |
ಕಂಸತ್ರಾಸಕರೋ ಭೀಮೋ ಮುಷ್ಟಿಕಾಂತಶ್ಚ ಕಂಸಹಾ || ೮೬ ||

ಚಾಣೂರಘ್ನೋ ಭಯಹರಃ ಶಲಾರಿಃ ಕೋಸಲಾಂತಕಃ |
ವೈಕುಂಠವಾಸೀ ಕಂಸಾರಿಃ ಸರ್ವದುಷ್ಟನಿಷೂದನಃ || ೮೭ ||

---

೮೩. ಕುಬ್ಜೆಗೆ ಸೌಂದರ್ಯಕೊಟ್ಟವನು, ವಿಶೇಷಜ್ಞಾನಿಯು, ಮೋಕ್ಷಪ್ರದನು, ವಿಷ್ಟರಶ್ರವನು, ಸರ್ವಜ್ಞ, ಮಥುರಾಪಟ್ಟಣಕ್ಕೆ ಬೆಳಕನ್ನು ಉಂಟುಮಾಡಿದವನು, ಸಮಸ್ತಲೋಕಸಂತೋಷಕಾರಿಯು.

೮೪. ಕೃಪಾಕಟಾಕ್ಷದಿಂದ ನೋಡುವವನು, ದೈತ್ಯಶತ್ರು, ದೇವರಕ್ಷಕ, ಸರ್ವದುಃಖನಾಶಕ, ಧನುಸ್ಸನ್ನು ಮುರಿದವನು, ಮಹೋತ್ಸವಪ್ರದನು.

೮೫. ಕುವಲಯಾಪೀಡಸಂಹಾರಕ, ದಂತಸ್ಕಂಧಬಲಾಗ್ರಣಿ, ಕಲ್ಪರೂಪಧಾರಿ, ಧೀರ, ಮನೋಹರವಸ್ತ್ರ ಗಂಧಗಳನ್ನು ಧರಿಸಿರುವವನು.

೮೬. ಮಲ್ಲರೂಪನು, ಮಹಾಕಾಲಸ್ವರೂಪನು, ಕಾಮರೂಪಿಯು, ಶಕ್ತಿಯುತನು, ಕಂಸನಿಗೆ ಭೀತಿಕಾರಕನು, ಭಯಂಕರ, ಮುಷ್ಟಿಕನನ್ನು ಸಂಹರಿಸಿದವನು, ಕಂಸಸಂಹಾರಕನು.

೮೭. ಚಾಣೂರಹಂತೃವು, ಭಯಪರಿಹಾರಕನು, ಶಲವೈರಿಯು, ಕೋಸಲಸಂಹಾರಕನು, ವೈಕುಂಠವಾಸಿಯು, ಕಂಸವೈರಿ, ಸಕಲದುಷ್ಟಸಂಹಾರಕ.

ದೇವದುಂದುಭಿನಿರ್ಘೋಷೀ ಪಿತೃಶೋಕನಿವಾರಣಃ ।
ಯಾದವೇಂದ್ರಃ ಸತಾಂ ನಾಥೋ ಯಾದವಾರಿಪ್ರಮರ್ದನಃ ॥ ೮೮ ॥

ಶೌರಿಶೋಕವಿನಾಶೀ ಚ ದೇವಕೀತಾಪನಾಶನಃ ।
ಉಗ್ರಸೇನಪರಿತ್ರಾತಾ ಉಗ್ರಸೇನಾಭಿಪೂಜಿತಃ ॥ ೮೯ ॥

ಉಗ್ರಸೇನಾಭಿಷೇಕೀ ಚ ಉಗ್ರಸೇನದಯಾಪರಃ ।
ಸರ್ವಸಾತ್ವತಸಾಕ್ಷೀ ಚ ಯದೂನಾಮಭಿನಂದನಃ ॥ ೯೦ ॥

ಸರ್ವಮಾಥುರಸಂಸೇವ್ಯಃ ಕರುಣೋ ಭಕ್ತಬಾಂಧವಃ ।
ಸರ್ವಗೋಪಾಲಧನದೋ ಗೋಪೀಗೋಪಾಲಲಾಲಸಃ ॥ ೯೧ ॥

ಶೌರಿದತ್ತೋಪವೀತೀ ಚ ಉಗ್ರಸೇನದಯಾಕರಃ ।
ಗುರುಭಕ್ತೋ ಬ್ರಹ್ಮಚಾರೀ ನಿಗಮಾಧ್ಯಯನೇ ರತಃ ॥ ೯೨ ॥

೮೮. ದೇವದುಂದುಭಿಧ್ವನಿಯುಳ್ಳವನು, ಪಿತೃದುಃಖಪರಿಹಾರಕ, ಯಾದವೇಂದ್ರನು, ಸಜ್ಜನನಾಥನು, ಯಾದವಶತ್ರುಸಂಹಾರಕ.

೮೯. ವಸುದೇವನ ದುಃಖವನ್ನು ಪರಿಹರಿಸಿದವನು, ದೇವಕೀದೇವಿಯ ದುಃಖವನ್ನು ಪರಿಹರಿಸಿದವನು, ಉಗ್ರಸೇನರಕ್ಷಕ, ಉಗ್ರಸೇನಪರಿಪೂಜಿತನು.

೯೦. ಉಗ್ರಸೇನನಿಗೆ ರಾಜ್ಯಾಭಿಷೇಕವನ್ನು ಮಾಡಿಸಿದವನು, ಉಗ್ರಸೇನನಲ್ಲಿ ದಯಾಳು, ಸಕಲಯಾದವಸಾಕ್ಷಿ. ಯದುಗಳಿಗೆ ಸಂತೋಷಕಾರಿ.

೯೧. ಮಥುರಾಪಟ್ಟಣದ ಜನರೆಲ್ಲರಿಂದಲೂ|ಸೇವ್ಯನು, ದಯಾಮಯ, ಭಕ್ತಬಾಂಧವ, ಸಮಸ್ತಗೋಪಾಲಕರಿಗೂ ಧನಪ್ರದನು, ಗೋಪೀಗೋಪಾಲಪ್ರಿಯನು.

೯೨. ವಸುದೇವನಿಂದ ಉಪನಯನಮಾಡಿಸಿಕೊಳ್ಳಲ್ಪಟ್ಟವನು, ಉಗ್ರಸೇನದಯಾನಿಧಿ, ಗುರುಭಕ್ತ, ಬ್ರಹ್ಮಚಾರಿ, ವೇದಾಧ್ಯಯನಪರ.

**ಸಂಕರ್ಷಣಸಹಾಧ್ಯಾಯೀ ಸುದಾಮಸುಹೃದೇವ ಚ ।**
**ವಿದ್ಯಾನಿಧಿಃ ಕಲಾಕೋಶೋ ಮೃತಪುತ್ರಪ್ರದಸ್ತಥಾ ॥ ೯೩ ॥**

**ಚಕ್ರೀ ಪಾಂಚಜನೀ ಚೈವ ಸರ್ವನಾರಕಿಮೋಚನಃ ।**
**ಯಮಾರ್ಚಿತಃ ಪರೋ ದೇವೋ ನಾಮೋಚ್ಚಾರವಶೋಽಚ್ಯುತಃ ॥ ೯೪ ॥**

**ಕುಬ್ಜಾವಿಲಾಸೀ ಸುಭಗೋ ದೀನಬಂಧುರನೂಪಮಃ ।**
**ಅಕ್ರೂರಗೃಹಗೋಪ್ತಾ ಚ ಪ್ರತಿಜ್ಞಾಪಾಲಕಃ ಶುಭಃ ॥ ೯೫ ॥**

**ಜರಾಸಂಧಜಯೀ ವಿದ್ವಾನ್ ಯವನಾಂತೋ ದ್ವಿಜಾಶ್ರಯಃ ।**
**ಮುಚುಕುಂದಪ್ರಿಯಕರೋ ಜರಾಸಂಧಪಲಾಯಿತಃ ॥ ೯೬ ॥**

೯೩. ಸಂಕರ್ಷಣನ ಸಹಾಧ್ಯಾಯಿ, ಸುದಾಮನ ಸ್ನೇಹಿತನು, ವಿದ್ಯೆಗಳಿಗೆ ನಿಧಿಯು, ಕಲೆಗಳಿಗಾಕರನು, ಸತ್ತಪುತ್ರನನ್ನು ಬದುಕಿಸಿಕೊಟ್ಟವನು.

೯೪. ಚಕ್ರಾಯುಧಧಾರಿ, ಶಂಖಧಾರಿ, ನರಕವಾಸಿಗಳಿಗೆಲ್ಲಾ ಮೋಚಕನು, ಯಮನಿಂದಲೂ ಪೂಜಿತನು, ಉತ್ತಮನು, ಕ್ರೀಡಾದಿಗುಣಶಾಲಿಯು, ನಾಮ ಸಂಕೀರ್ತನೆಯಿಂದ ಪ್ರಸನ್ನನಾಗುವವನು, ನಾಶರಹಿತನು.

೯೫. ಕುಬ್ಜೆಯಲ್ಲಿ ವಿಲಾಸವನ್ನು ತೋರಿದವನು, ಮನೋಹರನು, ದೀನಬಂಧು, ಅಸದೃಶನು, ಅಕ್ರೂರಗೃಹರಕ್ಷಕ, ಪ್ರತಿಜ್ಞೆಯನ್ನು ಪಾಲಿಸತಕ್ಕವನು, ಮಂಗಳಸ್ವರೂಪಿಯು.

೯೬. ಜರಾಸಂಧನನ್ನು ಜಯಿಸಿದವನು, ಜ್ಞಾನಿಯು, ಯವನ ನಾಶಕನು, ದ್ವಿಜರಿಗಾಶ್ರಯನು, ಮುಚುಕುಂದನಿಗೆ ಉಪಕಾರಮಾಡಿದವನು, ಜರಾಸಂಧನನ್ನು ಓಡಿಸಿದವನು.

ದ್ವಾರಕಾಜನಕೋ ಗೂಢೋ ಬ್ರಹ್ಮಣ್ಯಃ ಸತ್ಯಸಂಗರಃ ।
ಲೀಲಾಧರಃ ಪ್ರಿಯಕರೋ ವಿಶ್ವಕರ್ಮಾ ಯಶಃಪ್ರದಃ ॥ ೯೭ ॥

ರುಕ್ಮಿಣೀಪ್ರಿಯಸಂದೇಶೋ ರುಕ್ಮಶೋಕವಿವರ್ಧನಃ ।
ಚೈದ್ಯಶೋಕಾಲಯಃ ಶ್ರೇಷ್ಠೋ ದುಷ್ಟರಾಜನ್ಯನಾಶನಃ ॥ ೯೮ ॥

ರುಕ್ಮವೈರೂಪ್ಯಕರಣೋ ರುಕ್ಮಿಣೀವಚನೇ ರತಃ ।
ಬಲಭದ್ರವಚೋಗ್ರಾಹೀ ಮುಕ್ತರುಕ್ಮೀ ಜನಾರ್ದನಃ ॥ ೯೯ ॥

ರುಕ್ಮಿಣೀಪ್ರಾಣನಾಥಶ್ಚ ಸತ್ಯಭಾಮಾಪತಿಃ ಸ್ವಯಂ ।
ಭಕ್ತಪಕ್ಷೀ ಭಕ್ತಿವಶ್ಯೋ ಹ್ಯಕ್ರೂರಮಣಿದಾಯಕಃ ॥ ೧೦೦ ॥

---

೯೭. ದ್ವಾರಕಾಪತಿ, ಗುಪ್ತಸ್ವರೂಪನು, ಬ್ರಾಹ್ಮಣಪ್ರಿಯ, ಸತ್ಯಸಂಕಲ್ಪನು, ಲೀಲಾಮಾನುಷವಿಗ್ರಹನು, ಹಿತಕರನು, ಸಕಲಕರ್ತೃವು, ಕೀರ್ತಿದಾಯಕನು.

೯೮. ರುಕ್ಮಿಣೀದೇವಿಗೆ ಪ್ರಿಯವಾರ್ತೆಯನ್ನು ಕಳುಹಿಸಿದವನು, ರುಕ್ಮನಿಗೆ ದುಃಖವನ್ನು ಅಭಿವೃದ್ಧಿಮಾಡಿದವನು, ಶಿಶುಪಾಲದುಃಖಮೂಲನು, ಸರ್ವಶ್ರೇಷ್ಠನು, ದುಷ್ಟಕ್ಷತ್ರಿಯನಾಶಕನು.

೯೯. ರುಕ್ಮಿಗೆ ವಿರೂಪಮಾಡಿದವನು, ರುಕ್ಮಿಣಿಯ ಮಾತುಗಳಲ್ಲಾಸಕ್ತನು, ಬಲರಾಮನ ಮಾತನ್ನು ಗ್ರಹಿಸುವವನು, ರುಕ್ಮಿಯನ್ನು ಸಂಹರಿಸದೆ ಬಿಟ್ಟವನು, ಜನಾರ್ದನನು.

೧೦೦. ರುಕ್ಮಿಣೀಪ್ರಾಣಕಾಂತನು, ಸತ್ಯಭಾಮಾಪತಿಯು, ಸ್ವಾಭಾವಿಕವಾಗಿ ಭಕ್ತಪಕ್ಷಪಾತಿಯು, ಭಕ್ತಿಯಿಂದ ವಶನಾಗುವವನು, ಅಕ್ರೂರನಿಗೆ ಮಣಿಯನ್ನು ಕೊಟ್ಟವನು.

ಶತಧನ್ವಪ್ರಾಣಹಾರೀ ಋಕ್ಷರಾಜಸುತಾಪ್ರಿಯಃ ।
ಸತ್ರಾಜಿತ್ತನಯಾಕಾಂತೋ ಮಿತ್ರವಿಂದಾಪಹಾರಕಃ ॥ ೧೦೧ ॥

ಸತ್ಯಾಪತಿರ್ಲಕ್ಷ್ಮಣಾಜಿತ್ಪೂಜ್ಯೋ ಭದ್ರಾಪ್ರಿಯಂಕರಃ ।
ನರಕಾಸುರಘಾತೀ ಚ ಲೀಲಾಕನ್ಯಾಹರೋ ಜಯೀ ॥ ೧೦೨ ॥

ಮುರಾರಿರ್ಮದನೇಶೋಽಪಿ ಧರಿತ್ರೀದುಃಖನಾಶನಃ ।
ವೈನತೇಯೀ ಸ್ವರ್ಗಗಾಮೀ ಅದಿತ್ಯೈ ಕುಂಡಲಪ್ರದಃ ॥ ೧೦೩ ॥

ಇಂದ್ರಾರ್ಚಿತೋ ರಮಾಕಾಂತೋ ವಜ್ರಿಭಾರ್ಯಾಪ್ರಪೂಜಿತಃ ।
ಪಾರಿಜಾತಾಪಹಾರೀ ಚ ಶಕ್ರಮಾನಾಪಹಾರಕಃ ॥ ೧೦೪ ॥

ಪ್ರದ್ಯುಮ್ನಜನಕಃ ಸಾಂಬತಾತೋ ಬಹುಸುತೋ ವಿಭುಃ ।
ಗರ್ಗಾಚಾರ್ಯಃ ಸತ್ಯಗತಿರ್ಧರ್ಮಾಧಾರೋ ಧರಾಧರಃ ॥ ೧೦೫ ॥

---

೧೦೧. ಶತಧನ್ವಸಂಹಾರಕ, ಜಾಂಬವತೀಪ್ರಿಯನು, ಸತ್ರಾಜಿತ್ತಿನ ಮಗಳ ಗಂಡನು, ಮಿತ್ರವಿಂದೆಯನ್ನು ಅಪಹರಿಸಿದವನು.

೧೦೨. ಸತ್ಯೆಯ ಪತಿ, ಲಕ್ಷ್ಮಣೆಯನ್ನು ಜಯಿಸಿದವನು, ಪೂಜ್ಯನು, ಭದ್ರೆಗೆ ಪ್ರಿಯಕಾರಿಯು, ನರಕಾಸುರಸಂಹಾರಕ, ಲೀಲಾಕನ್ಯಾಪಹಾರಿಯು, ಜಯಶೀಲನು.

೧೦೩. ಮುರಶತ್ರು, ಮನ್ಮಥಸ್ವಾಮಿ, ಭೂದೇವಿಯ ದುಃಖಪರಿಹಾರಕ, ಗರುಡವಾಹನ, ಸ್ವರ್ಗಗಾಮಿಯು, ಅದಿತಿದೇವಿಗೆ ಕುಂಡಲವನ್ನು ಕೊಟ್ಟವನು.

೧೦೪. ಇಂದ್ರಪೂಜಿತ, ಲಕ್ಷ್ಮೀಪತಿ, ಇಂದ್ರಭಾರ್ಯೆಯಿಂದ ಪೂಜಿತನು, ಪಾರಿಜಾತವನ್ನು ಅಪಹರಿಸಿದವನು, ಇಂದ್ರನ ಮಾನವನ್ನು ಕಳೆದವನು.

೧೦೫. ಪ್ರದ್ಯುಮ್ನನ ತಂದೆಯು, ಸಾಂಬಪಿತೃವು, ಬಹು ಮಕ್ಕಳುಳ್ಳವನು, ಪ್ರಭುವು, ಗರ್ಗರನ್ನು ಆಚಾರ್ಯರನ್ನಾಗಿಯುಳ್ಳವನು, ಸತ್ಯಗತಿ, ಧರ್ಮಕ್ಕಾಶ್ರಯ, ಭೂದೇವಿಯನ್ನು ಧರಿಸಿರುವವನು.

**ದ್ವಾರಕಾಮಂಡನಃ ಶ್ಲೋಕ್ಯಃ ಸುಶ್ಲೋಕೋ ನಿಗಮಾಲಯಃ ।**
**ಪೌಂಡ್ರಕಪ್ರಾಣಹಾರೀ ಚ ಕಾಶೀರಾಜಶಿರೋಹರಃ ॥ ೧೦೬ ॥**

**ಅವೈಷ್ಣವವಿಪ್ರದಾಹೀ ಸುದಕ್ಷಿಣಭಯಾವಹಃ ।**
**ಜರಾಸಂಧವಿದಾರೀ ಚ ಧರ್ಮನಂದನಯಜ್ಞಕೃತ್ ॥ ೧೦೭ ॥**

**ಶಿಶುಪಾಲಶಿರಶ್ಛೇದೀ ದಂತವಕ್ರವಿನಾಶನಃ ।**
**ವಿದೂರಥಾಂತಕಃ ಶ್ರೀಶಃ ಶ್ರೀದೋ ದ್ವಿವಿದನಾಶನಃ ॥ ೧೦೮ ॥**

**ರುಕ್ಮಿಣೀಮಾನಹಾರೀ ಚ ರುಕ್ಮಿಣೀಮಾನವರ್ಧನಃ ।**
**ದೇವರ್ಷಿಶಾಪಹರ್ತಾ ಚ ದ್ರೌಪದೀವಾಕ್ಯಪಾಲಕಃ ॥ ೧೦೯ ॥**

**ದುರ್ವಾಸೋಭಯಹಾರೀ ಚ ಪಾಂಚಾಲೀಸ್ಮರಣಾಗತಃ ।**
**ಪಾರ್ಥದೂತಃ ಪಾರ್ಥಮಂತ್ರೀ ಪಾರ್ಥದುಃಖೌಘನಾಶನಃ ॥ ೧೧೦ ॥**

---

೧೦೬. ದ್ವಾರಕಾಪಟ್ಟಣಕ್ಕೆ ಅಲಂಕಾರಪ್ರಾಯನು, ಚರಿತಾರ್ಹನು, ಸಚ್ಚರಿತ್ರನು, ವೇದಾಶ್ರಯನು, ಪೌಂಡ್ರಕಪ್ರಾಣಾಪಹಾರಕನು, ಕಾಶಿರಾಜನ ತಲೆಯನ್ನು ಅಪಹರಿಸಿದವನು.

೧೦೭. ವಿಷ್ಣುಭಕ್ತರಲ್ಲದ ವಿಪ್ರದಾಹಕ, ಸುದಕ್ಷಿಣನಿಗೆ ಭಯಜನಕನು, ಜರಾಸಂಧನನ್ನು ಸೀಳಿದವನು, ಧರ್ಮರಾಜನಿಂದ ಯಜ್ಞಮಾಡಿಸಿದವನು.

೧೦೮. ಶಿಶುಪಾಲನ ತಲೆಯನ್ನು ಕತ್ತರಿಸಿದವನು, ದಂತವಕ್ರ ನಾಶಕನು, ವಿದೂರಥಸಂಹಾರಿಯು, ಶ್ರೀಪತಿ, ಸಂಪತ್ಪ್ರದಾಯಕ, ದ್ವಿವಿದ ನಾಶಕ.

೧೦೯. ರುಕ್ಮಿಣೀಮಾನಾಪಹಾರಕ ಮತ್ತು ರುಕ್ಮಿಣೀಮಾನವರ್ಧಕ, ದೇವರ್ಷಿಶಾಪಪರಿಹಾರಕ, ದ್ರೌಪದಿಯ ಮಾತನ್ನು ಪಾಲಿಸಿದವನು.

೧೧೦. ದುರ್ವಾಸರ ಭಯಪರಿಹಾರಕ, ದ್ರೌಪದಿಯ ಸ್ಮರಣೆಮಾತ್ರದಿಂದಲೇ ಬಂದು ರಕ್ಷಿಸಿದವನು, ಅರ್ಜುನದೂತ, ಅರ್ಜುನಮಂತ್ರಿಯು, ಅರ್ಜುನ ದುಃಖಸಮೂಹನಾಶಕ.

ಪಾರ್ಥಮಾನಾಪಹಾರೀ ಚ ಪಾರ್ಥಜೀವನದಾಯಕಃ |
ಪಾಂಚಾಲೀವಸ್ತ್ರದಾತಾ ಚ ವಿಶ್ವಪಾಲಕಪಾಲಕಃ || ೧೧೧ ||

ಶ್ವೇತಾಶ್ವಸಾರಥಿಃ ಸತ್ಯಃ ಸತ್ಯಸಾಧ್ಯೋ ಭಯಾಪಹಃ |
ಸತ್ಯಸಂಧಃ ಸತ್ಯರತಿಃ ಸತ್ಯಪ್ರಿಯ ಉದಾರಧೀಃ || ೧೧೨ ||

ಮಹಾಸೇನಜಯಿೀ ಚೈವ ಶಿವಸೈನ್ಯವಿನಾಶನಃ |
ಬಾಣಾಸುರಭುಜಚ್ಛೇತ್ತಾ ಬಾಣಬಾಹುವರಪ್ರದಃ || ೧೧೩ ||

ತಾರ್ಕ್ಷ್ಯಮಾನಾಪಹಾರೀ ಚ ತಾರ್ಕ್ಷ್ಯತೇಜೋವಿವರ್ಧನಃ |
ರಾಮಸ್ವರೂಪಧಾರೀ ಚ ಸತ್ಯಭಾಮಾಮುದಾವಹಃ || ೧೧೪ ||

ರತ್ನಾಕರಜಲಕ್ರೀಡೋ ವ್ರಜಲೀಲಾಪ್ರದರ್ಶಕಃ |
ಸ್ವಪ್ರತಿಜ್ಞಾಪರಧ್ವಂಸೀ ಭೀಷ್ಮಾಜ್ಞಾಪರಿಪಾಲಕಃ || ೧೧೫ ||

---

೧೧೧. ಅರ್ಜುನಮಾನಾಪಹಾರಕ, ಅರ್ಜುನಜೀವನಪ್ರದಾಯಕ, ದ್ರೌಪದಿಗೆ ವಸ್ತ್ರದಾನಮಾಡಿದವನು, ಜಗದ್ರಕ್ಷಕರಕ್ಷಕ.

೧೧೨. ಶ್ವೇತಾಶ್ವಸಾರಥಿ, ಸತ್ಯ, ಸತ್ಯಸಾಧ್ಯ, ಭಯನಾಶಕ, ಸತ್ಯಪ್ರತಿಜ್ಞ, ಸತ್ಯಾಸಕ್ತ, ಸತ್ಯಪ್ರಿಯ, ಉದಾರಚಿತ್ತ.

೧೧೩. ಮಹಾಸೇನವಿಜಯೀ, ಶಿವಸೈನ್ಯವಿನಾಶಕ, ಬಾಣಾಸುರನ ಭುಜಗಳನ್ನು ಕತ್ತರಿಸಿದವನು, ಬಾಣಬಾಹುವರಪ್ರದ.

೧೧೪. ಗರುಡಗರ್ವಭಂಜಕ, ಗುರುಡತೇಜಸ್ಸನ್ನು ವೃದ್ಧಿಗೊಳಿಸಿದವನು, ರಾಮರೂಪವನ್ನು ತಾಳಿದವನು, ಸತ್ಯಭಾಮೆಗೆ ಸಂತೋಷದಾಯಕನು.

೧೧೫. ರತ್ನಾಕರ (ಸಮುದ್ರ) ದಲ್ಲಿ ಕ್ರೀಡೆಯನ್ನು ಆಡಿದವನು, ವ್ರಜದಲ್ಲಿ ಲೀಲೆಗಳನ್ನು ಪ್ರದರ್ಶಿಸಿದವನು, ಸ್ವಪ್ರತಿಜ್ಞಾಪರಧ್ವಂಸಿಯು, ಭೀಷ್ಮನ ಅಪ್ಪಣೆಯನ್ನು ಪಾಲಿಸಿದವನು.

ವೀರಾಯುಧಹರಃ ಕಾಲಃ ಕಾಲಿಕೇಶೋ ಮಹಾಬಲಃ ।
ವರ್ವರೀಷಶಿರೋಹಾರೀ ವರ್ವರೀಷಶಿರಃ ಪ್ರದಃ ॥ ೧೧೬ ॥

ಧರ್ಮಪುತ್ರಜಯೀ ಶೂರದುರ್ಯೋಧನಮದಾಂತಕಃ ।
ಗೋಪಿಕಾಪ್ರೀತಿನಿರ್ಬಂಧನಿತ್ಯಕ್ರೀಡೋ ವ್ರಜೇಶ್ವರಃ ॥ ೧೧೭ ॥

ರಾಧಾಕುಂಡರತಿರ್ಧನ್ಯಃ ಸದಾಂದೋಲಸಮಾಶ್ರಿತಃ ।
ಸದಾ ಮಧುವನಾನಂದೀ ಸದಾ ವೃಂದಾವನಪ್ರಿಯಃ ॥ ೧೧೮ ॥

ಅಶೋಕವನಸಂನ್ನದ್ಧಃ ಸದಾ ತಿಲಕಸಂಗತಃ ।
ಸದಾ ಗೋವರ್ಧನರತಿಃ ಸದಾ ಗೋಕುಲವಲ್ಲಭಃ ॥ ೧೧೯ ॥

ಭಾಂಡೀರವಟಸಂವಾಸೀ ನಿತ್ಯಂ ವಂಶೀವಟಸ್ಥಿತಃ ।
ನಂದೀಗ್ರಾಮಕೃತಾವಾಸೋ ವೃಷಭಾನುಗ್ರಹಪ್ರಿಯಃ ॥ ೧೨೦ ॥

---

೧೧೬. ವೀರಾಯುಧಧಾರಿಯು, ಕಾಲಸ್ವರೂಪನು, ಕಾಲಿಕೇಶ್ವರನು, ಮಹಾಶಕ್ತನು, ವರ್ವರೀಷನ ತಲೆಯನ್ನು ಅಪಹರಿಸಿದವನು, ವರ್ವರೀಶಶಿರಃ ಪ್ರದಾಯಕನು.

೧೧೭. ಧರ್ಮಪುತ್ರನಿಗೆ ಜಯವನ್ನುಂಟುಮಾಡಿದವನು, ಪರಾಕ್ರಮಿಯಾದ ದುರ್ಯೋಧನನ ಮದಪರಿಹಾರಕ, ಗೋಪಿಕಾಸ್ತ್ರೀಯರ ಪ್ರೀತಿಯಿಂದ ಬದ್ಧನಾಗಿ ಯಾವಾಗಲೂ ಕ್ರೀಡೆಮಾಡುತ್ತಿರುವವನು, ವ್ರಜಸ್ವಾಮಿ.

೧೧೮. ರಾಧಾಕುಂಡರತಿಯುಳ್ಳವನು, ಧನ್ಯನು, ಯಾವಾಗಲೂ ತೊಟ್ಟಿಲಲ್ಲಿ ಕುಳಿತಿರುವವನು, ಸರ್ವದಾ ಮಧುವನದಲ್ಲಿ ಆನಂದಿಸುವವನು, ಯಾವಾಗಲೂ ವೃಂದಾವನಪ್ರಿಯನು.

೧೧೯. ಅಶೋಕವನವಿಹಾರಿಯು, ಸರ್ವದಾ ತಿಲಕಸಂಗತನು, ಯಾವಾಗಲೂ ಗೋವರ್ಧನದಲ್ಲಿ ಆಸಕ್ತನು, ಗೋಕುಲಪ್ರಿಯನು.

೧೨೦. ಭಾಂಡೀರವಟವಾಸಿಯು, ವಂಶೀವಟದಲ್ಲಿರುವವನು, ನಂದೀಗ್ರಾಮದಲ್ಲಿ ವಾಸಮಾಡುವವನು, ವೃಷಭಾನುಗ್ರಹಪ್ರಿಯನು.

ಗೃಹೀತಕಾಮಿನೀರೂಪೋ ನಿತ್ಯಂ ರಾಸವಿಲಾಸಕೃತ್ ।
ವಲ್ಲವೀಜನಸಂಗೋಪ್ತಾ ವಲ್ಲವೀಜನವಲ್ಲಭಃ ॥ ೧೨೧ ॥

ದೇವಶರ್ಮಕೃಪಾಕರ್ತಾ ಕಲ್ಪಪಾದಪಸಂಸ್ಥಿತಃ ।
ಶಿಲಾನುಗಂಧನಿಲಯಃ ಪಾದಚಾರೀ ಘನಚ್ಛವಿಃ ॥ ೧೨೨ ॥

ಅತಸೀಕುಸುಮಪ್ರಖ್ಯಃ ಸದಾ ಲಕ್ಷ್ಮೀಕೃಪಾಕರಃ ।
ತ್ರಿಪುರಾರಿಪ್ರಿಯಕರೋ ಹ್ಯುಗ್ರಧನ್ವಾಪರಾಜಿತಃ ॥ ೧೨೩ ॥

ಷಟ್ಪುರಧ್ವಂಸಕರ್ತಾ ಚ ನಿಕುಂಭಪ್ರಾಣಹಾರಕಃ ।
ವಜ್ರನಾಭಪುರಧ್ವಂಸೀ ಪೌಂಡ್ರಕಪ್ರಾಣಹಾರಕಃ ॥ ೧೨೪ ॥

ಬಹುಲಾಶ್ವಪ್ರೀತಿಕರ್ತಾ ದ್ವಿಜವರ್ಯಪ್ರಿಯಂಕರಃ ।
ಶಿವಸಂಕಟಹಾರೀ ಚ ವೃಕಾಸುರವಿನಾಶನಃ ॥ ೧೨೫ ॥

---

೧೨೧. ಕಾಮಿನೀಸ್ವರೂಪವನ್ನು ತೆಗೆದುಕೊಂಡವನು, ಯಾವಾಗಲೂ ರಾಸಕ್ರೀಡೆಯನ್ನು ಆಡುತ್ತಿರುವವನು, ಗೋಪಿಕಾಸ್ತ್ರೀಯರಿಗೆ ರಕ್ಷಕನು, ಗೋಪಿಕಾಸ್ತ್ರೀಯರಿಗೆ ಪ್ರಿಯನು.

೧೨೨. ದೇವಶರ್ಮನಿಗೆ ದಯೆಮಾಡಿದವನು. ಕಲ್ಪವೃಕ್ಷದಂತಿರುವವನು, ಶಿಲಾನುಗಂಧಕ್ಕಾಶ್ರಯನು, ಪಾದಚಾರಿಯು, ನಿಬಿಡವಾದ ಕಾಂತಿಯುಳ್ಳವನು.

೧೨೩. ಅಗಸೆಹೂವಿನಂದೆ ಪ್ರಕಾಶಮಾನನು, ಯಾವಾಗಲೂ ಲಕ್ಷ್ಮೀ ದೇವಿಗೆ ದಯೆಮಾಡುವವನು, ತ್ರಿಪುರಾಸುರಶತ್ರುವಾದ ಈಶ್ವರನಿಗೆ ಹಿತ ಕಾರಿಯು, ಕ್ರೂರಧನುಸ್ಸುಳ್ಳವನು, ಅಪರಾಜಿತನು.

೧೨೪. ಷಟ್ಪುರವಿನಾಶಕನು, ನಿಕುಂಭನ ಪ್ರಾಣವನ್ನಪಹರಿಸಿದವನು, ವಜ್ರನಾಭಪುರನಾಶಕನು, ಪೌಂಡ್ರಕನನ್ನು ಸಂಹರಿಸಿದವನು.

೧೨೫. ಗೋವು ಮತ್ತು ಕುದುರೆಗಳಲ್ಲಿ ಪ್ರೀತಿಮಾಡುವವನು, ದ್ವಿಜ ಶ್ರೇಷ್ಠರಿಗೆ ಪ್ರಿಯವನ್ನು ಮಾಡುವವನು, ಶಿವಸಂಕಟಪರಿಹಾರಕ, ವೃತ್ರಾಸುರ ವಿನಾಶಕ.

ಭೃಗುಸತ್ಕಾರಕಾರೀ ಚ ಶಿವಸಾತ್ವಿಕತಾಪ್ರದಃ ।
ಗೋಕರ್ಣಪೂಜಕಃ ಸಾಂಬಕುಷ್ಠವಿಧ್ವಂಸಕಾರಣಃ ॥ ೧೨೬ ॥

ವೇದಸ್ತುತೋ ವೇದವೇತ್ತಾ ಯದುವಂಶವಿವರ್ಧನಃ ।
ಯದುವಂಶವಿನಾಶೀ ಚ ಉದ್ಧವೋದ್ಧಾರಕಾರಕಃ ॥ ೧೨೭ ॥

ರಾಧಾ ಚ ರಾಧಿಕಾ ಚೈವ ಆನಂದಾ ವೃಷಭಾನುಜಾ ।
ವೃಂದಾವನೇಶ್ವರೀ ಪುಣ್ಯಾ ಕೃಷ್ಣಮಾನಸಹಾರಿಣೀ ॥ ೧೨೮ ॥

ಪ್ರಗಲ್ಭಾ ಚತುರೀ ಕಾಮಾ ಕಾಮಿನೀ ಹರಿಮೋಹಿನೀ ।
ಲಲಿತಾ ಮಧುರಾ ಮಾಧ್ವೀ ಕಿಶೋರೀ ಕನಕಪ್ರಭಾ ॥ ೧೨೯ ॥

---

೧೨೬. ಭೃಗುಮುನಿಗಳನ್ನು ಸತ್ಕರಿಸಿದವನು, ಶಿವನಿಗೆ ಸಾತ್ವಿಕತ್ವದಾಯಕನು, ಗೋಕರ್ಣಪೂಜಕ, ಸಾಂಬನ ಕುಷ್ಟರೋಗವನ್ನು ನಿವಾರಣೆ ಮಾಡಿದವನು.

೧೨೭. ವೇದಗಳಿಂದ ಸ್ತುತಿಸಲ್ಪಟ್ಟವನು, ವೇದವಿಜ್ಞಾನಿಯು, ಯದುವಂಶವರ್ಧಕನು, ಯದುವಂಶವಿನಾಶಕನು, ಉದ್ಧವನನ್ನು ಉದ್ಧಾರಮಾಡಿದವನು.

೧೨೮. ಈಗ ರಾಧಾದೇವಿಯ ಸಹಸ್ರನಾಮವನ್ನು ಹೇಳುತ್ತಾರೆ;— ರಾಧೆಯು, ರಾಧಿಕೆಯು, ಆನಂದಸ್ವರೂಪಳು, ವೃಷಭಭಗಿನಿಯು. ವೃಂದಾವನಕ್ಕೊಡೆಯಳು, ಪುಣ್ಯಪ್ರದಳು, ಕೃಷ್ಣಚಿತ್ತವನ್ನು ಅಪಹರಿಸಿದವಳು.

೧೨೯. ಪ್ರೌಢೆಯು, ಕುಶಲಳು, ಮನೋಹರಳು, ಕಾಮಿನಿಯು, ಹರಿಮೋಹಕಳು, ಲಲಿತೆಯು, ಮಧುರೆಯು, ಮಧುಸಂಬಂಧಿಯು, ಬಾಲೆಯು, ಭಂಗಾರದಂತೆ ಹೊಳೆಯುತ್ತಿರುವವಳು.

**ಜಿತಚಂದ್ರಾ ಜಿತಮೃಗಾ ಜಿತಸಿಂಹಾ ಜಿತದ್ವಿಪಾ ।**
**ಜಿತರಂಭಾ ಜಿತಪಿಕಾ ಗೋವಿಂದಹೃದಯೋದ್ಭವಾ ॥ ೧೩೦ ॥**

**ಜಿತಬಿಂಬಾ ಜಿತಶುಕಾ ಜಿತಪದ್ಮಾ ಕುಮಾರಿಕಾ ।**
**ಶ್ರೀಕೃಷ್ಣಾಕರ್ಷಣಾ ದೇವೀ ನಿತ್ಯಂ ಯುಗ್ಮಸ್ವರೂಪಿಣೀ ॥ ೧೩೧ ॥**

**ನಿತ್ಯಂ ವಿಹಾರಿಣೀ ಕಾಂತಾ ರಸಿಕಾ ಕೃಷ್ಣವಲ್ಲಭಾ ।**
**ಆಮೋದಿನೀ ಮೋದವತೀ ನಂದನಂದನಭೂಷಿತಾ ॥ ೧೩೨ ॥**

**ದಿವ್ಯಾಂಬರಾ ದಿವ್ಯಹಾರಾ ಮುಕ್ತಾಮಣಿವಿಭೂಷಿತಾ ।**
**ಕುಂಜಪ್ರಿಯಾ ಕುಂಜವಾಸಾ ಕುಂಜನಾಯಕನಾಯಿಕಾ ॥ ೧೩೩ ॥**

---

೧೩೦. ಚಂದ್ರನನ್ನು ಜಯಿಸಿದವಳು, ಜಿಂಕೆಯನ್ನು ಜಯಿಸಿದವಳು, ಸಿಂಹಕ್ಕಿಂತಲೂ ಹೆಚ್ಚು ತೇಜಸ್ವಿನಿಯು, ಆನೆಗಿಂತಲೂ ಹೆಚ್ಚು ಗಾಂಭೀರ್ಯವುಳ್ಳವಳು, ರಂಭೆಗಿಂತಲೂ ಅಧಿಕ ಸೌಂದರ್ಯವತಿಯು, ಕೋಗಿಲೆಗಿಂತಲೂ ಉತ್ತಮವಾದ ಧ್ವನಿಯುಳ್ಳವಳು, ಕೃಷ್ಣನ ಮನಸ್ಸಿನಿಂದ ಉದ್ಭೂತಳು.

೧೩೧. ಚಂದ್ರಬಿಂಬಕ್ಕಿಂತಲೂ ಹೆಚ್ಚು ಮನೋಹರಳು, ಗಿಳಿಗಿಂತಲೂ ಉತ್ಕೃಷ್ಟಳು, ಪದ್ಮಕ್ಕಿಂತಲೂ ಹೆಚ್ಚು ಕೋಮಲಳು, ಕುಮಾರಿಯು, ಶ್ರೀಕೃಷ್ಣನನ್ನು ಆಕರ್ಷಿಸಿದವಳು, ಕ್ರೀಡಾದಿಗುಣಶಾಲಿನಿಯು, ಯಾವಾಗಲೂ ಯುಗ್ಮಸ್ವರೂಪಿಣಿಯು.

೧೩೨. ನಿತ್ಯವಿಹಾರಿಣಿಯು, ಮನೋಹರಳು, ರಸಿಕಳು, ಕೃಷ್ಣಪ್ರಿಯೆಯು, ಸಂತೋಷಶಾಲಿನಿಯು, ಸಂತೋಷಪ್ರದಳು, ನಂದಕುಮಾರನಿಂದ ಭೂಷಿತಳು.

೧೩೩. ದಿವ್ಯವಸ್ತ್ರಧಾರಿಣಿಯು, ದಿವ್ಯಾಹಾರಧಾರಿಣಿಯು, ಮುತ್ತುರತ್ನಗಳಿಂದ ಅಲಂಕೃತಳು, ಲತಾಗೃಹಪ್ರಿಯೆಯು, ಲತಾಗೃಹವಾಸಿನಿಯು, ಲತಾಗೃಹದೊಡೆಯನ ನಾಯಕಿಯು.

ಚಾರುರೂಪಾ ಚಾರುವಕ್ತ್ರಾ ಚಾರುಹೇಮಾಂಗದಾ ಶುಭಾ ।
ಶ್ರೀಕೃಷ್ಣವೇಣುಸಂಗೀತಾ ಮುರಲೀಹಾರಿಣೀ ಶಿವಾ ॥ ೧೩೪ ॥

ಭದ್ರಾ ಭಗವತೀ ಶಾಂತಾ ಕುಮುದಾ ಸುಂದರೀ ಪ್ರಿಯಾ ।
ಕೃಷ್ಣಕ್ರೀಡಾ ಕೃಷ್ಣರತಿಃ ಶ್ರೀಕೃಷ್ಣಸಹಚಾರಿಣೀ ॥ ೧೩೫ ॥

ವಂಶೀವಟಪ್ರಿಯಸ್ಥಾನಾ ಯುಗ್ಮಾಯುಗ್ಮಸ್ವರೂಪಿಣೀ ।
ಭಾಂಡೀರವಾಸಿನೀ ಶುಭ್ರಾ ಗೋಪೀನಾಥಪ್ರಿಯಾ ಸಖೀ ॥ ೧೩೬ ॥

ಶ್ರುತಿನಿಃಶ್ವಸಿತಾ ದಿವ್ಯಾ ಗೋವಿಂದರಸದಾಯಿನೀ ।
ಶ್ರೀಕೃಷ್ಣಪ್ರಾರ್ಥನೀಶಾನಾ ಮಹಾನಂದಪ್ರದಾಯಿನೀ ॥ ೧೩೭ ॥

---

೧೩೪. ಮನೋಹರರೂಪವುಳ್ಳವಳು, ಮನೋಹರಮುಖವುಳ್ಳವಳು, ಮನೋಹರಸುವರ್ಣಾಭರಣಗಳನ್ನು ಧರಿಸಿರುವವಳು, ಮಂಗಳಕಾರಿಣಿಯು, ಶ್ರೀಕೃಷ್ಣನ ವೇಣುಗಾನಪ್ರಿಯಳು, ವೇಣುವನ್ನು ಅಪಹರಿಸಿದವಳು, ಮಂಗಳಸ್ವರೂಪಿಣಿಯು.

೧೩೫. ಭದ್ರೆಯು, ಐಶ್ವರ್ಯಶಾಲಿನಿಯು, ಶಾಂತಸ್ವಭಾವದವಳು, ಕನ್ನೈದಿಲೆ ಹೂವಿನಂತಿರುವವಳು, ಸುಂದರಿಯು, ಪ್ರಿಯೆಯು, ಕೃಷ್ಣಕ್ರೀಡಾಸ್ಥಾನಳು, ಕೃಷ್ಣನಲ್ಲಿಯೇ ಆಸಕ್ತಚಿತ್ತಳು, ಶ್ರೀಕೃಷ್ಣ ಸಹಧರ್ಮಿಣಿಯು.

೧೩೬. ವಂಶೀವಟದಲ್ಲಿ ಪ್ರೀತಿಯಿಂದ ವಾಸಿಸುವವಳು, ಯುಗ್ಮಾಯುಗ್ಮಸ್ವರೂಪಿಣಿಯು, ಭಾಂಡೀರವಾಸಿನಿಯು, ಶುದ್ಧಳು, ಗೋಪೀನಾಥಪ್ರಿಯಳು, ಸಖಿಯು.

೧೩೭. ಶ್ರುತಿನಿಶ್ವಾಸಯುಕ್ತಳು, ಮನೋಹಾರಿಣಿಯು, ಕೃಷ್ಣಪ್ರೀತಿದಾಯಕಳು, ಶ್ರೀಕೃಷ್ಣಪ್ರಾರ್ಥನಾಶೀಲೆಯು, ಒಡೆಯಳು, ಅಧಿಕಾನಂದದಾಯಕಳು.

**ವೈಕುಂಠಜನಸಂಸೇವ್ಯಾ ಕೋಟಿಲಕ್ಷ್ಮೀಸುಖಾವಹಾ ।**
**ಕೋಟಿಕಂದರ್ಪಲಾವಣ್ಯಾ ರತಿಕೋಟಿರತಿಪ್ರದಾ ॥ ೧೩೮ ॥**

**ಭಕ್ತಿಗ್ರಾಹ್ಯಾ ಭಕ್ತಿರೂಪಾ ಲಾವಣ್ಯಸರಸೀ ಉಮಾ ।**
**ಬ್ರಹ್ಮರುದ್ರಾದಿಸಂರಾಧ್ಯಾ ನಿತ್ಯಂ ಕೌತೂಹಲಾನ್ವಿತಾ ॥ ೧೩೯ ॥**

**ನಿತ್ಯಲೀಲಾ ನಿತ್ಯಕಾಮಾ ನಿತ್ಯಶೃಂಗಾರಭೂಷಿತಾ ।**
**ನಿತ್ಯವೃಂದಾವನರಸಾ ನಂದನಂದನಸಂಯುತಾ ॥ ೧೪೦ ॥**

**ಗೋಪಿಕಾಮಂಡಲೀಯುಕ್ತಾ ನಿತ್ಯಂ ಗೋಪಾಲಸಂಗತಾ ।**
**ಗೋರಸಕ್ಷೇಪಣೀ ಶೂರಾ ಸಾನಂದಾ ನಂದದಾಯಿನೀ ॥ ೧೪೧ ॥**

---

೧೩೮. ವೈಕುಂಠದಲ್ಲಿನ ಜನರಿಂದ ಸೇವಿತಳು, ಕೋಟಿಲಕ್ಷ್ಮೀಸುಖಪ್ರದಳು, ಕೋಟಿಮನ್ಮಥರಂತೆ ಸೌಂದರ್ಯವುಳ್ಳವಳು, ರತಿಕೋಟಿಗಳಂತೆ ಸುಖಪ್ರದಳು.

೧೩೯. ಭಕ್ತಿಜ್ಞೇಯಳು, ಭಕ್ತಿಸ್ವರೂಪಳು, ಲಾವಣ್ಯಸರೋವರದಂತಿರುವವಳು, ರಮಾದೇವಿಯು, ಬ್ರಹ್ಮರುದ್ರಾದಿಗಳಿಂದ ಆರಾಧಿಸಲ್ಪಡುವವಳು, ಯಾವಾಗಲೂ ಕೌತುಕದಿಂದ ಯುಕ್ತಳು.

೧೪೦. ನಿತ್ಯಲೀಲೆಯು, ನಿತ್ಯಕಾಮಳು, ಯಾವಾಗಲೂ ಶೃಂಗಾರದಿಂದಲಂಕೃತಳು, ನಿತ್ಯವೃಂದಾವನರಸಪ್ರಾಯಳು, ನಂದಕುಮಾರನಾದ ಕೃಷ್ಣನಿಂದ ಕೂಡಿರುವವಳು.

೧೪೧. ಗೋಪಿಕಾಸ್ತ್ರೀಯರ ಸಮೂಹಮಧ್ಯದಲ್ಲಿ ಇರುವವಳು, ಯಾವಾಗಲೂ ಗೋಪಾಲನಿಂದ ಕೂಡಿರುವವಳು, ಹಾಲು ಕರೆಯುವವಳು, ಪರಾಕ್ರಮವುಳ್ಳವಳು, ಆನಂದಯುಕ್ತಳು, ಸಂತೋಷಪ್ರದಳು.

ಮಹಾಲೀಲಾ ಪ್ರಕೃಷ್ಟಾ ಚ ನಾಗರೀ ನಗಚಾರಿಣೀ ।
ನಿತ್ಯಮಾಘೂರ್ಣಿತಾ ಪೂರ್ಣಾ ಕಸ್ತೂರೀತಿಲಕಾನ್ವಿತಾ || ೧೪೨ ||

ಪದ್ಮಾ ಶ್ಯಾಮಾ ಮೃಗಾಕ್ಷೀ ಚ ಸಿದ್ಧಿರೂಪಾ ರಸಾವಹಾ ।
ಕೋಟಿಚಂದ್ರಾನನಾ ಗೌರೀ ಕೋಟಿಕೋಕಿಲಸುಸ್ವರಾ || ೧೪೩ ||

ಶೀಲಸೌಂದರ್ಯನಿಲಯಾ ನಂದನಂದನಲಾಲಿತಾ ।
ಅಶೋಕವನಸಂವಾಸಾ ಭಾಂಡೀರವನಸಂಗತಾ || ೧೪೪ ||

ಕಲ್ಪದ್ರುಮತಲಾವಿಷ್ಟಾ ಕೃಷ್ಣಾ ವಿಶ್ವಾ ಹರಿಪ್ರಿಯಾ ।
ಅಜಾಗಮ್ಯಾ ಭವಾಗಮ್ಯಾ ಗೋವರ್ಧನಕೃತಾಲಯಾ || ೧೪೫ ||

---

೧೪೨. ಉತ್ತಮಲೀಲಾ ವಿಹಾರಿಣಿಯು, ಉತ್ಕೃಷ್ಟಳು, ನಾಗರಿಕಳು, ಪರ್ವತಪ್ರದೇಶಗಳಲ್ಲಿ ಸಂಚರಿಸುವವಳು, ಯಾವಾಗಲೂ ಎಚ್ಚರದಿಂದ ಇರುವವಳು, ಪೂರ್ಣಳು, ಕಸ್ತೂರಿಯ ತಿಲಕವನ್ನು ಧರಿಸಿರುವವಳು.

೧೪೩. ಕಮಲದಂತೆ ಇರುವವಳು, ಶ್ಯಾಮವರ್ಣವುಳ್ಳವಳು, ಜಿಂಕೆಯಂತೆ ಕಣ್ಣುಳ್ಳವಳು, ಸಿದ್ಧಿಸ್ವರೂಪಳು, ಪ್ರೀತಿಯುಕ್ತಳು, ಕೋಟಿಚಂದ್ರರಿಗೆ ಸಮಾನವಾದ ಮುಖವುಳ್ಳವಳು, ಗೌರವರ್ಣೋಪೇತಳು, ಕೋಟಿಕೋಕಿಲೆಗಳಂತೆ ಸುಸ್ವರವುಳ್ಳವಳು.

೧೪೪. ಸೌಶೀಲ್ಯ, ಸೌಂದರ್ಯನಿಧಿಯು, ನಂದಕುಮಾರನಿಂದ ಲಾಲಿಸಲ್ಪಟ್ಟವಳು, ಅಶೋಕವನದಲ್ಲಿ ವಾಸಿಸುವವಳು, ಭಾಂಡೀರವನದಲ್ಲಿ ವಾಸಿಸುವವಳು.

೧೪೫. ಕಲ್ಪವೃಕ್ಷತಲದಲ್ಲಿ ಪ್ರವಿಷ್ಟಳು, ಕೃಷ್ಣಭಾರ್ಯೆಯು, ಪೂರ್ಣಳು, ಹರಿಪ್ರೀತಿಪಾತ್ರಳು, ಬ್ರಹ್ಮನಿಂದ ತಿಳಿಯಲಶ್ಯಕಳು, ಗೋವರ್ಧನಪರ್ವತದಲ್ಲಿ ನೆಲೆಸಿರುವವಳು.

ಯಮುನಾತೀರನಿಲಯಾ ಶಶ್ವದ್ಗೋವಿಂದಜಲ್ಪಿನೀ ।
ಶಶ್ವನ್ಮಾನವತೀ ಸ್ನಿಗ್ಧಾ ಶ್ರೀಕೃಷ್ಣಪರಿವಂದಿತಾ ॥ ೧೪೬ ॥

ಕೃಷ್ಣಸ್ತುತಾ ಕೃಷ್ಣವೃತಾ ಶ್ರೀಕೃಷ್ಣಹೃದಯಾಲಯಾ ।
ದೇವದ್ರುಮಫಲಾಸೇವ್ಯಾ ವೃಂದಾವನರಸಾಲಯಾ ॥ ೧೪೭ ॥

ಕೋಟಿತೀರ್ಥಮಯೀ ಸತ್ಯಾ ಕೋಟಿತೀರ್ಥಫಲಪ್ರದಾ ।
ಕೋಟಿಯೋಗಸುದುಷ್ಪ್ರಾಪ್ಯಾ ಕೋಟಿಯಜ್ಞದುರಾಶ್ರಯಾ ॥ ೧೪೮ ॥

ಮನಸಾ ಶಶಿಲೇಖಾ ಚ ಶ್ರೀಕೋಟಿಸುಭಗಾನಘಾ ।
ಕೋಟಿಮುಕ್ತಸುಖಾ ಸೌಮ್ಯಾ ಲಕ್ಷ್ಮೀಕೋಟಿವಿಲಾಸಿನೀ ॥ ೧೪೯ ॥

---

೧೪೬. ಯಮುನಾತೀರದಲ್ಲಿ ನೆಲಸಿರುವವಳು, ಸರ್ವದಾ ಗೋವಿಂದನ ವ್ಯವಹಾರವನ್ನು ಉಳ್ಳವಳು, ಮಾನವತಿಯು, ಸ್ನೇಹಯುಕ್ತಳು, ಶ್ರೀಕೃಷ್ಣನಿಂದ ಸ್ತುತಿಸಲ್ಪಟ್ಟವಳು.

೧೪೭. ಕೃಷ್ಣಸ್ತುತಳು, ಕೃಷ್ಣನಿಂದ ವರಿಸಲ್ಪಟ್ಟವಳು, ಶ್ರೀಕೃಷ್ಣನ ಹೃದಯದಲ್ಲಿ ನೆಲೆಸಿರುವವಳು, ಕಲ್ಪವೃಕ್ಷದಂತೆ ಇಷ್ಟಾರ್ಥಪ್ರದಳು, ಸೇವ್ಯಳು, ವೃಂದಾವನದಲ್ಲಿ ಉತ್ತಮವಾದ ಆಲಯುವನ್ನುಳ್ಳವಳು.

೧೪೮. ಕೋಟಿತೀರ್ಥಮಯಳು, ಸತ್ಯಸ್ವರೂಪಳು, ಕೋಟಿತೀರ್ಥಫಲದಾಯಕಳು, ಸುಲಭವಾಗಿ ಕೋಟಿಯೋಗಗಳಿಂದಲೂ ಹೊಂದಲಶಕ್ಯಳು, ಕೋಟಿಯಜ್ಞಗಳಿಂದಲೂ ಆಸ್ರಯಿಸಲಶಕ್ಯಳು.

೧೪೯. ಮನಸ್ಸಿನಿಂದ ಶಶಿಲೇಖೆಯು, ಕೋಟಿ ಶ್ರೀದೇವಿಯರಂತೆ ಮನೋಹರಳು, ಸೌಮ್ಯಳು, ಕೋಟಿಲಕ್ಷ್ಮಿಯರ ವಿಲಾಸವುಳ್ಳವಳು.

**ತ್ರಿಲೋತ್ತಮಾ ತ್ರಿಕಾಲಸ್ಥಾ ತ್ರಿಕಾಲಜ್ಞಾಸ್ಯಧೀಶ್ವರೀ ।**
**ತ್ರಿವೇದಜ್ಞಾ ತ್ರಿಲೋಕಜ್ಞಾ ತುರೀಯಾಂತನಿವಾಸಿನೀ ॥ ೧೫೦ ॥**

**ದುರ್ಗಾರಾಧ್ಯಾ ರಮಾರಾಧ್ಯಾ ವಿಶ್ವಾರಾಧ್ಯಾ ಚಿದಾತ್ಮಿಕಾ ।**
**ದೇವಾರಾಧ್ಯಾ ಪರಾರಾಧ್ಯಾ ಬ್ರಹ್ಮಾರಾಧ್ಯಾ ಪರಾತ್ಮಿಕಾ ॥ ೧೫೧ ॥**

**ಶಿವಾರಾಧ್ಯಾ ಪ್ರೇಮಸಾಧ್ಯಾ ಭಕ್ತಾರಾಧ್ಯಾ ರಸಾತ್ಮಿಕಾ ।**
**ಕೃಷ್ಣಪ್ರಾಣಾರ್ಪಿಣೀ ಭಾಮಾ ಶುದ್ಧಪ್ರೇಮವಿಲಾಸಿನೀ ॥ ೧೫೨ ॥**

**ಕೃಷ್ಣಾರಾಧ್ಯಾ ಭಕ್ತಿಸಾಧ್ಯಾ ಭಕ್ತವೃಂದನಿಷೇವಿತಾ ।**
**ವಿಶ್ವಾಧಾರಾ ಕೃಪಾಧಾರಾ ಜೀವಾಧಾರಾತಿನಾಯಿಕಾ ॥ ೧೫೩ ॥**

**ಶುದ್ಧಪ್ರೇಮಮಯೀ ಲಜ್ಜಾ ನಿತ್ಯಸಿದ್ಧಾ ಶಿರೋಮಣಿಃ ।**
**ದಿವ್ಯರೂಪಾ ದಿವ್ಯಭೋಗಾ ದಿವ್ಯವೇಷಾ ಮುದಾನ್ವಿತಾ ॥ ೧೫೪ ॥**

---

೧೫೦. ತಿಲೋತ್ತಮೆಯು, ಕಾಲತ್ರಯದಲ್ಲಿಯೂ ಇರುವವಳು, ಕಾಲತ್ರಯಜ್ಞಾನಿಯು, ನಿಯಾಮಕಳು, ವೇದತ್ರಯಜ್ಞಾನಿಯು, ತ್ರಿಲೋಕಜ್ಞಾನಿಯು, ತುರೀಯಾಂತನಿವಾಸಿನಿಯು.

೧೫೧. ದುರ್ಗಾರಾಧ್ಯಳು, ರಮಾರಾಧ್ಯಳು, ವಿಶ್ವಾರಾಧ್ಯಳು, ಜ್ಞಾನಾತ್ಮಕಳು, ದೇವಾರಾಧ್ಯಳು, ಪರಾರಾಧ್ಯಳು, ಬ್ರಹ್ಮಾರಾಧ್ಯಳು, ಪರಾತ್ಮಕಳು.

೧೫೨. ಶಿವಾರಾಧ್ಯಳು, ಪ್ರೇಮಸಾಧ್ಯಳು, ಭಕ್ತಾರಾಧ್ಯಳು, ರಸಸ್ವರೂಪಿಣಿಯು, ಕೃಷ್ಣನಿಗೆ ಪ್ರಾಣವನ್ನರ್ಪಿಸಿರುವವಳು, ಭಾಮೆಯು, ನಿರ್ಮಲಪ್ರೇಮವಿಲಾಸವುಳ್ಳವಳು-

೧೫೩. ಕೃಷ್ಣಾರಾಧ್ಯಳು, ಭಕ್ತಿವಶಳು, ಭಕ್ತಸಂಘಸೇವ್ಯಳು, ಜಗದಾಧಾರಳು, ದಯಾಳುವು, ಜೀವರಿಗಾಶ್ರಯಳು, ಉತ್ತಮನಾಯಕಳು.

೧೫೪. ಪರಶುದ್ಧಪ್ರೇಮಮಯಳು, ಲಜ್ಜಾವಂತಳು, ನಿತ್ಯಸಿದ್ಧಳು, ಶ್ರೇಷ್ಠಳು, ಮನೋಹರವಾದ ರೂಪವುಳ್ಳವಳು, ಮನೋಹರ ಭೋಗವುಳ್ಳವಳು, ದಿವ್ಯವೇಷಧಾರಿಣಿಯು, ಸಂತುಷ್ಟಳು.

**ದಿವ್ಯಾಂಗನಾವೃಂದಸಾರಾ ನಿತ್ಯನೂತನಯೌವನಾ ।**
**ಪರಬ್ರಹ್ಮಾವೃತಾ ಧ್ಯೇಯಾ ಮಹಾರೂಪಾ ಮಹೋಜ್ವಲಾ ॥ ೧೫೫ ॥**

**ಕೋಟಿಸೂರ್ಯಪ್ರಭಾ ಕೋಟಿಚಂದ್ರಬಿಂಬಾಧಿಕಚ್ಛವಿಃ ।**
**ಕೋಮಲಾಮೃತವಾಗಾದ್ಯಾ ವೇದಾದ್ಯಾ ವೇದದುರ್ಲಭಾ ॥ ೧೫೬ ॥**

**ಕೃಷ್ಣಾಸಕ್ತಾ ಕೃಷ್ಣಭಕ್ತಾ ಚಂದ್ರಾವಲಿನಿಷೇವಿತಾ ।**
**ಕಲಾಷೋಡಶಸಂಪೂರ್ಣಾ ಕೃಷ್ಣದೇಹಾರ್ಧಧಾರಿಣೀ ॥ ೧೫೭ ॥**

**ಕೃಷ್ಣಬುದ್ಧಿಃ ಕೃಷ್ಣಸಾರಾ ಕೃಷ್ಣರೂಪವಿಹಾರಿಣೀ ।**
**ಕೃಷ್ಣಕಾಂತಾ ಕೃಷ್ಣಧನಾ ಕೃಷ್ಣಮೋಹನಕಾರಿಣೀ ॥ ೧೫೮ ॥**

---

೧೫೫. ದಿವ್ಯಸ್ತ್ರೀ ಸಮೂಹದಲ್ಲಿ ಉತ್ಕೃಷ್ಟಳು, ಯಾವಾಗಲೂ ನೂತನವಾದ ಯೌವನವುಳ್ಳವಳು, ಪರಬ್ರಹ್ಮನಿಂದಾವೃತಳು, ಧ್ಯಾನಗಮ್ಯಳು, ಮಹಾರೂಪವತಿಯು, ಅತ್ಯಂತ ಪ್ರಕಾಶಮಾನಳು.

೧೫೬. ಕೋಟಿಸೂರ್ಯರಂತೆ ಹೊಳೆಯುತ್ತಿರುವವಳು, ಕೋಟಿಚಂದ್ರಬಿಂಬಗಳಿಗಿಂತಲೂ ಅಧಿಕಕಾಂತಿಯುಳ್ಳವಳು, ಕೋಮಲವಾದ ಅಮೃತವಾಣಿಗೆ ಮೂಲಳು, ವೇದಮೂಲಳು, ವೇದದಿಂದಲೂ ದುರ್ಲಭಳು.

೧೫೭. ಕೃಷ್ಣಾಸಕ್ತಳು, ಕೃಷ್ಣಭಕ್ತಳು, ಚಂದ್ರಸಮೂಹಸೇವಿತಳು, ಹದಿನಾರು ತಲೆಗಳಿಂದ ಪರಿಪೂರ್ಣಳು, ಕೃಷ್ಣಶರೀರಾರ್ಧವನ್ನು ಧರಿಸಿರುವವಳು.

೧೫೮. ಕೃಷ್ಣನಲ್ಲಿ ಬುದ್ಧಿಯುಳ್ಳವಳು, ಕೃಷ್ಣನನ್ನೇ ಸಾರವೆಂದು ತಿಳಿದಿರುವವಳು, ಕೃಷ್ಣರೂಪಗಳಿಂದ ವಿಹರಿಸುತ್ತಿರುವವಳು, ಕೃಷ್ಣಕಾಂತೆಯು, ಕೃಷ್ಣನನ್ನೇ ಧನವೆಂದು ತಿಳಿದಿರುವವಳು, ಕೃಷ್ಣನಿಗೆ ಮೋಹವನ್ನು ಉಂಟುಮಾಡಿರುವವಳು.

ಕೃಷ್ಣದೃಷ್ಟಿಃ ಕೃಷ್ಣಗೋತ್ರೀ ಕೃಷ್ಣದೇವೀ ಕುಲೋದ್ವಹಾ ।
ಸರ್ವಭೂತಸ್ಥಿತಾ ವಾತ್ಮಾ ಸರ್ವಲೋಕನಮಸ್ಕೃತಾ　　|| ೧೫೯ ||

ಕೃಷ್ಣದಾತ್ರೀ ಪ್ರೇಮದಾತ್ರೀ ಸ್ವರ್ಣದಾತ್ರೀ ಮನೋರಮಾ ।
ನಗಧಾತ್ರೀ ಯಶೋದಾತ್ರೀ ಮಹಾದೇವೀ ಶುಭಂಕರೀ　　|| ೧೬೦ ||

ಶ್ರೀಶೇಷದೇವಜನನೀ ಅವತಾರಗಣಪ್ರಸೂಃ ।
ಉತ್ಪಲಾಂಕಾ್ಯರವಿಂದಾಂಕಾ ಪ್ರಸಾದಾಂಕಾ ದ್ವಿತೀಯಕಾ　　|| ೧೬೧ ||

ರಥಾಂಕಾ ಕುಂಜರಾಂಕಾ ಚ ಕುಂಡಲಾಂಕಪದಸ್ಥಿತಾ ।
ಛತ್ರಾಂಕಾ ವಿದ್ಯುದಂಕಾ ಚ ಪುಷ್ಪಮಾಲಾಂಕಿತಾಪಿ ಚ　　|| ೧೬೨ ||

---

೧೫೯. ಕೃಷ್ಣನಲ್ಲಿಯೇ ದೃಷ್ಟಿಯುಳ್ಳವಳು. ಕೃಷ್ಣಗೋತ್ರಿಯು. ಕೃಷ್ಣದೇವಿಯು. ಕುಲೋದ್ಧಾರಕಳು. ಸಕಲ ಪ್ರಾಣಿಗಳಲ್ಲಿರುವವಳು. ಆದಾನಾದಿ ಕರ್ತಳು. ಸಕಲಲೋಕವಂದ್ಯಳು.

೧೬೦. ಕೃಷ್ಣನಿಗೆ ತನ್ನನ್ನು ಅರ್ಪಿಸಿರುವವಳು, ಪ್ರೇಮದಾದಿಯು, ಬಂಗಾರದಂತೆ ಶರೀರವುಳ್ಳವಳು, ಮನೋಹರಳು, ನಗಧಾತ್ರಿಯು, ಕೀರ್ತಿದಾಯಕಳು, ಮಹಾದೇವಿಯು, ಮಂಗಳಕರಳು.

೧೬೧. ಶ್ರೀಶೇಷದೇವಜನನಿಯು, ಅವತಾರಸಮೂಹಮಾತೆಯು, ಕನ್ನೈದಿಲೆಯ ಚಿಹ್ನೆಯುಳ್ಳವಳು, ಪದ್ಮಾಂಕಳು, ಪ್ರಸನ್ನಳು, ಕೃಷ್ಣದ್ವಿತೀಯಳು.

೧೬೨. ರಥಚಿಹ್ನೆಯುಳ್ಳವಳು, ಗಜಾಂಕಳು, ಕುಂಡಲಾಂಕಪದದಲ್ಲಿರುವವಳು, ಛತ್ರಾಂಕಿತಳು, ವಿದ್ಯುದಂಕಿತಳು, ಪುಷ್ಪಮಾಲಿಕೆಯ ಗುರುತುಳ್ಳವಳು.

ದಂಡಾಂಕಾ ಮುಕುಟಾಂಕಾ ಚ ಪೂರ್ಣಚಂದ್ರಾ ಶುಕಾಂಕಿತಾ ।
ಕೃಷ್ಣಾನ್ನಾಹಾರಪಾಕಾ ಚ ವೃಂದಾಕುಂಜವಿಹಾರಿಣೀ ॥ ೧೬೩ ॥

ಕೃಷ್ಣಪ್ರಬೋಧನಕರೀ ಕೃಷ್ಣಶೇಷಾನ್ನಭೋಜಿನೀ ।
ಪದ್ಮಕೇಸರಮಧ್ಯಸ್ಥಾ ಸಂಗೀತಾಗಮವೇದಿನೀ ॥ ೧೬೪ ॥

ಕೋಟಿಕಲ್ಪಾಂತಭ್ರೂಭಂಗಾ ಅಪ್ರಾಪ್ತಪ್ರಲಯಾಚ್ಯುತಾ ।
ಸರ್ವಸತ್ತ್ವನಿಧಿಃ ಪದ್ಮಶಂಖಾದಿನಿಧಿಸೇವಿತಾ ॥ ೧೬೫ ॥

ಅಣಿಮಾದಿಗುಣೈಶ್ವರ್ಯಾ ದೇವವೃಂದವಿಮೋಹಿನೀ ।
ಸರ್ವಾನಂದಪ್ರದಾ ಸರ್ವಾ ಸುವರ್ಣಲತಿಕಾಕೃತಿಃ ॥ ೧೬೬ ॥

---

೧೬೩. ದಂಡಾಂಕಿತಳು, ಕಿರೀಟಾಂಕಿತಳು, ಪೂರ್ಣಚಂದ್ರನಿಗೆ ಸಮಾನಳು, ಶುಕಾಂಕಿತಳು, ಕೃಷ್ಣನಿಗೆ ಅನ್ನಾಹಾರಾದಿಗಳನ್ನು ಪಕ್ವಮಾಡಿ ಕೊಡುವವಳು, ವೃಂದಾವನದ ಲತಾಗೃಹದಲ್ಲಿ ವಿಹರಿಸುತ್ತಿರುವವಳು.

೧೬೪. ಕೃಷ್ಣನನ್ನು ಎಚ್ಚರಿಸುವವಳು, ಕೃಷ್ಣನು ಉಂಡು ಮಿಕ್ಕ ಅನ್ನವನ್ನು ತಿನ್ನುವವಳು, ಪದ್ಮಕೇಸರಮಧ್ಯದಲ್ಲಿ ಇರುವವಳು, ಸಂಗೀತ ಮತ್ತು ಆಗಮಗಳನ್ನು ತಿಳಿದಿರುವವಳು.

೧೬೫. ಕೋಟಿಕಲ್ಪಾಂತಭ್ರೂಭಂಗವುಳ್ಳವಳು, ಪ್ರಳಯವಿಲ್ಲದವಳು, ನಾಶರಹಿತಳು, ಸಕಲಸತ್ವಗಳಿಗಾಕರಳು, ಪದ್ಮಶಂಖ ಮುಂತಾದ ನಿಧಿಯುನ್ನು ಸೇವಿಸುವವಳು.

೧೬೬. ಅಣಿಮಾದಿಗುಣೈಶ್ವರ್ಯವುಳ್ಳವಳು. ದೇವತೆಗಳ ಸಮೂಹಕ್ಕೆ ಮೋಹಕಳು, ಎಲ್ಲರಿಗೂ ಸುಖದಾಯಕಳು, ಸರ್ವಾಂತರ್ಗತಳು, ಬಂಗಾರದ ಬಳ್ಳಿಯಂತೆ ಆಕಾರವುಳ್ಳವಳು.

ಕೃಷ್ಣಾಭಿಸಾರಸಂಕೇತಾ ಮಾಲಿನೀ ನೃತ್ಯಪಂಡಿತಾ ।
ಗೋಪೀಸಿಂಧುಸಕಾಶಾಹ್ವಾ ಗೋಪಮಂಡಪಶೋಭಿನೀ ॥ ೧೬೭ ॥

ಶ್ರೀಕೃಷ್ಣಪ್ರೀತಿದಾ ಭೀತಾ ಪ್ರತ್ಯಂಗಪುಲಕಾಂಚಿತಾ ।
ಶ್ರೀಕೃಷ್ಣಾಲಿಂಗನರತಾ ಗೋವಿಂದವಿರಹಾಕ್ಷಮಾ ॥ ೧೬೮ ॥

ಅನಂತಗುಣಸಂಪನ್ನಾ ಕೃಷ್ಣಕೀರ್ತನಲಾಲಸಾ ।
ಬೀಜತ್ರಯಮಯೀ ಮೂರ್ತಿಃ ಕೃಷ್ಣಾನುಗ್ರಹವಾಂಛಿತಾ ॥ ೧೬೯ ॥

ವಿಮಲಾದಿನಿಷೇವ್ಯಾ ಚ ಲಲಿತಾದ್ಯರ್ಚಿತಾ ಸತೀ ।
ಪದ್ಮವೃಂದಸ್ಥಿತಾ ಹೃಷ್ಟಾ ತ್ರಿಪುರಾಪರಿಸೇವಿತಾ ॥ ೧೭೦ ॥

ವೃಂತಾವತ್ಯರ್ಚಿತಾ ಶ್ರದ್ಧಾ ದುರ್ಜ್ಞೇಯಾ ಭಕ್ತವಲ್ಲಭಾ ।
ದುರ್ಲಭಾ ಸಾಂದ್ರಸೌಖ್ಯಾತ್ಮಾ ಶ್ರೇಯೋಹೇತುಃ ಸುಭೋಗದಾ ॥೧೭೧॥

---

೧೬೭. ಸಂಕೇತದಿಂದ ಕೃಷ್ಣಾಭಿಸಾರವುಳ್ಳವಳು, ಮಾಲಿಕೆಯನ್ನು ಹಾಕಿಕೊಂಡಿರುವವಳು, ನರ್ತನವಿಜ್ಞಾನಿನಿಯು, ಗೋಪೀಸಿಂಧುಸಕಾಶಾಹ್ವೆಯು, ಗೋಪಾಲಕರ ಮಂಟಪಕ್ಕೆ ಶೋಭಾಯಮಾನಳು.

೧೬೮. ಶ್ರೀಕೃಷ್ಣನಿಗೆ ಪ್ರೀತಿದಾಯಕಳು, ಭಯಗ್ರಸ್ತಳು, ಅಂಗಗಳಲ್ಲೆಲ್ಲಾ ರೋಮಾಂಚಯುಕ್ತಳು, ಕೃಷ್ಣಾಲಿಂಗನತತ್ಪರಳು, ಕೃಷ್ಣವಿರಹವನ್ನು ಸಹಿಸಲಸಮರ್ಥಳು.

೧೬೯-೧೭೦. ಅನಂತ ಗುಣಯುಕ್ತಳು, ಕೃಷ್ಣಗುಣಕೀರ್ತನದಲ್ಲಿ ತತ್ಪರಳು, ಬೀಜತ್ರಯಮಯಳು, ಕೃಷ್ಣಾನುಗ್ರಹವನ್ನು ಅಪೇಕ್ಷಿಸುವವಳು, ವಿಮಲಾದಿಗಳಿಂದ ಸೇವಿತಳು, ಲಲಿತಾದಿಗಳಿಂದ ಪೂಜಿತಳು, ಸಾಧ್ವೀಮಣಿಯು, ಕಮಲಸಮೂಹದಲ್ಲಿ ಇರುವವಳು, ಸಂತುಷ್ಟಳು, ತ್ರಿಪುರೆಯರಿಂದ ಸೇವಿತಳು.

೧೭೧. ವೃಂತಾವತಿಯಿಂದ ಪೂಜಿತಳು, ಶ್ರದ್ಧಾದೇವಿಯು, ತಿಳಿಯಲಶಕ್ಯಳು, ಭಕ್ತಪ್ರಿಯಳು, ಹೊಂದಲಶಕ್ಯಳು, ಅತಿಶಯಿತ ಸೌಖ್ಯಸ್ವರೂಪಳು, ಶ್ರೇಯಸ್ಸಿಗೆ ಕಾರಣಳು, ಒಳ್ಳೆಯ ಭೋಗವನ್ನು ಕೊಡುವವಳು.

ಸಾರಂಗಾ ಶಾರದಾ ಬೋಧಾ ಸದ್ವೃಂದಾವನಚಾರಿಣೀ ।
ಬ್ರಹ್ಮಾನಂದಾ ಚಿದಾನಂದಾ ಧ್ಯಾನಾನಂದಾರ್ಧಮಾತ್ರಿಕಾ ॥ ೧೭೨ ॥

ಗಂಧರ್ವಾ ಸುರತಜ್ಞಾ ಚ ಗೋವಿಂದಪ್ರಾಣಸಂಗಮಾ ।
ಕೃಷ್ಣಾಂಗಭೂಷಣಾ ರತ್ನಭೂಷಣಾ ಸ್ವರ್ಣಭೂಷಿತಾ ॥ ೧೭೩ ॥

ಶ್ರೀಕೃಷ್ಣಹೃದಯಾವಾಸಾ ಮುಕ್ತಾಕನಕನಾಸಿಕಾ ।
ಸದ್ರತ್ನಕಂಕಣಯುತಾ ಶ್ರೀಮನ್ನೀಲಗಿರಿಸ್ಥಿತಾ ॥ ೧೭೪ ॥

ಸ್ವರ್ಣನೂಪುರಸಂಪನ್ನಾ ಸ್ವರ್ಣಕಿಂಕಿಣಿಮಂಡಿತಾ ।
ಅಶೇಷರಾಸಕುತುಕಾ ರಂಭೋರೂಸ್ತನುಮಧ್ಯಮಾ ॥ ೧೭೫ ॥

---

೧೭೨. ಸಾರವನ್ನು ಗ್ರಹಿಸುವವಳು, ಶಾರದಾದೇವಿಯು, ಜ್ಞಾನಸ್ವರೂಪಿಣಿಯು, ಸದ್ವೃಂದಾವನದಲ್ಲಿ ಸಂಚರಿಸುವವಳು, ಬ್ರಹ್ಮಾನಂದಳು, ಜ್ಞಾನಾನಂದಳು, ಧ್ಯಾನಾನಂದಳು, ಅರ್ಧಮಾತ್ರಾಯುಕ್ತಳು.

೧೭೩. ಗಂಧರ್ವರಂತಿರುವವಳು, ಸುರತಜ್ಞಾನಿಯು, ಕೃಷ್ಣಪ್ರಾಣಕಾಂತೆಯು, ಕೃಷ್ಣಾಂಗಭೂಷಣಗಳುಳ್ಳವಳು, ರತ್ನಖಚಿತವಾದ ಆಭರಣಗಳುಳ್ಳವಳು, ಸುವರ್ಣದಿಂದ ಅಲಂಕೃತಳು.

೧೭೪. ಶ್ರೀಕೃಷ್ಣನ ಹೃದಯದಲ್ಲಿರುವವಳು, ಮುತ್ತು ಸುವರ್ಣಮೂಗುತಿಯನ್ನಿಟ್ಟಿರುವವಳು, ಒಳ್ಳೆಯ ರತ್ನಖಚಿತವಾದ ಕಂಕಣವನ್ನು ಧರಿಸಿರುವವಳು, ಶ್ರೀಮನ್ನೀಲಾಚಲದಲ್ಲಿ ಇರುವವಳು.

೧೭೫. ಸುವರ್ಣಪಾದಾಭರಣಯುಕ್ತಳು ಸುವರ್ಣಕಿರುಗೆಜ್ಜೆಯಿಂದ ಅಲಂಕೃತಳು, ಸಮಸ್ತವಾದ ರಾಸಕ್ರೀಡೆಗಳಲ್ಲಿಯೂ ಕುತೂಹಲವುಳ್ಳವಳು, ಬಾಳೆಯ ಕಂಬದಂತಿರುವ ತೊಡೆಗಳುಳ್ಳವಳು, ಕೃಶವಾದ ಮಧ್ಯದೇಶವುಳ್ಳವಳು.

ಪರಾಕೃತಿಃ ಪರಾನಂದಾ ಪರಸ್ವರ್ಗವಿಹಾರಿಣೀ ।
ಪ್ರಸೂನಕಬರೀ ಚಿತ್ರಾ ಮಹಾಸಿಂದೂರಸುಂದರೀ || ೧೭೬ ||

ಕೈಶೋರವಯಸಾ ಬಾಲಾ ಪ್ರಮಾದಾಕುಲಶೇಖರೀ ।
ಕೃಷ್ಣಾಧರಸುಧಾಸ್ವಾದಾ ಶ್ಯಾಮಪ್ರೇಮವಿನೋದಿನೀ || ೧೭೭ ||

ಶಿಖಿಪಿಚ್ಛಲಸಚ್ಚೂಡಾ ಸ್ವರ್ಣಚಂಪಕಭೂಷಿತಾ ।
ಕುಂಕುಮಾಲಕ್ತಕಸ್ತೂರೀಮಂಡಿತಾ ಚಾಪರಾಜಿತಾ || ೧೭೮ ||

ಹೇಮಹಾರಾನ್ವಿತಾ ಪುಷ್ಪಾ ಹಾರಾಢ್ಯಾ ರಸವತ್ಯಪಿ ।
ಮಾಧುರ್ಯಮಧುರಾ ಪದ್ಮಾ ಪದ್ಮಹಸ್ತಾ ಸುವಿಶ್ರುತಾ || ೧೭೯ ||

---

೧೭೬. ಉತ್ತಮಾಕಾರವುಳ್ಳವಳು, ಉತ್ಕೃಷ್ಟಾನಂದಸ್ವರೂಪಳು, ಉತ್ತಮಸ್ವರ್ಗದಲ್ಲಿ ವಿಹರಿಸುವವಳು, ಜಡೆಯಲ್ಲಿ ಹೂವನ್ನು ಮುಡಿದುಕೊಂಡಿರುವವಳು, ಆಶ್ಚರ್ಯಕರಳು, ಮಹಾಸಿಂದೂರದಂತೆ ಸೌಂದರ್ಯವುಳ್ಳವಳು.

೧೭೭. ಬಾಲ್ಯವಯಸ್ಕಳು, ಬಾಲೆಯು, ಸ್ತ್ರೀಸಮೂಹದಲ್ಲಿ ಶ್ರೇಷ್ಠಳು, ಕೃಷ್ಣನ ಅಧರಾಮೃತವನ್ನು ಪಾನಮಾಡುವವಳು, ಶ್ಯಾಮಪ್ರೇಮದಿಂದ ವಿನೋದಿಸುವವಳು.

೧೭೮. ನವಿಲುಗರಿಯಿಂದ ವಿರಾಜಮಾನವಾದ ಶಿಖೆಯುಳ್ಳವಳು, ಸುವರ್ಣದ ಸಂಪಿಗೆಹೂವಿನಿಂದ ಅಲಂಕೃತಳು, ಕುಂಕುಮಕೇಸರಿಯಿಂದ ಯುಕ್ತವಾದ ಕಸ್ತೂರಿಯಿಂದ ಅಲಂಕೃತಳು, ಸೋಲಿಲ್ಲದವಳು.

೧೭೯. ಸುವರ್ಣಹಾರವನ್ನು ಹಾಕಿಕೊಂಡಿರುವವಳು, ಪುಷ್ಪಹಾರಯುಕ್ತಳು, ರಸವತಿಯು, ಮಾಧುರ್ಯಮಧುರೆಯು, ಪದ್ಮಾ, ಕರದಲ್ಲಿ ಪದ್ಮವನ್ನು ಧರಿಸಿರುವವಳು, ಸುವಿಶ್ರುತಳು.

ಭ್ರೂಭಂಗಾಭಂಗಕೋದಂಡಕಟಾಕ್ಷಶರಸಂಧಿನೀ ।
ಶೇಷದೇವಶಿರಸ್ಥಾ ಚ ನಿತ್ಯಸ್ಥಲವಿಹಾರಿಣೀ ॥ ೧೮೦ ॥

ಕಾರುಣ್ಯಜಲಮಧ್ಯಸ್ಥಾ ನಿತ್ಯಮತ್ತಾಧಿರೋಹಿಣೀ ।
ಅಷ್ಟಭಾಷಾವತೀ ಚಾಷ್ಟನಾಯಿಕಾ ಲಕ್ಷಣಾನ್ವಿತಾ ॥ ೧೮೧ ॥

ಸುನೀತಿಜ್ಞಾ ಶ್ರುತಿಜ್ಞಾ ಚ ಸರ್ವಜ್ಞಾ ದುಃಖಹಾರಿಣೀ ।
ರಜೋಗುಣೇಶ್ವರೀ ಚೈವ ಶರಚ್ಚಂದ್ರನಿಭಾನನಾ ॥ ೧೮೨ ॥

ಕೇತಕೀಕುಸುಮಾಭಾಸಾ ಸದಾ ಸಿಂಧುವನಸ್ಥಿತಾ ।
ಹೇಮಪುಷ್ಪಾಧಿಕಕರಾ ಪಂಚಶಕ್ತಿಮಯೀ ಹಿತಾ ॥ ೧೮೩ ॥

---

೧೮೦. ಭ್ರೂಭಂಗತರಂಗಗಳಿಂದ ಕೋದಂಡನ ಕಟಾಕ್ಷಶರವನ್ನು ಸಂಧಿಸುತ್ತಿರುವವಳು, ಶೇಷದೇವನ ತಲೆಯ ಮೇಲೆ ಇರುವ ನಿಯತವಾದ ಸ್ಥಳದಲ್ಲಿ ವಿಹರಿಸುವವಳು.

೧೮೧. ಕಾರುಣ್ಯವೆಂಬ ನೀರಿನ ಮಧ್ಯದಲ್ಲಿ ಇರುವವಳು, ನಿತ್ಯಮತ್ತಾಧಿರೋಹಣಶೀಲಳು, ಅಷ್ಟಭಾಷಾಭಿಜ್ಞಳು, ಅಷ್ಟನಾಯಿಕೆಯು, ಸಲ್ಲಕ್ಷಣಯುಕ್ತಳು.

೧೮೨ ಒಳ್ಳೆಯ ನೀತಿಗಳನ್ನು ತಿಳಿದಿರುವವಳು, ವೇದಜ್ಞಾನಿಯು, ಸರ್ವಜ್ಞಳು, ದುಃಖಪರಿಹಾರಕಳು, ರಜೋಗುಣಕ್ಕೊಡೆಯಳು, ಶರತ್ಕಾಲದ ಚಂದ್ರನಿಗೆ ಸಮಾನವಾದ ಮುಖವುಳ್ಳವಳು.

೧೮೩. ಕ್ಯಾದಿಗೆಯ ಹೂವಿನಂತೆ ಕಾಂತಿಯುಳ್ಳವಳು, ಸಿಂಧುವನದಲ್ಲಿ ಇರುವವಳು, ಬಂಗಾರದ ಹೂವಿಗಿಂತಲೂ ಹೆಚ್ಚಾಗಿ ಹೊಳೆಯುತ್ತಿರುವ ಕೈಗಳುಳ್ಳವಳು, ಶಕ್ತಿಪಂಚಕಮಯಳು, ಹಿತಕಾರಿಣಿಯು.

ಸ್ತನಕುಂಭೀ ನರಾಢ್ಯಾ ಚ ಕ್ಷೀಣಾಪುಣ್ಯಾ ಯಶಸ್ವಿನೀ ।
ವೈರಾಜಸೂಯಜನನೀ ಶ್ರೀಶಾ ಭುವನಮೋಹಿನೀ　　　　॥ ೧೮೪ ॥

ಮಹಾಶೋಭಾ ಮಹಾಮಾಯಾ ಮಹಾಕಾಂತಿರ್ಮಹಾಸ್ಮೃತಿಃ ।
ಮಹಾಮೋಹಾ ಮಹಾವಿದ್ಯಾ ಮಹಾಕೀರ್ತಿರ್ಮಹಾರತಿಃ　　　　॥ ೧೮೫ ॥

ಮಹಾಧೈರ್ಯಾ ಮಹಾವೀರ್ಯಾ ಮಹಾಶಕ್ತಿರ್ಮಹಾದ್ಯುತಿಃ ।
ಮಹಾಗೌರೀ ಮಹಾಸಂಪನ್ಮಹಾಭೋಗವಿಲಾಸಿನೀ　　　　॥ ೧೮೬ ॥

ಸಮಯಾ ಭಕ್ತಿದಾಽಶೋಕಾ ವಾತ್ಸಲ್ಯರಸದಾಯಿನೀ ।
ಸುಹೃದ್ಭಕ್ತಿಪ್ರದಾ ಸ್ವಚ್ಛಾ ಮಾಧುರ್ಯರಸವರ್ಷಿಣೀ　　　　॥ ೧೮೭ ॥

---

೧೮೪. ಕುಂಭಸ್ಥಳದಂತಿರುವ ಸ್ತನಗಳುಳ್ಳವಳು, ನರಶಕ್ತಿಯುಕ್ತಳು, ಪುಣ್ಯನಾಶವಿಲ್ಲದವಳು, ಕೀರ್ತಿಸಂಪನ್ನಳು, ವೈರಾಜಸೂಯಜನನಿಯು, ಸಂಪದಧೀಶ್ವರಳು, ಲೋಕಮೋಹಕಳು.

೧೮೫. ಮಹಾಕಾಂತಿಮಂತಳು, ಮಹಾಮಾಯೆಯು, ಮಹಾತೇಜಸ್ವಿನಿಯು, ಮಹಾಸ್ಮರಣಶೀಲಳು, ಮಹಾಮೋಹಕಳು, ಮಹಾವಿದ್ಯಾನಿಯಾಮಕಳು, ಮಹಾಕೀರ್ತಿಸಂಪನ್ನಳು, ಮಹಾರತಿಯುಕ್ತಳು.

೧೮೬. ಮಹಾಧೈರ್ಯವಂತಳು, ಮಹಾಶಕ್ತಿಯುತಳು, ಮಹಾಕಾಂತಿಮಂತಳು, ಮಹಾಗೌರಿಯು, ಮಹದೈಶ್ವರ್ಯ ಮಹಾಭೋಗಗಳ ವಿಲಾಸವುಳ್ಳವಳು.

೧೮೭. ಸಮಯಪ್ರವರ್ತಕಳು, ಭಕ್ತಿದಾಯಕಳು, ದುಃಖರಹಿತಳು, ಉತ್ತಮವಾತ್ಸಲ್ಯವನ್ನು ಬೀರುವವಳು, ಸೌಹಾರ್ದಭಕ್ತಿಪ್ರದಳು, ಪರಿಶುದ್ಧಳು, ಮಾಧುರ್ಯರಸವನ್ನು ಸುರಿಸುವವಳು.

ಭಾವಭಕ್ತಿಪ್ರದಾ ಶುದ್ಧಪ್ರೇಮಭಕ್ತಿವಿಧಾಯಿನೀ ।
ಗೋಪರಾಮಾಭಿರಾಮಾ ಚ ಕ್ರೀಡಾರಾಮಾ ಪರೇಶ್ವರೀ ॥ ೧೮೮ ॥

ನಿತ್ಯರಾಮಾ ಚಾತ್ಮರಾಮಾ ಕೃಷ್ಣರಾಮಾ ರಮೇಶ್ವರೀ ।
ಏಕಾನೇಕಜಗದ್ವ್ಯಾಪ್ತಾ ವಿಶ್ವಲೀಲಾಪ್ರಕಾಶಿನೀ ॥ ೧೮೯ ॥

ಸರಸ್ವತೀಶಾ ದುರ್ಗೇಶಾ ಜಗದೀಶಾ ಜಗದ್ವಿಧಿಃ ।
ವಿಷ್ಣುವಂಶನಿವಾಸಾ ಚ ವಿಷ್ಣುವಂಶಸಮುದ್ಭವಾ ॥ ೧೯೦ ॥

ವಿಷ್ಣುವಂಶಸ್ತುತಾ ಕರ್ತ್ರೀ ವಿಷ್ಣುವಂಶಾವನೀ ಸದಾ ।
ಆರಾಮಸ್ಥಾ ವನಸ್ಥಾ ಚ ಸೂರ್ಯಪುತ್ರ್ಯವಗಾಹಿನೀ ॥ ೧೯೧ ॥

---

೧೮೮. ಭಾವಭಕ್ತಿದಾತಳು, ನಿರ್ಮಲಪ್ರೇಮಭಕ್ತಿವಿಧಾಯಕಳು, ಗೋಪಸ್ತ್ರೀಯರಲ್ಲೆಲ್ಲಾ ಮನೋಹರಳು, ಕ್ರೀಡೆಯಿಂದ ಸಂತೋಷಪಡಿಸುವವಳು, ಪರೇಶ್ವರಿಯು.

೧೮೯. ನಿತ್ಯಸಂತೋಷಯುಕ್ತಳು, ಆತ್ಮಸಂತೋಷಯುಕ್ತಳು, ಕೃಷ್ಣನೊಡನೆ ರಮಿಸುವವಳು, ರಮೇಶ್ವರಿಯು, ಏಕಾನೇಕಜಗತ್ತುಗಳಲ್ಲಿ ವ್ಯಾಪಿಸಿರುವವಳು, ಲೋಕಕ್ಕೆ ಲೀಲಾಪ್ರಕಾಶಕಳು.

೧೯೦. ಸರಸ್ವತಿಗೆ ನಿಯಾಮಕಳು, ದುರ್ಗಾಧೀಶ್ವರಳು, ಜಗದೀಶಳು, ಜಗತ್ಸೃಷ್ಟಿಕರ್ತೆಯು, ವಿಷ್ಣುವಂಶದಲ್ಲಿ ನಿವಾಸಮಾಡುವವಳು, ವಿಷ್ಣುವಂಶಸಂಭೂತಳು.

೧೯೧. ವಿಷ್ಣುವಂಶದಿಂದ ಸ್ತುತಿಸಲ್ಪಟ್ಟವಳು, ಕರ್ತೆಳು, ವಿಷ್ಣುವಂಶರಕ್ಷಕಳು, ಆರಾಮದಲ್ಲಿ ಇರುವವಳು, ವನದಲ್ಲಿ ಇರುವವಳು, ಯಮುನಾನದಿಯಲ್ಲಿ ಸ್ನಾನಮಾಡುವವಳು.

ಪ್ರೀತಿಸ್ಥಾ ನಿತ್ಯಯಂತ್ರಸ್ಥಾ ಗೋಲೋಕಸ್ಥಾ ವಿಭೂತಿದಾ ।
ಸ್ವಾನುಭೂತಿಸ್ಥಿತಾ ವ್ಯಕ್ತಾ ಸರ್ವಲೋಕನಿವಾಸಿನೀ ॥ ೧೯೨ ॥

ಅಮೃತಾ ಹ್ಯದ್ಭುತಾ ಶ್ರೀಮನ್ನಾರಾಯಣಸಮೀಡಿತಾ ।
ಅಕ್ಷರಾಪಿ ಚ ಕೂಟಸ್ಥಾ ಮಹಾಪುರುಷಸಂಭವಾ ॥ ೧೯೩ ॥

ಔದಾರ್ಯಭಾವಸಾಧ್ಯಾ ಚ ಸ್ಥೂಲಸೂಕ್ಷ್ಮಾತಿರೂಪಿಣೀ ।
ಶಿರೀಷಪುಷ್ಪಮೃದುಲಾ ಗಾಂಗೇಯಮುಕುರಪ್ರಭಾ ॥ ೧೯೪ ॥

ನೀಲೋತ್ಪಲಜಿತಾಕ್ಷೀ ಚ ಸದ್ರತ್ನಕವರಾನ್ವಿತಾ ।
ಪ್ರೇಮಪರ್ಯಂಕನಿಲಯಾ ತೇಜೋಮಂಡಲಮಧ್ಯಗಾ ॥ ೧೯೫ ॥

ಕೃಷ್ಣಾಂಗಗೋಪನಾಭೇದಾ ಲೀಲಾವರಣನಾಯಿಕಾ ।
ಸುಧಾಸಿಂಧುಸಮುಲ್ಲಾಸಾಮೃತಾಸ್ಯಂದ ವಿಧಾಯಿನೀ ॥ ೧೯೬ ॥

---

೧೯೨. ಪ್ರೀತಿಸ್ಥಳು, ನಿತ್ಯಯಂತ್ರಸ್ಥಳು, ಗೋಲೋಕಸ್ಥಿತಳು, ಐಶ್ವರ್ಯಪ್ರದಳು, ಸ್ವಾನುಭವಸ್ಥಿತಳು, ವ್ಯಕ್ತಳು, ಸರ್ವಲೋಕನಿವಾಸಿನಿಯು.

೧೯೩. ಮುಕ್ತಳು, ಆಶ್ಚರ್ಯಕರಳು, ಶ್ರೀಮನ್ನಾರಾಯಣನಿಂದಸ್ತುತಳು, ನಾಶರಹಿತಳು, ನಿರ್ವಿಕಾರಳು, ಮಹಾಪುರುಷಸಂಭೂತಳು.

೧೯೪. ಔದಾರ್ಯಭಾವದಿಂದ ಸಾಧ್ಯಳು, ಅತ್ಯಂತ ಸ್ಥೂಲಸೂಕ್ಷ್ಮರೂಪವುಳ್ಳವಳು, ಶಿರೀಷಕುಸುಮದಂತೆ ಮೃದುಶರೀರವುಳ್ಳವಳು, ಗಾಂಗೇಯ ಮುಕುರದಂತೆ ಪ್ರಭೆಯುಳ್ಳವಳು.

೧೯೫. ಕನ್ನೈದಿಲೆಯನ್ನು ಜಯಿಸುವಂತಹ ನೇತ್ರಗಳುಳ್ಳವಳು, ಶ್ರೇಷ್ಠಸದ್ರತ್ನಗಳಿಂದ ಕೂಡಿರುವವಳು, ಪ್ರೇಮಶಯ್ಯಾಶ್ರಿತಳು, ತೇಜೋ ಮಂಡಲಮಧ್ಯದಲ್ಲಿ ವರ್ತಿಸುವವಳು.

೧೯೬. ರಹಸ್ಯವಾಗಿ ಕೃಷ್ಣಾಂಗಗಳಲ್ಲಿ ಬೆರೆತು ಅಭಿನ್ನಳಂತಿರುವವಳು, ಲೀಲಾವರಣನಾಯಿಕೆಯು, ಅಮೃತಸಮುದ್ರದಲ್ಲಿ ಉಲ್ಲಾಸಯುಕ್ತವಾದ ಅಮೃತ ಪ್ರವಾಹವಿಧಾಯಕಳು.

ಕೃಷ್ಣಚಿತ್ತಾ ರಾಸಚಿತ್ತಾ ಪ್ರೇಮಚಿತ್ತಾ ಹರಿಪ್ರಿಯಾ ।
ಅಚಿಂತನಗುಣಗ್ರಾಮಾ ಕೃಷ್ಣಲೀಲಾ ಮಲಾಪಹಾ ॥ ೧೯೭ ॥

ರಾಸಸಿಂಧುಶಶಾಂಕಾ ಚ ರಾಸಮಂಡಲಮಂಡಿನೀ ।
ನತವ್ರತಾ ಸಿಂಹರೀಚ್ಛಾ ಸುಮೂರ್ತಿಃ ಸುರವಂದಿತಾ ॥ ೧೯೮ ॥

ಗೋಪೀಚೂಡಾಮಣಿರ್ಗೋಪೀಗಣೇಡ್ಯಾ ವಿರಜಾಧಿಕಾ ।
ಗೋಪಪ್ರೇಷ್ಠಾ ಗೋಪಕನ್ಯಾ ಗೋಪನಾರೀ ಸುಗೋಪಿಕಾ ॥ ೧೯೯ ॥

ಗೋಪಧಾಮಾ ಸುದಾಮಾಂಬಾ ಗೋಪಾಲೀ ಗೋಪಮೋಹಿನೀ ।
ಗೋಪಭೂಷಾ ಕೃಷ್ಣಭೂಷಾ ಶ್ರೀವೃಂದಾವನಚಂದ್ರಿಕಾ ॥ ೨೦೦ ॥

---

೧೯೭. ಕೃಷ್ಣನಲ್ಲಿ ಮನಸ್ಸುಳ್ಳವಳು, ರಾಸಕ್ರೀಡಾಸಕ್ತಮನಸ್ಕಳು, ಪ್ರೇಮಚಿತ್ತಳು, ಹರಿಪ್ರಿಯೆಯು, ಅಚಿಂತ್ಯಗುಣಸಮೂಹವುಳ್ಳವಳು, ಕೃಷ್ಣ ವಿಹಾರಪಾತ್ರಳು, ದೋಷಪರಿಹಾರಕಳು.

೧೯೮. ರಾಸವೆಂಬ ಸಮುದ್ರದಲ್ಲಿ ಚಂದ್ರಪ್ರಾಯಳು, ರಾಸಮಂಡಲಕ್ಕಲಂಕಾರಪ್ರಾಯಳು, ನಮಸ್ಕಾರವ್ರತವುಳ್ಳವಳು, ಒಳ್ಳೆಯ ಶರೀರವುಳ್ಳವಳು, ದೇವವಂದಿತಳು.

೧೯೯. ಗೋಪಿಶ್ರೇಷ್ಠಳು, ಗೋಪೀಸಮೂಹದಿಂದ ಸ್ತುತ್ಯಳು, ವಿರಜಾದಿಕಳು, ಗೋಪಶ್ರೇಷ್ಠಳು, ಗೋಪಪುತ್ರಿಯು, ಗೋಪಸ್ತ್ರೀಯು, ಸವಿಾಚೀನ ಗೋಪಿಕಾಸ್ತ್ರೀಯು.

೨೦೦. ಗೋಪಾಶ್ರಯಳು, ಸುದಾಮಮಾತೆಯು, ಗೋಪಾಲಪತ್ನಿಯು, ಗೋಪಮೋಹಕಳು, ಗೋಪರಿಗೆ ಅಲಂಕಾರಳು, ಕೃಷ್ಣನಿಗೆ ಅಲಂಕಾರಳು, ಶ್ರೀವೃಂದಾವನದಲ್ಲಿ ಚಂದ್ರನಂತಿರುವವಳು.

ವೀಣಾದಿಘೋಷನಿರತಾ ರಾಸೋತ್ಸವವಿಕಾಸಿನೀ ।
ಕೃಷ್ಣಚೇಷ್ಟಾಪರಿಜ್ಞಾತಾ ಕೋಟಿಕಂದರ್ಪಮೋಹಿನೀ ॥ ೨೦೧ ॥

ಶ್ರೀಕೃಷ್ಣಗುಣಗಾನಾಢ್ಯಾ ದೇವಸುಂದರಿಮೋಹಿನೀ ।
ಕೃಷ್ಣಚಂದ್ರಮನೋಜ್ಞಾ ಚ ಕೃಷ್ಣದೇವಸಹೋದರೀ ॥ ೨೦೨ ॥

ಕೃಷ್ಣಾಭಿಲಾಷಿಣೀ ಕೃಷ್ಣಪ್ರೇಮಾನುಗ್ರಹವಾಂಛಿತಾ ।
ಕ್ಷೇಮಾ ಚ ಮಧುರಾಲಾಪಾ ಭೂರಿಮಾಯಾ ಸುಭದ್ರಿಕಾ ॥ ೨೦೩ ॥

ಪ್ರಕೃತಿಃ ಪರಮಾನಂದಾ ನೀಪದ್ರುಮತಲಸ್ಥಿತಾ ।
ಕೃಪಾಕಟಾಕ್ಷಾ ಬಿಂಬೋಷ್ಠೀ ರಂಭಾ ಚಾರುನಿತಂಬಿನೀ ॥ ೨೦೪ ॥

---

೨೦೧. ವೀಣಾದಿನಾದಗಳಲ್ಲಿ ಆಸಕ್ತಳಾದವಳು, ರಾಸೋತ್ಸವದಿಂದ ವಿಕಾಸಯುಕ್ತಳು, ಕೃಷ್ಣಚೇಷ್ಟೆಯನ್ನು ತಿಳಿದವಳು, ಕೋಟಿಮನ್ಮಥ ಮೋಹಕಳು.

೨೦೨. ಶ್ರೀಕೃಷ್ಣಗುಣಗಾನದಿಂದ ಪೂರ್ಣಳು, ದೇವಸುಂದರಿಯರಿಗೆ ಮೋಹಕಳು, ಕೃಷ್ಣಚಂದ್ರರಂತೆ ಮನೋಹರಳು, ಕೃಷ್ಣಸಹೋದರಿಯು.

೨೦೩. ಕೃಷ್ಣನ ಅಭಿಲಾಷೆಗೆ ವಿಷಯಳು, ಕೃಷ್ಣನ ಪ್ರೇಮ ಮತ್ತು ಅನುಗ್ರಹಗಳನ್ನು ಅಪೇಕ್ಷಿಸುವವಳು, ಕ್ಷೇಮಕಾರಿಣಿಯು, ಮಧುರಸಲ್ಲಾಪವುಳ್ಳವಳು, ಮಾಯೆಯು, ಸನ್ಮಂಗಳಯುಕ್ತಳು.

೨೦೪. ಪ್ರಕೃತಿಗೆ ಅಭಿಮಾನಿನಿಯು, ಪರಮಾನಂದಸ್ವರೂಪಿಣಿಯು, ನೀಪ (ಈಚಲು) ವೆಂಬ ವೃಕ್ಷತಲದಲ್ಲಿರುವವಳು, ಬಾಳೆಯ ಕಂಬದಂತೆ ಮನೋಹರವಾದ ಕಟಿಪಶ್ಚಾದ್ಭಾಗವುಳ್ಳವಳು.

ಸ್ಮರಕೇಲಿನಿಧಾನಾ ಚ ಗಂಡತಾಟಂಕಮಂಡಿತಾ ।
ಹೇಮಾದ್ರಿಕಾಂತಿರುಚಿರಾ ಪ್ರೇಮಾಢ್ಯಾ ಮದಮಂಥರಾ ॥ ೨೦೫ ॥

ಕೃಷ್ಣಚಿಂತಾ ಪ್ರೇಮಚಿಂತಾ ರತಿಚಿಂತಾ ಚ ಕೃಷ್ಣದಾ ।
ರಾಸಚಿಂತಾ ಭಾವಚಿಂತಾ ಶುದ್ಧಚಿಂತಾ ಮಹಾರಸಾ ॥ ೨೦೬ ॥

ಕೃಷ್ಣಾದೃಷ್ಟಿತ್ರುಟಿಯುಗಾ ದೃಷ್ಟಿಸೂಕ್ಷ್ಮವಿನೋದಿನೀ ।
ಕಂದರ್ಪಜನನೀ ಮುಖ್ಯಾ ವೈಕುಂಠಗತಿದಾಯಿನೀ ॥ ೨೦೭ ॥

ರಾಸಭಾವಾ ಪ್ರಿಯಾಶ್ಲಿಷ್ಟಾ ಪ್ರೇಷ್ಠಾ ಪ್ರಥಮನಾಯಿಕಾ ।
ಶುದ್ಧಾ ಸುಧಾದೇಹಿನೀ ಚ ಶ್ರೀರಾಮಾ ರಸಮಂಜರೀ ॥ ೨೦೮ ॥

---

೨೦೫. ಕಾಮವಿಲಾಸಕ್ಕೆ ಆಶ್ರಯಳು, ಗಂಡತಾಟಂಕಗಳಿಂದ ಅಲಂಕೃತಳು, ಸ್ವರ್ಣಪರ್ವತದಂತೆ ಕಾಂತಿಯುತಳು, ಪ್ರೇಮಮೂಲಳು, ಮದವುಳ್ಳವಳು.

೨೦೬. ಕೃಷ್ಣಚಿಂತಾರತಳು, ಪ್ರೇಮಚಿಂತಾರತಳು, ರತಿಚಿಂತಕಳು, ಕೃಷ್ಣನಿಗೆ ಪ್ರೇಮದಾತೆಯು, ರಾಸಚಿಂತಾಪರಳು, ಭಾವಚಿಂತಾಯುತಳು, ಪರಿಶುದ್ಧಚಿಂತೆಯುಳ್ಳವಳು, ಮಹಾಭಕ್ತಳು.

೨೦೭. ಕೃಷ್ಣಪ್ರಿಯಳು, ದೃಷ್ಟಿಸೂಕ್ಷ್ಮಯುಕ್ತಳು, ಸೂಕ್ಷ್ಮದೃಷ್ಟಿಯಿಂದ ಸಂತೋಷಯುಕ್ತಳು, ಮನ್ಮಥನ ಮಾತೆಯು, ಪ್ರಧಾನಳು, ವೈಕುಂಠಮಾರ್ಗದಾಯಕಳು.

೨೦೮. ರಾಸೋತ್ಸವದ ಭಾವವುಳ್ಳವಳು, ಪ್ರಿಯನಿಂದಾಲಿಂಗಿತಳು, ಅತ್ಯಂತ ಪ್ರೀತಿಪಾತ್ರಳು, ಮೊದಲನೆಯ ನಾಯಿಕೆಯು, ಪರಿಶುದ್ಧಳು, ಅಮೃತದೇಹವುಳ್ಳವಳು, ಶ್ರೀರಾಮಳು, ರಸದ ತೆನೆಯಂತೆ ಇರುವವಳು.

**ಸುಪ್ರಭಾವಾ ಶುಭಾಚಾರಾ ಸ್ವರ್ನದೀ ನರ್ಮದಾಂಬಿಕಾ ।**
**ಗೋಮತೀ ಚಂದ್ರಭಾಗೇಡ್ಯಾ ಸರಯೂತಾಮ್ರಪರ್ಣಿಸೂಃ ॥ ೨೦೯ ॥**

**ನಿಷ್ಕಲಂಕಚರಿತ್ರಾ ಚ ನಿರ್ಗುಣಾ ಚ ನಿರಂಜನಾ ।**
**ಏತನ್ನಾಮಸಹಸ್ರಂತು ಯುಗ್ಮರೂಪಸ್ಯ ನಾರದ ॥ ೨೧೦ ॥**

**ಪಠನೀಯಂ ಪ್ರಯತ್ನೇನ ವೃಂದಾವನರಸಾವಹೇ ।**
**ಮಹಾಪಾಪಪ್ರಶಮನಂ ವಂಧ್ಯಾತ್ವವಿನಿವರ್ತಕಂ ॥ ೨೧೧ ॥**

**ದಾರಿದ್ರ್ಯಶಮನಂ ರೋಗನಾಶನಂ ಕಾಮದಂ ಮಹತ್ ।**
**ಪಾಪಾಪಹಂ ವೈರಿಹರಂ ರಾಧಾಮಾಧವಭಕ್ತಿದಂ ॥ ೨೧೨ ॥**

**ನಮಸ್ತಸ್ಮೈ ಭಗವತೇ ಕೃಷ್ಣಾಯಾಕುಂಠಮೇಧಸೇ ।**
**ರಾಧಾಸಂಗಸುಧಾಸಿಂಧೌ ನಮೋ ನಿತ್ಯವಿಹಾರಿಣೇ ॥ ೨೧೩ ॥**

---

೨೦೯. ಸಮೀಚೀನಪ್ರಭಾವವುಳ್ಳವಳು, ಒಳ್ಳೆಯ ನಡತೆಯುಳ್ಳವಳು, ಆಕಾಶಗಂಗೆಯು, ನರ್ಮದಾಂಬಿಕೆಯು, ಗೋಮತಿಯು, ಚಂದ್ರಭಾಗದಿಂದ ಸ್ತುತ್ಯಳು, ಸರಯು ಮತ್ತು ತಾಮ್ರಪರ್ಣಿಗಳನ್ನು ಹುಟ್ಟಿಸಿದವಳು.

೨೧೦-೨೧೨. ಕಳಂಕವಿಲ್ಲದ ಚಾರಿತ್ರವುಳ್ಳವಳು, ಸತ್ವಾದಿಗುಣರಹಿತಳು, ನಿರ್ದೋಷಳು.

ನಾರದಾ! ರೂಪದ್ವಯದ ಈ ಸಹಸ್ರನಾಮವನ್ನು ಶ್ರೇಷ್ಠವಾದ ವೃಂದಾವನಸ್ಥಾನದಲ್ಲಿ ಪ್ರಯತ್ನಪೂರ್ವಕವಾಗಿ ಪಠನೆಮಾಡಬೇಕು. ಇದು ಮಹಾಪಾಪಪರಿಹಾರಕವು, ವಂಧ್ಯಾತ್ವವ (ಗೊಡ್ಡುತನ) ನ್ನು ಪರಿಹರಿಸಿ ಮಕ್ಕಳನ್ನು ಕೊಡುವುದು, ದಾರಿದ್ರ್ಯವನ್ನು ಹೋಗಲಾಡಿಸುವುದು, ರೋಗವನ್ನು ನಾಶಪಡಿಸುವುದು, ಇಷ್ಟಾರ್ಥಪ್ರದವು, ಮಹತ್ತಾದುದು, ಪಾಪವಿನಾಶಕವು, ಶತ್ರುಸಂಹಾರಕವು, ರಾಧಾಕೃಷ್ಣರಲ್ಲಿ ಭಕ್ತಿಯನ್ನು ಕೊಡುವುದು.

೨೧೩. ಷಡ್ಗುಣೈಶ್ವರ್ಯಸಂಪನ್ನನು, ಹ್ರಾಸವಾಗದಂತಹ ಮೇಧಾಶಕ್ತಿಯುಳ್ಳವನು, ರಾಧಾದೇವಿಯ ಸಂಗವೆಂಬ ಅಮೃತಸಮುದ್ರದಲ್ಲಿ ಯಾವಾಗಲೂ ವಿಹರಿಸುವವನೂ ಆಗಿರುವ ಕೃಷ್ಣನಿಗೆ ನಮಸ್ಕಾರ, ನಮಸ್ಕಾರ.

ರಾಧಾದೇವೀ ಜಗತ್ಕರ್ತ್ರೀ ಜಗತ್ಪಾಲನತತ್ಪರಾ ।
ಜಗಲ್ಲಯವಿಧಾತ್ರೀ ಚ ಸರ್ವೇಶೀ ಸರ್ವಸೂತಿಕಾ || ೨೧೪ ||

ತಸ್ಯಾ ನಾಮಸಹಸ್ರಂ ವೈ ಮಯಾ ಪ್ರೋಕ್ತಂ ಮುನೀಶ್ವರ ।
ಭುಕ್ತಿಮುಕ್ತಿಪ್ರದಂ ದಿವ್ಯಂ ಕಿಂ ಭೂಯಃ ಶ್ರೋತುಮಿಚ್ಛಸಿ || ೨೧೫ ||

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ರಾಧಾಕೃಷ್ಣಸಹಸ್ರನಾಮಕಥನಂ
ನಾಮ ದ್ವ್ಯಶೀತಿತಮೋಽಧ್ಯಾಯಃ

---

೨೧೪. ಮುನೀಶ್ವರನೇ! ರಾಧಾದೇವಿಯು ಜಗತ್ಕರ್ತಳು, ಜಗದ್ರಕ್ಷಣ ನಿರತಳು, ಜಗತ್ತಿನ ನಾಶವನ್ನು ಮಾಡುತ್ತಿರುವವಳು, ಸರ್ವೇಶ್ವರಿಯು, ಸರ್ವೋತ್ಪತ್ತಿಕಾರಣಳೂ ಆಗಿರುವಳು.

೨೧೫. ಅಂತಹ ರಾಧಾದೇವಿಯ ಭೋಗಮೋಕ್ಷಪ್ರದವಾದ, ದಿವ್ಯ ಸಹಸ್ರನಾಮವನ್ನು ಹೇಳಿರುತ್ತೇನೆ. ನೀನು ಮುಂದೆ ಇನ್ನೇನನ್ನು ಕೇಳಲಿಚ್ಛಿಸುವೆ ?

ಇಂತು ಶ್ರೀನಾರದೀಯಪುರಾಣದೊಳು, ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಮೂರನೆಯ ಪಾದದೊಳು, ರಾಧಾಕೃಷ್ಣಸಹ್ರನಾಮಕಥನವೆಂಬ
ಎಂಬತ್ತೆರಡನೆಯ ಅಧ್ಯಾಯವು ಮುಗಿದುದು.

# ತ್ರ್ಯಶೀತಿತಮೋಽಧ್ಯಾಯಃ

---

## ಶ್ರೀಶೌನಕ ಉವಾಚ

ಸಾಧು ಸೂತ ಮಹಾಭಾಗ ಜಗದುದ್ಧಾರಕಾರಕಂ |
ಮಹಾತಂತ್ರವಿಧಾನಂ ನಃ ಕುಮಾರೋಕ್ತಂ ತ್ವಯೋದಿತಂ || ೧ ||

ಅಲಭ್ಯಮೇತತ್ತಂತ್ರೇಷು ಪುರಾಣೇಷ್ವಪಿ ಮಾನದ |
ಯದಿಹೋದಿತಮಸ್ಮಭ್ಯಂ ತ್ವಯ್ಯಾತಿಕರುಣಾತ್ಮನಾ || ೨ ||

ನಾರದೋ ಭಗವಾನ್ಸೂತ ಲೋಕೋದ್ಧರಣತತ್ಪರಃ |
ಭೂಯಃ ಪಪ್ರಚ್ಛ ಕಿಂ ಸಾಧೋ ಕುಮಾರಂ ವಿದುಷಾಂ ವರಂ || ೩ ||

---

## ಎಂಬತ್ತುಮೂರನೆಯ ಅಧ್ಯಾಯವು.

೧. ಶ್ರೀಶೌನಕನು ಹೇಳಿದನು—ಮಹಾಶಯನಾದ ಸೂತನೇ ಕುಮಾರನು ಹೇಳಿದ ಜಗತನ್ನುದ್ಧರಿಸುವ ಮಹಾತಂತ್ರವಿಧಾನವನ್ನು ನಮಗಾಗಿ ನೀನು ಹೇಳಿರುವೆ. ಒಳ್ಳೆಯದು.

೨. ಮಾನದಾತೃವಾದ ಸೂತನೇ! ಅತ್ಯಂತ ದಯಾಶಾಲಿಯಾದ ನೀನು ನಮಗಾಗಿ ಇಲ್ಲಿ ಹೇಳಿರುವ ಈ ತಂತ್ರವಿಧಾನವು ತಂತ್ರ ಮತ್ತು ಪುರಾಣಗಳಲ್ಲಿ ಸಿಕ್ಕತಕ್ಕುವುಗಳಲ್ಲ.

೩. ಸಾಧುವಾದ ಸೂತನೇ! ಲೋಕೋದ್ಧಾರ ಕಾರ್ಯದಲ್ಲಿ ನಿರತನಾದ ಪೂಜ್ಯನಾರದನು ಜ್ಞಾನಿಶ್ರೇಷ್ಠನಾದ ಸನತ್ಕುಮಾರನನ್ನು ಪುನಃ ಕೇಳಿದುದೇನು?

ಸೂತ ಉವಾಚ

ಶ್ರುತ್ವಾ ಸ ನಾರದೋ ವಿಪ್ರಾಃ ಯುಗ್ಮನಾಮಸಹಸ್ರಕಂ ।
ಸನತ್ಕುಮಾರಮಪ್ಯಾಹ ಪ್ರಣಮ್ಯ ಜ್ಞಾನಿನಾಂ ವರಂ ॥ ೪ ॥

ನಾರದ ಉವಾಚ

ಬ್ರಹ್ಮಂಸ್ತ್ವಯಾ ಸಮಾಖ್ಯಾತಾ ವಿಧಯಸ್ತಂತ್ರಚೋದಿತಾಃ ।
ತತ್ರಾಪಿ ಕೃಷ್ಣಮಂತ್ರಾಣಾಂ ವೈಭವಂ ಹ್ಯುದಿತಂ ಮಹತ್ ॥ ೫ ॥

ಯಾ ತತ್ರ ರಾಧಿಕಾ ದೇವೀ ಸರ್ವಾದ್ಯಾ ಸಮುದಾಹೃತಾ ।
ತಸ್ಯಾ ಅಂಶಾವತಾರಾಣಾಂ ಚರಿತಂ ಮಂತ್ರಪೂರ್ವಕಂ ॥ ೬ ॥

ತಂತ್ರೋಕ್ತಂ ವದ ಸರ್ವಜ್ಞ ತ್ವಾಮಹಂ ಶರಣಂ ಗತಃ ।
ಶಕ್ತೇಸ್ತಂತ್ರಾಣ್ಯನೇಕಾನಿ ಶಿವೋಕ್ತಾನಿ ಮುನೀಶ್ವರ ॥ ೭ ॥

---

೪. ಸೂತನು ಹೇಳಿದನು—ಬ್ರಾಹ್ಮಣರೇ! ಆ ನಾರದನು ರಾಧಾ ಕೃಷ್ಣರ ಸಹಸ್ರನಾಮವನ್ನು ಕೇಳಿ, ಜ್ಞಾನಿಶ್ರೇಷ್ಠನಾದ ಸನತ್ಕುಮಾರನನ್ನು ನಮಸ್ಕರಿಸಿ ಹೀಗೆ ಹೇಳಿದರು.

೫. ನಾರದನು ಹೇಳಿದನು—ಬ್ರಾಹ್ಮಣನಾದ ಸನತ್ಕುಮಾರನೇ! ತಂತ್ರೋಕ್ತವಾದ ವಿಧಾನಗಳನ್ನು ನೀನು ಚೆನ್ನಾಗಿ ಹೇಳಿದೆ. ಅದರಲ್ಲಿಯೂ ಕೃಷ್ಣಮಂತ್ರಗಳ ಮಹಾವೈಭವವನ್ನೂ ಸಹ ಹೇಳಿರುವೆ.

೬-೭. ಅಲ್ಲಿ "ರಾಧಿಕಾದೇವಿಯು ಸರ್ವಾದ್ಯಳು" ಎಂದು ಹೇಳಿದೆಯಷ್ಟೇ! ಸರ್ವಜ್ಞನೇ ತಂತ್ರೋಕ್ತವಾದ ಆ ರಾಧಾದೇವಿಯ ಅಂಶಾವತಾರ ಚರಿತ್ರೆಯನ್ನು ಮಂತ್ರಕಥನಪೂರ್ವಕವಾಗಿ ಹೇಳು. ನಾನು ನಿನಗೆ ಶರಣಾಗತನಾಗಿರುವೆನು.

ಯಾನಿ ತತ್ಸಾರಮುದ್ಧೃತ್ಯ ಸಾಕಲ್ಯೇನಾಭಿಧೇಹಿ ನಃ |
ತಚ್ಛ್ರುತ್ವಾ ವಚನಂ ತಸ್ಯ ನಾರದಸ್ಯ ಮಹಾತ್ಮನಃ ॥ ೮ ॥

ಸನತ್ಕುಮಾರಃ ಪ್ರೋವಾಚ ಸ್ಮೃತ್ವಾ ರಾಧಾಪದಾಂಬುಜಂ |

ಸನತ್ಕುಮಾರ ಉವಾಚ

ಶೃಣು ನಾರದ ವಕ್ಷ್ಯಾಮಿ ರಾಧಾಂಶಾನಾಂ ಸಮುದ್ಭವಂ ॥ ೯ ॥

ಶಕ್ತೀನಾಂ ಪರಮಾಶ್ಚರ್ಯಂ ಮಂತ್ರಸಾಧನಪೂರ್ವಕಂ |
ಯಾ ತು ರಾಧಾ ಮಯಾ ಪ್ರೋಕ್ತಾ ಕೃಷ್ಣಾರ್ಧಾಂಗಸಮುದ್ಭವಾ॥ ೧೦ ॥

ಗೋಲೋಕವಾಸಿನೀ ಸಾ ತು ನಿತ್ಯಾ ಕೃಷ್ಣಸಹಾಯಿನೀ |
ತೇಜೋಮಂಡಲಮಧ್ಯಸ್ಥಾ ದೃಶ್ಯಾದೃಶ್ಯಸ್ವರೂಪಿಣೀ ॥ ೧೧ ॥

---

೭-೮. ಮುನೀಶ್ವರನೇ! ಶಿವನಿಂದ ಉಪದೇಶಿಸಲ್ಪಟ್ಟ, ಅನೇಕ ಶಕ್ತಿ ತಂತ್ರಗಳನ್ನುದ್ಧರಿಸಿ, ಅದರ ಸಾರವನ್ನು ನಮಗೆ ಸಂಪೂರ್ಣವಾಗಿ ಹೇಳು.

೮-೯. ಮಹಾತ್ಮನಾದ ನಾರದನ ಮಾತನ್ನು ಕೇಳಿ ಸನತ್ಕುಮಾರನು ರಾಧಾದೇವಿಯ ಪಾದಪದ್ಮವನ್ನು ಸ್ಮರಿಸಿ ಮಾತನಾಡಿದನು.

೯-೧೦. ಸನತ್ಕುಮಾರನು ಹೇಳಿದನು—ನಾರದನೇ! ಕೇಳು, ರಾಧಾದೇವಿಯ ಅಂಶಗಳಾದ ಶಕ್ತಿಗಳ ಅತ್ಯಂತ ಆಶ್ಚರ್ಯಕರವಾದ ಉದ್ಭವವನ್ನು ಮಂತ್ರಸಾಧನಪೂರ್ವಕವಾಗಿ ಹೇಳುವೆನು.

೧೦-೧೧. ನಾನು ಹೇಳಿದ ಕೃಷ್ಣಾರ್ಧಾಂಗಸಮುದ್ಭೂತಳಾದ ಗೋಲೋಕವಾಸಿನಿಯಾದ ರಾಧೆಯು ಯಾವಾಗಲೂ ಕೃಷ್ಣಸಹಾಯಕಳು, ತೇಜೋಮಂಡಲಮಧ್ಯದಲ್ಲಿ ವಾಸಿಸುತ್ತಿರುವವಳು ಮತ್ತು ದೃಶ್ಯಾದೃಶ್ಯಸ್ವರೂಪವುಳ್ಳವಳು.

ಕದಾಚಿತ್ತು ತಯಾ ಸಾರ್ಧಂ ಸ್ಥಿತಸ್ಯ ಮುನಿಸತ್ತಮ ।
ಕೃಷ್ಣಸ್ಯ ವಾಮಭಾಗಾತ್ತು ಜಾತೋ ನಾರಾಯಣಃ ಸ್ವಯಂ ॥ ೧೨ ॥

ರಾಧಿಕಾಯಾಶ್ಚ ವಾಮಾಂಗಾನ್ಮಹಾಲಕ್ಷ್ಮೀರ್ಬಭೂವ ಹ ।
ತತಃ ಕೃಷ್ಣೋ ಮಹಾಲಕ್ಷ್ಮೀಂ ದತ್ವಾ ನಾರಾಯಣಾಯ ಚ ॥ ೧೩ ॥

ವೈಕುಂಠೇ ಸ್ಥಾಪಯಾಮಾಸ ಶಶ್ವತ್ಪಾಲನಕರ್ಮಣಿ ।
ಅಥ ಗೋಲೋಕನಾಥಸ್ಯ ಲೋಮ್ನಾಂ ವಿವರತೋ ಮುನೇ ॥ ೧೪ ॥

ಜಾತಾಶ್ಚಾಸಂಖ್ಯಗೋಪಾಲಾಸ್ತೇಜಸಾ ವಯಸಾ ಸಮಾಃ ।
ಪ್ರಾಣತುಲ್ಯಪ್ರಿಯಾಃ ಸರ್ವೇ ಬಭೂವುಃ ಪಾರ್ಷದಾ ವಿಭೋಃ ॥ ೧೫ ॥

---

೧೨. ಮುನಿವರ್ಯನೇ! ಒಂದಾನೊಂದು ಕಾಲದಲ್ಲಿ ಆ ರಾಧಾದೇವಿಯ ಜೊತೆಯಲ್ಲಿದ್ದ ಶ್ರೀಕೃಷ್ಣನ ಎಡಭಾಗದ ಅವಯುವಗಳಿಂದ ಸಾಕ್ಷಾತ್ ನಾರಾಯಣನು ಆವಿರ್ಭವಿಸಿದನು.

೧೩-೧೪. ರಾಧಾದೇವಿಯ ಎಡಭಾಗದ ಅವಯುವದಿಂದ ಮಹಾಲಕ್ಷ್ಮಿಯು ಆವಿರ್ಭವಿಸಿದಳು. ಅನಂತರ ಕೃಷ್ಣನು ನಾರಾಯಣನಿಗೆ ಲಕ್ಷ್ಮಿಯನ್ನು ಕೊಟ್ಟು ಅವನನ್ನು ಯಾವಾಗಲೂ ಜಗತ್ತನ್ನು ರಕ್ಷಿಸುವುದಕ್ಕಾಗಿ ವೈಕುಂಠದಲ್ಲಿ ಸ್ಥಾಪಿಸಿದನು.

೧೪-೧೫. ತರುವಾಯ ಗೋಲೋಕನಾಥನ ಲೋಮ (ಮೈಮೇಲಿನ ಕೂದಲು) ಗಳ ರಂಧ್ರದಿಂದ (ರೋಮಕೂಪದಿಂದ) ಸಮಾನ ವಯಸ್ಕರೂ ಮತ್ತು ತೇಜಸ್ಕರೂ ಆದ ಅಸಂಖ್ಯಾಕ ಗೋಪಾಲಕರು ಹುಟ್ಟಿದರು. ಸ್ವಾಮಿಯಾದ ಕೃಷ್ಣನಿಗೆ ಅವರೆಲ್ಲರೂ ಪ್ರಾಣದಂತೆ ಅತ್ಯಂತ ಪ್ರಿಯರಾಗಿ ಪರಿವಾರರಾದರು.

ರಾಧಾಂಗಲೋಮಕೂಪೇಭ್ಯೋ ಬಭೂವುರ್ಗೋಪಕನ್ಯಕಾಃ ।
ರಾಧಾತುಲ್ಯಾಃ ಸರ್ವತಶ್ಚ ರಾಧಾದಾಸ್ಯಃ ಪ್ರಿಯಂವದಾಃ ॥ ೧೬ ॥

ಏತಸ್ಮಿನ್ನಂತರೇ ವಿಪ್ರ ಸಹಸಾ ಕೃಷ್ಣದೇಹತಃ ।
ಆವಿರ್ಬಭೂವ ಸಾ ದುರ್ಗಾ ವಿಷ್ಣುಮಾಯಾ ಸನಾತನೀ ॥ ೧೭ ॥

ದೇವೀನಾಂ ಬೀಜರೂಪಾ ಚ ಮೂಲಪ್ರಕೃತಿರೀಶ್ವರೀ ।
ಪರಿಪೂರ್ಣತಮಾ ತೇಜಃ ಸ್ವರೂಪಾ ತ್ರಿಗುಣಾತ್ಮಿಕಾ ॥ ೧೮ ॥

ಸಹಸ್ರಭುಜಸಂಯುಕ್ತಾ ನಾನಾಶಸ್ತ್ರಾ ತ್ರಿಲೋಚನಾ ।
ಯಾ ತು ಸಂಸಾರವೃಕ್ಷಸ್ಯ ಬೀಜರೂಪಾ ಸನಾತನೀ ॥ ೧೯ ॥

ರತ್ನಸಿಂಹಾಸನಂ ತಸ್ಯೈ ಪ್ರದದೌ ರಾಧಿಕೇಶ್ವರಃ ।
ಏತಸ್ಮಿನ್ನಂತರೇ ತತ್ರ ಸಸ್ತ್ರೀಕಸ್ತು ಚತುರ್ಮುಖಃ ॥ ೨೦ ॥

---

೧೬ ರಾಧಾದೇವಿಯ ಅವಯವಗಳ ರೋಮಕೂಪದಿಂದ ಗೋಪಕನ್ಯೆಯರು ಹುಟ್ಟಿದರು. ಅವರೆಲ್ಲರೂ ರಾಧೆಗೆ ಸಮಾನರಾಗಿ ಆಕೆಗೆ ಹಿತವಚನಗಳನ್ನಾಡುತ್ತಾ ದಾಸಿಯರಾದರು.

೧೭. ಬ್ರಾಹ್ಮಣನೇ ! ಈ ಸಮಯದಲ್ಲಿ ಕೃಷ್ಣನ ಶರೀರದಿಂದ ವಿಷ್ಣುಮಾಯಾಸ್ವರೂಪಳಾದ ಅನಾದಿದುರ್ಗಾದೇವಿಯು ಅತರ್ಕಿತವಾಗಿ ಆವಿರ್ಭವಿಸಿದಳು.

೧೮-೧೯. ಆ ದುರ್ಗಾದೇವಿಯು ದೇವಿಯರಿಗೆ ಬೀಜಭೂತಳೂ, ಮೂಲಪ್ರಕೃತಿಗಭಿಮಾನಿದೇವತೆಯೂ, ಐಶ್ವರ್ಯೋಪೇತಳೂ, ಅತ್ಯಂತ ಪರಿಪೂರ್ಣಳೂ, ತೇಜಸ್ಸ್ವರೂಪಿಣಿಯೂ, ತ್ರಿಗುಣಾತ್ಮಕಳೂ, ಸಾವಿರಭುಜಗಳುಳ್ಳವಳೂ, ನಾನಾವಿಧಶಸ್ತ್ರಧಾರಿಣಿಯೂ, ಮೂರು ಕಣ್ಣುಗಳುಳ್ಳವಳೂ ಈ ಸಂಸಾರವೆಂಬ ವೃಕ್ಷಕ್ಕೆ ಅನಾದಿಸಿದ್ಧವಾದ ಬೀಜದಂತೆ ಇರುವವಳೂ ಎಂದು ತಿಳಿ.

೨೦-೨೧. ಅಂತಹ ದುರ್ಗಾದೇವಿಗೆ ರಾಧಿಕಾನಾಥನು ರತ್ನಸಿಂಹಾಸನವನ್ನು ಕೊಟ್ಟನು. ಆ ಸಮಯಕ್ಕೆ ಸರಿಯಾಗಿ ಶ್ರೀಹರಿಯ ನಾಭಿಕಮಲ

ಜ್ಞಾನಿನಾಂ ಪ್ರವರಃ ಶ್ರೀಮಾನ್ ಪುಮಾನೋಂಕಾರಮುಚ್ಚರನ್ ।
ಕಮಂಡಲುಧರೋ ಜಾತಸ್ತಪಸ್ವೀ ನಾಭಿತೋ ಹರೇಃ ॥ ೨೧ ॥

ಸ ತು ಸಂಸ್ತೂಯ ಸರ್ವೇಶಂ ಸಾವಿತ್ರ್ಯಾ ಭಾರ್ಯಯಾ ಸಹ ।
ನಿಷಸಾದಾಸನೇ ರಮ್ಯೇ ವಿಭೋಸ್ತಸ್ಯಾಜ್ಞಯಾ ಮುನೇ ॥ ೨೨ ॥

ಅಥ ಕೃಷ್ಣೋ ಮಹಾಭಾಗ ದ್ವಿಧಾರೂಪೋ ಬಭೂವ ಹ ।
ವಾಮಾರ್ಧಾಂಗೋ ಮಹಾದೇವೋ ದಕ್ಷಾರ್ಧೋ ಗೋಪಿಕಾಪತಿಃ ॥೨೩॥

ಪಂಚವಕ್ತ್ರಸ್ತ್ರಿನೇತ್ರೋಽಸೌ ವಾಮಾರ್ಧಾಂಗೋ ಮುನೀಶ್ವರಃ ।
ಸ್ತುತ್ವಾ ಕೃಷ್ಣಂ ಸಮಾಜಪ್ತೋ ನಿಷಸಾದ ಹರೇಃ ಪುರಃ ॥ ೨೪ ॥

---

ದಿಂದ ತಪಸ್ವಿಯೂ, ಕಮಂಡಲುಧಾರಿಯೂ, ಜ್ಞಾನಿಶ್ರೇಷ್ಠನೂ, ಶ್ರೀಮಂತನೂ, ಓಂಕಾರವನ್ನು ಉಚ್ಚರಿಸುತ್ತಿರುವ ಪುರುಷನೂ ಆದ ಚತುರ್ಮುಖ ಬ್ರಹ್ಮನು ಸ್ತ್ರೀಸಹಿತನಾಗಿ ಹುಟ್ಟಿದನು.

೨೨. ಆ ಚತುರ್ಮುಖನಾದರೋ ತನ್ನ ಪತ್ನಿಯಾದ ಸಾವಿತ್ರಿ ಯೊಡನೆ ಸರ್ವೇಶ್ವರನನ್ನು ಸ್ತೋತ್ರಮಾಡಿ ಆ ಸ್ವಾಮಿಯ ಅಪ್ಪಣೆ ಮೇರೆಗೆ ಮನೋಹರವಾದ ಆಸನದಲ್ಲಿ ಕುಳಿತನು.

೨೩. ಬಳಿಕ ಮಹಾತ್ಮನಾದ ಕೃಷ್ಣನು ತನ್ನ ಎಡಗಡೆಯ ಅರ್ಧಾಂಗವು ಮಹಾದೇವ, ಬಲಗಡೆಯ ಅರ್ಧಾಂಗವು ಗೋಪಿಕಾಪತಿ ಎಂಬುದಾಗಿ ಎರಡು ರೂಪಗಳುಳ್ಳವನಾದನು.

೨೪. ವಾಮಾರ್ಧಾಂಗನಾದ ಮತ್ತು ಮೂರು ಕಣ್ಣುಗಳುಳ್ಳ ಈ ಮುನೀಶ್ವರನು ಶ್ರೀಕೃಷ್ಣನನ್ನು ಸ್ತುತಿಸಿ ಅವನ ಅಪ್ಪಣೆಯನ್ನು ಪಡೆದು ಶ್ರೀಹರಿಯ ಇದಿರಿಗೆ ಕುಳಿತನು.

ಅಥ ಕೃಷ್ಣಶ್ಚತುರ್ವಕ್ತ್ರಂ ಪ್ರಾಹ ಸೃಷ್ಟಿಂ ಕುರು ಪ್ರಭೋ ।
ಸತ್ಯಲೋಕೇ ಸ್ಥಿತೋ ನಿತ್ಯಂ ಗಚ್ಛ ಮಾಂ ಸ್ಮರ ಸರ್ವದಾ　　॥ ೨೫ ॥

ಏವಮುಕ್ತಸ್ತು ಹರಿಣಾ ಪ್ರಣಮ್ಯ ಜಗದೀಶ್ವರಂ ।
ಜಗಾಮ ಭಾರ್ಯಯಾ ಸಾಕಂ ಸ ತು ಸೃಷ್ಟಿಂ ಕರೋತಿ ವೈ　　॥ ೨೬ ॥

ಪಿತಾಸ್ಮಾಕಂ ಮುನಿಶ್ರೇಷ್ಠ ಮಾನಸೀಂ ಕಲ್ಪದೈಹಿಕೀಂ ।
ತತಃ ಪಶ್ಚಾತ್ಪಂಚವಕ್ತ್ರಂ ಕೃಷ್ಣಃ ಪ್ರಾಹ ಮಹಾಮತೇ　　॥ ೨೭ ॥

ದುರ್ಗಾಂ ಗೃಹಾಣ ವಿಶ್ವೇಶ ಶಿವಲೋಕೇ ತಪಶ್ಚರ ।
ಯಾವತ್ಸೃಷ್ಟಿಸ್ತದಂತೇ ತು ಲೋಕಾನ್ ಸಂಹರ ಸರ್ವತಃ　　॥ ೨೮ ॥

೨೫. ಅನಂತರ ಕೃಷ್ಣನು ಚತುರ್ಮುಖನನ್ನು ಕುರಿತು "ಸಮರ್ಥನೇ! ನೀನು ಸರ್ವದಾ ಸತ್ಯಲೋಕದಲ್ಲಿದ್ದು ಸೃಷ್ಟಿಮಾಡು ಹೊರಡು ; ಯಾವಾಗಲೂ ನನ್ನನ್ನು ಸ್ಮರಿಸುತ್ತಿರು" ಎಂಬುದಾಗಿ ಹೇಳಿದನು.

೨೬. ಈರೀತಿಯಾಗಿ ಹರಿಯು ಹೇಳಿದ ಮಾತನ್ನು ಕೇಳಿ ಆ ಚತುರ್ಮುಖನು ಜಗದೀಶ್ವರನಾದ ಆವನಿಗೆ ನಮಸ್ಕಾರ ಮಾಡಿ ತನ್ನ ಪತ್ನಿಯೊಡನೆ ಹೊರಟನು.

೨೭-೨೮. ಮುನಿಶ್ರೇಷ್ಠನೇ! ಆ ಚತುರ್ಮುಖನೇ ಕಲ್ಪಾಂತವಾಗಿ ಮಾನಸಿಕ ಶಾರೀರಕ ಸೃಷ್ಟಿಯನ್ನು ಮಾಡುವವನು. ಅವನೇ ನಮಗೆ ಪಿತನು. ಇತ್ತಲಾಗಿ ಕೃಷ್ಣನು ಮಹಾಬುದ್ಧಿವಂತನಾದ ಪಂಚಮುಖನನ್ನು ಕುರಿತು "ವಿಶ್ವೇಶ್ವರನೇ! ದುರ್ಗಾದೇವಿಯನ್ನು ಸ್ವೀಕರಿಸು, ಸೃಷ್ಟಿಕಾರ್ಯ ಮುಗಿಯುವವರೆಗೂ, ಶಿವಲೋಕದಲ್ಲಿ ತಪಸ್ಸು ಮಾಡು. ಅದು ಮುಗಿದಮೇಲೆ ಲೋಕವನ್ನೆಲ್ಲಾ ಸಂಹರಿಸು" ಎಂದನು.

ಸೋಽಪಿ ಕೃಷ್ಣಂ ನಮಸ್ಕೃತ್ಯ ಶಿವಲೋಕಂ ಜಗಾಮ ಹ ।
ತತಃ ಕಾಲಾಂತರೇ ಬ್ರಹ್ಮನ್ ಕೃಷ್ಣಸ್ಯ ಪರಮಾತ್ಮನಃ ॥ ೨೯ ॥

ವಕ್ತ್ರಾತ್ಸರಸ್ವತೀ ಜಾತಾ ವೀಣಾಪುಸ್ತಕಧಾರಿಣೀ ।
ತಾಮಾದಿದೇಶ ಭಗವಾನ್ ವೈಕುಂಠಂ ಗಚ್ಛ ಮಾನದೇ ॥ ೩೦ ॥

ಲಕ್ಷ್ಮೀಸಮೀಪೇ ತಿಷ್ಠ ತ್ವಂ ಚತುರ್ಭುಜಸಮಾಶ್ರಯಾ ।
ಸಾಪಿ ಕೃಷ್ಣಂ ನಮಸ್ಕೃತ್ಯ ಗತಾ ನಾರಾಯಣಾಂತಿಕಂ ॥ ೩೧ ॥

ಏವಂ ಪಂಚವಿಧಾ ಜಾತಾ ಸಾ ರಾಧಾ ಸೃಷ್ಟಿಕಾರಣಂ ।
ಆಸಾಂ ಪೂರ್ಣಸ್ವರೂಪಾಣಾಂ ಮಂತ್ರಧ್ಯಾನಾರ್ಚನಾದಿಕಂ ॥ ೩೨ ॥

ವದಾಮಿ ಶೃಣು ವಿಪ್ರೇಂದ್ರ ಲೋಕಾನಾಂ ಸಿದ್ಧಿದಾಯಕಂ ।
ತಾರಃ ಕ್ರಿಯಾಯುಕ್ ಪ್ರತಿಷ್ಠಾ ಪ್ರೀತ್ಯಾಢ್ಯಾ ಚ ತತಃ ಪರಂ ॥ ೩೩ ॥

---

೨೯-೩೦. ಅವನೂ ಸಹ ಕೃಷ್ಣನಿಗೆ ನಮಸ್ಕಾರ ಮಾಡಿ ಶಿವಲೋಕಕ್ಕೆ ಹೋದನು. ಬ್ರಾಹ್ಮಣನೇ! ಕೆಲವುಕಾಲ ಕಳೆದ ತರುವಾಯ ಕೃಷ್ಣಪರಮಾತ್ಮನ ಮುಖದಿಂದ ವೀಣೆ ಮತ್ತು ಪುಸ್ತಕಗಳನ್ನು ಕೈಗಳಲ್ಲಿ ಧರಿಸಿದ ಸರಸ್ವತೀದೇವಿಯು ಹುಟ್ಟಿದಳು.

೩೦-೩೧. ಭಗವಂತನು "ಮಾನದಾತೆಯೇ! ನೀನು ವೈಕುಂಠಕ್ಕೆ ಹೋಗು, ಅಲ್ಲಿ ಚತುರ್ಮುಖನನ್ನು ಆಶ್ರಯಿಸಿದವಳಾಗಿ ಲಕ್ಷ್ಮೀದೇವಿಯ ಸಮೀಪದಲ್ಲಿರು" ಎಂಬುದಾಗಿ ಆಕೆಗೆ ಅಪ್ಪಣೆ ಮಾಡಿದನು. ಅವಳೂ ಸಹ ಕೃಷ್ಣನನ್ನು ನಮಸ್ಕರಿಸಿ, ನಾರಾಯಣನ ಸಮೀಪಕ್ಕೆ ಹೋದಳು.

೩೨-೩೩. ಈ ರೀತಿಯಾಗಿ ಆ ರಾಧಾದೇವಿಯು ಐದು ವಿಧವಾಗಿ ಹುಟ್ಟಿ ಸೃಷ್ಟಿಕಾರಣಳಾದಳು. ಪೂರ್ಣಸ್ವರೂಪರಾದ ಇವರ ಮಂತ್ರ, ಧ್ಯಾನ, ಪೂಜೆ ಇವುಗಳನ್ನೂ ಹೇಳುವೆನು. ವಿಪ್ರೇಂದ್ರನೇ! ಕೇಳು, ಇದು ಲೋಕಕ್ಕೆಲ್ಲಾ ಸಿದ್ಧಿದಾಯಕವು.

ಜ್ಞಾನಾಮೃತಾ ಕ್ಷುಧಾಯುಕ್ತಾ ವಹ್ನಿಜಾಯಾಂತಕೋ ಮನುಃ |
ಸುತಪಾಸ್ತು ಋಷಿಚ್ಛಂದೋ ಗಾಯತ್ರೀ ದೇವತಾ ಮನೋಃ || ೩೪ ||

ರಾಧಿಕಾ ಪ್ರಣವೋ ಬೀಜಂ ಸ್ವಾಹಾ ಶಕ್ತಿರುದಾಹೃತಾ |
ಷಡಕ್ಷರೈಃ ಷಡಂಗಾನಿ ಕುರ್ಯಾದ್ಬಿಂದುವಿಭೂಷಿತೈಃ || ೩೫ ||

ತತೋ ಧ್ಯಾಯನ್ಸ್ವಹೃದಯೇ ರಾಧಿಕಾಂ ಕೃಷ್ಣಭಾಮಿನೀಂ |
ಶ್ವೇತಚಂಪಕವರ್ಣಾಭಾಂ ಕೋಟಿಚಂದ್ರಸಮಪ್ರಭಾಂ || ೩೬ ||

ಶರತ್ಪಾರ್ವಣಚಂದ್ರಾಸ್ಯಾಂ ನೀಲೇಂದೀವರಲೋಚನಾಂ |
ಸುಶ್ರೋಣೀಂ ಸುನಿತಂಬಾಂ ಚ ಪಕ್ವಬಿಂಬಾಧರಾಂ ವರಾಂ || ೩೭ ||

---

೩೩-೩೫. (ತಾರಃ= ಓಂ. ಕ್ರಿಯಾಯುಕ್ ಪ್ರತಿಷ್ಠಾ ಪ್ರೀತ್ಯಾಢ್ಯಾ= ರಾಧಾ. ಜ್ಞಾನಾಮೃತಕ್ಷುಧಾಯುಕ್ತಾ= ಯೈ. ವಹ್ನಿಜಾಯಾ= ಸ್ವಾಹಾ.) "ಓಂ ರಾಧಾಯೈ ಸ್ವಾಹಾ" ಇದು ಷಡಕ್ಷರ ರಾಧಾಮಂತ್ರವು.

ಈ ಮಂತ್ರಕ್ಕೆ 'ಸುತಪಾ' ಎಂಬ ಮುನಿಯು ಋಷಿ. ಗಾಯತ್ರಿಯೇ ಛಂದಸ್ಸು. ರಾಧೆಯೇ ದೇವತೆ. 'ಓಂ' ಎಂಬುದೇ ಬೀಜ, 'ಸ್ವಾಹಾ' ಎಂಬುದೇ ಶಕ್ತಿ, ಅನುಸ್ವಾರ ಸಹಿತವಾದ ಈ ಮಂತ್ರದ ಆರು ಅಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು.

೩೬-೩೯. ಧ್ಯಾನ :—ಕೃಷ್ಣಪ್ರಿಯೆಯಾದ, ಬಿಳಿಯ ಸಂಪಿಗೆ ಹೂವಿನ ಬಣ್ಣದಂತೆ ಹೊಳೆಯುತ್ತಿರುವ, ಕೋಟಿಚಂದ್ರರಿಗೆ ಸಮಾನವಾದ ಕಾಂತಿಯುಳ್ಳ, ಶರದೃತುವಿನ ಪೂರ್ಣಿಮೆಯ ಚಂದ್ರನಂತೆ ಮುಖವುಳ್ಳ, ಕನ್ನೈದಿಲೇ ಹೂವಿನಂತೆ ಕಣ್ಣುಗಳುಳ್ಳ, ಸವಿಾಚೀನವಾದ ಸೊಂಟವುಳ್ಳ ಮತ್ತು ಕಟಿಪಶ್ಚಾದ್ಭಾಗವುಳ್ಳ, ಪೂರ್ಣಚಂದ್ರಬಿಂಬದಂತೆ ತುಟಿಯುಳ್ಳ, ಉತ್ಕೃಷ್ಟಳಾದ, ಮುತ್ತಿ

ಮುಕ್ತಾಕುಂದಾಭದಶನಾಂ ವಹ್ನಿಶುದ್ಧಾಂ ಶುಕಾನ್ವಿತಾಂ ।
ರತ್ನಕೇಯೂರವಲಯ ಹಾರಕುಂಡಲಶೋಭಿತಾಂ ॥ ೩೮ ॥

ಗೋಪೀಭಿಃ ಸುಪ್ರಿಯಾಭಿಶ್ಚ ಸೇವಿತಾಂ ಶ್ವೇತಚಾಮರೈಃ ।
ರಾಸಮಂಡಲಮಧ್ಯಸ್ಥಾಂ ರತ್ನಸಿಂಹಾಸನಸ್ಥಿತಾಂ ॥ ೩೯ ॥

ಧ್ಯಾತ್ವಾ ಪುಷ್ಪಾಂಜಲಿಂ ಕ್ಷಿಪ್ತ್ವಾ ಪೂಜಯೇದುಪಚಾರಕೈಃ ।
ಲಕ್ಷಷಟ್ಕಂ ಜಪೇನ್ಮಂತ್ರಂ ತದ್ದಶಾಂಶಂ ಹುನೇತ್ತಿಲೈಃ ॥ ೪೦ ॥

ಆಜ್ಯಾಕ್ತೈರ್ಮಾತೃಕಾಪೀಠೇ ಪೂಜಾ ಚಾವರಣೈಃ ಸಹ ।
ಷಟ್ಕೋಣೇಷು ಷಡಂಗಾನಿ ತದ್ಬಾಹ್ಯೇಷ್ವದಲೇ ಯಜೇತ್ ॥ ೪೧ ॥

ಮಾಲಾವತೀಂ ಮಾಧವೀಂ ಚ ರತ್ನಮಾಲಾಂ ಸುಶೀಲಿಕಾಂ ।
ತತಃ ಶಶಿಕಲಾಂ ಪಾರಿಜಾತಾಂ ಪದ್ಮಾವತೀಂ ತಥಾ ॥ ೪೨ ॥

---

ನಂತಿರುವ ಮಲ್ಲೀಹೂವಿನದಳದಂತೆ ಪ್ರಕಾಶಿಸುತ್ತಿರುವ ಹಲ್ಲುಗಳುಳ್ಳ, ಬೆಂಕಿಯಂತೆ ನಿರ್ಮಲಳಾದ, ಶುಕಯುಕ್ತಳಾದ, ರತ್ನಖಚಿತವಾದ ಬಾಹ್ವಾಭರಣ, ಹಸ್ತಾಭರಣ, ಹಾರ ಓಲೆ ಇವುಗಳಿಂದ ಅಲಂಕೃತಳಾದ, ಗೋಪಿಕಾಸ್ತ್ರೀಯರು ಮತ್ತು ಸಖಿಯರಿಂದ ಬಿಳಿಯ ಚಾಮರವನ್ನು ಹಾಕಿಸಿಕೊಳ್ಳುತ್ತಲಿರುವ, ರಾಸಕ್ರೀಡೆಯ ಸಂಘದ ಮಧ್ಯದಲ್ಲಿರುವ, ರತ್ನಖಚಿತವಾದ ಸಿಂಹಾಸನದಲ್ಲಿ ಕುಳಿತಿರುವ, ರಾಧಾದೇವಿಯನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು.

೪೦. ಹೀಗೆ ಧ್ಯಾನಿಸಿ ಪುಷ್ಪಾಂಜಲಿಯನ್ನರ್ಪಿಸಿ ಷೋಡಶೋಪಚಾರ ಪೂಜೆ ಮಾಡಬೇಕು. ಬಳಿಕ ಈ ಮಂತ್ರವನ್ನು ಆರು ಲಕ್ಷ ಜಪಿಸಿ ತುಪ್ಪದಲ್ಲಿ ನೆನೆಸಿದ ಎಳ್ಳಿನಿಂದ ಅರವತ್ತುಸಾವಿರ ಹೋಮ ಮಾಡಬೇಕು.

೪೧. ಮಾತೃಕಾ ಪೀಠದಲ್ಲಿ ಆವರಣಪೂಜೆಯನ್ನೂ, ಅಷ್ಟದಳಪದ್ಮದ ಷಟ್ಕೋಣಗಳಲ್ಲಿ ಷಡಂಗಗಳನ್ನೂ ಆಚರಿಸಬೇಕು.

೪೨-೪೩. ಅದರ ಹೊರ ಭಾಗದಲ್ಲಿ ಪೂರ್ವಾದಿ ದಿಕ್ಕು ಆಗ್ನೇಯಾದಿ ವಿದಿಕ್ಕು ಇವುಗಳಲ್ಲಿ ಕ್ರಮವಾಗಿ ಮಾಲಾವತೀ, ಮಾಧವೀ, ರತ್ನಮಾಲಾ,

ಸುಂದರೀಂ ಚ ಕ್ರಮಾತ್ಪ್ರಾಚ್ಯಾಂ ದಿಗ್ವಿದಿಕ್ಷು ತತೋ ಬಹಿಃ ।
ಇಂದ್ರಾದ್ಯಾನ್ಸಾಯುಧಾನ್ ಇಷ್ಟ್ವಾ ವಿನಿಯೋಗಾಂಸ್ತು ಸಾಧಯೇತ್ ॥

ರಾಧಾ ಕೃಷ್ಣಪ್ರಿಯಾ ರಾಸೇಶ್ವರೀ ಗೋಪೀಗಣಾಧಿಪಾ ।
ನಿರ್ಗುಣಾ ಕೃಷ್ಣಪೂಜ್ಯಾ ಚ ಮೂಲಪ್ರಕೃತಿರೀಶ್ವರೀ ॥ ೪೪ ॥

ಸರ್ವೇಶ್ವರೀ ಸರ್ವಪೂಜ್ಯಾ ವೈರಾಜಜನನೀ ತಥಾ ।
ಪೂರ್ವಾದ್ಯಾಶಾಸು ರಕ್ಷಂತು ಪಾಂತು ಮಾಂ ಸರ್ವತಃ ಸದಾ ॥ ೪೫ ॥

ತ್ವಂ ದೇವಿ ಜಗತಾಂ ಮಾತಾ ವಿಷ್ಣುಮಾಯಾ ಸನಾತನೀ ।
ಕೃಷ್ಣಮಾಯಾಽಽದಿದೇವೀ ಚ ಕೃಷ್ಣಪ್ರಾಣಾಧಿಕೇ ಶುಭೇ ॥ ೪೬ ॥

ಕೃಷ್ಣಭಕ್ತಿಪ್ರದೇ ರಾಧೇ ನಮಸ್ತೇ ಮಂಗಲಪ್ರದೇ ।
ಇತಿ ಸಂಪ್ರಾರ್ಥ್ಯ ಸರ್ವೇಶೀಂ ಸ್ತುತ್ವಾ ಹೃದಿ ವಿಸರ್ಜಯೇತ್ ॥ ೪೭ ॥

---

ಸುಶೀಲಿಕಾ, ಶಶಿಕಲೆ, ಪಾರಿಜಾತಾ, ಪದ್ಮಾವತೀ ಮತ್ತು ಸುಂದರೀ ಇವರನ್ನು ಪೂಜಿಸಬೇಕು. ತರುವಾಯ ಬಹಿರ್ಭಾಗದಲ್ಲಿ ವಜ್ರಾದ್ಯಾಯುಧಸಹಿತರಾದ ಇಂದ್ರಾದಿ ದಿಕ್ಪಾಲಕರನ್ನು ಪೂಜಿಸಿ ಪ್ರಯೋಗಗಳನ್ನು ಸಾಧಿಸಬೇಕು.

೪೪–೪೫. ರಾಧೆ, ಕೃಷ್ಣಪ್ರಿಯೆ, ರಾಸೇಶ್ವರೀ, ಗೋಪಸ್ತ್ರೀಸಂಘಕ್ಕೊಡೆಯಳು, ನಿರ್ಗುಣಳು, ಕೃಷ್ಣಪೂಜ್ಯಾ, ಮೂಲಪ್ರಕೃತಿ, ಈಶ್ವರೀ, ಸರ್ವೇಶ್ವರೀ, ಸರ್ವಪೂಜ್ಯಾ ಮತ್ತು ವೈರಾಜಜನನೀ ಎಂಬೀನಾಮಧೇಯಗಳಿಂದ ರಾಧಾದೇವಿಯನ್ನು ಚಿಂತಿಸಿ 'ಪೂರ್ವಾದಿ ದಿಕ್ಕುಗಳಲ್ಲಿ ನನ್ನನ್ನು ರಕ್ಷಿಸಲಿ, ಯಾವಾಗಲೂ ಎಲ್ಲೆಡೆಯಲ್ಲಿಯೂ ನನ್ನನ್ನು ಕಾಪಾಡಲಿ' ಎಂದು ಪ್ರಾರ್ಥಿಸಬೇಕು.

೪೬-೪೭. ವಿಷ್ಣುಮಾಯೆಯು, ಅನಾದಿಯು, ಕೃಷ್ಣಮಾಯೆಯು, ಕೃಷ್ಣನಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯಳು, ಆದಿ ದೇವತೆಯು, ಶುಭಪ್ರದಳು, ಕೃಷ್ಣಭಕ್ತಿದಾಯಕಳೂ ಆದ ರಾಧಾದೇವಿಯೇ! ನೀನು ಜಗನ್ಮಾತೆಯು, ಮಂಗಳಪ್ರದಳಾದ ನಿನಗೆ ನಮಸ್ಕಾರ ಎಂಬುದಾಗಿ ಸರ್ವೇಶ್ವರಿಯನ್ನು ಸ್ತೋತ್ರಮಾಡಿ ವಿಸರ್ಜಿಸಿ ತನ್ನ ಹೃದಯದಲ್ಲಿ ಸ್ಥಾಪಿಸಬೇಕು.

ಏವಂ ಯೋ ಭಜತೇ ರಾಧಾಂ ಸರ್ವಾದ್ಯಾಂ ಸರ್ವಮಂಗಳಾಂ |
ಭುಕ್ತ್ವೇಹ ಭೋಗಾನಖಿಲಾನ್ಸೋಂತೇ ಗೋಲೋಕಮಾಪ್ನುಯಾತ್ ||

ಅಥ ತುಭ್ಯಂ ಮಹಾಲಕ್ಷ್ಮ್ಯಾ ವಿಧಾನಂ ವಚ್ಮಿ ನಾರದ |
ಯದಾರಾಧನತೋ ಭೂಯಾತ್ಸಾಧಕೋ ಭುಕ್ತಿಮುಕ್ತಿಮಾನ್ || ೪೯ ||

ಲಕ್ಷ್ಮೀಮಾಯಾ ಕಾಮವಾಣೀಪೂರ್ವಾ ಕಮಲವಾಸಿನೀ |
ಙೇಂತಾ ವಹ್ನಿಪ್ರಿಯಾಂತೋಯಂ ಮಂತ್ರಕಲ್ಪದ್ರುಮಃ ಪರಃ || ೫೦ ||

ಋಷಿರ್ನಾರಾಯಣಶ್ಚಾಸ್ಯ ಛಂದೋ ಹಿ ಜಗತೀ ತಥಾ |
ದೇವತಾ ತು ಮಹಾಲಕ್ಷ್ಮೀರ್ದ್ವಿರ್ದ್ವಿವರ್ಣೈಃ ಷಡಂಗಕಂ || ೫೧ ||

---

೪೮. ಸರ್ವಮೂಲಳೂ, ಸರ್ವಮಂಗಳೆಯೂ ಆದ ರಾಧಾದೇವಿಯನ್ನು ಈ ರೀತಿ ಭಜಿಸುವವನು ಇಲ್ಲಿ ಸಕಲಭೋಗಗಳನ್ನೂ ಅನುಭವಿಸಿ ಕೊನೆಗೆ ಗೋಲೋಕವನ್ನು ಹೊಂದುವನು.

೪೯. ನಾರದನೇ! ಈಗ ನಿನಗೆ ಮಹಾಲಕ್ಷ್ಮಿಯ ಮಂತ್ರಾದಿ ವಿಧಾನವನ್ನು ಹೇಳುವೆನು. ಅದನ್ನು ಆರಾಧಿಸುವುದರಿಂದ ಸಾಧಕನು ಐಹಿಕದಲ್ಲಿ ಭೋಗ, ಪರದಲ್ಲಿ ಮೋಕ್ಷಗಳನ್ನು ಪಡೆಯುವನು.

೫೦. (ಲಕ್ಷ್ಮೀ= ಶ್ರೀಂ. ಮಾಯಾ= ಹ್ರೀಂ. ಕಾಮ= ಕ್ಲೀಂ. ವಾಣೀ= ಐಂ, ಕಮಲವಾಸಿನ್ಯೈ, ವಹ್ನಿಪ್ರಿಯಾ= ಸ್ವಾಹಾ)

"ಶ್ರೀಂ ಹ್ರೀಂ ಕ್ಲೀಂ ಐಂ ಕಮಲವಾಸಿನ್ಯೈ ಸ್ವಾಹಾ" ಇದು ಕಲ್ಪವೃಕ್ಷದಂತೆ ಸಕಲೇಷ್ಟಪ್ರದವಾದ ಉತ್ತಮ ಮಂತ್ರವು.

೫೧. ಈ ಮಂತ್ರಕ್ಕೆ ನಾರಾಯಣನು ಋಷಿ. ಜಗತೀ ಎಂಬುದು ಛಂದಸ್ಸು. ಮಹಾಲಕ್ಷ್ಮಿಯೇ ದೇವತೆ. ಈ ಮಂತ್ರದ ಎರಡೆರಡು ವರ್ಣಗಳಿಂದ ಷಡಂಗನ್ಯಾಸ ಮಾಡಬೇಕು.

ಶ್ವೇತಚಂಪಕವರ್ಣಾಭಾಂ ರತ್ನಭೂಷಣಭೂಷಿತಾಂ ।
ಈಷದ್ಧಾಸ್ಯಪ್ರಸನ್ನಾಸ್ಯಾಂ ಭಕ್ತಾನುಗ್ರಹಕಾತರಾಂ || ೫೨ ||

ಬಿಭ್ರತೀಂ ರತ್ನಮಾಲಾಂ ಚ ಕೋಟಿಚಂದ್ರಸಮಪ್ರಭಾಂ ।
ಧ್ಯಾತ್ವಾ ಜಪೇದರ್ಕಲಕ್ಷಂ ಪಾಯಸೇನ ದಶಾಂಶತಃ || ೫೩ ||

ಜುಹುಯಾದೇಧಿತೇ ವಹ್ನೌ ತ್ರಿದ್ರುಕಾಷ್ಠೈಃ ಸಮರ್ಚಯೇತ್ ।
ನವಶಕ್ತಿಯುತೇ ಪೀಠೇ ಹ್ಯಂಗೈರಾವರಣೈಃ ಸಹ || ೫೪ ||

ವಿಭೂತಿರುನ್ನತಿಃ ಕಾಂತಿಃ ಸೃಷ್ಟಿಃ ಕೀರ್ತಿಶ್ಚ ಸನ್ನತಿಃ ।
ವ್ಯುಷ್ಟಿರುತ್ಕೃಷ್ಟಿರ್ಋದ್ಧಿಶ್ಚ ಸಂಪ್ರೋಕ್ತಾ ನವ ಶಕ್ತಯಃ || ೫೫ ||

ಅತ್ರಾವಾಹ್ಯ ಚ ಮೂಲೇನ ಮೂರ್ತಿಂ ಸಂಕಲ್ಪ್ಯ ಸಾಧಕಃ ।
ಷಟ್‌ಕೋಣೇಷು ಷಡಂಗಾನಿ ದಕ್ಷಿಣೇ ತು ಗಜಾನನಂ || ೫೬ ||

---

೫೨-೫೪. ಧ್ಯಾನ :—ಶುಕ್ಲಸಂಪಿಗೆಯ ಬಣ್ಣದಂತೆ ಕಾಂತಿಯುಳ್ಳ, ರತ್ನಖಚಿತವಾದ ಆಭರಣಗಳನ್ನು ಧರಿಸಿರುವ, ಮಂದಹಾಸದಿಂದ ಪ್ರಸನ್ನವಾದ ಮುಖವುಳ್ಳ, ಭಕ್ತರಿಗೆ ಅನುಗ್ರಹ ಮಾಡುವುದರಲ್ಲಿ ಕಾತರತೆಯನ್ನು ಹೊಂದಿರುವ, ರತ್ನಮಾಲಿಕೆಯನ್ನು ಧರಿಸಿರುವ, ಕೋಟಿಚಂದ್ರರಿಗೆ ಸಮಾನವಾದ ಕಾಂತಿಯುಳ್ಳ, ಮಹಾಲಕ್ಷ್ಮೀದೇವಿಯುವರನ್ನು ಧ್ಯಾನಿಸಬೇಕು.

ಈ ಮಂತ್ರವನ್ನು ಹನ್ನೆರಡು ಲಕ್ಷ ಜಪಮಾಡಬೇಕು. ದೇವದಾರು ಕಟ್ಟಿಗೆಯಿಂದ ಹೊತ್ತಿಸಿದ ಅಗ್ನಿಯಲ್ಲಿ ಪಾಯಸದಿಂದ ಒಂದುಲಕ್ಷ ಇಪ್ಪತ್ತು ಸಾವಿರ ಹೋಮ ಮಾಡಬೇಕು. ಅನಂತರ ಒಂಬತ್ತು ಶಕ್ತಿಗಳಿಂದ ಯುಕ್ತವಾದ ಪೀಠದಲ್ಲಿ ಅಂಗ ಆವರಣಗಳೊಡನೆ ಪೂಜಿಸಬೇಕು.

೫೫. ವಿಭೂತಿ, ಉನ್ನತಿ, ಕಾಂತಿ, ಸೃಷ್ಟಿ, ಕೀರ್ತಿ, ಸನ್ನತಿ, ವ್ಯುಷ್ಟಿ, ಉತ್ಕೃಷ್ಟಿ ಮತ್ತು ಋದ್ಧಿ ಈ ಒಂಬತ್ತೂ ಶಕ್ತಿಗಳು ಎಂದು ಹೇಳಿದೆ.

೫೬-೫೭. ಸಾಧಕನು ಇಂತಹ ಪೀಠದಲ್ಲಿ ಮೂರ್ತಿಯನ್ನು ಸ್ಥಾಪಿಸಿ

ವಾಮೇ ಕುಸುಮಧನ್ವಾನಂ ವಸುಪತ್ರೇ ತತೋ ಯಜೇತ್ ।
ಉಮಾಂ ಶ್ರೀಂ ಭಾರತೀಂ ದುರ್ಗಾಂ ಧರಣೀಂ ವೇದಮಾತರಂ ॥ ೫೭ ॥

ದೇವೀಮುಷಾಂ ಚ ಪೂರ್ವಾದೌ ದಿಗ್ವಿದಿಕ್ಷು ಕ್ರಮೇಣ ಹಿ ।
ಜಹ್ನುಸೂರ್ಯಸುತೇ ಪೂಜ್ಯೇ ಪಾದಪ್ರಕ್ಷಾಲನೋದ್ಭವೇ ॥ ೫೮ ॥

ಶಂಖಪದ್ಮನಿಧೀ ಪೂಜ್ಯೌ ಪಾರ್ಶ್ವಯೋರ್ಧೃತಚಾಮರೌ ।
ಧೃತಾತಪತ್ರಂ ವರುಣಂ ಪೂಜಯೇತ್ಪಶ್ಚಿಮೇ ತತಃ ॥ ೫೯ ॥

ಸಂಪೂಜ್ಯ ರಾಶೀನ್ಪರಿತೋ ಯಥಾಸ್ಥಾನಂ ನವಗ್ರಹಾನ್ ।
ಚತುರ್ದಂತೈರಾವತಾದೀನ್ ದಿಗ್ವಿದಿಕ್ಷು ತತೋಽರ್ಚಯೇತ್ ॥ ೬೦ ॥

---

ಮೂಲಮಂತ್ರದಿಂದ ಆವಾಹನೆ ಮಾಡಿ, ಆರು ಕೋಣಗಳಲ್ಲಿ ಷಡಂಗಗಳನ್ನೂ, ಬಲಭಾಗದಲ್ಲಿ ವಿನಾಯಕನನ್ನೂ, ಎಡಭಾಗದಲ್ಲಿ ಮನ್ಮಥನನ್ನೂ ಅಷ್ಟದಳ ಪದ್ಮದಲ್ಲಿ ಪೂಜಿಸಬೇಕು.

೫೭-೫೮. ಪೂರ್ವ ಮುಂತಾದ ದಿಕ್ಕು ಆಗ್ನೇಯ ಮುಂತಾದ ವಿದಿಕ್ಕುಗಳಲ್ಲಿ ಕ್ರಮವಾಗಿ ಉಮಾ, ಶ್ರೀ, ಭಾರತೀ, ದುರ್ಗಾ, ಧರಣಿ, ವೇದಮಾತೇ, ದೇವೀ ಮತ್ತು ಉಷಾ ಇವರನ್ನು ಪೂಜಿಸಬೇಕು. ಪಾದಪ್ರಕ್ಷಾಲನೋದಕದಿಂದ ಹುಟ್ಟಿದ ಗಂಗಾ, ಯಮುನಾ ಇವರನ್ನು ಪೂಜಿಸಬೇಕು.

೫೯. ಉಭಯ ಪಾರ್ಶ್ವಗಳಲ್ಲಿ ಚಾಮರವನ್ನು ಹಿಡಿದು ನಿಂತಿರುವ ಶಂಖಪದ್ಮನಿಧಿಗಳನ್ನು ಅರ್ಚಿಸಬೇಕು. ಹಿಂಭಾಗದಲ್ಲಿ ಛತ್ರಿಯನ್ನು ಹಿಡಿದು ನಿಂತಿರುವ ವರುಣನನ್ನು ಪೂಜಿಸಬೇಕು.

೬೦. ಅನಂತರ ಸುತ್ತಲೂ ರಾಶಿಗಳನ್ನೂ, ಅದರದರ ಸ್ಥಾನಗಳಲ್ಲಿ ಒಂಬತ್ತು ಗ್ರಹಗಳನ್ನೂ ಪೂಜಿಸಿ ಬಳಿಕ ದಿಕ್ಕು ವಿದಿಕ್ಕುಗಳಲ್ಲಿ ನಾಲ್ಕುದಂತಗಳುಳ್ಳ ಐರಾವತಾದಿಗಳನ್ನು ಪೂಜಿಸಬೇಕು.

ತದ್ಬಹಿರ್ಲೋಕಪಾಲಾಂಶ್ಚ ತದಸ್ತ್ರಾಣಿ ಚ ತದ್ಬಹಿಃ ।
ದೂರ್ವಾಭಿರಾಜ್ಯಸಿಕ್ತಾಭಿರ್ಜುಹುಯಾದಾಯುಷೇ ನರಃ ॥ ೬೧ ॥

ಗುಡೂಚೀರಾಜ್ಯಸಂಸಿಕ್ತಾ ಜುಹುಯಾತ್ಸಪ್ತವಾಸರಂ ।
ಅಷ್ಟೋತ್ತರಸಹಸ್ರಂ ಯಃ ಸ ಜೀವೇಚ್ಛರದಾಂ ಶತಂ ॥ ೬೨ ॥

ಹುತ್ವಾ ತಿಲಾನ್ ಘೃತಾಭ್ಯಕ್ತಾನ್ದೀರ್ಘಮಾಯುಷ್ಯಮಾಪ್ನುಯಾತ್ ।
ಆರಭ್ಯಾರ್ಕದಿನಂ ಮಂತ್ರೀ ದಶಾಹಂ ಘೃತಸಂಪ್ಲುತಾಃ ॥ ೬೩ ॥

ಜುಹುಯಾದರ್ಕಸಮಿಧಃ ಶರೀರಾರೋಗ್ಯಸಿದ್ಧಯೇ ।
ಶಾಲಿಭಿರ್ಜುಹ್ವತೋ ನಿತ್ಯಮಷ್ಟೋತ್ತರಸಹಸ್ರಕಂ ॥ ೬೪ ॥

ಅಚಿರಾದೇವ ಮಹತೀ ಲಕ್ಷ್ಮೀಃ ಸಂಜಾಯತೇ ಧ್ರುವಂ ।
ಉಷಾಜಾಜೀನಾಲಿಕೇರರಜೋಭಿರ್ಘೃತಮಿಶ್ರಿತೈಃ ॥ ೬೫ ॥

---

೬೧. ಅದರ ಹೊರಭಾಗದಲ್ಲಿ ಇಂದ್ರಾದಿ ಲೋಕಪಾಲಕರನ್ನೂ, ಅದಕ್ಕೂ ಹೊರಗೆ ಅವರ ವಜ್ರಾದ್ಯಾಯುಧಗಳನ್ನೂ ಪೂಜಿಸಬೇಕು. ಆಯುಸ್ಸಿನ ಅಭಿವೃದ್ಧಿಗಾಗಿ ಗರಿಕೆಗಳನ್ನು ತುಪ್ಪದಲ್ಲಿ ನೆನೆಸಿ ಹೋಮ ಮಾಡಬೇಕು.

೬೨. ತುಪ್ಪದಲ್ಲಿ ನೆನೆಸಿ ಅಮೃತಬಳ್ಳಿಯನ್ನು ಪ್ರತಿದಿನವೂ ಸಾವಿರದೆಂಟು ಹೋಮ ಮಾಡುತ್ತಾ, ಏಳು ದಿನಗಳು ಹೀಗೆ ಆಚರಿಸುವವನು ನೂರು ವರ್ಷಗಳಕಾಲ ಜೀವಿಸುತ್ತಾನೆ.

೬೩-೬೪. ತುಪ್ಪದಲ್ಲಿ ನೆನೆಸಿದ ಎಳ್ಳುಗಳಿಂದ ಹೋಮಮಾಡಿದರೆ ದೀರ್ಘಾಯುಷ್ಯವು ಲಭಿಸುವುದು. ಮಂತ್ರಿಯು ಭಾನುವಾರದಿಂದ ಹತ್ತು ದಿನಗಳು ತುಪ್ಪದಲ್ಲಿ ನೆನೆಸಿದ ಎಕ್ಕೆಯಸಮಿತ್ತುಗಳಿಂದ ದೇಹಾರೋಗ್ಯಸಿದ್ಧಿಗಾಗಿ ಹೋಮ ಮಾಡಬೇಕು.

೬೪-೬೫. ಪ್ರತಿದಿನವೂ ಬತ್ತದಿಂದ ಸಾವಿರದೆಂಟು ಹೋಮಮಾಡುವವನಿಗೆ ಶೀಘ್ರವಾಗಿ ಮಹದೈಶ್ವರ್ಯವು ಲಭಿಸುವುದು.

ಹುನೇದಷ್ಟೋತ್ತರಶತಂ ಪಾಯಸಾಶೀ ತು ನಿತ್ಯಶಃ ।
ಮಂಡಲಾಜ್ಜಾಯತೇ ಸೋಽಪಿ ಕುಬೇರ ಇವ ಮಾನವಃ ॥ ೭೬ ॥

ಹವಿಷಾ ಗುಡಮಿಶ್ರೇಣ ಹೋಮತೋ ಹ್ಯನ್ನವಾನ್ಭವೇತ್ ।
ಜಪಾಪುಷ್ಪಾಣಿ ಜುಹುಯಾದಷ್ಟೋತ್ತರಸಹಸ್ರಕಂ ॥ ೭೭ ॥

ತಾಂಬೂಲರಸಸಂಮಿಶ್ರಂ ತದ್ಭಸ್ಮತಿಲಕಂ ಚರೇತ್ ।
ಚತುರ್ಣಾಮಪಿ ವರ್ಣಾನಾಂ ಮೋಹನಾಯ ದ್ವಿಜೋತ್ತಮಃ ॥ ೭೮ ॥

ಏವಂ ಯೋ ಭಜತೇ ಲಕ್ಷ್ಮೀಂ ಸಾಧಕೇಂದ್ರೋ ಮುನೀಶ್ವರ ।
ಸಂಪದಸ್ತಸ್ಯ ಜಾಯಂತೇ ಮಹಾಲಕ್ಷ್ಮೀಃ ಪ್ರಸೀದತಿ ॥ ೭೯ ॥

---

೭೫-೭೬. ಪ್ರತಿದಿನವೂ, ಪಾಯಸವನ್ನು ಮಾತ್ರ ತಿನ್ನುತ್ತಾ ಬೆಳಗಿನ ಜಾವದಲ್ಲಿ ತುಪ್ಪದಲ್ಲಿ ಕಲೆಸಿದ ಜಾಜೀ ಮತ್ತು ತೆಂಗಿನ ರಜಸ್ಸುಗಳಿಂದ ನೂರೆಂಟು ಹೋಮಗಳನ್ನು ಒಂದು ಮಂಡಲ (ನಲವತ್ತೆಂಟು ದಿನ) ಮಾಡಿದರೆ ಅವನು ಕುಬೇರನಂತೆ ಧನಿಕನಾಗುವನು.

೭೭. ಬೆಲ್ಲದಿಂದ ಸಹಿತವಾದ ಹವಿಸ್ಸಿನಿಂದ ಹೋಮಮಾಡುವವನಿಗೆ ಅನ್ನ ಸಮೃದ್ಧಿಯಾಗುವುದು. ಜಪಾಕುಸುಮಗಳಿಂದ ಸಾವಿರದೆಂಟು ಹೋಮ ಮಾಡಿ ಅದರ ಭಸ್ಮವನ್ನು ವೀಳೆಯದೆಲೆಯ ರಸದಲ್ಲಿ ಕಲೆಸಿ ದ್ವಿಜೋತ್ತಮನು, ತಿಲಕವನ್ನು ಧರಿಸಬೇಕು. ಹೀಗೆಮಾಡಿದರೆ ಚತುರ್ವರ್ಣದವರಿಗೆ ಮೋಹ ವುಂಟಾಗುವುದು.

೭೯. ಮುನೀಶ್ವರನೇ! ಈ ಪ್ರಕಾರವಾಗಿ ಲಕ್ಷ್ಮಿಯನ್ನು ಭಜಿಸುವ ಸಾಧಕವರ್ಯನಿಗೆ ಮಹಾಲಕ್ಷ್ಮಿಯು ಪ್ರಸನ್ನಳಾಗುವಳು. ಆದರಿಂದ ಸಂಪತ್ತು ಗಳು ಸಮೃದ್ಧಿಯಾಗುವುವು.

ದೇಹಾಂತೇ ವೈಷ್ಣವಂ ಧಾಮ ಲಭತೇ ನಾತ್ರ ಸಂಶಯಃ ।
ಯಾ ತು ದುರ್ಗಾ ದ್ವಿಜಶ್ರೇಷ್ಠ ಶಿವಲೋಕಂ ಗತಾ ಸತೀ ॥ ೭೦ ॥

ಸಾ ಶಿವಾಜ್ಞಾಮನುಪ್ರಾಪ್ಯ ದಿವ್ಯಲೋಕಂ ವಿನಿರ್ಮಮೇ ।
ದೇವೀಲೋಕೇತಿ ವಿಖ್ಯಾತಂ ಸರ್ವಲೋಕವಿಲಕ್ಷಣಂ ॥ ೭೧ ॥

ತತ್ರ ಸ್ಥಿತಾ ಜಗನ್ಮಾತಾ ತಪೋನಿಯಮಮಾಸ್ಥಿತಾ ।
ವಿವಿಧಾನ್ ಸ್ವಾವತಾರಾಹ್ನಿ ತ್ರಿಕಾಲೇ ಕುರುತೇನಿಶಂ ॥ ೭೨ ॥

ಮಾಯಾ ಧೃತಿಹ್ರಾದಿನೀಯುಕ್ ಚಂದ್ರಾಢ್ಯಾ ಸರ್ಗಿಣೀ ಪುನಃ ।
ಪ್ರತಿಷ್ಠಾ ಸ್ಮೃತಿಸಂಯುಕ್ತಾ ಕ್ಷುಧಯಾ ಸಹಿತಾಪುನಃ ॥ ೭೩ ॥

---

೭೦-೭೧. ಮರಣಾನಂತರ ವೈಷ್ಣವಸ್ಥಾನ ಎಂದರೆ ವೈಕುಂಠಲೋಕವು ಲಭಿಸುವುದು. ಸಂದೇಹವಿಲ್ಲ.

ದ್ವಿಜವರ್ಯನೇ ! ಶಿವಲೋಕಕ್ಕೆ ಹೋದ ದುರ್ಗಾದೇವಿಯು ಈಶ್ವರನ ಅಪ್ಪಣೆ ಪಡೆದು ಸಕಲಲೋಕವಿಲಕ್ಷಣವಾದ, "ದೇವೀಲೋಕ" ವೆಂದು ಪ್ರಸಿದ್ಧವಾದ ದಿವ್ಯಲೋಕವನ್ನು ನಿರ್ಮಾಣಮಾಡಿದಳು.

೭೨. ಲೋಕಮಾತೆಯು ತಪೋನಿಯಮವನ್ನು ಹೊಂದಿ ಯಾವಾಗಲೂ ಆ ಲೋಕದಲ್ಲಿದ್ದು ನಾನಾವಿಧವಾದ ತನ್ನ ಅವತಾರಗಳನ್ನು ಕಾಲತ್ರಯದಲ್ಲಿಯೂ ಮಾಡುತ್ತಿರುವಳು.

೭೩-೭೬. ದುರ್ಗಾಮಂತ್ರವನ್ನು ಹೇಳುತ್ತಾರೆ:—(ಮಾಯಾ= ಹ್ರೀಂ. ಧೃತಿ =ಉ. ಹ್ರಾದಿನೀ= ದ. ಚಂದ್ರ= ಂ. ಸರ್ಗ= ಃ. ಪ್ರತಿಷ್ಠಾ= ಆ. ಸ್ಮೃತಿ= ಗ. ಕ್ಷುಧಾ= ಯ. ಜ್ಞಾನಾಮೃತ= ಐ. ವಹ್ನಿಜಾಯಾ= ಸ್ವಾಹಾ. ತಾರ= ಓಂ)

"ಓಂ ಹ್ರೀಂ ದುಂ ದುರ್ಗಾಯೈ ಸ್ವಾಹಾ" ಎಂಬುದು ಅಷ್ಟಾಕ್ಷರ ದುರ್ಗಾಮಂತ್ರವು.

ಜ್ಞಾನಾಮೃತಾ ವಹ್ನಿಜಾಯಾಂತಸ್ತಾರಾದ್ಯೋ ಮನುರ್ಮತಃ ।
ಋಷಿಃ ಸ್ಯಾದ್ವಾಮದೇವೋಽಸ್ಯ ಛಂದೋ ಗಾಯತ್ರ್ಯುದೀರಿತಂ ॥ ೭೪ ॥

ದೇವತಾ ಜಗತಾಮಾದಿರ್ದುರ್ಗಾ ದುರ್ಗತಿನಾಶಿನೀ ।
ತಾರಾದ್ಯೇಕೈಕವರ್ಣೇನ ಹೃದಯಾದಿತ್ರಯಂ ಮತಂ ॥ ೭೫ ॥

ತ್ರಿಭಿರ್ವರ್ಣೈರ್ನೇತ್ರಂ ದ್ವಾಭ್ಯಾಂ ಸರ್ವೈರಸ್ತ್ರಮುದೀರಿತಂ ।
ಮಹಾಮರಕತಪ್ರಖ್ಯಾಂ ಸಹಸ್ರಭುಜಮಂಡಿತಾಂ ॥ ೭೬ ॥

ನಾನಾಶಸ್ತ್ರಾಣಿ ದಧತೀಂ ತ್ರಿನೇತ್ರಾಂ ಶಶಿಶೇಖರಾಂ ।
ಕಂಕಣಾಂಗದಹಾರಾಢ್ಯಾಂ ಕ್ವಣನ್ನೂಪುರಕಾನ್ವಿತಾಂ ॥ ೭೭ ॥
ಕಿರೀಟಕುಂಡಲಧರಾಂ ದುರ್ಗಾಂ ದೇವೀಂ ವಿಚಿಂತಯೇತ್ ॥ ೭೮ ॥

---

ಈ ಮಂತ್ರಕ್ಕೆ ವಾಮದೇವನು ಋಷಿ. ಗಾಯತ್ರೀ ಛಂದಸ್ಸು. ದುಃಖ ನಾಶಕಳಾದ ಜಗದಾದಿ ದುರ್ಗಾದೇವಿಯೇ ದೇವತೆ. ಓಂ, ಹ್ರೀಂ, ದುಂ ಎಂಬುದರಲ್ಲಿ ಕ್ರಮವಾಗಿ ಒಂದೊಂದು ವರ್ಣದಿಂದ ಹೃದಯ, ಶಿರಸ್ಸು, ಶಿಖೆ ಗಳೆಂಬ ಅಂಗಗಳನ್ನೂ, "ದುರ್ಗಾಯೈ" ಎಂಬ ಮೂರು ವರ್ಣಗಳಿಂದ ಕವಚವನ್ನೂ, 'ಸ್ವಾಹಾ' ಎಂಬ ಎರಡು ವರ್ಣಗಳಿಂದ ನೇತ್ರವನ್ನೂ, ಸಂಪೂರ್ಣ ಮಂತ್ರದಿಂದ ಅಸ್ತ್ರವನ್ನೂ ನ್ಯಾಸಮಾಡಬೇಕು.

೭೬-೭೮. ಧ್ಯಾನ :—ದೊಡ್ಡ ಪಚ್ಚೆಯಂತೆ ಹೊಳೆಯುತ್ತಿರುವ ಸಾವಿರ ಭುಜಗಳಿಂದಲಂಕೃತಳಾದ, ನಾನಾಶಸ್ತ್ರಗಳನ್ನು ಧರಿಸಿರುವ, ಮೂರು ಕಣ್ಣು ಗಳುಳ್ಳ, ಶಿಖೆಯ ಮೇಲೆ ಚಂದ್ರನನ್ನು ಧರಿಸಿರುವ, ಬಳೆ ವಂಕಿ ಹಾರಗಳನ್ನು ಹಾಕಿಕೊಂಡಿರುವ, ಶಬ್ದಮಾಡುತ್ತಿರುವ ಪಾದಾಭರಣಗಳಿಂದ ಯುಕ್ತಳಾದ, ಕಿರೀಟಕುಂಡಲಗಳನ್ನು ಧರಿಸಿರುವ ದುರ್ಗಾದೇವಿಯನ್ನು ಧ್ಯಾನಿಸಬೇಕು.

**ವಸುಲಕ್ಷಂ ಜಪೇನ್ಮಂತ್ರಂ ತಿಲೈಃ ಸಮಧುರೈರ್ಹುನೇತ್ ।**
**ಪಯೋಂಧಸಾ ವಾ ಸಹಸ್ರಂ ನವಪದ್ಮಾತ್ಮಕೇ ಯಜೇತ್ ॥ ೭೯ ॥**

**ಪ್ರಭಾ ಮಾಯಾ ಜಯಾ ಸೂಕ್ಷ್ಮಾ ವಿಶುದ್ಧಾ ನಂದಿನೀ ಪುನಃ ।**
**ಸುಪ್ರಭಾ ವಿಜಯಾ ಸರ್ವಸಿದ್ಧಿದಾ ಪೀಠಶಕ್ತಯಃ ॥ ೮೦ ॥**

**ಅಜ್ಭಿರ್ಹ್ರಸ್ವತ್ರಯಕ್ಲೀಬರಹಿತೈಃ ಪೂಜಯೇದಿಮಾಃ ।**
**ಪ್ರಣವೋ ವಜ್ರನಖದಂಷ್ಟ್ರಾಯುಧಾಯ ಮಹಾಪದಾತ್ ॥ ೮೧ ॥**

---

೭೯. ಬಳಿಕ ಈ ಮಂತ್ರವನ್ನು ಎಂಟು ಲಕ್ಷ ಜಪಿಸಿ ಸಕ್ಕರೆ ಮುಂತಾದ ಮಧುರ ವಸ್ತುಗಳಿಂದ ಸಹಿತವಾದ ಎಳ್ಳುಗಳಿಂದ ಅಥವಾ ಪಾಯಸದಿಂದ ಒಂದುಸಾವಿರ ಹೋಮಮಾಡಬೇಕು. ನವಶಕ್ತಿಯುಕ್ತವಾದ ಪದ್ಮಪೀಠದಲ್ಲಿ ಪೂಜಿಸಬೇಕು.

೮೦. ಪ್ರಭಾ, ಮಾಯಾ, ಜಯಾ, ಸೂಕ್ಷ್ಮಾ, ವಿಶುದ್ಧಾ, ನಂದಿನೀ, ಸುಪ್ರಭಾ, ವಿಜಯಾ, ಸರ್ವಸಿದ್ಧಿದಾ ಎಂಬೀ ಒಂಬತ್ತು ಪೀಠಶಕ್ತಿಗಳು.

೮೧-೮೨. ಈ ಶಕ್ತಿಗಳನ್ನು "ಅ" "ಇ" "ಉ" ಎಂಬ ಹ್ರಸ್ವ ತ್ರಯ ಮತ್ತು ಕ್ಲೀಬಗಳನ್ನು ಬಿಟ್ಟು ಉಳಿದ ಬಿಂದುಸಹಿತವಾದ ಒಂಬತ್ತು ಸ್ವರಾಕ್ಷರಗಳಿಂದ ಸಹಿತವಾಗಿ ಪೂಜಿಸಬೇಕು. "ಆಂ ಪ್ರಭಾಯೈ ನಮಃ" "ಈಂ ಮಾಯಾಯೈ ನಮಃ" ಇತ್ಯಾದಿ ರೀತಿಯಿಂದ ಪೂಜಿಸಬೇಕೆಂದು ಭಾವ.

ಈಗ ಸಿಂಹಮಂತ್ರವನ್ನು ಹೇಳುತ್ತಾರೆ :—

(ಪ್ರಣವ= ಓಂ. ವರ್ಮ= ಹುಂ. ಅಸ್ತ್ರ= ಫಟ್. ಹೃತ್= ನಮಃ)

ಸಿಂಹಾಯ ವರ್ಮಾಸ್ತ್ರಂ ಹೃಚ್ಚ ಪ್ರೋಕ್ತಃ ಸಿಂಹಮನುರ್ಮುನೇ ।
ದದ್ಯಾದಾಸನಮೇತೇನ ಮೂರ್ತಿಂ ಮೂಲೇನ ಕಲ್ಪಯೇತ್ ॥ ೮೨ ॥

ಅಂಗಾವೃತ್ತಿಂ ಪುರಾಭ್ಯರ್ಚ್ಯ ಶಕ್ತೀಃ ಪತ್ರೇಷು ಪೂಜಯೇತ್ ।
ಜಯಾ ಚ ವಿಜಯಾ ಕೀರ್ತಿಃ ಪ್ರೀತಿಃ ಪಶ್ಚಾತ್ಪ್ರಭಾ ಪುನಃ ॥ ೮೩ ॥

ಶ್ರದ್ಧಾ ಮೇಧಾ ಶ್ರುತಿಶ್ಚೈವ ಸ್ವನಾಮಾದ್ಯಕ್ಷರಾದಿಕಾಃ ।
ಪತ್ರಾಗ್ರೇಷ್ವರ್ಚಯೇದಷ್ಟಾವಾಯುಧಾನಿ ಯಥಾಕ್ರಮಾತ್ ॥ ೮೪ ॥

ಶಂಖಚಕ್ರಗದಾಖಡ್ಗಪಾಶಾಂಕುಶಶರಾನ್ಧನುಃ ।
ಲೋಕೇಶ್ವರಾಂಸ್ತತೋ ಬಾಹ್ಯೇ ತೇಷಾಮಸ್ತ್ರಾಣ್ಯನಂತರಂ ॥ ೮೫ ॥

ಇತ್ಥಂ ಜಪಾದಿಭಿರ್ಮಂತ್ರೇ ಮಂತ್ರೇ ಸಿದ್ಧೇ ವಿಧಾನವಿತ್ ।
ಕುರ್ಯಾತ್ಪ್ರಯೋಗಾನಮುನಾ ಯಥಾ ಸ್ವಸ್ವಮನೀಷಿತಾನ್ ॥ ೮೬ ॥

---

" ಓಂ ವಜ್ರನಖದಂಷ್ಟ್ರಾಯುಧಾಯ ಸಿಂಹಾಯ ಹುಂ ಫಟ್ ನಮಃ " ಎಂಬುದೇ ಸಿಂಹಮಂತ್ರವು.

ಈ ಮಂತ್ರದಿಂದ ಆಸನವನ್ನು ಕೊಡಬೇಕು. ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಬೇಕು.

೮೩-೮೪. ಮೊದಲು ಅಂಗಾವರಣವನ್ನು ಪೂಜಿಸಿ ದಳಗಳಲ್ಲಿ ಶಕ್ತಿಗಳನ್ನು ಪೂಜಿಸಬೇಕು. ಜಯಾ, ವಿಜಯಾ, ಕೀರ್ತಿ, ಪ್ರೀತಿ, ಪ್ರಭಾ, ಶ್ರದ್ಧಾ, ಮೇಧಾ ಮತ್ತು ಶ್ರುತಿ ಎಂಬ ಅಷ್ಟಶಕ್ತಿಗಳನ್ನು ದಳಾಗ್ರಭಾಗದಲ್ಲಿ ಪೂಜಿಸಬೇಕು.

೮೫. ಕ್ರಮವಾಗಿ ಜಯಾದಿಗಳ ಆಯುಧಗಳಾದ ಶಂಖ, ಚಕ್ರ, ಗದಾ, ಖಡ್ಗ, ಪಾಶ, ಅಂಕುಶ, ಬಾಣ, ಧನುಸ್ಸುಗಳನ್ನೂ ಪೂಜಿಸಬೇಕು. ಬಳಿಕ ಬಾಹ್ಯದಲ್ಲಿ ಇಂದ್ರಾದಿ ಲೋಕಪಾಲಕರನ್ನೂ, ಅನಂತರ ಅವರವರ ಆಯುಧಗಳನ್ನೂ ಪೂಜಿಸಬೇಕು.

ಪ್ರತಿಷ್ಠಾಪ್ಯ ವಿಧಾನೇನ ಕಲಶಾನ್ನವಶೋಭನಾನ್ |
ರತ್ನಹೇಮಾದಿಸಂಯುಕ್ತಾನ್ಘಟೇಷು ನವಸು ಸ್ಥಿತಾನ್ || ೮೭ ||

ಮಧ್ಯಸ್ಥೇ ಪೂಜಯೇದ್ದೇವೀಮಿತರೇಷು ಜಯಾದಿಕಾಃ |
ಸಂಪೂಜ್ಯ ಗಂಧಪುಷ್ಪಾದ್ಯೈರಭಿಷಿಂಚೇನ್ನರಾಧಿಪಂ || ೮೮ ||

ರಾಜಾ ವಿಜಯತೇ ಶತ್ರೂನ್ಸಾಧಿಕೋ ವಿಜಯಶ್ರಿಯಂ |
ಪ್ರಾಪ್ನೋತ್ಯರೋಗೀ ದೀರ್ಘಾಯುಃ ಸರ್ವವ್ಯಾಧಿವಿವರ್ಜಿತಃ || ೮೯ ||

ವಂಧ್ಯಾಭಿಷಿಕ್ತಾ ವಿಧಿನಾ ಲಭತೇ ತನಯಂ ವರಂ |
ಮಂತ್ರೇಣಾನೇನ ಸಂಜಪ್ತಮಾಜ್ಯಂ ಕ್ಷುದ್ರಗ್ರಹಾಪಹಂ || ೯೦ ||

---

೮೬. ಈ ಪ್ರಕಾರವಾಗಿ ಜಪಾದಿಗಳನ್ನು ಮಾಡಿ ಸಿದ್ಧಿಯನ್ನು ಪಡೆದ ವಿಧಾನಜ್ಞನಾದ ಮಂತ್ರಿಯು ಈ ಮಂತ್ರದಿಂದ ಇಷ್ಟಾರ್ಥಸಾಧಕಗಳಾದ ಪ್ರಯೋಗಗಳನ್ನಾಚರಿಸಬೇಕು.

೮೭-೮೮. ವಿಧಾನೋಕ್ತಪ್ರಕಾರವಾಗಿ ರತ್ನ ಬಂಗಾರ ಮುಂತಾದುವುಗಳಿಂದ ಸಹಿತವಾದ ಒಂಬತ್ತು ಕಲಶಗಳನ್ನು ಸ್ಥಾಪಿಸಿ, ಅವುಗಳ ಮಧ್ಯದ ಕಲಶದಲ್ಲಿ ದುರ್ಗಾದೇವಿಯನ್ನೂ, ಸುತ್ತಲೂ ಇರುವ ಇತರ ಕಲಶಗಳಲ್ಲಿ ಜಯಾದಿ ಅಷ್ಟಶಕ್ತಿಗಳನ್ನೂ, ಗಂಧಪುಷ್ಪಾದಿಗಳಿಂದ ಪೂಜಿಸಿ, ಆ ಉದಕದಿಂದ ದೊರೆಗೆ ಅಭಿಷೇಕಮಾಡಬೇಕು.

೮೯. ಈ ರೀತಿ ಅಭಿಷಿಕ್ತನಾದ ರಾಜನು ಶತ್ರುಗಳನ್ನು ಜಯಿಸಿ ವಿಜಯಸಂಪತ್ತನ್ನು ಹೊಂದುವನು. ರೋಗಿಯಾದ ಸಾಧಕನು ಸಕಲವ್ಯಾಧಿ ರಹಿತನಾಗಿ ದೀರ್ಘಾಯುಷ್ಮಂತನಾಗುವನು.

೯೦. ಉಕ್ತವಿಧಾನಾನುಸಾರವಾಗಿ ಗೊಡ್ಡಿಯು ಅಭಿಷೇಕಮಾಡಿಸಿಕೊಂಡರೆ ಉತ್ತಮ ಪುತ್ರನನ್ನು ಪಡೆಯುವಳು ಈ ಮಂತ್ರದಿಂದ ಅಭಿಮಂತ್ರಿಸಿದ ತುಪ್ಪವನ್ನು ತಿಂದರೆ ಕ್ಷುದ್ರಗ್ರಹಪೀಡೆಯು ಪರಿಹಾರವಾಗುವುದು.

ಗರ್ಭಿಣೀನಾಂ ವಿಶೇಷೇಣ ಜಪ್ತಂ ಭಸ್ಮಾದಿಕಂ ತಥಾ ।
ಜೃಂಭಶ್ವಾಸೇ ತು ಕೃಷ್ಣಸ್ಯ ಪ್ರವಿಷ್ಟೇ ರಾಧಿಕಾಮುಖಂ ॥ ೯೧ ॥

ಯಾ ತು ದೇವೀ ಸಮುದ್ಭೂತಾ ವೀಣಾಪುಸ್ತಕಧಾರಿಣೀ ।
ತಸ್ಯಾ ವಿಧಾನಂ ವಿಪ್ರೇಂದ್ರ ಶೃಣು ಲೋಕೋಪಕಾರಕಂ ॥ ೯೨ ॥

ಪ್ರಣವೋ ವಾಗ್ಭವಂ ಮಾಯಾ ಶ್ರೀಃ ಕಾಮಃ ಶಕ್ತಿರೀರಿತಾ ।
ಸರಸ್ವತೀ ಚತುರ್ಥ್ಯಂತಾ ಸ್ವಾಹಾಂತೋ ದ್ವಾದಶಾಕ್ಷರಃ ॥ ೯೩ ॥

ಮನುರ್ನಾರಾಯಣಋಷಿರ್ವಿರಾಟ್‌ಛಂದಃ ಸಮೀರಿತಂ ।
ಮಹಾಸರಸ್ವತೀ ಚಾಸ್ಯ ದೇವತಾ ಪರಿಕೀರ್ತಿತಾ ॥ ೯೪ ॥

---

೯೧-೯೨. ಈ ಮಂತ್ರದಿಂದ ಅಭಿಮಂತ್ರಿಸಿದ ಭಸ್ಮಾದಿಗಳನ್ನು ಗರ್ಭಿಣಿ ಸ್ತ್ರೀಯರು ಹಚ್ಚಿಕೊಂಡರೆ ಕ್ಷುದ್ರ ಗ್ರಹಬಾಧೆ ಮುಂತಾದುವು ಪರಿಹಾರ ವಾಗುವುವು.

ಕೃಷ್ಣನ ಆಕಳಿಕೆಯು ಶ್ವಾಸವು ರಾಧಾದೇವಿಯ ಮುಖವನ್ನು ಪ್ರವೇಶಿಸಿದಾಗ ಉದ್ಭವಿಸಿದ, ವೀಣೆ ಪುಸ್ತಕಗಳನ್ನು ಧರಿಸಿದ ದೇವಿಯ ಮಂತ್ರ ಮುಂತಾದ ವಿಧಾನವನ್ನು ಹೇಳುವೆನು. ವಿಪ್ರೇಂದ್ರನೇ! ಕೇಳು; ಇದು ಲೋಕೋಪಕಾರಕವು.

೯೩. (ಪ್ರಣವ= ಓಂ. ವಾಗ್ಭವ= ಐಂ. ಮಾಯಾ= ಹ್ರೀಂ. ಶ್ರೀ= ಶ್ರೀಂ. ಕಾಮ= ಕ್ಲೀಂ. ಶಕ್ತಿ= ಸಂ.)

"ಓಂ ಐಂ ಹ್ರೀಂ ಶ್ರೀಂ ಕ್ಲೀಂ ಸರಸ್ವತ್ಯೈ ಸ್ವಾಹಾ" ಇದು ದ್ವಾದಶಾಕ್ಷರ ಸರಸ್ವತೀ ಮಂತ್ರವು.

೯೪. ಇದಕ್ಕೆ ನಾರಾಯಣನು ಋಷಿ. ವಿರಾಟ್ ಎಂಬುದು ಛಂದಸ್ಸು. ಮಹಾಸರಸ್ವತಿಯೇ ದೇವತೆ ಎಂದು ಉಕ್ತವಾಗಿದೆ.

ನಾಗ್ಭವೇನ ಷಡಂಗಾನಿ ಕೃತ್ವಾ ವರ್ಣಾನ್ನ್ಯಸೇದ್ಬುಧಃ |
ಬ್ರಹ್ಮರಂಧ್ರೇ ನ್ಯಸೇತ್ತಾರಂ ಲಜ್ಜಾಂ ಭ್ರೂಮಧ್ಯಗಾಂ ನ್ಯಸೇತ್ || ೯೫ ||

ಮುಖನಾಸಾದಿಕರ್ಣೇಷು ಗುದೇಷು ಶ್ರೀಮುಖಾರ್ಣಕಾನ್ |
ತತೋ ವಾಗ್ದೇವತಾಂ ಧ್ಯಾಯೇದ್ವೀಣಾಪುಸ್ತಕಧಾರಿಣೀಂ || ೯೬ ||

ಕರ್ಪೂರಕುಂದಧವಳಾಂ ಪೂರ್ಣಚಂದ್ರೋಜ್ಜ್ವಲಾನನಾಂ |
ಹಂಸಾಧಿರೂಢಾಂ ಬಾಲೇಂದುದಿವ್ಯಾಲಂಕಾರಶೋಭಿತಾಂ || ೯೭ ||

ಜಪೇದ್ದ್ವಾದಶಲಕ್ಷಾಣಿ ತತ್ಸಹಸ್ರಂ ಸಿತಾಂಬುಜೈಃ |
ನಾಗಚಂಪಕಪುಷ್ಪೈರ್ವಾ ಜುಹುಯಾತ್ಸಾಧಕೋತ್ತಮಃ || ೯೮ ||

---

೯೫-೯೬. "ಐಂ" ಎಂಬ ವಾಗ್ಬೀಜಾಕ್ಷರದಿಂದ ಷಡಂಗನ್ಯಾಸ ಮಾಡಿ, ಜ್ಞಾನಿಯು ವರ್ಣನ್ಯಾಸ ಮಾಡಬೇಕು. ಬ್ರಹ್ಮರಂಧ್ರದಲ್ಲಿ ಓಂಕಾರವನ್ನೂ, ಹುಬ್ಬುಗಳ ಮಧ್ಯದಲ್ಲಿ "ಹ್ರೀಂ" ಎಂಬ ವರ್ಣವನ್ನೂ, ಮುಖ, ನಾಸಿಕೆ, ಕರ್ಣಗಳು, ಗುದಪ್ರದೇಶ ಮುಂತಾದ ಸ್ಥಾನಗಳಲ್ಲಿ ಉಳಿದ ಶ್ರೀಂ ಮುಂತಾದ ಮಂತ್ರವರ್ಣಗಳನ್ನೂ ನ್ಯಾಸಮಾಡಬೇಕು.

೯೬-೯೭. ಧ್ಯಾನ :—ಕರಗಳಲ್ಲಿ ವೀಣೆ, ಪುಸ್ತಕಗಳನ್ನು ಹಿಡಿದಿರುವ, ಕರ್ಪೂರಕುಂದಗಳಂತೆ ಧಾವಳ್ಯಯುಕ್ತಳಾದ, ಪೂರ್ಣಚಂದ್ರನಂತೆ ಪ್ರಕಾಶಮಾನವಾದ ಮುಖವುಳ್ಳ, ಹಂಸದ ಮೇಲೆ ಕುಳಿತಿರುವ, ಹಣೆಯಲ್ಲಿ ಚಂದ್ರನಂತೆ ಹೊಳೆಯುತ್ತಿರುವ ದಿವ್ಯಾಲಂಕಾರಯುಕ್ತಳಾದ, ವಾಗ್ದೇವತೆಯನ್ನು ಧ್ಯಾನಿಸಬೇಕು.

೯೮. ಬಳಿಕ ಸಾಧಕಶ್ರೇಷ್ಠನು ಈ ಮಂತ್ರವನ್ನು ಹನ್ನೆರಡು ಲಕ್ಷ ಜಪಿಸಿ, ಬಿಳಿದಾವರೆ ಹೂವು ಅಥವಾ ನಾಗಸಂಪಿಗೆ ಹೂವುಗಳಿಂದ ಹನ್ನೆರಡು ಸಾವಿರ ಹೋಮಮಾಡಬೇಕು.

ಮಾತೃಕೋಕ್ತೇ ಯಜೇತ್ಪೀಠೇ ವಕ್ಷ್ಯಮಾಣಕ್ರಮೇಣ ತಾಂ ।
ವರ್ಣಾಬ್ಜೇನಾಸನಂ ದದ್ಯಾನ್ಮೂರ್ತಿಂ ಮೂಲೇನ ಕಲ್ಪಯೇತ್ ॥ ೯೯ ॥

ದೇವ್ಯಾ ದಕ್ಷಿಣತಃ ಪೂಜ್ಯಾ ಸಂಸ್ಕೃತಾ ವಾಙ್ಮಯೀ ಶುಭಾ ।
ಪ್ರಾಕೃತಾ ವಾಮತಃ ಪೂಜ್ಯಾ ವಾಙ್ಮಯೀ ಸರ್ವಸಿದ್ಧಿದಾ ॥ ೧೦೦ ॥

ಪೂರ್ವಮಂಗಾನಿ ಷಟ್ಕೋಣೇ ಪ್ರಜ್ಞಾದ್ಯಾಃ ಪ್ರಯಜೇತ್ ಬಹಿಃ ।
ಪ್ರಜ್ಞಾ ಮೇಧಾ ಶ್ರುತಿಃ ಶಕ್ತಿಃ ಸ್ಮೃತಿರ್ವಾಗೀಶ್ವರೀ ಮತಿಃ ॥ ೧೦೧ ॥

ಸ್ವಸ್ತಿಶ್ಚೇತಿ ಸಮಾಖ್ಯಾತಾ ಬ್ರಹ್ಮಾದ್ಯಾಸ್ತದನಂತರಂ ।
ಲೋಕೇಶಾನರ್ಚಯೇದ್ಭೂಯಸ್ತದಸ್ತ್ರಾಣಿ ಚ ತದ್ಬಹಿಃ ॥ ೧೦೨ ॥

---

೯೯. ಮುಂದೆ ಹೇಳುವ ವಿಧಾನಾನುಸಾರವಾಗಿ ಮಾತೃಕಾಪೀಠದಲ್ಲಿ ಆ ವಾಗ್ದೇವತೆಯನ್ನು ಪೂಜಿಸಬೇಕು. ವರ್ಣಾಬ್ಜದಿಂದ ಆಸನವನ್ನು ಸಮರ್ಪಿಸಬೇಕು. (ವರ್ಣಾಬ್ಜೇನೇತಿ :—ಹ್ ಸೌಃಹಂಸವಾಗೀಶ್ವರೀ ಯೋಗಪೀಠಾಯ ನಮಃ ಇತಿಪ್ರಯೋಗಃ.

೧೦೦. ದೇವಿಯ ಬಲಭಾಗದಲ್ಲಿ ಶುಭವಾದ ಸಂಸ್ಕೃತವಾಙ್ಮಯವು ಪೂಜಿಸಲ್ಪಡಬೇಕು. ಎಡಭಾಗದಲ್ಲಿ ಸಕಲಸಿದ್ಧಿಪ್ರದವಾದ ಪ್ರಾಕೃತವಾಙ್ಮಯವು ಪೂಜಿಸಲ್ಪಡಬೇಕು.

೧೦೧-೧೦೨. ಮೊದಲು ಷಟ್ಕೋಣಗಳಲ್ಲಿ ಅಂಗಗಳನ್ನೂ, ಹೊರಭಾಗದಲ್ಲಿ ಪ್ರಜ್ಞಾ, ಮೇಧಾ, ಶ್ರುತಿ, ಶಕ್ತಿ, ಸ್ಮೃತಿ, ವಾಗೀಶ್ವರಿ, ಮತಿ ಮತ್ತು ಸ್ವಸ್ತಿ ಎಂಬುದಾಗಿ ಉಕ್ತರಾದ ಪ್ರಜ್ಞಾದಿಗಳನ್ನೂ ಪೂಜಿಸಬೇಕು. ಬಳಿಕ ಬ್ರಹ್ಮಾದಿಗಳನ್ನೂ ನಂತರ ಇಂದ್ರಾದಿ ಲೋಕಪಾಲಕರನ್ನೂ, ಅದರ ಹೊರಗೆ ಅವರವರ ವಜ್ರಾದ್ಯಾಯುಧಗಳನ್ನೂ ಪೂಜಿಸಬೇಕು.

ಏವಂ ಸಂಪೂಜ್ಯ ವಾಗ್ದೇವೀಂ ಸಾಕ್ಷಾದ್ವಾಗ್ವಲ್ಲಭೋ ಭವೇತ್ ।
ಬ್ರಹ್ಮಚರ್ಯರತಃ ಶುದ್ಧಃ ಶುದ್ಧದಂತನಖಾದಿಕಃ ॥ ೧೦೩ ॥

ಸಂಸ್ಮರನ್ ಸರ್ವವನಿತಾಃ ಸತತಂ ದೇವತಾಧಿಯಾ ।
ಕವಿತ್ವಂ ಲಭತೇ ಧೀಮಾನ್ ಮಾಸೈರ್ದ್ವಾದಶಭಿರ್ಧ್ರುವಂ ॥ ೧೦೪ ॥

ಪೀತ್ವಾ ತನ್ಮಂತ್ರಿತಂ ತೋಯಂ ಸಹಸ್ರಂ ಪ್ರತ್ಯಹಂ ಮುನೇ ।
ಮಹಾಕವಿರ್ಭವೇನ್ಮಂತ್ರೀ ವತ್ಸರೇಣ ನ ಸಂಶಯಃ ॥ ೧೦೫ ॥

ಉರೋಮಾತ್ರೋದಕೇ ಸ್ಥಿತ್ವಾ ಧ್ಯಾಯನ್ಮಾರ್ತಂಡಮಂಡಲೇ ।
ಸ್ಥಿತಾಂ ದೇವೀಂ ಪ್ರತಿದಿನಂ ತ್ರಿಸಹಸ್ರಂ ಜಪೇನ್ಮನುಂ ॥ ೧೦೬ ॥

---

೧೦೩-೧೦೪. ಈ ರೀತಿಯಾಗಿ ವಾಗ್ದೇವಿಯನ್ನು ಪೂಜಿಸಿದರೆ ಅವನು ಸಾಕ್ಷಾದ್ವಾಗಧೀಶನಾಗುವನು. ಬ್ರಹ್ಮಚರ್ಯ ನಿಷ್ಠನು, ಪರಿಶುದ್ಧನು, ಹಲ್ಲು ಉಗುರು ಮುಂತಾದುವನ್ನು ನಿರ್ಮಲವಾಗಿಟ್ಟುಕೊಂಡಿರುವವನೂ ಆಗಿ ಯಾವಾಗಲೂ ಸಕಲಸ್ತ್ರೀಯರನ್ನೂ ದೇವತೆಯೆಂಬ ಭಾವನೆಯಿಂದ ಚಿಂತಿಸುವವನು, ನಿಶ್ಚಯವಾಗಿ ಹನ್ನೆರಡು ತಿಂಗಳುಗಳಲ್ಲಿ ಜ್ಞಾನಿಯಾಗಿ ಕವಿಯಾಗುವನು.

೧೦೫. ಸಾವಿರ ಆವರ್ತಿ ಈ ಮಂತ್ರದಿಂದ ಅಭಿಮಂತ್ರಿಸಿದ ನೀರನ್ನು ಪ್ರತಿದಿನವೂ ಕುಡಿಯುತ್ತಾ ಒಂದು ವರ್ಷ ಹಾಗೆಯೇ ಆಚರಿಸುವ ಮಂತ್ರಿಯು ಮಹಾಕವಿಯಾಗುವನು ; ಸಂದೇಹವಿಲ್ಲ.

೧೦೬-೧೦೭. ಎದೆಯ ಮಟ್ಟದ ನೀರಿನಲ್ಲಿ ನಿಂತು, ಸೂರ್ಯಮಂಡಲ ಸ್ಥಿತಳಾದ ದೇವಿಯನ್ನು ಧ್ಯಾನಿಸುತ್ತಾ ಪ್ರತಿದಿನವೂ ಮೂರು ಸಾವಿರದಂತೆ

**ಲಭತೇ ಮಂಡಲಾತ್ಸಿದ್ಧಿಂ ವಾಚಾಮಪ್ರತಿಮಾಂ ಭುವಿ ।**
**ಪಲಾಶಬಿಲ್ವಕುಸುಮೈರ್ಜುಹುಯಾನ್ಮಧುರೋಕ್ಷಿತೈಃ ॥ ೧೦೭ ॥**

**ಸಮಿದ್ಭಿರ್ವಾ ತದುತ್ಥಾಭಿರ್ಯಶಃ ಪ್ರಾಪ್ನೋತಿ ವಾಕ್ಪತೇಃ ।**
**ರಾಜವೃಕ್ಷಸಮುದ್ಭೂತೈಃ ಪ್ರಸೂನೈರ್ಮಧುರಾಪ್ಲುತೈಃ ॥ ೧೦೮ ॥**

**ತತ್ಸಮಿದ್ಭಿಶ್ಚ ಜುಹುಯಾತ್ಕವಿತ್ವಮತುಲಂ ಲಭೇತ್ ।**
**ಅಥ ಪ್ರವಕ್ಷ್ಯೇ ವಿಪ್ರೇಂದ್ರ ಸಾವಿತ್ರೀಂ ಬ್ರಹ್ಮಣಃ ಪ್ರಿಯಾಂ ॥ ೧೦೯ ॥**

**ಯಾಂ ಸಮಾರಾಧ್ಯ ಸಸೃಜೇ ಬ್ರಹ್ಮಾ ಲೋಕಾಂಶ್ಚರಾಚರಾನ್ ।**
**ಲಕ್ಷ್ಮೀ ಮಾಯಾ ಕಾಮಪೂರ್ವಾ ಸಾವಿತ್ರೀ ಙೇಸಮನ್ವಿತಾ ॥ ೧೧೦ ॥**

**ಸ್ವಾಹಾಂತೋ ಮನುರಾಖ್ಯಾತಃ ಸಾವಿತ್ರ್ಯಾ ವಸುವರ್ಣವಾನ್ ।**
**ಋಷಿರ್ಬ್ರಹ್ಮಾಸ್ಯ ಗಾಯತ್ರೀ ಛಂದಃ ಪ್ರೋಕ್ತಂ ಚ ದೇವತಾ ॥ ೧೧೧ ॥**

---

ಈ ಮಂತ್ರವನ್ನು ಒಂದು ಮಂಡಲಕಾಲ ಜಪಿಸುವವನು ಭೂಲೋಕದಲ್ಲಿ ಅಸದೃಶವಾದ ವಾಕ್ಸಿದ್ಧಿಯನ್ನು ಪಡೆಯುವನು.

೧೦೭–೧೦೯. ಸಕ್ಕರೆ ಮುಂತಾದ ಮಧುರಪದಾರ್ಥ ಸಹಿತವಾದ ಮುತ್ತುಗ ಬಿಲ್ವ ಪುಷ್ಪಗಳಿಂದ ಅಥವಾ ಮುತ್ತುಗ ಬಿಲ್ವ ಸಮಿತ್ತುಗಳಿಂದ ಹೋಮಮಾಡಿದರೆ ವಾಗೀಶ್ವರನ ಯಶಸ್ಸನ್ನು ಹೊಂದುವನು, ಮಧುರಮಿಶ್ರವಾದ ಕಕ್ಕೆಹೂವು ಅಥವಾ ಅದರ ಸಮಿತ್ತುಗಳಿಂದ ಹೋಮಮಾಡಿದರೆ ಅಸದೃಶವಾದ ಕವಿತ್ವಶಕ್ತಿಯುಂಟಾಗುವುದು.

೧೦೯-೧೧೦. ಬ್ರಾಹ್ಮಣಶ್ರೇಷ್ಠನೇ! ಬ್ರಹ್ಮನಿಗೆ ಪ್ರಿಯಳಾದ ಸಾವಿತ್ರಿಯ ಮಂತ್ರ ಮುಂತಾದ ವಿಧಾನವನ್ನು ಹೇಳುವೆನು. ಆ ಸಾವಿತ್ರಿಯನ್ನು ಆರಾಧಿಸಿಯೇ ಬ್ರಹ್ಮನು ಚರಾಚರಲೋಕಗಳನ್ನು ಸೃಷ್ಟಿಸಿದನು.

೧೧೦–೧೧೨. “ಶ್ರೀಂ ಹ್ರೀಂ ಕ್ಲೀಂ ಸಾವಿತ್ರ್ಯೈ ಸ್ವಾಹಾ” ಎಂಬುದು ಸಾವಿತ್ರಿಯ ಅಷ್ಟಾಕ್ಷರ ಮಂತ್ರವು.

ಸಾವಿತ್ರೀ ಸರ್ವದೇವಾನಾಂ ಸವಿತ್ರೀ ಪರಿಕೀರ್ತಿತಾ ।
ಹೃದಂತಿಕೈರ್ಬ್ರಹ್ಮವಿಷ್ಣುರುದ್ರೇಶ್ವರಸದಾಶಿವೈಃ ॥ ೧೧೨ ॥

ಸರ್ವಾತ್ಮನಾ ಚ ಜ್ಞೇಯುಕ್ತೈರಂಗಾನಾಂ ಕಲ್ಪನಂ ಮತಂ ।
ತಪ್ತಕಾಂಚನವರ್ಣಾಭಾಂ ಜ್ವಲಂತೀಂ ಬ್ರಹ್ಮತೇಜಸಾ ॥ ೧೧೩ ॥

ಗ್ರೀಷ್ಮಮಧ್ಯಾಹ್ನಮಾರ್ತಂಡ ಸಹಸ್ರಸಮವಿಗ್ರಹಾಂ ।
ಈಷದ್ಧಾಸ್ಯಪ್ರಸನ್ನಾಸ್ಯಾಂ ರತ್ನಭೂಷಣಭೂಷಿತಾಂ ॥ ೧೧೪ ॥

ವಹ್ನಿಶುದ್ಧಾಂಶುಕಾಧಾನಾಂ ಭಕ್ತಾನುಗ್ರಹಕಾತರಾಂ ।
ಸುಖದಾಂ ಮುಕ್ತಿದಾಂ ಚೈವ ಸರ್ವಸಂಪತ್ಪ್ರದಾಂ ಶಿವಾಂ ॥ ೧೧೫ ॥

---

ಈ ಮಂತ್ರಕ್ಕೆ ಬ್ರಹ್ಮನು ಋಷಿ. ಗಾಯಿತ್ರೀ ಛಂದಸ್ಸು. ಸಕಲ ದೇವತೆಗಳನ್ನೂ ಪ್ರಸವಿಸಿದ ಸಾವಿತ್ರಿಯೇ ದೇವತೆ ಎಂಬುದಾಗಿ ಉಕ್ತವಾಗಿದೆ.

೧೧೨-೧೧೩. "ಬ್ರಹ್ಮಣೇ ನಮಃ, ವಿಷ್ಣವೇ ನಮಃ, ರುದ್ರಾಯ ನಮಃ, ಈಶ್ವರಾಯ ನಮಃ, ಸದಾಶಿವಾಯ ನಮಃ" ಎಂಬ ಮಂತ್ರಗಳಿಂದ ಕ್ರಮವಾಗಿ ಹೃದಯಾದಿ ಪಂಚಾಂಗ ನ್ಯಾಸ ಮಾಡಬೇಕು.

೧೧೩-೧೧೬. ಧ್ಯಾನ :—ಕಾಯಿಸಿದ ಬಂಗಾರದ ವರ್ಣದಂತೆ ಕಾಂತಿಯುಳ್ಳ, ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತಿರುವ, ಗ್ರೀಷ್ಮಕಾಲದ ಮಧ್ಯಾಹ್ನ ಸಮಯದಲ್ಲಿನ ಸಾವಿರ ಸೂರ್ಯರಿಗೆ ಸಮಾನವಾದ ಶರೀರವುಳ್ಳ, ಮಂದಹಾಸದಿಂದ ಪ್ರಸನ್ನವಾದ ಮುಖವುಳ್ಳ ರತ್ನಖಚಿತವಾದ ಆಭರಣಗಳಿಂದಲಂಕೃತ

ವೇದಬೀಜಸ್ವರೂಪಾಂ ಚ ಧ್ಯಾಯೇದ್ವೇದಪ್ರಸೂಂ ಸತೀಂ ।
ಧ್ಯಾತ್ವೈವಂ ಮಂಡಲೇ ವಿದ್ವಾನ್ ತ್ರಿಕೋಣೋಜ್ವಲಕರ್ಣಿಕೇ ॥ ೧೧೬ ॥

ಸೌರೇ ಪೀಠೇ ಯಜೇದ್ದೇವೀಂ ದೀಪ್ತಾದಿನವಶಕ್ತಿಭಿಃ ।
ಮೂಲಮಂತ್ರೇಣ ಕ್ಲೃಪ್ತಾಯಾಂ ಮೂರ್ತೌ ದೇವೀಂ ಪ್ರಪೂಜಯೇತ್॥

ಕೋಣೇಷು ತ್ರಿಷು ಸಂಪೂಜ್ಯಾ ಬ್ರಾಹ್ಮ್ಯಾದ್ಯಾಃ ಶಕ್ತಯೋ ಬಹಿಃ ।
ಆದಿತ್ಯಾದ್ಯಾಸ್ತತಃ ಪೂಜ್ಯಾ ಉಷಾದಿಸಹಿತಾಃ ಕ್ರಮಾತ್ ॥ ೧೧೮ ॥

ತತಃ ಷಡಂಗಾನ್ಯಭ್ಯರ್ಚ್ಯ ಕೇಸರೇಷು ಯಥಾ ವಿಧಿ ।
ಪ್ರಹ್ಲಾದಿನೀಂ ಪ್ರಭಾಂ ಪಶ್ಚಾನ್ನಿತ್ಯಾಂ ವಿಶ್ವಂಭರಾಂ ಪುನಃ ॥ ೧೧೯ ॥

---

ಳಾದ, ಬೆಂಕಿಯಂತೆ ಪರಿಶುದ್ಧಳಾದ, ಗಿಳಿಗಾಶ್ರಯಳಾದ, ಭಕ್ತರಿಗೆ ಅನುಗ್ರಹ ಮಾಡಬೇಕೆಂಬ ಕಾತರತೆಯುಳ್ಳ, ಸುಖಪ್ರದಳು, ಮುಕ್ತಿಪ್ರದಳು ಮತ್ತು ಶುಭ ಕಾರಿಣಿಯು, ವೇದಬೀಜಸ್ವರೂಪಳು ಮತ್ತು ವೇದವ್ಯಂಜಕಳೂ ಆದ ಸತೀ ಮಣಿಯನ್ನು ಧ್ಯಾನಿಸಬೇಕು.

೧೧೬-೧೧೭. ಈ ರೀತಿಯಾಗಿ ಜ್ಞಾನಿಯು ತ್ರಿಕೋಣದಿಂದ ವಿರಾಜಿ ಸುತ್ತಿರುವ ಕೋಶವುಳ್ಳ ಮಂಡಲದಲ್ಲಿ ಧ್ಯಾನಿಸಿ, ಸೌರಪೀಠದಲ್ಲಿ ದೇವಿಯನ್ನು ದೀಪ್ತಾ ಮುಂತಾದ ನವಶಕ್ತಿಗಳೊಡನೆ ಮೂಲಮಂತ್ರದಿಂದ ಕಲ್ಪಿಸಲ್ಪಟ್ಟ ಆ ಮೂರ್ತಿಯಲ್ಲಿ ಪೂಜಿಸಬೇಕು.

೧೧೮. ಮೂರು ಕೋಣಗಳಲ್ಲಿ ಬ್ರಾಹ್ಮೀ ಮುಂತಾದ ಶಕ್ತಿಗಳನ್ನು ಪೂಜಿಸಬೇಕು. ಹೊರಭಾಗದಲ್ಲಿ ಉಷಾದಿಗಳಿಂದ ಸಹಿತರಾದ ಆದಿತ್ಯಾದಿ ಗಳನ್ನು ಕ್ರಮವಾಗಿ ಪೂಜಿಸಬೇಕು.

೧೧೯-೧೨೦. ತರುವಾಯ ವಿಧ್ಯುಕ್ತರೀತಿಯಿಂದ ಕೇಸರಗಳಲ್ಲಿ ಷಡಂಗ

ವಿಲಾಸಿನೀ ಪ್ರಭಾವತ್ಯೌ ಜಯಾಂ ಶಾಂತಾಂ ಯಜೇತ್ ಪುನಃ |
ಕಾಂತಿಂ ದುರ್ಗಾಸರಸ್ವತ್ಯೌ ವಿದ್ಯಾರೂಪಾಂ ತತಃ ಪರಂ || ೧೨೦ ||

ವಿಶಾಲಸಂಜ್ಞಿತಾಮೀಶಾಂ ವ್ಯಾಪಿನೀಂ ವಿಮಲಾಂ ಯಜೇತ್ |
ತಮೋಪಹಾರಿಣೀಂ ಸೂಕ್ಷ್ಮಾಂ ವಿಶ್ವಯೋನಿಂ ಜಯಾವಹಾಂ || ೧೨೧ ||

ಪದ್ಮಾಲಯಾಂ ಪರಾಂ ಶೋಭಾಂ ಬ್ರಹ್ಮರೂಪಾಂ ತತೋರ್ಚಯೇತ್ |
ಬ್ರಾಹ್ಮ್ಯಾದ್ಯಾಃ ಶಾರದಾ ಬಾಹ್ಯೇ ಪೂಜಯೇತ್ಪ್ರೋಕ್ತಲಕ್ಷಣಾಃ ||೧೨೨||

ತತೋಭ್ಯರ್ಚೇದ್ಗ್ರಹಾನ್ ಬಾಹ್ಯೇ ಶಕ್ರಾದ್ಯಾನಾಯುಧೈಃ ಸಹ |
ಇತ್ಥಮಾವರಣೈರ್ದೇವೀಂ ದಶಭಿಃ ಪರಿಪೂಜಯೇತ್ || ೧೨೩ ||

---

ಗಳನ್ನು ಪೂಜಿಸಿ, ಅನಂತರ ಪ್ರಹ್ಲಾದಿನೀ, ಪ್ರಭಾ, ನಿತ್ಯಾ, ವಿಶ್ವಂಭರಾ, ವಿಲಾಸಿನೀ, ಪ್ರಭಾವತಿ, ಜಯಾ, ಶಾಂತಾ ಇವರನ್ನು ಪೂಜಿಸಬೇಕು.

೧೨೦-೧೨೧, ಪುನಃ ಕಾಂತಿ, ದುರ್ಗಾ, ಸರಸ್ವತೀ, ವಿದ್ಯಾರೂಪಾ, ವಿಶಾಲನಾಮಕಳಾದ ಈಶ್ವರೀ, ವ್ಯಾಪಕಳಾದ ವಿಮಲಾ ಇವರನ್ನು ಪೂಜಿಸಬೇಕು.

೧೨೧-೧೨೨. ತಮೋನಾಶಕಳು, ಸೂಕ್ಷ್ಮರೂಪಿಣಿಯು, ಜಗತ್ಕಾರಣಳು, ಜಯಪ್ರದಳು, ಉತ್ಕೃಷ್ಟ ತೇಜೋಮಯಳೂ ಆದ ಬ್ರಹ್ಮರೂಪಿಣಿಯನ್ನು ಪೂಜಿಸಬೇಕು,

೧೨೨-೧೨೩. ಉಕ್ತ ಲಕ್ಷಣಯುಕ್ತರಾದ ಬ್ರಾಹ್ಮೀ ಮುಂತಾದ ಶಕ್ತಿಗಳನ್ನು ಬಾಹ್ಯದಲ್ಲಿ ಪೂಜಿಸಬೇಕು. ಅನಂತರ ಬಾಹ್ಯದಲ್ಲಿ ಗ್ರಹಗಳನ್ನೂ, ಆಯುಧಸಹಿತರಾದ ಇಂದ್ರಾದಿಗಳನ್ನೂ ಪೂಜಿಸಬೇಕು. ಈ ರೀತಿ ಹತ್ತು ಆವರಣಗಳಿಂದ ದೇವಿಯನ್ನು ಪೂಜಿಸಬೇಕು.

ಅಷ್ಟಲಕ್ಷಂ ಜಪೇನ್ಮಂತ್ರಂ ತತ್ಸಹಸ್ರಂ ಹುನೇತ್ತಿಲೈಃ ।
ಸರ್ವಪಾಪವಿನಿರ್ಮುಕ್ತೋ ದೀರ್ಘಮಾಯುಃ ಸ ವಿಂದತಿ ॥ ೧೨೪ ॥

ಅರುಣಾಬ್ಜೈಸ್ತ್ರಿಮಧ್ವಕ್ತೈರ್ಜುಹುಯಾದಯುತಂ ತತಃ ।
ಮಹಾಲಕ್ಷ್ಮೀರ್ಭವೇತ್ತಸ್ಯ ಷಣ್ಮಾಸಾನ್ನಾತ್ರ ಸಂಶಯಃ ॥ ೧೨೫ ॥

ಬ್ರಹ್ಮವೃಕ್ಷಪ್ರಸೂನೈಸ್ತು ಜುಹುಯಾದ್ಬ್ರಹ್ಮತೇಜಸೇ ।
ಬಹುನಾ ಕಿಮಿಹೋಕ್ತೇನ ಯಥಾವತ್ಸಾಧಿತಾ ಸತೀ ॥ ೧೨೬ ॥

ಸಾಧಕಾನಾಮಿಯಂ ವಿದ್ಯಾ ಭವೇತ್ಕಾಮದುಘಾ ಮುನೇ ।
ಅಥ ತೇ ಸಂಪ್ರವಕ್ಷ್ಯಾಮಿ ರಹಸ್ಯಂ ಪರಮಾದ್ಭುತಂ ॥ ೧೨೭ ॥

ಸಾವಿತ್ರೀಪಂಜರಂ ನಾಮ ಸರ್ವರಕ್ಷಾಕರಂ ನೃಣಾಂ ।
ವ್ಯೋಮಕೇಶಾಲಕಾಸಕ್ತಾಂ ಸುಕಿರೀಟವಿರಾಜಿತಾಂ ॥ ೧೨೮ ॥

---

೧೨೪. ಈ ಮಂತ್ರವನ್ನು ಎಂಟುಲಕ್ಷ ಜಪಿಸಿ ಎಳ್ಳಿನಿಂದ ಎಂಟು ಸಾವಿರ ಹೋಮಮಾಡಿದರೆ ಸಕಲಪಾಪಗಳನ್ನೂ ಕಳೆದುಕೊಂಡು ದೀರ್ಘಾಯುಸ್ಸನ್ನು ಹೊಂದುವನು.

೧೨೫. ಸಕ್ಕರೆ, ತುಪ್ಪ, ಜೇನುತುಪ್ಪಗಳಿಂದ ಸಹಿತವಾದ ಕೆಂಪು ಕಮಲ ಪುಷ್ಪಗಳಿಂದ ಪ್ರತಿದಿನವೂ ಹತ್ತು ಸಾವಿರ ಹೋಮಮಾಡುವವನಿಗೆ ಆರು ತಿಂಗಳಿನಲ್ಲಿ ಮಹಾಲಕ್ಷ್ಮಿಯ ಅನುಗ್ರಹದಿಂದ ಮಹದೈಶ್ವರ್ಯವು ಲಭಿಸುವುದು ; ಸಂದೇಹವಿಲ್ಲ.

೧೨೬-೧೨೭. ಬ್ರಹ್ಮತೇಜಸ್ಸನ್ನು ಬಯಸುವವನು ಹೂವರಸೇ ಹೂವುಗಳಿಂದ ಹೋಮ ಮಾಡಬೇಕು. ಹೆಚ್ಚು ಹೇಳಿದ್ದರಿಂದೇನು ? ಈ ವಿದ್ಯೆಯನ್ನು ವಿಧಾನೋಕ್ತಪ್ರಕಾರವಾಗಿ ಅನುಷ್ಠಾನ ಮಾಡಿದರೆ ಅಂತಹವರಿಗೆ ಈ ವಿದ್ಯೆಯು ಸಕಲೇಷ್ಟಾರ್ಥಗಳನ್ನೂ ಕೊಡುವುದು.

೧೨೭-೧೨೮. ಈಗ ಮನುಷ್ಯರಿಗೆ ಸಕಲರಕ್ಷಾಕರವಾದ ಸಾವಿತ್ರೀ ಪಂಜರವೆಂಬ ಅತ್ಯಂತ ಆಶ್ಚರ್ಯಕರವಾದ ರಹಸ್ಯವನ್ನು ನಿನಗೆ ಹೇಳುವೆನು.

ಮೇಘಭ್ರುಕುಟಿಲಾಕ್ರಾಂತಾಂ ವಿಧಿವಿಷ್ಣುಶಿವಾನನಾಂ ।
ಗುರುಭಾರ್ಗವಕರ್ಣಾಂತಾಂ ಸೋಮಸೂರ್ಯಾಗ್ನಿಲೋಚನಾಂ ॥ ೧೨೯ ॥

ಇಡಾಪಿಂಗಲಿಕಾಸೂಕ್ಷ್ಮಾ ವಾಯುನಾಸಾಪುಟಾನ್ವಿತಾಂ ।
ಸಂಧ್ಯಾದ್ವಿಜೋಷ್ಠಪುಟಿತಾಂ ಲಸದ್ವಾಗುಪಜಿಹ್ವಿಕಾಂ ॥ ೧೩೦ ॥

ಸಂಧ್ಯಾಸೂರ್ಯಮಣಿಗ್ರೀವಾಂ ಮರುದ್ಬಾಹುಸಮನ್ವಿತಾಂ ।
ಪರ್ಜನ್ಯಹೃದಯಾಸಕ್ತಾಂ ವಸ್ವಾಖ್ಯಪ್ರತಿಮಂಡಲಾಂ ॥ ೧೩೧ ॥

ಆಕಾಶೋದರವಿಭ್ರಾಂತಾಂ ನಾಭ್ಯವಾಂತರವೀಥಿಕಾಂ ।
ಪ್ರಜಾಪತ್ಯಾಖ್ಯಜಘನಾಂ ಕಟೀಂದ್ರಾಣೀಸಮಾಶ್ರಿತಾಂ ॥ ೧೩೨ ॥

ಊರ್ವೋರ್ಮಲಯಮೇರುಭ್ಯಾಂ ಶೋಭಮಾನಾಂ ಸರಿದ್ವರಾಂ ।
ಸುಜಾನುಜಹ್ನುಕುಶಿಕಾಂ ವೈಶ್ವದೇವಾಖ್ಯಸಂಜ್ಞಿಕಾಂ ॥ ೧೩೩ ॥

---

೧೨೮-೧೩೮. ಆಕಾಶದಂತೆ ವಿಸ್ತೃತವಾದ ಕೇಶವುಳ್ಳ ಸ್ವಾಮಿಯ ಮುಂಗುರುಳುಗಳಲ್ಲಾಸಕ್ತಳಾಗಿರುವ, ಸವಿಾಚೀನ ಕಿರೀಟದಿಂದ ವಿರಾಜಮಾನಳೂ, ಮೇಘದಂತೆ ದಟ್ಟವಾದ ಹುಬ್ಬುಗಂಟು, ಬ್ರಹ್ಮ ವಿಷ್ಣು ಈಶ್ವರರೆಂಬ ಮುಖ, ಗುರು ಶುಕ್ರರೆಂಬ ಕರ್ಣಾಂತ, ಮತ್ತು ಚಂದ್ರ ಸೂರ್ಯ ಅಗ್ನಿಗಳೆಂಬ ನೇತ್ರ ಇವುಗಳನ್ನುಳ್ಳವಳು, ಇಡಾ, ಪಿಂಗಳಿಕಾ, ಸೂಕ್ಷ್ಮವೆಂಬ ನಾಡಿಗಳ ವಾಯುವಿನಿಂದ ಯುಕ್ತವಾದ ಮೂಗಿನ ರಂಧ್ರಗಳುಳ್ಳವಳು, ಸಂಧ್ಯಾಕಾಲದ ಸೂರ್ಯನಂತೆ ಕೆಂಪಗಿರುವ ಹಲ್ಲು ತುಟಿಗಳಿಂದ ಕೂಡಿರುವವಳು, ಪ್ರಕಾಶಮಾನವಾದ ವಾಗಿಂದ್ರಿಯದಿಂದ ಸಹಿತವಾದ ಕಿರುನಾಲಿಗೆಯುಳ್ಳವಳು, ಸಂಧ್ಯಾಕಾಲದ ಸೂರ್ಯನಂತೆ ಹೊಳೆಯುತ್ತಿರುವ ಮಣಿಯೋಪಾದಿಯಲ್ಲಿರುವ ಕುತ್ತಿಗೆಯುಳ್ಳವಳು, ವಾಯುವೆಂಬ ಬಾಹುಯುಕ್ತಳು, ಪರ್ಜನ್ಯವೆಂಬ ಹೃದಯದಲ್ಲಿ ಆಸಕ್ತಳು, ವಸುವೆಂಬ ಪ್ರತಿಮಂಡಲವುಳ್ಳವಳು, ಆಕಾಶವೆಂಬ ಉದರವನ್ನು ಧರಿಸಿರುವವಳು, ನಾಭಿಯ ಒಳಭಾಗದಲ್ಲಿ ಮಾರ್ಗವುಳ್ಳವಳು, ಪ್ರಾಜಾಪತ್ಯವೆಂಬ ಜಘನವುಳ್ಳವಳು, ಸೊಂಟವೆಂಬ ಶಚೀದೇವಿಯಿಂದ ಆಶ್ರಿತಳು, ತೊಡೆಗಳಲ್ಲಿ ಮಲಯ ಮೇರು ಪರ್ವತಗಳಿಂದ ಶೋಭಿಸುತ್ತಿರುವವಳು, ಉತ್ತಮ

ಪಾದಾಂಘ್ರಿನಖಲೋಮಾಖ್ಯಭೂನಾಗದ್ರುಮಲಕ್ಷಿತಾಂ ।
ಗ್ರಹರಾಶ್ಯೃಕ್ಷಯೋಗಾದಿಮೂರ್ತಾವಯವಸಂಜ್ಞಿಕಾಂ ॥ ೧೩೪ ॥

ತಿಥಿಮಾಸರ್ತುಪಕ್ಷಾಖ್ಯೈಃ ಸಂಕೇತನಿಮಿಷಾತ್ಮಿಕಾಂ ।
ಮಾಯಾಕಲ್ಪಿತವೈಚಿತ್ರ್ಯ ಸಂಧ್ಯಾಖ್ಯಚ್ಛದನಾವೃತಾಂ ॥ ೧೩೫ ॥

ಜ್ವಲತ್ಕಾಲಾನಲಪ್ರಖ್ಯಾಂ ತಡಿತ್ಕೋಟಿಸಮಪ್ರಭಾಂ ।
ಕೋಟಿಸೂರ್ಯಪ್ರತೀಕಾಶಾಂ ಶಶಿಕೋಟಿಸುಶೀತಲಾಂ ॥ ೧೩೬ ॥

ಸುಧಾಮಂಡಲಮಧ್ಯಸ್ಥಾಂ ಸಾಂದ್ರಾನಂದಾಮೃತಾತ್ಮಿಕಾಂ ।
ವಾಗತೀತಾಂ ಮನೋಗಮ್ಯಾಂ ವರದಾಂ ವೇದಮಾತರಂ ॥ ೧೩೭ ॥

ಚರಾಚರಮಯೀಂ ನಿತ್ಯಾಂ ಬ್ರಹ್ಮಾಕ್ಷರಸಮನ್ವಿತಾಂ ।
ಧ್ಯಾತ್ವಾ ಸ್ವಾತ್ಮಾವಿಭೇದೇನ ಸಾವಿತ್ರೀಪಂಜರಂ ನ್ಯಸೇತ್ ॥ ೧೩೮ ॥

---

ನದಿಯ ರೂಪದಲ್ಲಿ ಪ್ರವಹಿಸುತ್ತಿರುವವಳು, ಸಮೀಚೀನಮೋಣಕಾಲೆಂಬ ಗಂಗೆಯ ದ್ವೀಪವುಳ್ಳವಳು, ವೈಶ್ವದೇವ ನಾಮಕಳು, ಪಾದ ಉಗುರು ರೋಮ ಗಳೆಂಬ ಭೂ ನಾಗ ದ್ರುಮಲಕ್ಷಣಯುಕ್ತಳು, ಗ್ರಹ, ರಾಶಿ, ನಕ್ಷತ್ರ ಯೋಗ, ಮುಂತಾದ ಮೂರ್ತಾವಯವ ಸಂಜ್ಞೆಯುಳ್ಳವಳು, ತಿಥಿ ಮಾಸ ಋತು ಪಕ್ಷ ಗಳೆಂಬ ಸಂಕೇತನಿಮಿಷಾತ್ಮಕಳು, ಮಾಯಾ ಶಕ್ತಿನಿರ್ಮಿತ ವಿಲಕ್ಷಣ ಸಂಧ್ಯೆ ಯೆಂಬ ಆವರಣದಿಂದಾಚ್ಛಾದಿತಳು, ಜಾಜ್ವಲ್ಯಮಾನವಾದ ಪ್ರಳಯಕಾಲದ ಅಗ್ನಿಯಂತೆ ಪ್ರಕಾಶಮಾನಳು, ಕೋಟ್ಯಂತರ ಮಿಂಚುಗಳಿಗೆ ಸಮಾನವಾದ ಕಾಂತಿಯುಕ್ತಳು, ಕೋಟಿಸೂರ್ಯರಂತೆ ಹೊಳೆಯುತ್ತಿರುವವಳು, ಕೋಟಿ ಚಂದ್ರರಂತೆ ಅತ್ಯಂತ ಶೀತಲಳು, ಅಮೃತರಾಶಿಯ ಮಧ್ಯದಲ್ಲಿರುವವಳು, ನಿರ್ದುಃಖಾನಂದವೆಂಬ ಅಮೃತಸ್ವರೂಪಳು, ವಾಕ್ಕು, ಮನಸ್ಸುಗಳಿಗೆ ಅಗೋ ಚರಳು, ವರಪ್ರದಳು, ವೇದಮಾತೆಯು, ಚರಾಚರಪ್ರಧಾನಳು, ನಿತ್ಯಳು ಮತ್ತು ಅಕ್ಷರ ಶಬ್ದವಾಚ್ಯನಾದ ಬ್ರಹ್ಮನಿಂದ ಕೂಡಿರುವವಳೂ ಆಗಿರುವ ದೇವಿಯನ್ನು ಸ್ವಾತ್ಮದೇವ್ಯಭಿನ್ನಳೆಂದು ಧ್ಯಾನಿಸಿ ಸಾವಿತ್ರೀಪಂಜರವನ್ನು ನ್ಯಾಸಮಾಡಬೇಕು.

ಪಂಜರಸ್ಯ ಋಷಿಃ ಸೋಽಹಂ ಛಂದೋ ವಿಕೃತಿರುಚ್ಯತೇ ।
ದೇವತಾ ಚ ಪರೋ ಹಂಸಃ ಪರಬ್ರಹ್ಮಾದಿದೇವತಾ　　　॥ ೧೩೯ ॥

ಧರ್ಮಾರ್ಥಕಾಮಮೋಕ್ಷಾಪ್ತ್ಯೈ ವಿನಿಯೋಗ ಉದಾಹೃತಃ ।
ಷಡಂಗದೇವತಾಮಂತ್ರೈರಂಗನ್ಯಾಸಂ ಸಮಾಚರೇತ್　　　॥ ೧೪೦ ॥

ತ್ರಿಧಾ ಮೂಲೇನ ಮೇಧಾವೀ ವ್ಯಾಪಕಂ ಹಿ ಸಮಾಚರೇತ್ ।
ಪೂರ್ವೋಕ್ತಾಂ ದೇವತಾಂ ಧ್ಯಾಯೇತ್ಸಾಕಾರಾಂ ಗುಣಸಂಯುತಾಂ ॥

ತ್ರಿಪದಾ ಹರಿಜಾ ಪೂರ್ವಮುಖೀ ಬ್ರಹ್ಮಾಸ್ತ್ರಸಂಜ್ಞಿಕಾ ।
ಚತುರ್ವಿಂಶತಿತತ್ವಾಢ್ಯಾ ಪಾತು ಪ್ರಾಚೀಂ ದಿಶಂ ಮಮ　　　॥ ೧೪೨ ॥

---

೧೩೯. ಈ ಪಂಜರಕ್ಕೆ ಸೋಽಹಂ ಪದವಾಚ್ಯನೇ ಋಷಿ. ವಿಕೃತಿ ಛಂದಸ್ಸು. ಆದಿ ದೇವತೆಯೂ, ಉತ್ತಮನೂ, ಪರಬ್ರಹ್ಮಸ್ವರೂಪನೂ ಆದ ಹಂಸನೇ ದೇವತೆ.

೧೪೦. ಈ ಪಂಜರವನ್ನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಕ್ಕಾಗಿ ಆಚರಿಸಬೇಕೆಂದು ಉಕ್ತವಾಗಿದೆ. ಷಡಂಗ ದೇವತಾ ಮಂತ್ರಗಳಿಂದ ಅಂಗನ್ಯಾಸ ಮಾಡಬೇಕು.

೧೪೧. ಜ್ಞಾನಿಯು ಮೂಲಮಂತ್ರದಿಂದ ಮೂರುಬಾರಿ ಸರ್ವಾಂಗ ನ್ಯಾಸಮಾಡಬೇಕು. ಆಕಾರಗುಣಸಹಿತಳಾಗಿ ಪೂರ್ವೋಕ್ತದೇವತೆಯನ್ನು ಧ್ಯಾನಿಸಬೇಕು.

೧೪೨. ಮೂರು ಪಾದಗಳುಳ್ಳವಳೂ, ಹರಿಯಿಂದುತ್ಪನ್ನಳೂ, ಪೂರ್ವ ದಿಕ್ಕಿಗೆ ಅಭಿಮುಖವಾಗಿರುವವಳೂ, ಬ್ರಹ್ಮಾಸ್ತ್ರನಾಮಕಳೂ ಮತ್ತು ಇಪ್ಪತ್ತು ನಾಲ್ಕು ತತ್ವೋಪೇತಳೂ ಆಗಿರುವ ದೇವಿಯು ನನ್ನನ್ನು ಪೂರ್ವದಿಕ್ಕಿನಿಂದ ರಕ್ಷಿಸಲಿ.

ಚತುಷ್ಪದಾ ಬ್ರಹ್ಮದಂಡಾ ಬ್ರಹ್ಮಾಣೀ ದಕ್ಷಿಣಾನನಾ ।
ಷಡ್ವಿಂಶತ್ತತ್ತ್ವಸಂಯುಕ್ತಾ ಪಾತು ಮೇ ದಕ್ಷಿಣಾಂ ದಿಶಂ ॥ ೧೪೩ ॥

ಪ್ರತ್ಯಙ್ಮುಖೀ ಪಂಚಪದೀ ಪಂಚಾಶತ್ತತ್ತ್ವರೂಪಿಣೀ ।
ಪಾತು ಪ್ರತೀಚೀಮನಿಶಂ ಮಮ ಬ್ರಹ್ಮಶಿರೋಂಕಿತಾ ॥ ೧೪೪ ॥

ಸೌಮ್ಯಾಸ್ಯಾ ಬ್ರಹ್ಮತುರ್ಯಾಢ್ಯಾ ಸಾಥರ್ವಾಂಗಿರಸಾತ್ಮಿಕಾ ।
ಉದೀಚೀಂ ಷಟ್ಪದಾ ಪಾತು ಷಷ್ಟಿತತ್ತ್ವಕಲಾತ್ಮಿಕಾ ॥ ೧೪೫ ॥

ಪಂಚಾಶದ್ವರ್ಣರಚಿತಾ ನವಪಾದಾ ಶತಾಕ್ಷರೀ ।
ವ್ಯೋಮಾ ಸಂಪಾತು ಮೇವೋರ್ಧ್ವಂ ಶಿರೋ ವೇದಾಂತಸಂಸ್ಥಿತಾ ॥೧೪೬॥

---

೧೪೩. ನಾಲ್ಕು ಪಾದಗಳುಳ್ಳವಳು, ಬ್ರಹ್ಮದಂಡಧಾರಿಣಿಯು, ಬ್ರಹ್ಮ ಪತ್ನಿಯು, ದಕ್ಷಿಣದಿಕ್ಕಿಗೆ ಮುಖವನ್ನಿಟ್ಟಿರುವವಳು ಮತ್ತು ಇಪ್ಪತ್ತಾರು ತತ್ವ ಸಹಿತಳೂ ಆದ ದೇವಿಯು ದಕ್ಷಿಣದಿಕ್ಕಿನಿಂದ ಬರಬಹುದಾದ ವಿಪತ್ತುಗಳಿಂದ ನನ್ನನ್ನು ಕಾಪಾಡಲಿ.

೧೪೪. ಪಶ್ಚಿಮಾಭಿಮುಖಳೂ, ಐದು ಪಾದಗಳುಳ್ಳವಳೂ, ಇಪ್ಪತ್ತೈದು ತತ್ವರೂಪಿಣಿಯು ಮತ್ತು ಬ್ರಹ್ಮಶಿರೋಲಕ್ಷಿತಳೂ ಆದ ದೇವಿಯು ನನ್ನನ್ನು ಪಶ್ಚಿಮ ದಿಕ್ಕಿನ ವಿಪತ್ತುಗಳಿಂದ ಪಾರುಮಾಡಲಿ.

೧೪೫. ಉತ್ತರಾಭಿಮುಖಳು, ತುರ್ಯನಾಮಕ ಬ್ರಹ್ಮಸಹಿತಳು, ಅಥರ್ವಾಂಗೀರಸಾಂತರ್ಗತಳು, ಆರು ಪಾದಗಳುಳ್ಳವಳು ಮತ್ತು ಅರವತ್ತು ತತ್ವ ಕಲಾಭಿಮಾನಿನಿಯೂ ಆದ ದೇವಿಯು ಉತ್ತರ ದಿಕ್ಕಿನ ವಿಪತ್ತುಗಳಿಂದ ನನ್ನನ್ನು ಕಾಪಾಡಲಿ.

೧೪೬. ಐವತ್ತು ಅಕ್ಷರಗಳಿಂದ ರಚಿತವಾದ ಒಂಬತ್ತು ಪಾದ ಮತ್ತು ನೂರು ಅಕ್ಷರಗಳಿಂದ ಕೂಡಿದ, ವೇದಾಂತಸಿಷ್ಠವಾದ ಶಿರಸ್ಸೆಂಬ ವ್ಯೋಮಾಖ್ಯ ದೇವತೆಯು ಊರ್ಧ್ವದಿಕ್ಕಿನಿಂದ ವಿಪತ್ತು ಬರದಂತೆ ಕಾಪಾಡಲಿ.

ವಿದ್ಯುನ್ನಿಭಾ ಬ್ರಹ್ಮಸಂಧ್ಯಾ ಮೃಗಾರೂಢಾ ಚತುರ್ಭುಜಾ ।
ಚಾಪೇಷುಚರ್ಮಾಸಿಧರಾ ಪಾತು ಮೇ ಪಾವಕೀಂ ದಿಶಂ　　॥ ೧೪೭ ॥

ಬ್ರಾಹ್ಮೀ ಕುಮಾರೀ ಗಾಯತ್ರೀ ರಕ್ತಾಂಗೀ ಹಂಸವಾಹಿನೀ ।
ಬಿಭ್ರತ್ಕಮಂಡಲುಂ ಚಾಕ್ಷಂ ಸ್ರುಕ್‌ಸ್ರುವೌ ಪಾತು ನೈಋತಿಂ　　॥ ೧೪೮ ॥

ಶುಕ್ಲವರ್ಣಾ ಚ ಸಾವಿತ್ರೀ ಯುವತೀ ವೃಷವಾಹನಾ ।
ಕಪಾಲಶೂಲಕಾಕ್ಷಸ್ರಗ್‌ಧಾರಿಣೀ ಪಾತು ವಾಯವೀಂ　　॥ ೧೪೯ ॥

ಶ್ಯಾಮಾ ಸರಸ್ವತೀ ವೃದ್ಧಾ ವೈಷ್ಣವೀ ಗರುಡಾಸನಾ ।
ಶಂಖಚಕ್ರಾಭಯಕರಾ ಪಾತು ಶೈವೀಂ ದಿಶಂ ಮಮ　　॥ ೧೫೦ ॥

---

೧೪೭. ಮಿಂಚಿಗೆ ಸಮಾನಳು, ಬ್ರಹ್ಮಸಂಧ್ಯೆಯು, ಜಿಂಕೆಯ ಮೇಲೆ ಕುಳಿತಿರುವವಳು, ನಾಲ್ಕು ಭುಜಗಳುಳ್ಳವಳು ಮತ್ತು ಧನುರ್ಬಾಣಚರ್ಮ ಖಡ್ಗಗಳನ್ನು ಧರಿಸಿರುವವಳೂ ಆದ ದೇವಿಯು ನನ್ನ ಆಗ್ನೇಯ ದಿಕ್ಕನ್ನು ರಕ್ಷಿಸಲಿ.

೧೪೮. ಬ್ರಹ್ಮನಿರ್ಮಿತಳು, ಕುಮಾರಿಕೆಯು, ಕೆಂಪು ಬಣ್ಣದ ಅವಯವ ವುಳ್ಳವಳು, ಹಂಸವೆಂಬ ವಾಹನಯುಕ್ತಳು ಮತ್ತು ಕಮಂಡಲು, ಜಪಮಾಲೆ, ಸ್ರುಕ್, ಸ್ರುವಗಳನ್ನು ಧರಿಸಿರುವವಳೂ ಆದ ಗಾಯತ್ರೀ ದೇವಿಯು ನೈರುತ್ಯ ದಿಕ್ಕಿನಲ್ಲಿ ರಕ್ಷಿಸಲಿ.

೧೪೯. ಬೆಳ್ಳಗಿರುವ, ಯೌವನವುಳ್ಳ, ಎತ್ತಿನ ಮೇಲೆ ಕುಳಿತಿರುವ, ಕಪಾಲ, ಶೂಲ, ಚರ್ಮ, ಹಾರಗಳನ್ನು ಧರಿಸಿರುವ ಸಾವಿತ್ರೀ ದೇವಿಯು ವಾಯುವ್ಯದಿಕ್ಕಿನಲ್ಲಿ ರಕ್ಷಿಸಲಿ.

೧೫೦. ಶ್ಯಾಮ ಬಣ್ಣದವಳು, ಮುದುಕಿಯು, ವಿಷ್ಣುಶಕ್ತಿಯು, ಗರುಡವಾಹನಳು ಮತ್ತು ಶಂಖ, ಚಕ್ರ, ಅಭಯ ಮುದ್ರೆಗಳನ್ನು ಕೈಯಲ್ಲಿ ಧರಿಸಿರುವವಳೂ ಆದ ಸರಸ್ವತೀದೇವಿಯು ನನ್ನನ್ನು ಈಶಾನ್ಯದಿಕ್ಕಿನಲ್ಲಿ ಕಾಪಾಡಲಿ.

**ಚತುರ್ಭುಜಾ ದೇವಮಾತಾ ಗೌರಾಂಗೀ ಸಿಂಹವಾಹನಾ |**
**ವರಾಭಯಖಡ್ಗಚರ್ಮಭುಜಾ ಪಾತ್ವಧರಾಂ ದಿಶಂ || ೧೫೧ ||**

**ತತ್ರತ್ಪಾರ್ಶ್ವೇ ಸ್ಥಿತಾಃ ಸ್ವಸ್ವವಾಹನಾಯುಧಭೂಷಣಾಃ |**
**ಸ್ವಸ್ವದಿಕ್ಷು ಸ್ಥಿತಾಃ ಪಾಂತು ಗ್ರಹಶಕ್ತ್ಯಂಗಸಂಯುತಾಃ || ೧೫೨ ||**

**ಮಂತ್ರಾಧಿದೇವತಾರೂಪಾ ಮುದ್ರಾಧಿಷ್ಠಾತೃದೇವತಾಃ |**
**ವ್ಯಾಪಕತ್ವೇನ ಪಾಂತ್ವಸ್ಮಾನಾಪಾದತಲಮಸ್ತಕಂ || ೧೫೩ ||**

**ಇದಂ ತೇ ಕಥಿತಂ ಸತ್ಯಂ ಸಾವಿತ್ರೀಪಂಜರಂ ಮಯಾ |**
**ಸಂಧಯೋಃ ಪ್ರತ್ಯಹಂ ಭಕ್ತ್ಯಾ ಜಪಕಾಲೇ ವಿಶೇಷತಃ || ೧೫೪ ||**

---

೧೫೧. ನಾಲ್ಕು ಭುಜಗಳುಳ್ಳವಳು, ದೇವಮಾತೆಯು, ಹಳದೀ ಬಣ್ಣದ ಅವಯವವುಳ್ಳವಳು, ಸಿಂಹವಾಹನಳು ಮತ್ತು ವರ, ಅಭಯಮುದ್ರೆ, ಖಡ್ಗ, ಚರ್ಮಗಳನ್ನು ಹಸ್ತದಲ್ಲಿ ಧರಿಸಿರುವವಳೂ ಆದ ದೇವಿಯು ನನ್ನ ಅಧೋ ದಿಕ್ಕನ್ನು ಕಾಪಾಡಲಿ.

೧೫೨. ಆಯಾಯಾ ಪಾರ್ಶ್ವಗಳಲ್ಲಿರುವ, ತಮ್ಮ ತಮ್ಮ ವಾಹನ ಆಯುಧಾಲಂಕಾರಗಳಿಂದ ಸಹಿತರಾದ, ಗ್ರಹಶಕ್ತಿಗಳೆಂಬ ಅಂಗಗಳಿಂದ ಕೂಡಿರುವ ದೇವತೆಗಳು ತಮ್ಮ ತಮ್ಮ ದಿಕ್ಕುಗಳಲ್ಲಿದ್ದು ನನ್ನನ್ನು ರಕ್ಷಿಸಲಿ.

೧೫೩. ಮಂತ್ರಪ್ರತಿಪಾದ್ಯರು, ಮುದ್ರಾಧಿಷ್ಠಾನರೂ ಆದ ದೇವತೆಗಳು ನಮ್ಮನ್ನು ಪಾದದಿಂದ ತಲೆಯವರೆಗೂ ಸರ್ವಾಂಗಗಳಲ್ಲಿಯೂ ರಕ್ಷಿಸಲಿ.

೧೫೪-೧೫೫. ಈ ಸತ್ಯವಾದ ಸಾವಿತ್ರೀ ಪಂಜರವು ನನ್ನಿಂದ ನಿನಗಾಗಿ ಉಕ್ತವಾಗಿದೆ. ಭುಕ್ತಿ ಮುಕ್ತಿಗಳನ್ನು ಬಯಸುವವನು, ಬೆಳಗ್ಗೆ ಮಧ್ಯಾಹ್ನ ಸಂಧ್ಯಾಕಾಲಗಳಲ್ಲಿ ಪ್ರತಿದಿನವೂ ಭಕ್ತಿಪೂರ್ವಕವಾಗಿ ಇದನ್ನು ಪಠನೆಮಾಡಬೇಕು. ಜಪಕಾಲದಲ್ಲಿ ವಿಶೇಷವಾಗಿ ಪ್ರಯತ್ನದಿಂದ ಪಾರಾಯಣ ಮಾಡಬೇಕು.

ಪಠನೀಯಂ ಪ್ರಯತ್ನೇನ ಭುಕ್ತಿಂ ಮುಕ್ತಿಂ ಸಮಿಚ್ಛತಾ ।
ಭೂತಿದಾ ಭುವನಾ ವಾಣೀ ಮಹಾವಸುಮತೀ ಮಹೀ　　　॥ ೧೫೫ ॥

ಹಿರಣ್ಯಜನನೀ ನಂದಾ ಸವಿಸರ್ಗಾ ತಪಸ್ವಿನೀ ।
ಯಶಸ್ವಿನೀ ಸತೀ ಸತ್ಯಾ ವೇದವಿಚ್ಚಿನ್ಮಯೀ ಶುಭಾ　　　॥ ೧೫೬ ॥

ವಿಶ್ವಾ ತುರ್ಯಾ ವರೇಣ್ಯಾ ಚ ನಿಸ್ಪೃಣೀ ಯಮುನಾ ಭುವಾ ।
ಮೋದಾ ದೇವೀ ವರಿಷ್ಠಾ ಚ ಧೀಶ್ಚ ಶಾಂತಿರ್ಮತೀ ಮಹೀ　　　॥ ೧೫೭ ॥

ಧಿಷಣಾ ಯೋಗಿನೀ ಯುಕ್ತಾ ನದೀ ಪ್ರಜ್ಞಾ ಪ್ರಚೋದನೀ ।
ದಯಾ ಚ ಯಾಮಿನೀ ಪದ್ಮಾ ರೋಹಿಣೀ ರಮಣೀ ಜಯಾ　　　॥ ೧೫೮ ॥

ಸೇನಾಮುಖೀ ಸಾಮಮಯೀ ಬಗಲಾ ದೋಷವರ್ಜಿತಾ ।
ಮಾಯಾ ಪ್ರಜ್ಞಾ ಪರಾ ದೋಗ್ಧ್ರೀ ಮಾನಿನೀ ಪೋಷಿಣೀ ಕ್ರಿಯಾ॥೧೫೯॥

---

ಈಗ ಅವಶ್ಯವಾಗಿ ಪಠನೆಮಾಡಬೇಕಾದ ಸಾವಿತ್ರಿಯ ಅಷ್ಟೋತ್ತರ ಶತನಾಮಗಳನ್ನು ಹೇಳುತ್ತಾರೆ :—

ಭೂತಿದಾ = ಐಶ್ವರ್ಯಪ್ರದಳು. ಭುವನಾ, ವಾಣೀ, ಮಹಾವಸುಮತೀ, ಮಹೀ.

೧೫೬. ಹಿರಣ್ಯಜನನೀ, ನಂದಾ, ಸವಿಸರ್ಗಾ= ಸೃಷ್ಟಿಮಾಡುವವಳು, ತಪಸ್ವಿನೀ, ಯಶಸ್ವಿನೀ, ಸತೀ, ಸತ್ಯಾ, ವೇದವಿತ್= ವೇದವನ್ನು ತಿಳಿದಿರುವವಳು, ಚಿನ್ಮಯೀ= ಜ್ಞಾನಾತ್ಮಳು, ಶುಭಾ.

೧೫೭. ವಿಶ್ವಾ, ತುರ್ಯಾ, ವರೇಣ್ಯಾ, ನಿಸ್ಪೃಣೀ, ಯಮುನಾ, ಭುವಾ, ಮೋದಾ, ದೇವೀ, ವರಿಷ್ಠಾ, ಧೀ, ಶಾಂತಿ, ಮತಿ, ಮಹೀ.

೧೫೮. ಧಿಷಣಾ= ಬುದ್ಧಿವಂತಳು, ಯೋಗಿನೀ, ಯುಕ್ತಾ, ನದೀ, ಪ್ರಜ್ಞಾ, ಪ್ರಚೋದಿನೀ, ದಯಾ, ಯಾಮಿನೀ, ಪದ್ಮಾ, ರೋಹಿಣೀ, ರಮಣೀ, ಜಯಾ.

೧೫೯-೧೬೦. ಸೇನಾಮುಖೀ, ರಾಸಮಯೀ, ಬಗಲಾ, ದೋಷವರ್ಜಿ

ಜ್ಯೋತ್ಸ್ನಾ ತೀರ್ಥಮಯೀ ರಮ್ಯಾ ಸೌಮ್ಯಾಮೃತಮಯೀ ತಥಾ ।
ಬ್ರಾಹ್ಮೀ ಹೈಮೀ ಭುಜಂಗೀ ಚ ವಿಶಿನೀ ಸುಂದರೀ ವನೀ ॥ ೧೬೦ ॥

ಓಂಕಾರಹಂಸಿನೀ ಸರ್ವಾ ಸುಧಾ ಸಾ ಷಡ್ಗುಣಾವತೀ ।
ಮಾಯಾ ಸುಧಾ ರಮಾ ತನ್ವೀ ರಿಪುಘ್ನೀ ರಕ್ಷಣೀ ಸತೀ ॥ ೧೬೧ ॥

ಹೈಮೀ ತಾರಾ ವಿಧುಗತಿರ್ವಿಪಕ್ಷಘ್ನೀ ಚ ವರಾನನಾ ।
ಅಮರಾ ತೀರ್ಥದಾ ದೀಕ್ಷಾ ದುರ್ಧರ್ಷಾ ರೋಗಹಾರಿಣೀ ॥ ೧೬೨ ॥

ನಾನಾಪಾಪನೃಶಂಸಘ್ನೀ ಷಟ್ಪದೀ ವಜ್ರಿಣೀ ರಣೀ ।
ಯೋಗಿನೀ ವಿಮಲಾ ಸತ್ಯಾ ಅಬಲಾ ಬಲದಾ ಜಯಾ ॥ ೧೬೩ ॥

ಗೋಮತೀ ಜಾಹ್ನವೀ ರಜ್ವೀ ತಪನೀ ಜಾತವೇದಸಾ ।
ಅಚಿರಾ ವೃಷ್ಟಿದಾ ಜ್ಞೇಯಾ ಋತುತಂತ್ರಾ ಋತಾತ್ಮಿಕಾ ॥ ೧೬೪ ॥

---

ತಳು, ಮಾಯಾ, ಪ್ರಜ್ಞಾ, ಪರಾ, ದೋಗ್ಧ್ರೀ, ಮಾನಿನೀ, ಪೋಷಿಣೀ, ಕ್ರಿಯಾ, ಜ್ಯೋತ್ಸ್ನಾ, ತೀರ್ಥಮಯೀ ರಮ್ಯಾ, ಸೌಮ್ಯಾ, ಅಮೃತ ಮಯಾ, ಬ್ರಾಹ್ಮೀ, ಹೈಮೀ, ಭುಜಂಗೀ, ವಿಶಿನೀ, ಸುಂದರೀ, ವನೀ.

೧೬೧. ಓಂಕಾರಹಂಸಿನೀ, ಸರ್ವಾ, ಸುಧಾ, ಷಡ್ಗುಣಾವತೀ, ಮಾಯಾ, ಸುಧಾ, ರಮಾ, ತನ್ವೀ, ರಿಪುಘ್ನೀ, ರಕ್ಷಿಣೀ, ಸತೀ.

೧೬೨. ಹೈಮೀ, ತಾರಾ, ವಿಧುಗತೀ, ವಿಪಕ್ಷಘ್ನೀ, ವರಾನನಾ, ಅಮರಾ, ತೀರ್ಥದಾ, ದೀಕ್ಷಾ, ದುರ್ಧರ್ಷಾ, ರೋಗಹಾರಿಣೀ.

೧೬೩. ನಾನಾಪಾಪನೃಶಂಸಘ್ನೀ = ಬಹುಪಾಪಮಾಡಿದ ಘಾತುಕನನ್ನು ಸಂಹರಿಸುವವಳು, ಷಟ್ಪದೀ, ವಜ್ರಿಣೀ, ರಣೀ, ಯೋಗಿನೀ, ವಿಮಲಾ, ಸತ್ಯಾ, ಅಬಲಾ, ಬಲದಾ, ಜಯಾ.

೧೬೪. ಗೋಮತೀ, ಜನ್ಹುಪುತ್ರೀ, ರಜ್ವೀ, ತಪನೀ, ಜಾತವೇದಸಾ, ಅಚಿರಾ, ವೃಷ್ಟಿದಾ, ಋತುತಂತ್ರಾ, ಋತಾತ್ಮಿಕಾ.

**ಸರ್ವಕಾಮದುಘಾ ಸೌಮ್ಯಾ ಭವಾಹಂಕಾರವರ್ಜಿತಾ |**
**ದ್ವಿಪದಾ ಯಾ ಚತುಷ್ಪದಾ ತ್ರಿಪದಾ ಯಾ ಚ ಷಟ್ಪದಾ || ೧೬೫ ||**

**ಅಷ್ಟಾಪದೀ ನವಪದೀ ಸಹಸ್ರಾಕ್ಷ್ಯಾಕ್ಷರಾತ್ಮಿಕಾ |**
**ಅಷ್ಟೋತ್ತರಶತಂ ನಾಮ್ನಾ ಸಾವಿತ್ರ್ಯಾ ಯಃ ಪಠೇನ್ನರಃ || ೧೬೬ ||**

**ಸ ಚಿರಾಯುಃ ಸುಖೀ ಪುತ್ರೀ ವಿಜಯೀ ವಿನಯೀ ಭವೇತ್ |**
**ಏತತ್ತೇ ಕಥಿತಂ ವಿಪ್ರ ಪಂಚಪ್ರಕೃತಿಲಕ್ಷಣಂ || ೧೬೭ ||**

**ಮಂತ್ರಾರಾಧನಪೂರ್ವಂ ಚ ವಿಶ್ವಕಾಮಪ್ರಪೂರಣಂ || ೧೬೮ ||**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಪಂಚಪ್ರಕೃತಿಮಂತ್ರಾದಿನಿರೂಪಣಂನಾಮ ತ್ರ್ಯಶೀತಿತಮೋಽಧ್ಯಾಯಃ**

---

೧೬೫. ಸರ್ವಕಾಮದುಘಾ= ಸಕಲೇಷ್ಟಾರ್ಥಪ್ರದಳು, ಸೌಮ್ಯಾ, ಜನ್ಮಾಂಹಕಾರ ರಹಿತಳು, ದ್ವಿಪದಾ, ಚತುಷ್ಪದಾ, ತ್ರಿಪದಾ, ಷಟ್ಪದಾ.

೧೬೬-೧೬೮. ಅಷ್ಟಾಪದೀ, ನವಪದೀ, ಸಹಸ್ರಾಕ್ಷಾ= ಸಾವಿರನೇತ್ರಗಳುಳ್ಳವಳು, ಅಕ್ಷರಾತ್ಮಕಳು. ಇವು ಸಾವಿತ್ರೀದೇವಿಯ ಅಷ್ಟೋತ್ತರಶತ (108) ನಾಮಗಳು. ಇವನ್ನು ಪಠನೆಮಾಡುವ ಮನುಷ್ಯನು ದೀರ್ಘಾಯುಷ್ಮಂತನೂ, ಸುಖಿಯೂ. ಪುತ್ರವಂತನೂ, ವಿಜಯವಿನಯಶಾಲಿಯೂ ಆಗುವನು. ಬ್ರಾಹ್ಮಣನಾದ ನಾರದನೇ! ಸಕಲೇಷ್ಟಾರ್ಥಗಳನ್ನೂ ಕೊಡುವ ಪಂಚ ಪ್ರಕೃತಿ ಲಕ್ಷಣವನ್ನು ಮಂತ್ರಾರಾಧನೆಸಹಿತವಾಗಿ ನಿನಗೆ ಹೇಳಿರುವೆನು.

ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ಪಂಚಪ್ರಕೃತಿಮಂತ್ರಾದಿ ನಿರೂಪಣವೆಂಬ ಎಂಬತ್ತುಮೂರನೆಯ ಅಧ್ಯಾಯವು ಮುಗಿದುದು.

---

## ವಿಷಯಸಂಗ್ರಹ

ರಾಧೆಯ ಅಂಶಗಳು, ಅವುಗಳ ಚರಿತ್ರೆ, ಮಂತ್ರ, ಆರಾಧನೆಯ ಕ್ರಮ, ಮಂತ್ರಾದುವು ಮತ್ತು ಸಾವಿತ್ರೀಪಂಜರ ಇವುಗಳು ಸಾಂಗವಾಗಿ ಈ ಅಧ್ಯಾಯದಲ್ಲಿ ಹೇಳಲ್ಪಟ್ಟವೆ.

# ಚತುರಶೀತಿತಮೋಽಧ್ಯಾಯಃ

---

ಸನತ್ಕುಮಾರ ಉವಾಚ

ಕಲಿಕಲ್ಪಾಂತರೇ ಬ್ರಹ್ಮನ್ ಬ್ರಹ್ಮಣೋವ್ಯಕ್ತಜನ್ಮನಃ ।
ಲೋಕಪದ್ಮೇ ತಪಸ್ಥಸ್ಯ ಸೃಷ್ಟ್ಯರ್ಥಂ ಸಂಬಭೂವತುಃ ॥ ೧ ॥

ವಿಷ್ಣುಕರ್ಣಮಲೋದ್ಭೂತಾವಸುರೌ ಮಧುಕೈಟಭೌ ।
ತೌ ಜಾತಮಾತ್ರೌ ಪಯಸಿ ಲೋಕಪ್ರಲಯಲಕ್ಷಣೇ ॥ ೨ ॥

ಜಾನುಮಾತ್ರೇ ಸ್ಥಿತೌ ದೃಷ್ಟ್ವಾ ಬ್ರಹ್ಮಾಣಂ ಕಮಲಸ್ಥಿತಂ ।
ಪ್ರವೃತ್ತಾವತ್ತುಮಾಲಕ್ಷ್ಯ ತುಷ್ಟಾವ ಜಗದಂಬಿಕಾಂ ॥ ೩ ॥

ತತೋ ದೇವೀ ಜಗತ್ಕರ್ತ್ರೀ ಶೈವೀ ಶಕ್ತಿರನುತ್ತಮಾ ।
ನಾರಾಯಣಾಕ್ಷಿಸಂಸ್ಥಾನಾ ನಿದ್ರಾ ಪ್ರೀತಾ ಬಭೂವ ಹ ॥ ೪ ॥

---

## ಎಂಬತ್ತುನಾಲ್ಕನೆಯ ಅಧ್ಯಾಯವು

೧-೩. ಸನತ್ಕುಮಾರನು ಹೇಳಿದನು :—ಬ್ರಹ್ಮಜ್ಞಾನಿಯಾದ ನಾರದನೇ! ಕಲಿಕಲ್ಪಾಂತರದಲ್ಲಿ ಪ್ರಕೃತಿಯಿಂದ ಹುಟ್ಟಿದ ಬ್ರಹ್ಮನು ಲೋಕವೆಂಬ ಪದ್ಮದಲ್ಲಿ ಸೃಷ್ಟ್ಯರ್ಥವಾಗಿ ಆಲೋಚಿಸುತ್ತಿದ್ದಾಗ ವಿಷ್ಣುಕರ್ಣಮಲದಿಂದ ಮಧುಕೈಟಭರೆಂಬ ಅಸುರರು ಹುಟ್ಟಿದರು. ಅವರಿಬ್ಬರು ಹುಟ್ಟಿದಕೂಡಲೇ ಜಗತ್ಪ್ರಲಯಸೂಚಕವಾದ ಜಲವಾದರೂ ಅವರಿಗೆ ಮೊಣಕಾಲು ಮುಟ್ಟಿದಷ್ಟೇ ಆಗಿದ್ದ ನೀರಿನಲ್ಲಿ ನಿಂತು ಪದ್ಮದಲ್ಲಿದ್ದ ಬ್ರಹ್ಮನನ್ನು ನೋಡಿ ಅವನನ್ನು ತಿನ್ನಲೆತ್ನಿಸಿದರು. ಅದನ್ನು ನೋಡಿ ಬ್ರಹ್ಮನು ಜಗದಂಬಿಕೆಯನ್ನು ಸ್ತೋತ್ರಮಾಡಿದನು.

೪. ಅದರಿಂದ ಜಗತ್ಕರ್ತೃಳು, ಶೈವಶಕ್ತಿಯು, ಸರ್ವೋತ್ತಮಳೂ ಆದ ನಾರಾಯಣನ ಕಣ್ಣಿನಲ್ಲಿರುವ ನಿದ್ರಾದೇವಿಯು ಸಂತುಷ್ಟಳಾದಳು.

ತಸ್ಯಾ ಮಂತ್ರಾದಿಕಂ ಸರ್ವಂ ಕಥಯಿಷ್ಯಾಮಿ ತಚ್ಛೃಣು ।
ಸಾರುಣಾ ಕ್ರೋಧನೀ ಶಾಂತಿಶ್ಚಂದ್ರಾಲಂಕೃತಶೇಖರಾ ॥ ೫ ॥

ಏಕಾಕ್ಷರೀಬೀಜಂ ಮಂತ್ರಃಋಷಿಃ ಶಕ್ತಿರುದಾಹೃತಾ ।
ಗಾಯತ್ರೀ ಚ ಭವೇಚ್ಛಂದೋ ದೇವತಾ ಭುವನೇಶ್ವರೀ ॥ ೬ ॥

ಷಡ್‌ದೀರ್ಘಯುಕ್ತಬೀಜೇನ ಕುರ್ಯಾದಂಗಾನಿ ಷಟ್‌ಕ್ರಮಾತ್ ।
ಸಂಹಾರಸೃಷ್ಟಿಮಾರ್ಗೇಣ ಮಾತೃಕಾನ್ಯಸ್ತವಿಗ್ರಹಃ ॥ ೭ ॥

ಮಂತ್ರನ್ಯಾಸಂ ತತಃ ಕುರ್ಯಾದ್ದೇವತಾಭಾವಸಿದ್ಧಯೇ ।
ಹೃಲ್ಲೇಖಾಂ ಮೂರ್ಧ್ನಿ ವದನೇ ಗಗನಾಂ ಹೃದಯಾಂಬುಜೇ ॥ ೮ ॥

ರಕ್ತಾಂ ಕರಾಲಿಕಾಂ ಗುಹ್ಯೇ ಮಹೋಚ್ಛುಷ್ಮಾಂ ಪದದ್ವಯೇ ।
ಊರ್ಧ್ವಪ್ರಾಗ್ದಕ್ಷಿಣೋದೀಚ್ಯ ಪಶ್ಚಿಮೇಷು ಮುಖೇಷು ಚ ॥ ೯ ॥

೫-೬. ಆ ದೇವತೆಯ ಮಂತ್ರಾದಿಗಳೆಲ್ಲವನ್ನೂ ಹೇಳುವೆನು; ಕೇಳು. (ಅರುಣ= ಹ, ಕ್ರೋಧಿನೀ= ರ, ಶಾಂತಿ= ಈ, ಚಂದ್ರ= ಂ) "ಹ್ರೀಂ" ಎಂಬುದು ಏಕಾಕ್ಷರ ಭುವನೇಶ್ವರೀ ಬೀಜಮಂತ್ರವು. ಇದಕ್ಕೆ ಶಕ್ತಿಯು ಋಷಿ, ಗಾಯತ್ರೀ ಛಂದಸ್ಸು, ಭುವನೇಶ್ವರಿಯೇ ದೇವತೆಯು.

೭-೮. "ಆ, ಈ," ಮುಂತಾದ ಆರು ದೀರ್ಘಾಕ್ಷರಯುಕ್ತ ಬೀಜಾಕ್ಷರದಿಂದ ಕ್ರಮವಾಗಿ ಷಡಂಗಗಳಲ್ಲಿ ನ್ಯಾಸಮಾಡಬೇಕು. ಆರಾಧಕನು ಶರೀರದಲ್ಲಿ ಸಂಹಾರನ್ಯಾಸ ಮತ್ತು ಸೃಷ್ಟಿನ್ಯಾಸಕ್ರಮಗಳಿಂದ ಮಾತೃಕಾನ್ಯಾಸ ಮಾಡಿಕೊಂಡು, ಅನಂತರ ದೇವತಾ ಭಾವವುಂಟಾಗುವುದಕ್ಕಾಗಿ ಮಂತ್ರನ್ಯಾಸಮಾಡಬೇಕು.

೮-೯. ಶಿರಸ್ಸಿನಲ್ಲಿ ಹೃಲ್ಲೇಖೆಯನ್ನೂ, ಮುಖದಲ್ಲಿ ಗಗನೆಯನ್ನೂ, ಹೃದಯದಲ್ಲಿ ರಕ್ತೆಯನ್ನೂ, ಗುಹ್ಯದಲ್ಲಿ ಕರಾಳಿಕೆಯನ್ನೂ ಮತ್ತು ಎರಡು ಪಾದಗಳಲ್ಲಿಯೂ ಮಹೋಚ್ಛುಷ್ಮೆಯನ್ನೂ ನ್ಯಾಸಮಾಡಬೇಕು.

ಸದ್ಯಾದಿಹ್ರಸ್ವಬೀಜಾಢ್ಯಾ ನ್ಯಸ್ತ್ವಾ ಭೂತಸಪ್ರಭಾಃ ।
ಅಂಗಾನಿ ವಿನ್ಯಸೇತ್ಪಶ್ಚಾಜ್ಜಾತಿಯುಕ್ತಾನಿ ಷಟ್‌ಕ್ರಮಾತ್ ॥ ೧೦ ॥

ಬ್ರಹ್ಮಾಣಂ ವಿನ್ಯಸೇದ್ಭಾಲೇ ಗಾಯತ್ರ್ಯಾ ಸಹಸಂಯುತಂ ।
ಸಾವಿತ್ರ್ಯಾಸಹಿತಂ ವಿಷ್ಣುಂ ಕಪೋಲೇ ದಕ್ಷಿಣೇ ನ್ಯಸೇತ್ ॥ ೧೧ ॥

ವಾಗೀಶ್ವರ್ಯಾ ಸಮಾಯುಕ್ತಂ ವಾಮಗಂಡೇ ಮಹೇಶ್ವರಂ ।
ಶ್ರಿಯಾ ಧನಪತಿಂ ನ್ಯಸ್ಯ ವಾಮಕರ್ಣಾಗ್ರಕೇ ಪುನಃ ॥ ೧೨ ॥

---

೯-೧೦. ಮುಖದ ಊರ್ಧ್ವ, ಪೂರ್ವ, ದಕ್ಷಿಣ, ಉತ್ತರ ಮತ್ತು ಪಶ್ಚಿಮಭಾಗಗಳಲ್ಲಿ "ಹ್ರೋಂ, ಹ್ರೇಂ, ಹ್ರುಂ, ಹ್ರಿಂ, ಹ್ರಂ" ಎಂಬವುಗಳನ್ನು ಪೃಥಿವ್ಯಾದಿಕ್ರಮದಿಂದ ನ್ಯಾಸಮಾಡಬೇಕು. ಅನಂತರ ಹೃದಯಾದಿ ಷಡಂಗಗಳನ್ನು ಜಾತಿಸಹಿತ ಪೂರ್ವೋಕ್ತಮಂತ್ರಗಳಿಂದ ಕ್ರಮವಾಗಿ ನ್ಯಾಸಮಾಡಬೇಕು.

೧೧. ಹಣೆಯಲ್ಲಿ *ಗಾಯತ್ರೀ ಸಹಿತ ಬ್ರಹ್ಮನನ್ನು ನ್ಯಾಸಮಾಡಬೇಕು. ("ಹ್ರಾಂ ಗಾಯತ್ರೀಸಹಿತಾಯ ಹಂ ಬ್ರಹ್ಮಣೇ ನಮಃ ಲಲಾಟೇ" ಎಂದು ಪ್ರಯೋಗವಿಧಾನವನ್ನು ತಿಳಿಯಬೇಕು.) ಬಲಕೆನ್ನೆಯಲ್ಲಿ ಸಾವಿತ್ರೀ ಸಹಿತ ವಿಷ್ಣುವನ್ನು ನ್ಯಾಸಮಾಡಬೇಕು. ("ಹ್ರೀಂ ಸಾವಿತ್ರೀಸಹಿತಾಯ ಹಿಂ ವಿಷ್ಣವೇ ನಮಃ ದಕ್ಷಿಣಕಪೋಲೇ" ಎಂದು ಪ್ರಯೋಗವು. ಹೀಗೆಯೇ ಮುಂದೆಯೂ ತಿಳಿಯಬೇಕು.)

ವಾಗೀಶ್ವರೀ ಸಹಿತ ಮಹೇಶ್ವರನನ್ನು ಎಡಕೆನ್ನೆಯಲ್ಲಿಯೂ, ಶ್ರೀಸಹಿತ ಧನಪತಿಯನ್ನು ಎಡಕಿವಿಯ ಅಗ್ರಭಾಗದಲ್ಲಿಯೂ ನ್ಯಾಸಮಾಡಬೇಕು.

---

ಶಾರದಾತಿಲಕ—ಹ್ರಾಂ, ಹ್ರೀಂ, ಹೂಂ ಎಂಬಿವು ಗಾಯತ್ರ್ಯಾದಿಗಳ ಬೀಜಾಕ್ಷರ, ಹಂ, ಹಿಂ, ಹುಂ ಬ್ರಹ್ಮಾದಿಗಳ ಬೀಜಾಕ್ಷರ ಉಳಿದವರಿಗೆ ಅವರವರ ಬೀಜಾಕ್ಷರ, ನಿಧಿಗಳಿಗೆ ಆದ್ಯಕ್ಷರವೇ ಬೀಜವೆಂದು ತಿಳಿಯಬೇಕು.

ರತ್ಯಾ ಸ್ಮರಂ ಮುಖೇ ನ್ಯಸ್ಯ ಪುಣ್ಯಾಗಣಪತಿಂ ನ್ಯಸೇತ್ ।
ಸವ್ಯಕರ್ಣೋಪರಿ ನಿಧೀ ಕರ್ಣಗಂಡಾಂತರಾಲಯೋಃ ॥ ೧೩ ॥

ನ್ಯಸ್ತವ್ಯಂ ವದನೇ ಮೂಲಂ ಭೂಯಶ್ಚೈತಾಂಸ್ತನೌ ನ್ಯಸೇತ್ ।
ಕಂಠಮೂಲೇ ಸ್ತನದ್ವಂದ್ವೇ ವಾಮಾಂಸೇ ಹೃದಯಾಂಬುಜೇ ॥ ೧೪ ॥

ಸವ್ಯಾಂಶೇ ಪಾರ್ಶ್ವಯುಗಲೇ ನಾಭಿದೇಶೇ ಚ ದೇಶಿಕಃ ।
ಭಾಲಾಂಶ್ಚ ಪಾರ್ಶ್ವಜಠರೇ ಪಾರ್ಶ್ವಾಂಸಾಪರಕೇ ಹೃದಿ ॥ ೧೫ ॥

ಬ್ರಹ್ಮಾಣ್ಯಾದ್ಯಾಸ್ತನೌ ನ್ಯಸ್ಯ ವಿಧಿನಾ ಪ್ರೋಕ್ತಲಕ್ಷಣಾ ।
ಮೂಲೇನ ವ್ಯಾಪಕಂ ದೇಹೇ ನ್ಯಸ್ಯ ದೇವೀಂ ವಿಚಿಂತಯೇತ್ ॥ ೧೬ ॥

---

೧೩. ರತಿಸಹಿತ ಮನ್ಮಥನನ್ನು ಮುಖದಲ್ಲಿ ನ್ಯಾಸಮಾಡಿ, ಪುಣ್ಯಾಗಣಪತಿಯನ್ನು ಬಲಕಿವಿಯಮೇಲ್ಭಾಗದಲ್ಲಿಯೂ, ನಿಧಿಯನ್ನು ಕಿವಿಕಪೋಲಗಳ ಮಧ್ಯದಲ್ಲಿಯೂ, ನ್ಯಾಸಮಾಡಬೇಕು.

೧೪-೧೫. ಮುಖದಲ್ಲಿ ಮೂಲಮಂತ್ರವನ್ನು ನ್ಯಾಸಮಾಡಬೇಕು. (ಇಲ್ಲಿ ಮುಖ ಎಂಬುದರಿಂದ ಗಡ್ಡವನ್ನೂ ತೆಗೆದುಕೊಳ್ಳಬೇಕು) ಪುನಃ ಇವುಗಳನ್ನು ಶರೀರದಲ್ಲಿ ಕುತ್ತಿಗೆಯಮೂಲಭಾಗ, ಎರಡುಸ್ತನಗಳು, ಎರಡುಭುಜ, ಹೃದಯಕಮಲ, ಬಲಭುಜ, ಎರಡುಪಾರ್ಶ್ವಗಳು, ನಾಭಿ, ಹಣೆ, ಹೊಟ್ಟೆಯ ಪಕ್ಕೆಗಳು, ಭುಜಪಾರ್ಶ್ವ, ಬೆನ್ನಿನ ಅಧೋಭಾಗ, ಮನಸ್ಸು ಇವುಗಳಲ್ಲಿ ನ್ಯಾಸಮಾಡಬೇಕು.

೧೬. ವಿಧ್ಯುಕ್ತಲಕ್ಷಣಯುಕ್ತರಾದ ಬ್ರಹ್ಮಾಣೀ ಮುಂತಾದವರನ್ನು ಶರೀರದಲ್ಲಿ ನ್ಯಾಸಮಾಡಿ, ಮೂಲಮಂತ್ರದಿಂದ ಸರ್ವಾಂಗನ್ಯಾಸಮಾಡಿ, ದೇವಿಯನ್ನು ಧ್ಯಾನಿಸಬೇಕು.

ಉದ್ಯದ್ದಿವಾಕರನಿಭಾಂ ತುಂಗೋರೋಜಾಂ ತ್ರಿಲೋಚನಾಂ ।
ಸ್ಮೇರಾಸ್ಯಾಮಿಂದುಮುಕುಟಾಂ ವರಪಾಶಾಂಕುಶಾಭಯಾಂ ॥ ೧೭ ॥

ರದಲಕ್ಷಂ ಜಪೇನ್ಮಂತ್ರಂ ತ್ರಿಮಧ್ವಕ್ತೈರ್ಹುನೇತ್ತತಃ ।
ಅಷ್ಟದ್ರವ್ಯೈರ್ದಶಾಂಶೇನ ಬ್ರಹ್ಮವೃಕ್ಷಸಮಿದ್ವರೈಃ ॥ ೧೮ ॥

ದ್ರಾಕ್ಷಾಖರ್ಜೂರವಾತಾಸಶರ್ಕರಾನಾಲಿಕೇರಕಂ ।
ತಂಡುಲಾಜ್ಯತಿಲಂ ವಿಪ್ರ ದ್ರವ್ಯಾಷ್ಟಕಮುದಾಹೃತಂ ॥ ೧೯ ॥

ದದ್ಯಾದರ್ಘ್ಯಂ ದಿನೇಶಾಯ ತತ್ರ ಸಂಚಿಂತ್ಯ ಪಾರ್ವತೀಂ ।
ಪದ್ಮಮಷ್ಟದಲಂ ಬಾಹ್ಯೇ ವೃತ್ತಂ ಷೋಡಶಭಿರ್ದಲೈಃ ॥ ೨೦ ॥

---

೧೭. ಧ್ಯಾನ ;—ಉದಯಿಸುತ್ತಿರುವ ಸೂರ್ಯನಿಗೆ ಸಮಾನಳು, ಉನ್ನತ ಸ್ತನವುಳ್ಳವಳು, ಮೂರುಕಣ್ಣುಳ್ಳವಳು, ಮಂದಹಾಸಮುಖಿಯು, ಚಂದ್ರ ಕಿರೀಟೆಯು, ವರಮುದ್ರೆ, ಪಾಶ, ಅಂಕುಶ, ಅಭಯಮುದ್ರೆಗಳನ್ನು ಕೈಗಳಲ್ಲಿ ಧರಿಸಿರುವವಳೂ ಆದ ದೇವಿಯನ್ನು ಧ್ಯಾನಿಸಬೇಕು.

೧೮. ಬಳಿಕ ಈ ಮಂತ್ರವನ್ನು ಮೂವತ್ತೆರಡುಲಕ್ಷ ಜಪಿಸಿ, ಆಜ್ಯಾದಿ ಮಧುತ್ರಯಸಹಿತವಾಗಿ ಅಷ್ಟದ್ರವ್ಯ ಮತ್ತು ಬ್ರಹ್ಮವೃಕ್ಷದ (ಕಗ್ಗಿಮರ) ಸಮಿತ್ತುಗಳಿಂದ ಮೂರುಲಕ್ಷ ಇಪ್ಪತ್ತುಸಾವಿರ ಹೋಮಮಾಡಬೇಕು.

೧೯. ದ್ರಾಕ್ಷಿ, ಖರ್ಜೂರ, ಬಾದಾಮಿ, ಸಕ್ಕರೆ, ಕೊಬ್ಬರಿ, ಅಕ್ಕಿ, ತುಪ್ಪ ಮತ್ತು ಎಳ್ಳು ಇವು ಅಷ್ಟದ್ರವ್ಯವೆಂದು ಉಕ್ತವಾಗಿವೆ.

೨೦-೨೧. ಅನಂತರ ಪಾರ್ವತಿಯನ್ನು ಧ್ಯಾನಿಸಿ, ಸೂರ್ಯನಿಗೆ ಅರ್ಘ್ಯ ಯನ್ನು ಕೊಡಬೇಕು.

ಹದಿನಾರುದಳಗಳಿಂದ ಸುತ್ತಲ್ಪಟ್ಟ, ಎಂಟುದಳಗಳುಳ್ಳ, ಪದ್ಮವನ್ನು ಬರೆಯಬೇಕು. ಕೋಶಮಧ್ಯದಲ್ಲಿ ಅತ್ಯಂತಸುಂದರವಾದ ಷಟ್ಕೋಣಮಂಡಲ

ವಿಲಿಖೇತ್ಕರ್ಣಿಕಾಮಧ್ಯೇ ಷಟ್ಕೋಣಮತಿಸುಂದರಂ ।
ತತಃ ಸಂಪೂಜಯೇತ್ಪೀಠಂ ನವಶಕ್ತಿಸಮನ್ವಿತಂ ॥ ೨೧ ॥

ಜಯಾಖ್ಯಾ ವಿಜಯಾ ಪಶ್ಚಾದಜಿತಾಹ್ವಾಽಪರಾಜಿತಾ ।
ನಿತ್ಯಾ ವಿಲಾಸಿನೀ ದೋಗ್ಧ್ರೀತ್ಯಘೋರಾ ಮಂಗಲಾ ನವ ॥ ೨೨ ॥

ಬೀಜಾಢ್ಯಮಾಸನಂ ದತ್ವಾ ಮೂರ್ತಿಂ ತೇನೈವ ಕಲ್ಪಯೇತ್ ।
ತಸ್ಯಾಂ ಸಂಪೂಜಯೇದ್ದೇವೀಮಾವಾಹ್ಯಾವರಣೈಃ ಕ್ರಮಾತ್ ॥ ೨೩ ॥

ಮಧ್ಯಪ್ರಾಗ್ಯಾಮ್ಯಸೌಮ್ಯೇಷು ಪೂಜಯೇದಂಗದೇವತಾಃ ।
ಷಟ್ಕೋಣೇಷು ಯಜೇನ್ಮಂತ್ರೀ ಪಶ್ಚಾನ್ಮಿಥುನದೇವತಾಃ ॥ ೨೪ ॥

ಇಂದ್ರಕೋಣೇ ಲಸದ್ದಂಡಕುಂಡಿಕಾಕ್ಷಗುಣಾಭಯಾಂ ।
ಗಾಯತ್ರೀಂ ಪೂಜಯೇನ್ಮಂತ್ರೀ ಬ್ರಹ್ಮಾಣಮಪಿ ತಾದೃಶಂ ॥ ೨೫ ॥

---

ವನ್ನೂ, ಅದರ ಹೊರಭಾಗದಲ್ಲಿ ನವಶಕ್ತಿಸಹಿತವಾದ ಪೀಠವನ್ನು ರಚಿಸಿ ಅಲ್ಲಿ ದೇವಿಯನ್ನು ಪೂಜಿಸಬೇಕು.

೨೨. ಜಯ, ವಿಜಯ, ಅಜಿತ, ಅಪರಾಜಿತ, ನಿತ್ಯಾ, ವಿಲಾಸಿನೀ, ದೊಗ್ಧ್ರೀ, ಅಘೋರಾ ಮತ್ತು ಮಂಗಲಾ ಎಂಬಿವೇ ನವಶಕ್ತಿಗಳು.

೨೩. ಬೀಜಯುಕ್ತವಾದ ಆಸನವನ್ನು ಕೊಟ್ಟು, ಅದರಿಂದಲೇ ಮೂರ್ತಿಯನ್ನು ಕಲ್ಪಿಸಿ, ಅದರಲ್ಲಿ ಕ್ರಮವಾಗಿ ಬಾಹ್ಯಾವರಣಗಳೊಡನೆ ದೇವಿಯನ್ನು ಪೂಜಿಸಬೇಕು.

೨೪. ಮಧ್ಯ, ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮ ದಿಕ್ಕುಗಳಲ್ಲಿ ಅಂಗದೇವತೆಗಳನ್ನು ಪೂಜಿಸಬೇಕು. ಬಳಿಕ ಮಂತ್ರಿಯು ಷಟ್ಕೋಣಗಳಲ್ಲಿ ದ್ವಂದ್ವ ದೇವತೆಗಳನ್ನು ಪೂಜಿಸಬೇಕು.

೨೫. ಇಂದ್ರಕೋಣ ಎಂದರೆ ಆಗ್ನೇಯಮೂಲೆಯಲ್ಲಿ ಹೊಳೆಯುತ್ತಿರುವ ದಂಡ, ಕಮಂಡಲು, ಜಪಮಾಲೆ, ಅಭಯಮುದ್ರೆಗಳನ್ನು ಕರದಲ್ಲಿ ಧರಿಸಿರುವ, ಗಾಯತ್ರೀ ಮತ್ತು ಅಂತಹ ಬ್ರಹ್ಮನನ್ನೂ ಸಹ ಪೂಜಿಸಬೇಕು.

ರಕ್ಷಃಕೋಣೇ ಶಂಖಚಕ್ರಗದಾಪಂಕಜಧಾರಿಣೀಂ ।
ಸಾವಿತ್ರೀಂ ಪೀತವಸನಾಂ ಯಜೇದ್ವಿಷ್ಣುಂ ಚ ತಾದೃಶಂ ॥ ೨೬ ॥

ವಾಯುಕೋಣೇ ಪರಶ್ವಕ್ಷಮಾಲಾಭಯವರಾನ್ವಿತಾಂ ।
ಯಜೇತ್ಸರಸ್ವತೀಮಚ್ಛಾಂ ರುದ್ರಂ ತಾದೃಶಲಕ್ಷಣಂ ॥ ೨೭ ॥

ವಹ್ನಿಕೋಣೇ ಯಜೇದ್ರತ್ನಕುಂಭಂ ಮಣಿಕರಂಡಕಂ ।
ಕರಾಭ್ಯಾಂ ಬಿಭ್ರತೀಂ ಪೀತಾಂ ತುಂದಿಲಂ ಧನದಾಯಕಂ ॥ ೨೮ ॥

ಆಲಿಂಗ್ಯ ಸವ್ಯಹಸ್ತೇನ ವಾಮೇ ತಾಂಬೂಲಧಾರಿಣೀಂ ।
ಧನದಾಂತಸಮಾರೂಢಾಂ ಮಹಾಲಕ್ಷ್ಮೀಂ ಪ್ರಪೂಜಯೇತ್ ॥ ೨೯ ॥

ಪಶ್ಚಿಮೇ ಮದನಂ ಬಾಣಪಾಶಾಂಕುಶಶರಾಸನಾನ್ ।
ಧಾರಯಂತಂ ಜಪಾರಕ್ತಂ ಪೂಜಯೇದ್ರಕ್ತಭೂಷಣಂ ॥ ೩೦ ॥

೨೬. ರಕ್ಷಃ ಕೋಣ ಎಂದರೆ ದಕ್ಷಿಣದಿಕ್ಕಿನ ಮೂಲೆಯಲ್ಲಿ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿರುವ, ಪೀತಾಂಬರಧಾರಿಯಾದ ಸಾವಿತ್ರೀ ಮತ್ತು ಅಂತಹ ವಿಷ್ಣು ಇವರಿಬ್ಬರನ್ನೂ ಪೂಜಿಸಬೇಕು.

೨೭. ವಾಯುವ್ಯಮೂಲೆಯಲ್ಲಿ ಕೊಡಲಿ, ಅಕ್ಷಮಾಲಾ, ಅಭಯಮುದ್ರೆ, ವರಮುದ್ರೆಗಳನ್ನು ಧರಿಸಿರುವ, ಸ್ವಚ್ಛಳಾದ ಸರಸ್ವತೀ ಮತ್ತು ಅಂತಹ ರುದ್ರ ಇವರಿಬ್ಬರನ್ನೂ ಪೂಜಿಸಬೇಕು.

೨೮-೨೯. ಆಗ್ನೇಯಮೂಲೆಯಲ್ಲಿ ರತ್ನಕಲಶ ಮತ್ತು ಮಣಿಯ ಪೆಟ್ಟಿಗೆಗಳನ್ನು ಎರಡುಕೈಗಳಲ್ಲಿ ಹಿಡಿದುಕೊಂಡಿರುವ ಹಳದೀಬಣ್ಣದಿಂದ ಯುಕ್ತಳಾದ, ಬೊಜ್ಜುಬೆಳಸಿಕೊಂಡಿರುವ ಕುಬೇರನನ್ನು ಬಲಗೈಯಿಂದ ಆಲಿಂಗಿಸಿಕೊಂಡು, ಎಡಗೈಯಲ್ಲಿ ತಾಂಬೂಲವನ್ನು ಧರಿಸಿರುವ, ಕುಬೇರನ ತೊಡೆಯ ಮೇಲೆ ಕುಳಿತಿರುವ ಮಹಾಲಕ್ಷ್ಮಿಯನ್ನು ಪೂಜಿಸಬೇಕು.

೩೦-೩೧. ಪಶ್ಚಿಮದಿಕ್ಕಿನಲ್ಲಿ ಬಾಣ, ಪಾಶ, ಅಂಕುಶ, ಧನುಸ್ಸುಗಳನ್ನು ಧರಿಸಿರುವ, ಜಪಾಕುಸುಮದಂತೆ ಕೆಂಪಗಿರುವ ರಕ್ತಾಭರಣಗಳನ್ನಿಟ್ಟು

**ಸವ್ಯೇನ ಪತಿಮಾಶ್ಲಿಷ್ಯ ವಾಮೇನೋತ್ಪಲಧಾರಿಣೀಂ ।**
**ಪಾಣಿನಾ ರಮಣಾಂಕಸ್ಥಾಂ ರತಿಂ ಸಮ್ಯಕ್ಸಮರ್ಚಯೇತ್　　॥ ೩೧ ॥**

**ಐಶಾನ್ಯೇ ಪೂಜಯೇತ್ಸಮ್ಯಕ್ ವಿಘ್ನರಾಜಂ ಪ್ರಿಯಾನ್ವಿತಂ ।**
**ಸೃಣಿಪಾಶಧರಂ ಕಾಂತಾವರಾಂಗಸ್ಪೃಕ್ಕರಾಂಗುಲಿಂ　　॥ ೩೨ ॥**

**ಮಾಧ್ವೀಪೂರ್ಣಕಪಾಲಾಢ್ಯಂ ವಿಘ್ನರಾಜಂ ದಿಗಂಬರಂ ।**
**ಪುಷ್ಕರೇ ವಿಗಲದ್ರತ್ನಸ್ಫುರಚ್ಚಷಕಧಾರಿಣಂ　　॥ ೩೩ ॥**

**ಸಿಂದೂರಸದೃಶಾಕಾರಾಮುದ್ದಾಮಮದವಿಭ್ರಮಾಂ ।**
**ಧೃತರಕ್ತೋತ್ಪಲಾಮನ್ಯಪಾಣಿನಾ ತು ಧ್ವಜಸ್ಪೃಶಾಂ　　॥ ೩೪ ॥**

**ಆಶ್ಲಿಷ್ಟಕಾಂತಾಮರುಣಾಂ ಪುಷ್ಟಿಮರ್ಚೇದ್ದಿಗಂಬರಾಂ ।**
**ಕರ್ಣಿಕಾಯಾಂ ನಿಧೀ ಪೂಜ್ಯೌ ಷಟ್ಕೋಣಸ್ಯಾಥಪಾರ್ಶ್ವಯೋಃ ॥ ೩೫ ॥**

---

ಕೊಂಡಿರುವ, ಗಂಡನಾದ ಮನ್ಮಥನನ್ನು ಬಲಗೈಯಿಂದ ಆಲಂಗಿಸಿ, ಎಡಗೈಯಲ್ಲಿ ಕಮಲವನ್ನು ಹಿಡಿದಿರುವ, ಗಂಡನ ತೊಡೆಯಮೇಲೆ ಕುಳಿತಿರುವ ರತಿದೇವಿಯನ್ನು ಚೆನ್ನಾಗಿ ಪೂಜಿಸಬೇಕು.

೩೨-೩೩. ಈಶಾನ್ಯಮೂಲೆಯಲ್ಲಿ ಪ್ರಿಯೆಯಿಂದ ಸಹಿತನಾದ, ಅಂಕುಶ ಪಾಶಗಳನ್ನು ಕರದಲ್ಲಿ ಧರಿಸಿರುವ, ಕೈಬೆರಳುಗಳನ್ನು ಕಾಂತೆಯಶಿರಸ್ಸಿನಲ್ಲಿಟ್ಟಿರುವ, ಮಧುವಿನಿಂದ ಪೂರ್ಣವಾದ ಕಪಾಲಸಹಿತನಾದ, ವಿಘ್ನಾಧಿಪತಿಯಾದ, ವಸ್ತ್ರವಿಲ್ಲದ, ಸೊಂಡಲಿನ ಕೊನೆಯಭಾಗದಲ್ಲಿ ಸ್ರವಿಸುತ್ತಿರುವ ರತ್ನಗಳುಳ್ಳ ಪಾತ್ರೆಯನ್ನು ಧರಿಸಿರುವ, ವಿಘ್ನೇಶ್ವರನನ್ನು ಚೆನ್ನಾಗಿ ಪೂಜಿಸಬೇಕು.

೩೪-೩೫. ಸಿಂಧೂರ = ಚಂದ್ರ ಪುಡಿಗೆ ಸಮಾನವಾದ ಆಕಾರವುಳ್ಳ, ಹೆಚ್ಚು ಮದದಿಂದ ವಿಭ್ರಮೆ ಗೊಂಡಿರುವ, ರಕ್ತಕಮಲವನ್ನು ಧರಿಸಿರುವ, ಇನ್ನೊಂದು ಕೈಯಿಂದ ಧ್ವಜವನ್ನು ಹಿಡಿದಿರುವ, ಕಾಂತನನ್ನಾಲಂಗಿಸಿಕೊಂಡಿ

ಅಂಗಾನಿ ಕೇಸರೇಷ್ವೇತಾಃ ಪಶ್ಚಾತ್ಪತ್ರೇಷು ಪೂಜಯೇತ್ ।
ಅನಂಗಕುಸುಮಾ ಪಶ್ಚಾದ್ದ್ವಿತೀಯಾನಂಗಮೇಖಲಾ ॥ ೩೬ ॥

ಅನಂಗಗಮನಾ ತದ್ವದನಂಗಮದನಾತುರಾ ।
ಭುವನಪಾಲಾ ಗಗನವೇಗಾ ಷಷ್ಠೀ ಚೈವ ತತಃ ಪರಂ ॥ ೩೭ ॥

ಶಶಿಲೇಖಾ ಗಗನಲೇಖಾ ಚೇತ್ಯಷ್ಟೌ ಯತ್ರ ಶಕ್ತಯಃ ।
ಖಡ್ಗಖೇಟಕಧಾರಿಣ್ಯಃ ಶ್ಯಾಮಾಃ ಪೂಜ್ಯಾಶ್ಚ ಮಾತರಃ ॥ ೩೮ ॥

ಪದ್ಮಾದ್ಬಹಿಃ ಸಮಭ್ಯರ್ಚ್ಯಾಃ ಶಕ್ತಯಃ ಪರಿಚಾರಿಕಾಃ ।
ಪ್ರಥಮಾನಂಗದ್ವಯಾಸ್ಯಾದನಂಗಮದನಾ ತತಃ ॥ ೩೯ ॥

ಮದನಾತುರಾ ಭುವನವೇಗಾ ತತೋ ಭುವನಪಾಲಿಕಾ ।
ಸ್ಯಾತ್ಸರ್ವಶಿಶಿರಾನಂಗವೇದನಾನಂಗಮೇಖಲಾ ॥ ೪೦ ॥

---

ರುವ, ಕೆಂಪಗಿರುವ, ದಿಗಂಬರಳಾದ ಪುಷ್ಟಿಯನ್ನು ಪೂಜಿಸಬೇಕು. ಅನಂತರ ಕೋಶದಲ್ಲಿನ ಷಟ್ಕೋಣದ ಪಾರ್ಶ್ವಗಳಲ್ಲಿ ಎರಡು ನಿಧಿಗಳನ್ನು ಪೂಜಿಸಬೇಕು.

೩೬-೩೮. ಕೇಸರಗಳಲ್ಲಿ ಅಂಗಗಳನ್ನು ಪೂಜಿಸಬೇಕು. ತರುವಾಯ ಪತ್ರಗಳಲ್ಲಿ ಅನಂಗ ಕುಸುಮಾ, ಎರಡನೆಯದಾದ ಅನಂಗಮೇಖಲಾ, ಅನಂಗ ಗಮನಾ, ಅನಂಗಮದನಾತುರಾ, ಭುವನಪಾಲಾ, ಆರನೆಯದಾದ, ಗಗನ ವೇಗಾ, ಬಳಿಕ ಶಶಿಲೇಖಾ ಮತ್ತು ಗಗನಲೇಖಾ ಎಂಬೀ ಎಂಟುಶಕ್ತಿಗಳನ್ನು ಪೂಜಿಸಬೇಕು. ಕತ್ತಿ ಖೇಟಕಗಳನ್ನು ಧರಿಸಿರುವ, ಶ್ಯಾಮವರ್ಣದ ಮಾತೃ ಗಳನ್ನು ಪೂಜಿಸಬೇಕು.

೩೯-೪೦. ಅನಂತರ ಹೊರಭಾಗದಲ್ಲಿ ಪರಿಚಾರಕಶಕ್ತಿಗಳು ಪೂಜಿಸ ಲ್ಪಡಬೇಕು. ಅವುಯಾವುವೆಂದರೆ :- ಅನಂಗಕುಸುಮಾ, ಅನಂಗಲೇಖಾ, ಅನಂಗಮದನಾ, ಮದನಾತುರಾ, ಭುವನವೇಗಾ, ಭುವನಪಾಲಿಕಾ, ಸರ್ವ ಶಶಿರಾನಂಗವೇದನಾ ಮತ್ತು ಅನಂಗಮೇಖಲಾ ಇವು ಪರಿಚಾರಕಶಕ್ತಿಗಳು.

ಚಷಕಂ ತಾಲವೃಂತಂ ಚ ತಾಂಬೂಲಂ ಛತ್ರಮುಜ್ವಲಂ ।
ಚಾಮರೇ ಚಾಂಶುಕಂ ಪುಷ್ಪಂ ಬಿಭ್ರಾಣಾಃ ಕರಪಂಕಜೈಃ　　॥ ೪೧ ॥

ಸರ್ವಾಭರಣಸಂದೀಪ್ತಾನ್ ಲೋಕಪಾಲಾನ್ಬಹಿರ್ಯಜೇತ್ ।
ವಜ್ರಾದೀನ್ಯಪಿ ತದ್ಬಾಹ್ಯೇ ದೇವೀಮಿತ್ಥಂ ಪ್ರಪೂಜಯೇತ್　　॥ ೪೨ ॥

ಮಂತ್ರೀ ತ್ರಿಮಧುರೋಪೇತೈರ್ಹುತ್ವಾಶ್ವತ್ಥಸಮಿದ್ವರೈಃ ।
ಬ್ರಾಹ್ಮಣಾನ್ವಶಯೇಚ್ಛೀಘ್ರಂ ಪಾರ್ಥಿವಾನ್ಪದ್ಮಹೋಮತಃ　　॥ ೪೩ ॥

ಪಲಾಶಪುಷ್ಪೈಸ್ತತ್ಪತ್ನೀಂ ಮಂತ್ರಿಣಃ ಕುಮುದೈರಪಿ ।
ಪಂಚವಿಂಶತಿಧಾ ಜಪ್ತೈರ್ಜಲೈಃ ಪ್ರಾತರ್ದಿನೇದಿನೇ　　॥ ೪೪ ॥

---

೪೧. ಈ ಶಕ್ತಿಗಳು ಕ್ರಮವಾಗಿ ಪಾತ್ರೆ, ಬೀಸಣಿಗೆ, ತಾಂಬೂಲ, ಪ್ರಕಾಶಮಾನವಾದ ಛತ್ರಿ, ಚಾಮರದ್ವಯ, ವಸ್ತ್ರ ಮತ್ತು ಪುಷ್ಪ ಇವುಗಳನ್ನು ಹಸ್ತಕಮಲಗಳಲ್ಲಿ ಧರಿಸಿರುವರು.

೪೨. ಬಳಿಕ ಸಕಲಾಭರಣಗಳಿಂದ ಪ್ರಕಾಶಮಾನರಾದ ಲೋಕಪಾಲಕರನ್ನು ಹೊರಭಾಗದಲ್ಲಿ ಪೂಜಿಸಬೇಕು. ಅದರ ಹೊರಗೆ ಅವರ ವಜ್ರಾದ್ಯಾಯುಧಗಳನ್ನು ಪೂಜಿಸಬೇಕು. ಈರೀತಿಯಾಗಿ ಭುವನೇಶ್ವರೀ ದೇವಿಯನ್ನು ಪೂಜಿಸಬೇಕು.

೪೩. ಈರೀತಿ ಆಚರಿಸಿ ಮಂತ್ರಸಿದ್ಧಿಯನ್ನು ಪಡೆದವನು ಸಕ್ಕರೆ ಮುಂತಾದ ಮೂರು ಮಧುರ ವಸ್ತುಗಳಿಂದ ಸಹಿತವಾದ ಅರಳಿಯಸಮಿತ್ತುಗಳಿಂದ ಹೋಮಮಾಡಿದರೆ ಬಹುಬೇಗ ಬ್ರಾಹ್ಮಣರನ್ನು ವಶಪಡಿಸಿಕೊಳ್ಳಬಹುದು.

೪೪. ಪದ್ಮಹೋಮದಿಂದ ಕ್ಷತ್ರಿಯರನ್ನೂ (ರಾಜರನ್ನೂ), ಮುತ್ತುಗದ ಹೂವಿನಹೋಮದಿಂದ ಅವರ ಪತ್ನಿಯರನ್ನೂ, ಕುಮುದಪುಷ್ಪ ಹೋಮಗಳಿಂದ ಮಂತ್ರಿಗಳನ್ನೂ ವಶಪಡಿಸಿ ಕೊಳ್ಳಬಹುದು.

ಆತ್ಮಾನಮಭಿಷಿಂಚೇದ್ಯಃ ಸರ್ವಸೌಭಾಗ್ಯವಾನ್ಭವೇತ್ ।
ಪಂಚವಿಂಶತಿಧಾ ಜಪ್ತಂ ಜಲಂ ಪ್ರಾತಃ ಪಿಬೇನ್ನರಃ ॥ ೪೫ ॥

ಅವಾಪ್ಯ ಮಹತೀಂ ಪ್ರಜ್ಞಾಂ ಕವೀನಾಮಗ್ರಣೀರ್ಭವೇತ್ ।
ಕರ್ಪೂರಾಗರುಸಂಯುಕ್ತಕುಂಕುಮಂ ಸಾಧು ಸಾಧಿತಂ ॥ ೪೬ ॥

ಗೃಹೀತ್ವಾ ತಿಲಕಂ ಕುರ್ಯಾದ್ರಾಜವಶ್ಯಮನುತ್ತಮಂ ।
ಶಾಲಿಪಿಷ್ಟಮಯೀಂ ಕೃತ್ವಾ ಪುತ್ಥಲೀಂ ಮಧುರಾನ್ವಿತಾಂ ॥ ೪೭ ॥

ಜಪ್ತ್ವಾಂ ಪ್ರತಿಷ್ಠಿತಪ್ರಾಣಾಂ ಭಕ್ಷಯೇದ್ರವಿವಾಸರೇ ।
ವಶಂ ನಯತಿ ರಾಜಾನಂ ನಾರೀಂ ವಾ ನರಮೇವ ಚ ॥ ೪೮ ॥

---

೪೪-೪೫. ಪ್ರತಿದಿನವೂ, ಈ ಮಂತ್ರವನ್ನು ಇಪ್ಪತ್ತೈದಾವರ್ತಿ ಜಪ ಮಾಡಿ ಅಭಿಮಂತ್ರಿಸಿದ ನೀರಿನಿಂದ ಬೆಳಗ್ಗೆ ತನಗೆ ಅಭಿಷೇಕಮಾಡಿಸಿಕೊಳ್ಳುವವನು ಸಕಲ ಸೌಭಾಗ್ಯಗಳನ್ನೂ ಪಡೆಯುವನು.

೪೫-೪೬. ಇಪ್ಪತ್ತೈದಾವರ್ತಿ ಈ ಮಂತ್ರಜಪದಿಂದ ಅಭಿಮಂತ್ರಿಸಿದ ನೀರನ್ನು ಬೆಳಗ್ಗೆ ಕುಡಿಯುವ ಮನುಷ್ಯನು ಅಧಿಕಜ್ಞಾನವನ್ನು ಹೊಂದಿ ಕವಿ ಶ್ರೇಷ್ಠನಾಗುವನು.

೪೬-೪೭. ಕರ್ಪೂರ, ಅಗರುಗಳಿಂದ ಸಹಿತವಾದ ಕುಂಕುಮವನ್ನು ಚೆನ್ನಾಗಿ ಕಲೆಸಿ ಅದರಿಂದ ತಿಲಕ ಹಚ್ಚುವುದು ಉತ್ತಮರಾಜವಶ್ಯಕರವು.

೪೭-೪೮. ಸಕ್ಕರೆ ತುಪ್ಪಗಳನ್ನು ಹಾಕಿ ಅಕ್ಕಿಹಿಟ್ಟಿನಿಂದ ಬೊಂಬೆಯನ್ನುಮಾಡಿ, ಮಂತ್ರಜಪದಿಂದ ಅಭಿಮಂತ್ರಿಸಿ, ಪ್ರಾಣಪ್ರತಿಷ್ಠೆಮಾಡಿ, ಅದನ್ನು ಭಾನುವಾರದದಿನ ತಿಂದರೆ ದೊರೆ, ಸ್ತ್ರೀ ಅಥವಾ ಪುರುಷನೂ ಸಹ ಅಧೀನನಾಗುವನು.

ಕಂಠಮಾತ್ರೋದಕೇ ಸ್ಥಿತ್ವಾ ವೀಕ್ಷ್ಯ ತೋಯಗತಂ ರವಿಂ ।
ತ್ರಿಸಹಸ್ರಂ ಜಪೇನ್ಮಂತ್ರಂ ಕನ್ಯಾಮಿಷ್ಟಾಂ ಲಭೇತ್ತತಃ ॥ ೪೯ ॥

ಅನ್ನಂ ತನ್ಮಂತ್ರಿತಂ ಮಂತ್ರೀ ಭುಂಜೀತ ಶ್ರೀಪ್ರಸಿದ್ಧಯೇ ।
ಲಿಖಿತಾ ಭಸ್ಮನಾ ಮಾಯಾಂ ಸಸಾಧ್ಯಾಂ ಫಲಕಾದಿಷು ॥ ೫೦ ॥

ತತ್ಕಾಲಂ ದರ್ಶಯೇದ್ಯಂತ್ರಂ ಸುಖಂ ಸೂಯೇತ ಗರ್ಭಿಣೀ ।
ಭುವನೇಶೀಯಮಾಖ್ಯಾತಾ ಸಹಸ್ರಭುಜಸಂಭವಾ ॥ ೫೧ ॥

ಭುಕ್ತಿಮುಕ್ತಿಪ್ರದಾ ನೃಣಾಂ ಸ್ಮರ್ತೄಣಾಂ ದ್ವಿಜಸತ್ತಮ ।
ತತಃ ಕಲ್ಪಾಂತರೇ ವಿಪ್ರ ಕದಾಚಿನ್ಮಹಿಷಾಸುರಃ ॥ ೫೨ ॥

---

೪೯. ಕುತ್ತಿಗೆಯಷ್ಟು ಆಳವಾದ ನೀರಿನಲ್ಲಿ ನಿಂತು, ಅದರಲ್ಲಿ ಪ್ರತಿಬಿಂಬಿಸಿರುವ ಸೂರ್ಯನನ್ನು ನೋಡಿ ಈ ಮಂತ್ರವನ್ನು ಮೂರುಸಾವಿರ ಜಪಿಸಿದರೆ ತನಗೆ ಬೇಕಾದ ಕನ್ಯೆಯು ಲಭಿಸುವುದು.

೫೦-೫೧. ಆ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಅನ್ನವನ್ನು ಮಂತ್ರಿಯು ಸಂಪತ್ತನ್ನು ಪಡೆಯುವುದಕ್ಕಾಗಿ ತಿನ್ನಬೇಕು. ಹಲಗೆ ಮುಂತಾದುವುಗಳಲ್ಲಿ ಸಾಧ್ಯನಾಮ ಸಹಿತವಾದ "ಹ್ರೀಂ" ಎಂಬ ಮಾಯಾ ಬೀಜಯುಕ್ತವಾದ ಯಂತ್ರವನ್ನು ಬರೆದು ತೋರಿಸಿದಕೂಡಲೇ ಗರ್ಭಿಣಿಯು ಸುಖವಾಗಿ ಪ್ರಸವಿಸುವಳು.

೫೧-೫೨. ಬ್ರಾಹ್ಮಣ ಶ್ರೇಷ್ಠನಾದ ನಾರದನೇ! ಸಹಸ್ರಭುಜ ಸಂಭವವುಳ್ಳ ಈ ಭುವನೇಶ್ವರಿಯು ತನ್ನನ್ನು ಸ್ಮರಿಸುವ ಜನರಿಗೆ ಭೋಗ ಮೋಕ್ಷಪ್ರದಳೆಂದು ಪ್ರಖ್ಯಾತಳಾಗಿರುವಳು. ಅಂತಹ ಭುವನೇಶ್ವರಿಯ ಮಂತ್ರವಿಧಾನವನ್ನು ನಿನಗೆ ಹೇಳಿರುವೆನು.

**ಬಭೂವ ಲೋಕಪಾಲಾಂಸ್ತು ಜಿತ್ವಾ ಭುಂಕ್ತೇ ಜಗತ್ರಯಂ |**
**ತತಸ್ತತ್ಪೀಡಿತಾ ದೇವಾ ವೈಕುಂಠಂ ಶರಣಂ ಯಯುಃ || ೫೩ ||**

**ತತೋ ದೇವೀ ಮಹಾಲಕ್ಷ್ಮೀಶ್ಚಕ್ರಾದ್ಯಂಗೋತ್ಥತೇಜಸಾ |**
**ಶ್ರೀರ್ಬಭೂವ ಮುನಿಶ್ರೇಷ್ಠ ಮೂರ್ತಾ ವ್ಯಾಪ್ತಜಗತ್ರಯಾ || ೫೪ ||**

**ಸ್ವಯಂ ಸಾ ಮಹಿಷಾದೀಂಸ್ತು ನಿಪತ್ಯ ಜಗದೀಶ್ವರೀ |**
**ಅರವಿಂದವನಂ ಪ್ರಾಪ್ತಾ ಭಜತಾಮಿಷ್ಟದಾಯಿನೀ || ೫೫ ||**

**ತಸ್ಯಾಃ ಸಮರ್ಚನಂ ವಕ್ಷ್ಯೇ ಸಂಕ್ಷೇಪೇಣ ಶೃಣು ದ್ವಿಜ |**
**ಮೃತ್ಯುಕ್ರೋಧಿನೀ ಗುರುಣಾ ಬಿಂದುಭೂಷಿತಮಸ್ತಕಾ || ೫೬ ||**

---

೫೨-೫೩. ಬ್ರಾಹ್ಮಣನೇ! ಕಲ್ಪಾಂತರದಲ್ಲಿ ಒಂದಾನೊಂದು ಕಾಲದಲ್ಲಿ ಮಹಿಷಾಸುರನೆಂಬ ಅಸುರನಿದ್ದನು. ಅವನು ಇಂದ್ರಾದಿ ಲೋಕಪಾಲಕರನ್ನು ಜಯಿಸಿ ಮೂರು ಲೋಕಗಳನ್ನೂ ಅನುಭವಿಸುತ್ತಿದ್ದನು. ಆಗ ಅವನಿಂದ ಹಿಂಸಿಸಲ್ಪಟ್ಟವರಾಗಿ ದೇವತೆಗಳು ವೈಕುಂಠಲೋಕಕ್ಕೆ ಹೋಗಿ ಮಹಾಲಕ್ಷ್ಮೀ ದೇವಿಯನ್ನು ಮರೆ ಹೊಕ್ಕರು.

೫೪. ಮುನಿಶ್ರೇಷ್ಠನೇ! ತರುವಾಯ ಮಹಾಲಕ್ಷ್ಮೀದೇವಿಯು ಚಕ್ರ ಮುಂತಾದ ಅಂಗಗಳಿಂದ ಹುಟ್ಟಿದತೇಜಸ್ಸಿನಿಂದ ಮೂರುಲೋಕಗಳನ್ನೂ ವ್ಯಾಪಿಸಿ ಶ್ರೀದೇವಿಯಾಗಿ ಅವತರಿಸಿದಳು.

೫೫. ಆ ಜಗದೀಶ್ವರಿಯು ತಾನೇ ಮಹಿಷಾಸುರ ಮುಂತಾದ ರಾಕ್ಷಸರನ್ನು ಸಂಹರಿಸಿ ಅರವಿಂದವನಕ್ಕೆ ಹೋಗಿ ಅಲ್ಲಿ ತನ್ನನ್ನು ಭಜಿಸುವ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುತ್ತಾ ಇದ್ದಳು.

೫೬-೫೭. ಅಂತಹ ಶ್ರೀದೇವಿಯ ಅರ್ಚನೆಯ ವಿಧಾನವನ್ನು ಸಂಕ್ಷೇಪವಾಗಿ ಹೇಳುವೆನು; ಕೇಳು.

ಬೀಜಮಂತ್ರಃ ಶ್ರಿಯಃ ಪ್ರೋಕ್ತೋ ಭಜತಾಮಿಷ್ಟದಾಯಕಃ ।
ಋಷಿರ್ಭೃಗುರ್ನಿವೃಚ್ಛಂದೋ ದೇವತಾ ಶ್ರೀಃ ಸಮೀರಿತಾ ॥ ೫೭ ॥

ಷಡ್‌ದೀರ್ಘಯುಕ್ತಬೀಜೇನ ಕುರ್ಯಾದಂಗಾನಿ ಷಟ್ ಕ್ರಮಾತ್ ।
ತತೋ ಧ್ಯಾಯೇಜ್ಜಗದ್ವೇದ್ಯಾಂ ಶ್ರಿಯಂ ಸಂಪತ್ತಿದಾಯಿನೀಂ ॥ ೫೮ ॥

ಕಾಂಚನಾಭಾಂ ಗಜೈಃ ಶ್ವೇತೈಶ್ಚತುರ್ಭಿಃ ಸ್ವಕರೋದ್ಧೃತೈಃ ।
ಹಿರಣ್ಮಯಾಮೃತಘಟೈಃ ಸಿಂಚ್ಯಮಾನಾಂ ಸರೋಜಗಾಂ ॥ ೫೯ ॥

ವರಾಭಯಾಬ್ಜಸ್ರಗ್ಹಸ್ತಾಂ ಕ್ಷೌಮವಸ್ತ್ರಾಂ ಕಿರೀಟಿನೀಂ ।
ಸಿದ್ಧಲಕ್ಷಂ ಜಪೇನ್ಮಂತ್ರಂ ತತ್ಸಹಸ್ರಂ ಹುನೇತ್ತಥಾ ॥ ೬೦ ॥

---

ವೃತ್ಯ= ಶ, ಕ್ರೋಧಿನೀ = ರ, ಗುರು = ಈ, ಬಿಂದು = ೦, ಶ+ರ+ಈ+೦= ಶ್ರೀಂ. "ಶ್ರೀಂ" ಎಂಬುದು ಶ್ರೀದೇವಿಯ ಬೀಜಮಂತ್ರವು.

ಅದು ಭಜಿಸುವವರಿಗೆ ಇಷ್ಟಾರ್ಥದಾಯಕವು. ಈ ಮಂತ್ರಕ್ಕೆ ಭೃಗುವು ಋಷಿ. ನಿಚೃತ್ ಎಂಬುದು ಛಂದಸ್ಸು. ಶ್ರೀದೇವಿಯು ದೇವತೆ ಎಂಬುದಾಗಿ ಉಕ್ತವಾಗಿದೆ.

೫೮. ಆ, ಈ, ಊ ಮುಂತಾದ ಆರು ದೀರ್ಘಸ್ವರಯುಕ್ತ ಬೀಜಾಕ್ಷರದಿಂದ ಕ್ರಮವಾಗಿ ಷಡಂಗಗಳನ್ನು ರಚಿಸಬೇಕು. ಅನಂತರ ಜಗದ್ವೇದಿಕೆಯಲ್ಲಿ ಸಂಪತ್ತನ್ನು ಕೊಡುವ ಶ್ರೀದೇವಿಯನ್ನು ಧ್ಯಾನಿಸಬೇಕು.

೫೯-೬೦. ಧ್ಯಾನ:—ಸೊಂಡಲಿನಿಂದ ಸುವರ್ಣದ ಅಮೃತ ಕಲಶಗಳನ್ನು ಎತ್ತಿ ನಾಲ್ಕು ಶ್ವೇತಗಜಗಳಿಂದ ಅಭಿಷೇಕಮಾಡಿಸಿಕೊಳ್ಳಲ್ಪಡುತ್ತಿರುವ ಬಂಗಾರದಂತೆ ಹೊಳೆಯುತ್ತಿರುವ, ಪದ್ಮಸ್ಥಿತಳಾದ, ವರಮುದ್ರೆ, ಅಭಯಮುದ್ರೆ, ಪದ್ಮ, ಮಾಲೆಗಳನ್ನು ಕರದಲ್ಲಿ ಪಿಡಿದಿರುವ, ರೇಷ್ಮೆವಸ್ತ್ರವನ್ನುಟ್ಟಿರುವ, ಕಿರೀಟಧಾರಿಣಿಯಾದ ಶ್ರೀದೇವಿಯನ್ನು ಧ್ಯಾನಿಸಬೇಕು.

**ಸುಗಂಧಕುಸುಮೈರಿಷ್ಟ್ವಾ ಕಮಲೈರ್ಮಧುರಪ್ಲುತೈಃ ।**
**ಮಹಾಲಕ್ಷ್ಮ್ಯೈದಿತೇ ಪೀಠೇ ಮೂರ್ತಿಂ ಮೂಲೇನ ಕಲ್ಪ್ಯ ಚ ॥ ೬೧ ॥**

**ಯಜೇತ್ಪೂರ್ವವದಂಗಾನಿ ದಿಗ್ದಲೇಷ್ವರ್ಚಯೇತ್ತತಃ ।**
**ವಾಸುದೇವಂ ಸಂಕರ್ಷಣಂ ಪ್ರದ್ಯುಮ್ನಮನಿರುದ್ಧಕಂ ॥ ೬೨ ॥**

**ಹಿಮಪೀತತಮಾಲೇಂದ್ರನೀಲಾಭಾನ್ಪೀತವಾಸಸಃ ।**
**ಶಂಖಚಕ್ರಗದಾಪದ್ಮಧಾರಿಣಸ್ತಾಂಶ್ಚತುರ್ಭುಜಾನ್ ॥ ೬೩ ॥**

**ವಿದಿಗಂತೇಷು ಪತ್ರೇಷು ದಮುಕಾದೀನ್ಯಜೇದ್ಗಜಾನ್ ।**
**ದಮುಕಂ ಪುಂಡರೀಕಂ ಚ ಗುಗ್ಗುಲಂ ಚ ಕುರಂಟಕಂ ॥ ೬೪ ॥**

---

ಬಳಿಕ ಈ ಮಂತ್ರವನ್ನು ಹನ್ನೆರಡುಲಕ್ಷ ಜಪಿಸಿ, ಹನ್ನೆರಡುಸಾವಿರ ಹೋಮಮಾಡಬೇಕು.

೬೧-೬೩. ಸಕ್ಕರೆ ಮುಂತಾದ ಮಧುರದ್ರವ್ಯಯುಕ್ತವಾದ, ಸುವಾಸನೆಯುಳ್ಳ ಕಮಲಪುಷ್ಪಗಳಿಂದ ಹೋಮಮಾಡಿ, ಮಹಾಲಕ್ಷ್ಮೀದೇವಿಗೆ ವಿಹಿತವಾದ ಪೀಠದಲ್ಲಿ ಮೂರ್ತಿಯನ್ನು ಮೂಲಮಂತ್ರದಿಂದ ಕಲ್ಪಿಸಿ ಹಿಂದೆಹೇಳಿರುವ ಪ್ರಕಾರ ಅಂಗಗಳನ್ನು ಪೂಜಿಸಿ, ಅನಂತರ ಪೂರ್ವಾದಿದಿಗ್ದಳಗಳಲ್ಲಿ ಬಿಳುಪು ಹಳದಿ ಮಿಶ್ರವಾದ ಹೊಂಗೆಯ ಬಣ್ಣದ ಇಂದ್ರನೀಲಮಣಿಯಂತೆ ಹೊಳೆಯುತ್ತಿರುವ, ಪೀತಾಂಬರಧಾರಿಗಳಾದ, ಶಂಖಚಕ್ರಗದಾಪದ್ಮಗಳನ್ನು ಹಸ್ತಗಳಲ್ಲಿ ಧರಿಸಿರುವ, ಚತುರ್ಭುಜಯುಕ್ತರಾದ, ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧಮೂರ್ತಿಗಳನ್ನು ಪೂಜಿಸಬೇಕು.

೬೪. ಆಗ್ನೇಯಾದಿವಿದಿಗ್ದಳಗಳಲ್ಲಿ ದಮುಕ, ಪುಂಡರೀಕ, ಗುಗ್ಗುಳ, ಕುರಂಟಕವೆಂಬ ಗಜಗಳನ್ನು ಪೂಜಿಸಬೇಕು.

ಯಜೇಚ್ಛಂಖನಿಧಿಂ ದೇವ್ಯಾ ದಕ್ಷಿಣೇ ಪ್ರಮುದಾನ್ವಿತಂ ।
ಮುಕ್ತಾಮಾಣಿಕ್ಯಸಂಕಾಶೌ ಕಿಂಚಿತ್ಸ್ಮಿತಮುಖಾಂಬುಜೌ ॥ ೬೫ ॥

ಅನ್ಯೋನ್ಯಾಲಿಂಗನಪರೌ ಶಂಖಪಂಕಜಧಾರಿಣೌ ।
ವಿಗಲದ್ರತ್ನವರ್ಷಾಭ್ಯಾಂ ಶಂಖಾಭ್ಯಾಂ ಮೂರ್ಧ್ನಿ ಲಾಂಛಿತೌ ॥ ೬೬ ॥

ತುಂದಿಲಂ ಕಂಬುಕನಿಧಿಂ ವಸುಧಾರಾಂ ಘನಸ್ತನೀಂ ।
ವಾಮತಃ ಪಂಕಜನಿಧಿಂ ಪ್ರಿಯಯಾ ಸಹಿತಂ ಯಜೇತ್ ॥ ೬೭ ॥

ಸಿಂದೂರಾಭೌ ಭುಜಾಶ್ಲಿಷ್ಟೌ ರಕ್ತಪದ್ಮೋತ್ಪಲಾನ್ವಿತೌ ।
ನಿಃಸರದ್ರತ್ನವರ್ಷಾಭ್ಯಾಂ ಪದ್ಮಾಭ್ಯಾಂ ಮೂರ್ಧ್ನಿ ಲಾಂಛಿತೌ ॥ ೬೮ ॥

ತುಂದಿಲಂ ಪಂಕಜನಿಧಿಂ ತತ್ತ್ವಾಂ ವಸುಮತೀಮಪಿ ।
ದಲಾಗ್ರೇಷು ಯಜೇದೇತಾಬಲಾಕ್ಯಾದ್ಯಾ ಸಮಂತತಃ ॥ ೬೯ ॥

---

೬೫-೬೭. ದೇವಿಯ ಬಲಭಾಗದಲ್ಲಿ ಪತ್ನೀ ಸಹಿತನಾದ ಶಂಖನಿಧಿಯನ್ನು ಪೂಜಿಸಬೇಕು. ಮುತ್ತುಮಾಣಿಕ್ಯದಂತೆ ಹೊಳೆಯುತ್ತಿರುವ, ಮಂದಹಾಸಯುಕ್ತವಾದ ಮುಖಕಮಲವುಳ್ಳ. ಪರಸ್ಪರ ಆಲಿಂಗನೆಮಾಡಿಕೊಳ್ಳುತ್ತಿರುವ, ಶಂಖಪದ್ಮಗಳನ್ನು ಧರಿಸಿರುವ, ರತ್ನಗಳ ಮಳೆಯನ್ನುಂಟುಮಾಡುತ್ತಿರುವ, ಶಂಖಗಳಿಂದ ತಲೆಯಮೇಲೆ ಗುರ್ತಿಸಲ್ಪಟ್ಟಿರುವ, ಬೊಜ್ಜುಬೆಳೆಸಿಕೊಂಡಿರುವ ಶಂಖನಿಧಿ ಮತ್ತು ಘನಕುಚಗಳುಳ್ಳ ವಸುಧಾರೆ ಇವರಿಬ್ಬರನ್ನೂ ಪೂಜಿಸಬೇಕು. ದೇವಿಯ ಎಡಭಾಗದಲ್ಲಿ ಪತ್ನೀಸಹಿತನಾದ ಪಂಕಜನಿಧಿಯನ್ನು ಪೂಜಿಸಬೇಕು.

೬೮-೬೯. ಚಂದ್ರಚೂರ್ಣದಂತೆ ಪ್ರಕಾಶಿಸುತ್ತಿರುವ, ಪರಸ್ಪರ ಭುಜಗಳನ್ನು ಆಲಿಂಗಿಸಿಕೊಂಡಿರುವ, ಕೆಂಪುತಾವರೆ ಕನ್ನೈದಿಲೆಗಳಿಂದ ಕೂಡಿದ, ಶಿರಸ್ಸಿನಲ್ಲಿ ರತ್ನವರ್ಷವನ್ನು ಸುರಿಸುತ್ತಿರುವ ಪದ್ಮಗಳಿಂದಂಕಿತರಾದ, ಬೊಜ್ಜುಬೆಳೆಸಿಕೊಂಡಿರುವ ಪದ್ಮನಿಧಿ ಮತ್ತು ತತ್ತ್ವಸ್ವರೂಪಳಾದ ವಸುಮತಿ ಇವರಿಬ್ಬರನ್ನೂ ಪೂಜಿಸಬೇಕು.

ಬಲಾಕೀ ವಿಮಲಾ ಚೈವ ಕಮಲಾ ವನಮಾಲಿಕಾ ।
ವಿಭೀಷಿಕಾ ಮಾಲಿಕಾ ಚ ಶಾಂಕರೀ ವಸುಮಾಲಿಕಾ ॥ ೭೦ ॥

ಪಂಕಜದ್ವಯಧಾರಿಣ್ಯೋ ಮುಕ್ತಾಹಾರಸಮಪ್ರಭಾಃ ।
ಲೋಕೇಶಾನ್ಪೂಜಯೇದಂತೇ ವಜ್ರಾದ್ಯಸ್ತ್ರಾಣಿ ತದ್ಬಹಿಃ ॥ ೭೧ ॥

ಇತ್ಥಂ ಯೋ ಭಜತೇ ದೇವೀಂ ವಿಧಿನಾ ಸಾಧಕೋತ್ತಮಃ ।
ಧನಧಾನ್ಯಸಮೃದ್ಧಃ ಸ್ಯಾಚ್ಛ್ರಿಯಮಾಪ್ನೋತ್ಯನಿಂದಿತಾಂ ॥ ೭೨ ॥

ವಕ್ಷಃ ಪ್ರಮಾಣಸಲಿಲೇ ಸ್ಥಿತ್ವಾ ಮಂತ್ರಮಿಮಂ ಜಪೇತ್ ।
ತ್ರಿಲಕ್ಷಮರ್ಕಗಂ ಧ್ಯಾಯನ್ಸ ಭವೇತ್ಕಮಲಾಲಯಃ ॥ ೭೩ ॥

೬೯-೭೧. ದಲಾಗ್ರಭಾಗಗಳಲ್ಲಿ ಎರಡೆರಡು ಪದ್ಮಗಳನ್ನು ಧರಿಸಿರುವ, ಮುತ್ತಿನಹಾರಕ್ಕೆ ಸಮಾನವಾದ ಕಾಂತಿಯುಳ್ಳ, ಬಲಾಕೀ, ವಿಮಲಾ, ಕಮಲಾ, ವನಮಾಲಿಕಾ, ವಿಭೀಷಿಕಾ, ಮಾಲಿಕಾ, ಶಾಂಕರೀ ಮತ್ತು ವಸು ಮಾಲಿಕಾ ಇವರನ್ನು ಸುತ್ತಲೂ ಪೂಜಿಸಬೇಕು. ಕೊನೆಯಲ್ಲಿ ಇಂದ್ರಾದಿ ಲೋಕಪಾಲಕರನ್ನೂ, ಅದರ ಹೊರಗೆ ಅವರ ಅಸ್ತ್ರಗಳಾದ ವಜ್ರಾದಿಗಳನ್ನೂ ಪೂಜಿಸಬೇಕು.

೭೨. ಈಪ್ರಕಾರ ವಿಧ್ಯುಕ್ತರೀತಿಯಿಂದ ದೇವಿಯನ್ನು ಭಜಿಸುವ ಸಾಧು ಕೋತ್ತಮನು ಧನದಾನ್ಯ ಸಮೃದ್ಧಿಯನ್ನು ಹೊಂದಿ ಅನಿಷಿದ್ಧವಾದ ಸಂಪತ್ತನ್ನು ಪಡೆಯುವನು.

೭೩. ಎದೆಯುದ್ದ ನೀರಿನಲ್ಲಿ ನಿಂತು ಸೂರ್ಯಸ್ಥಿತನಾದ ದೇವನನ್ನು ಧ್ಯಾನಿಸುತ್ತಾ ಈ ಮಂತ್ರವನ್ನು ಮೂರುಲಕ್ಷ ಜಪಿಸುವವನು ಕಮಲಾಲಯನ ಸಂಪೂರ್ಣಾನುಗ್ರಹಕ್ಕೆ ಪಾತ್ರನಾಗಿ ಅವನ ಸಾಯುಜ್ಯವನ್ನು ಪಡೆಯುವನು.

ವಿಷ್ಣುಗೇಹಸ್ಥಬಿಲ್ವಸ್ಯ ಮೂಲೇ ಲಕ್ಷತ್ರಯಂ ಜಪೇತ್ ।
ಸಾಧಕೋ ಯಃ ಸ ಲಭತೇ ವಾಂಛಿತಂ ಧನಸಂಚಯಂ　　॥ ೭೪ ॥

ಅಶೋಕವಹ್ನಾವಾಜ್ಯಾಕ್ತೈಸ್ತಂಡುಲೈರ್ವಶಯೇಜ್ಜಗತ್ ।
ಹೋಮೇನ ಖಾದಿರೇ ವಹ್ನೌ ತಂಡುಲೈರ್ಮಧುರೋಕ್ಷಿತೈಃ　　॥ ೭೫ ॥

ರಾಜಾ ವಶ್ಯೋ ಭವೇಚ್ಛೀಘ್ರಂ ಮಹಾಲಕ್ಷ್ಮೀಶ್ಚ ವರ್ಧತೇ ।
ಬಿಲ್ವಚ್ಛಾಯಾಮಧಿವಸನ್ಬಿಲ್ವಮಿಶ್ರಹವಿಷ್ಯಭುಕ್　　॥ ೭೬ ॥

ಸಂವತ್ಸರತ್ರಯಂ ಹುತ್ವಾ ತತ್ಫಲೈರಥವಾಂಬುಜೈಃ ।
ಸಾಧಕೇಂದ್ರೋ ಮಹಾಲಕ್ಷ್ಮೀಂ ಚಕ್ಷುಷಾ ಪಶ್ಯತಿ ಧ್ರುವಂ　　॥ ೭೭ ॥

---

೭೪. ವಿಷ್ಣ್ವಾಲಯದಲ್ಲಿನ ಬಿಲ್ವವೃಕ್ಷಮೂಲದಲ್ಲಿ ಈ ಮಂತ್ರವನ್ನು ಮೂರುಲಕ್ಷ ಜಪಿಸುವ ಸಾಧಕನು ಅಪೇಕ್ಷಿತವಾದ ಧನರಾಶಿಯನ್ನು ಪಡೆಯುವನು.

೭೫-೭೭. ಅಶೋಕಕಾಷ್ಠದಬೆಂಕಿಯಲ್ಲಿ ತುಪ್ಪಸಹಿತವಾದ ಅಕ್ಕಿಯಿಂದ ಹೋಮಮಾಡುವವನು ಜಗತ್ತನ್ನೇ ವಶಪಡಿಸಿಕೊಳ್ಳುವನು.

ಖಾದಿರಾಗ್ನಿಯಲ್ಲಿ ಸಕ್ಕರೆಸಹಿತವಾದ ಅಕ್ಕಿಯಿಂದ ಹೋಮಮಾಡಿದರೆ ಬೇಗ ರಾಜನು ಅಧೀನನಾಗುವನು ಮತ್ತು ಮಹದೈಶ್ವರ್ಯವು ಅಭಿವೃದ್ಧಿಯಾಗುತ್ತದೆ.

ಬಿಲ್ವಗಿಡದ ನೆರಳಿನಲ್ಲಿ ಕುಳಿತು ಮೂರುವರ್ಷಗಳಕಾಲ ಬಿಲ್ವಮಿಶ್ರವಾದ ಹವಿಸ್ಸನ್ನು ತಿನ್ನುತ್ತಾ, ಬಿಲ್ವ ಫಲ ಅಥವಾ ಕಮಲಗಳಿಂದ ಹೋಮಮಾಡುವ ಸಾಧಕಶ್ರೇಷ್ಠನು ಮಹಾಲಕ್ಷ್ಮಿಯ ಸಾಕ್ಷಾತ್ಕಾರ ಪಡೆಯುವನು.

ಅಥ ಕಲ್ಪಾಂತರೇ ಬ್ರಹ್ಮನ್ದೇವರಾಜ್ಯವಿಲುಂಪಕೌ ।
ಜಾತೌ ಶುಂಭನಿಶುಂಭೌ ದ್ವಾವಸುರೌ ಲೋಕಕಂಟಕೌ ॥ ೭೮ ॥

ತತೋ ಭ್ರಷ್ಟಾಧಿಕಾರೈಸ್ತು ಶಕ್ರಾದ್ಯೈಃ ಸಂಸ್ತುತಾ ಮುನೇ ।
ಮಹಾಸರಸ್ವತೀ ದೇವೀ ತದಾ ಚಾವತತಾರ ಹ ॥ ೭೯ ॥

ಹಿಮಾಲಯೇ ಮಹಾಪುಣ್ಯೇ ಶೈಲೋದ್ದೇಶೇತಿಶೋಭನೇ ।
ತತಃ ಶುಂಭಾದಿಕಾನ್ಹತ್ವಾ ದೇವತೈಃ ಪರಿಪೂಜಿತಾ ॥ ೮೦ ॥

ವರಂ ದತ್ವಾಽಽವಿಶದ್ದೇವೀ ಮಾನಸಂ ನಾಮ ವೈ ಸರಃ ।
ತಸ್ಯಾ ಮಂತ್ರಂ ಪ್ರವಕ್ಷ್ಯಾಮಿ ಶೃಣುಷ್ವಾವಹಿತೋ ಮುನೇ ॥ ೮೧ ॥

ಜ್ಞಾನಾಮೃತಾ ಶಶಧರಾ ಕ್ರಾಂತಭಾಲೋಪಶೋಭಿತಾ ।
ವಾಗ್ಬೀಜಂ ತೇನ ಚಾಂಗಾನಿ ಕಲ್ಪಯೇತ್ಸಾಧಕೋತ್ತಮಃ ॥ ೮೨ ॥

---

೭೮. ಬ್ರಾಹ್ಮಣನಾದ ನಾರದನೇ! ಇನ್ನೊಂದು ಕಲ್ಪದಲ್ಲಿ ದೇವತೆಗಳ ಆಧಿಪತ್ಯವನ್ನು ನಾಶಮಾಡಿದ ಶುಂಭ, ನಿಶುಂಭ ಎಂಬ ಇಬ್ಬರು ಅಸುರರು ಲೋಕಕಂಟಕರಾಗಿದ್ದರು.

೭೯-೮೧. ಮುನಿಯೇ! ಅಧಿಕಾರವನ್ನು ಕಳೆದುಕೊಂಡನಂತರ ಇಂದ್ರಾದಿದೇವತೆಗಳು ಮಹಾಸರಸ್ವತಿಯ ಬಳಿಗೆ ಹೋಗಿ ಸ್ತೋತ್ರಮಾಡಿದರು. ಅದರಿಂದ ಪ್ರಸನ್ನಳಾದ ಸರಸ್ವತೀದೇವಿಯು ಆಗ ದೇವತೆಗಳ ಕಷ್ಟವನ್ನು ಪರಿಹರಿಸುವುದಕ್ಕಾಗಿ ಮಹಾಪುಣ್ಯಕ್ಷೇತ್ರವಾದ, ಅತ್ಯಂತಮಂಗಳಕರವಾದ ಹಿಮಾಲಯಪರ್ವತಪ್ರದೇಶದಲ್ಲಿ ಅವತರಿಸಿದಳು. ತರುವಾಯ ದೇವಿಯು ಶುಂಭಾದಿಗಳನ್ನು ಸಂಹರಿಸಿ, ದೇವತೆಗಳಿಂದ ಪೂಜಿಸಲ್ಪಟ್ಟು, ಅವರಿಗೆ ವರ ಕೊಟ್ಟು, ಮಾನಸ ಸರೋವರವನ್ನು ಪ್ರವೇಶಿಸಿದಳು. ಮುನಿಯೇ! ಅಂತಹ ದೇವಿಯ ಮಂತ್ರವನ್ನು ಹೇಳುವೆನು; ಸಾವಧಾನಮನಸ್ಸಿನಿಂದ ಕೇಳು.

೮೨. (ಜ್ಞಾನಾಮೃತ = ಐ, ಶಶಧರ = ಂ = ವಾಗ್ಬೀಜ = ಐಂ) ಐಂ'' ಎಂಬುದೇ ಸರಸ್ವತಿಯ ಬೀಜಮಂತ್ರವು. ಅದರಿಂದಲೇ ಸಾಧಕನು ಅಂಗಗಳನ್ನು ರಚಿಸಬೇಕು.

ಋಷಿಃ ಸದಾಶಿವಶ್ಚಾಸ್ಯ ಛಂದೋನುಷ್ಟುಬುದಾಹೃತಂ ।
ದೇವತಾ ವಾಕ್ಸಮಾಖ್ಯಾತಾ ಭಜತಾಮಿಷ್ಟದಾಯಿನೀ ॥ ೮೩ ॥

ಶ್ವೇತಾಂಬರಾಂ ವಿಶ್ವಶ್ವೇತಾಂ ವೀಣಾಪುಸ್ತಕಧಾರಿಣೀಂ ।
ದಿವ್ಯೈರಾಭರಣೈರ್ಯುಕ್ತಾಂ ಧ್ಯಾಯೇದ್ದೇವೀಂ ನಿರಂತರಾಂ ॥ ೮೪ ॥

ಮಹಾಸರಸ್ವತೀಪೀಠೇ ಮೂರ್ತಿಂ ಮೂಲೇನಕಲ್ಪಯೇತ್ ।
ದೇವೀಂ ಸಂಪೂಜಯೇತ್ತಸ್ಯಾಮಂಗಾದ್ಯಾವರಣೈಃ ಸಹ ॥ ೮೫ ॥

ಆದಾವಂಗಾವೃತಿಃ ಪಶ್ಚಾದಂಬಿಕಾದ್ಯಾಃ ಸಮೀರಿತಾಃ ।
ದ್ವಿತೀಯಾ ಮಾತೃಭಿಃ ಪ್ರೋಕ್ತಾ ತೃತೀಯಾ ಹ್ಯಷ್ಟಶಕ್ತಿಭಿಃ ॥ ೮೬ ॥

ಚತುರ್ಥೀ ಪಂಚಮೀ ಪ್ರೋಕ್ತಾ ದ್ವಾತ್ರಿಂಶಚ್ಛಕ್ತಿಭಿಃ ಪುನಃ ।
ಚತುಷಷ್ಟ್ಯಾ ಸ್ಮೃತಾ ಷಷ್ಠೀ ಶಕ್ತಿಭಿರ್ಲೋಕನಾಯಕೈಃ ॥ ೮೭ ॥

---

೮೩. ಈ ಮಂತ್ರಕ್ಕೆ ಸದಾಶಿವನು ಋಷಿ, ಅನುಷ್ಟುಪ್ ಛಂದಸ್ಸು, ವಾಗ್ದೇವಿಯೇ ದೇವತೆ. ಇದು ಆರಾಧಕರಿಗೆ ಇಷ್ಟಾರ್ಥದಾಯಕವು.

೮೪. ಧ್ಯಾನ :—ಶುಕ್ಲವಸ್ತ್ರವನ್ನುಟ್ಟಿರುವ, ಬೆಳ್ಳಗಿರುವ ಸಕಲಶರೀರವುಳ್ಳ, ಕೈಗಳಲ್ಲಿ ವೀಣೆ ಪುಸ್ತಕಗಳನ್ನು ಹಿಡಿದಿರುವ, ಮನೋಹರವಾದ ಒಡವೆಗಳನ್ನು ಧರಿಸಿಕೊಂಡಿರುವ ದೇವಿಯನ್ನು ಸದಾ ಧ್ಯಾನಿಸಬೇಕು.

೮೫. ಮಹಾಸರಸ್ವತೀಪೀಠದಲ್ಲಿ ಮೂರ್ತಿಯನ್ನು ಮೂಲಮಂತ್ರದಿಂದ ಸ್ಥಾಪಿಸಬೇಕು. ಅದರಲ್ಲಿ ಅಂಗಾದಿ ಆವರಣಗಳೊಡನೆ ದೇವಿಯನ್ನು ಪೂಜಿಸಬೇಕು.

೮೬-೮೮. ಆದಿಯಲ್ಲಿ ಅಂಗಾವರಣ, ಅನಂತರ ಅಂಬಿಕಾದಿಗಳು ದ್ವಿತೀಯಾವರಣ, ಮೂರನೆಯದು ಮಾತೃಗಳು, ಎಂಟುಶಕ್ತಿಗಳಿಂದ ನಾಲ್ಕನೆಯ ಆವರಣ, ಮೂವತ್ತೆರಡುಶಕ್ತಿಗಳಿಂದ ಐದನೇಯ ಆವರಣ, ಅರವತ್ತುನಾಲ್ಕುಶಕ್ತಿಗಳಿಂದ ಆರನೆಯ ಆವರಣ, ಲೋಕಪಾಲಕರಿಂದ

ಸಪ್ತಮೀ ಪುನರೇತೇಷಾಮಸ್ತ್ರೈಃ ಸ್ಯಾದಷ್ಟಮಾವೃತಿಃ ।
ಏವಂ ಪೂಜ್ಯಾ ಜಗದ್ಧಾತ್ರೀ ಶ್ರೀಮತೀ ವಾಗ್ಭವಾಭಿಧಾ ॥ ೮೮ ॥

ಸ್ಥಾನೇಷು ಪೂರ್ವಮುಕ್ತೇಷು ಯಜೇದಂಗಾನಿ ಸಾಧಕಃ ।
ಅಂಬಿಕಾ ವಾಗ್ಭವೀ ದುರ್ಗಾ ಶ್ರೀಶಕ್ತಿಶ್ಚೋಕ್ತಲಕ್ಷಣಾಃ ॥ ೮೯ ॥

ಬ್ರಾಹ್ಮ್ಯಾದ್ಯಾಶ್ಚ ತತಃ ಪೂಜ್ಯಾಃ ಕರಾಲೀ ವಿಕರಾಲ್ಯುಮಾ ।
ಸರಸ್ವತೀ ಶ್ರೀದುರ್ಗಾ ಚ ಲಕ್ಷ್ಮೀಶ್ಚೈವ ಧೃತಿಃ ಸ್ಮೃತಿಃ ॥ ೯೦ ॥

ಶ್ರದ್ಧಾ ಮೇಧಾ ರತಿಃ ಕಾಂತಿರಾರ್ಯಾ ಷೋಡಶಶಕ್ತಯಃ ।
ಖಡ್ಗಖೇಟಕಧಾರಿಣ್ಯಃ ಶ್ಯಾಮಾಃ ಪೂಜ್ಯಾಃ ಸ್ವಲಂಕೃತಾಃ ॥ ೯೧ ॥

ವಿಷಘ್ನೀ ಪುಷ್ಟಯಃ ಪ್ರಜ್ಞಾ ಸಿನೀವಾಲೀ ಕುಹೂಃ ಪುನಃ ।
ರುದ್ರವೀರ್ಯಾ ಪ್ರಭಾ ನಂದಾ ಪೋಷಣಾ ವೃದ್ಧಿದಾ ಶುಭಾ ॥ ೯೨ ॥

---

ಏಳನೆಯ ಆವರಣ, ಇವರ ಅಸ್ತ್ರಗಳಿಂದ ಎಂಟನೆಯ ಆವರಣ ಈರೀತಿಯಾಗಿ ಎಂಟು ಆವರಣಗಳ ಸಹಿತವಾಗಿ ವಾಗ್ಭವನಾಮಕಳಾದ, ಶ್ರೀಮಂತಳಾದ, ಜಗತ್ತನ್ನು ಸೃಷ್ಟಿಸುವ ಮಹಾಸರಸ್ವತೀದೇವಿಯು ಪೂಜಿಸಲ್ಪಡಬೇಕು.

೮೯-೯೧. ಸಾಧಕನು ಪೂರ್ವೋಕ್ತಸ್ಥಾನಗಳಲ್ಲಿ ಅಂಗಗಳನ್ನು ಪೂಜಿಸಬೇಕು. ಅನಂತರ ಖಡ್ಗ, ಖೇಟಕಗಳನ್ನು ಕರದಲ್ಲಿ ಪಿಡಿದಿರುವ, ಶ್ಯಾವ, ವರ್ಣವುಳ್ಳ, ಚೆನ್ನಾಗಿ ಅಲಂಕಾರಮಾಡಿಕೊಂಡಿರುವ ವಾಗ್ಭವೀ, ದುರ್ಗಾಂಬಿಕೆ ಉಕ್ತಲಕ್ಷಣೋಪೇತರಾದ ಬ್ರಾಹ್ಮ್ಯಾದಿ ಶ್ರೀಶಕ್ತಿಗಳು, ಕರಾಲೀ, ವಿಕರಾಲೀ, ಉಮಾ, ಸರಸ್ವತೀ, ಶ್ರೀದುರ್ಗಾ, ಲಕ್ಷ್ಮೀ, ಧೃತಿ, ಸ್ಮೃತಿ, ಶ್ರದ್ಧಾ, ಮೇಧಾ. ರತಿ, ಕಾಂತಿ, ಆರ್ಯಾ ಎಂಬೀಷೋಡಶಶಕ್ತಿಗಳನ್ನು ಪೂಜಿಸಬೇಕು.

೯೨-೯೫. ಬಳಿಕ ಬೆಳ್ಳಗಿರುವ, ಕೈಯ್ಯಲ್ಲಿ ಚಕ್ರವನ್ನು ಧರಿಸಿರುವ, ಪಿಶಾಚದಂತೆ ಮುಖವುಳ್ಳ, ಮನೋಹರ ಭೂಷಣಗಳನ್ನು ಧರಿಸಿರುವ ವಿಷಘ್ನೀ, ಪುಷ್ಟಿ, ಪ್ರಜ್ಞಾ, ಸಿನೀವಾಲೀ, ಕುಹೂ, ರುದ್ರವೀರ್ಯಾ, ಪ್ರಭಾ, ನಂದಾ,

ಕಾಲರಾತ್ರಿರ್ಮಹಾರಾತ್ರಿರ್ಭದ್ರಕಾಲೀ ಕಪರ್ದಿನೀ |
ವಿಕೃತಿರ್ದಂಡಿಮುಂಡಿನ್ಯೌ ಸೇಂದುಖಂಡಾ ಶಿಖಂಡಿನೀ || ೯೩ ||

ನಿಶುಂಭಶುಂಭಮಥಿನೀ ಚಂಡಮುಂಡವಿನಾಶಿನೀ |
ಇಂದ್ರಾಣೀ ಚೈವ ರುದ್ರಾಣೀ ಶಂಕರಾರ್ಧಶರೀರಿಣೀ || ೯೪ ||

ನಾರೀ ನಾರಾಯಣೀ ಚೈವ ತ್ರಿಶೂಲಿನ್ಯಪಿ ಪಾಲಿನೀ |
ಅಂಬಿಕಾ ಹ್ಲಾದಿನೀ ಚೈವ ದ್ವಾತ್ರಿಂಶಚ್ಛಕ್ತಯಃ ಸಿತಾಃ || ೯೫ ||

ಚಕ್ರಹಸ್ತಾಃ ಪಿಶಾಚಾಸ್ಯಾಃ ಸಂಪೂಜ್ಯಾಶ್ಚಾರುಭೂಷಣಾಃ |
ಪಿಂಗಲಾಕ್ಷೀ ವಿಶಾಲಾಕ್ಷೀ ಸಮೃದ್ಧಿರ್ಬುದ್ಧಿರೇವ ಚ || ೯೬ ||

ಶ್ರದ್ಧಾ ಸ್ವಾಹಾ ಸ್ವಧಾ ಭಿಕ್ಷಾ ಮಾಯಾ ಸಂಜ್ಞಾ ವಸುಂಧರಾ |
ತ್ರಿಲೋಕಧಾತ್ರೀ ಭಯತ್ರೀ ಸಾವಿತ್ರೀ ತ್ರಿದಶೇಶ್ವರೀ || ೯೭ ||

---

ಪೋಷಣಾ, ವೃದ್ಧಿದಾ, ಶುಭಾ, ಕಾಲರಾತ್ರೀ, ಮಹಾರಾತ್ರೀ, ಭದ್ರಕಾಲೀ, ಕಪರ್ದಿನೀ, ವಿಕೃತಿ, ದಂಡಿ, ಮುಂಡಿನೀ, ಸೇಂದುಖಂಡಾ, ಶಿಖಂಡಿನೀ, ನಿಕುಂಭಶುಂಭಮಥಿನೀ, ಚಂಡಮುಂಡವಿನಾಶಿನೀ ಇಂದ್ರಾಣೀ, ರುದ್ರಾಣಿ, ಶಂಕರಾರ್ಧಶರೀರಿಣೀ, ನಾರೀ, ನಾರಾಯಣೀ, ತ್ರಿಶೂಲಿನೀ, ಪಾಲಿನೀ, ಅಂಬಿಕಾ ಮತ್ತು ಹ್ಲಾದಿನೀ ಎಂಬ ಮೂವತ್ತೆರಡುಶಕ್ತಿಗಳನ್ನೂ ಪೂಜಿಸಬೇಕು.

೯೬-೧೦೬. ತರುವಾಯ ಧನುರ್ಬಾಣಧಾರಿಗಳಾದ, ಉರಿಯುತ್ತಿರುವ ನಾಲಿಗೆಗಳುಳ್ಳ, ಮಹಾತೇಜಸ್ವಿಗಳಾದ, ಕೋರೆಹಲ್ಲುಗಳುಳ್ಳ, ಮೇಲಕ್ಕೆ ಕೂದಲನ್ನು ಕಟ್ಟಿಕೊಂಡಿರುವ, ಯುದ್ಧದಲ್ಲೇ ಆಸಕ್ತವಾದ ಚಿತ್ತವುಳ್ಳ, ಸಕಲಾಭರಣಗಳಿಂದ ಪ್ರಕಾಶಮಾನರಾದ ಪಿಂಗಲಾಕ್ಷೀ, ವಿಶಾಲಾಕ್ಷೀ, ಸಮೃದ್ಧಿ, ಬುದ್ಧಿ, ಶ್ರದ್ಧಾ, ಸ್ವಾಹಾ, ಸ್ವಧಾ, ಭಿಕ್ಷಾ, ಮಾಯಾ, ಸಂಜ್ಞಾ, ವಸುಂಧರಾ, ತ್ರಿಲೋಕಧಾತ್ರೀ, ಭಯತ್ರೀ, ಸಾವಿತ್ರೀ, ತ್ರಿದಶೇಶ್ವರೀ,

ಸರೂಪಾ ಬಹುರೂಪಾ ಚ ಸ್ಕಂದಮಾತಾ ಶ್ರುತಪ್ರಿಯಾ ।
ವಿಮಲಾ ಕಮಲಾ ಪಶ್ಚಾದರುಣೀ ಪುನರಾರುಣೀ ॥ ೯೮ ॥

ಪ್ರಕೃತಿರ್ವಿಕೃತಿಃ ಸೃಷ್ಟಿಃ ಸ್ಥಿತಿಃ ಸಂಹೃತಿರೇವ ಚ ।
ಸಂಧ್ಯಾ ಮಾತಾ ಸತೀ ಹಂಸೀ ಮರ್ದ್ದಿಕಾ ವಜ್ರಿಕಾ ಪರಾ ॥ ೯೯ ॥

ದೇವಮಾತಾ ಭಗವತೀ ದೇವಕೀ ಕಮಲಾಸನಾ ।
ತ್ರಿಮುಖೀ ಸಪ್ತವದನಾ ಸುರಾಸುರವಿಮರ್ದಿನೀ ॥ ೧೦೦ ॥

ಲಂಬೋಷ್ಠೀ ಚೋರ್ಧ್ವಕೇಶೀ ಚ ಬಹುಶಿಶ್ಯಾ ವೃಕೋದರೀ ।
ರಥರೇಖಾಹ್ವಯಾ ಪಶ್ಚಾಚ್ಛಶಿರೇಖಾ ತಥಾಪರಾ ॥ ೧೦೧ ॥

ಗಗನವೇಗಾ ಪವನವೇಗಾ ವೇಗಾ ಚ ತದನಂತರಂ ।
ತತೋ ಭುವನಪಾಲಾಖ್ಯಾ ತತಃ ಸ್ಯಾನ್ಮದನಾತುರಾ ॥ ೧೦೨ ॥

ಅನಂಗಾನಂಗವದನಾ ತಥೈವಾನಂಗಮೇಖಲಾ ।
ಅನಂಗಕುಸುಮಾ ವಿಶ್ವರೂಪಾ ಸುರಭಯಂಕರೀ ॥ ೧೦೩ ॥

---

ಸರೂಪಾ, ಬಹುರೂಪಾ, ಸ್ಕಂದಮಾತಾ, ಶ್ರುತಪ್ರಿಯಾ, ವಿಮಲಾ, ಕಮಲಾ, ಅರುಣೀ, ಆರುಣೀ, ಪ್ರಕೃತಿ, ವಿಕೃತಿ, ಸೃಷ್ಟಿ, ಸ್ಥಿತಿ, ಸಂಹೃತಿ, ಸಂಧ್ಯಾ, ಮಾತಾ, ಸತೀ, ಹಂಸೀ, ಮರ್ದ್ದಿಕಾ, ವಜ್ರಿಕಾ, ದೇವಮಾತಾ, ಭಗವತೀ, ದೇವಕೀ, ಕಮಲಾಸನಾ, ತ್ರಿಮುಖೀ, ಸಪ್ತವದನಾ, ಸುರಾಸುರವಿಮರ್ದಿನೀ, ಲಂಬೋಷ್ಠೀ, ಊರ್ಧ್ವಕೇಶೀ, ಬಹುಶಿಶ್ಯಾ, ವೃಕೋದರೀ, ರಥರೇಖಾಹ್ವಯಾ, ಶಶಿರೇಖಾ, ಗಗನವೇಗಾ, ಪವನವೇಗಾ, ವೇಗಾ, ಭುವನಪಾಲಾ, ಮದನಾತುರಾ, ಅನಂಗಾ, ಅನಂಗವದನಾ, ಅನಂಗಮೇಖಲಾ, ಅನಂಗಕುಸುಮಾ, ವಿಶ್ವರೂಪಾ, ಸುರಭಯಂಕರೀ, ಅಕ್ಷೋಭ್ಯಾ, ಸಪ್ತವಾಹಿನೀ, ವಜ್ರರೂಪಾ,

**ಅಕ್ಷೋಭ್ಯಾ ಸಪ್ತವಾಹಿನ್ಯಾ ವಜ್ರರೂಪಾ ಶುಚಿವ್ರತಾ ।**
**ವರದಾಖ್ಯಾಥ ವಾಗೀಶೀ ಚತುಃಷಷ್ಟಿಸ್ಸವಿೂರಿತಾಃ || ೧೦೪ ||**

**ಚಾಪಬಾಣಧರಾಃ ಸರ್ವಾ ಜ್ವಾಲಾಜಿಹ್ವಾ ಮಹಾಪ್ರಭಾಃ ।**
**ದಂಷ್ಟ್ರಿಣ್ಯಶ್ಚೋರ್ಧ್ವಕೇಶ್ಯಸ್ತಾ ಯುದ್ಧೋಪಕ್ರಾಂತಮಾನಸಾಃ || ೧೦೫ ||**

**ಸರ್ವಾಭರಣಸಂದೀಪ್ತಾಃ ಪೂಜನೀಯಾಃ ಪ್ರಯತ್ನತಃ ।**
**ಲೋಕೇಶಾಃ ಪೂರ್ವವತ್ಪೂಜ್ಯಾಸ್ತದ್ವಜ್ರಾದಿಕಾನ್ಯಪಿ || ೧೦೬ ||**

**ಜಪೇತ್ ಷೋಡಶಲಕ್ಷಂ ಚ ತದ್ದಶಾಂಶಂ ಹುನೇತ್ಸುಧೀಃ ।**
**ಆಜ್ಯೇನ ಖಾದಿರೇ ವಹ್ನೌ ತತಃ ಸಿದ್ಧೋ ಭವೇನ್ಮನುಃ || ೧೦೭ ||**

**ಕಮಲೈರಯುತಂ ಹುತ್ವಾ ರಾಜಾನಂ ವಶಮಾನಯೇತ್ ।**
**ಉತ್ಪಲೈರ್ಜುಹ್ವತೋ ನೂನಂ ಮಹಾಲಕ್ಷ್ಮೀಃ ಪ್ರಜಾಯತೇ || ೧೦೮ ||**

---

ಶುಚಿವ್ರತಾ, ವರದಾ ಮತ್ತು ವಾಗೀಶೀ ಎಂಬದಾಗಿ ಉಕ್ತವಾದ ಅರವತ್ತು ನಾಲ್ಕು ಶಕ್ತಿಗಳನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ಹಿಂದೆ ಹೇಳಿರುವಂತೆ ಇಂದ್ರಾದಿಲೋಕಪಾಲಕರು ಮತ್ತು ಅವರ ವಜ್ರಾದಿಆಯುಧಗಳನ್ನೂ ಸಹ ಪೂಜಿಸಬೇಕು.

೧೦೭. ಹೀಗೆ ಆವರಣಪೂಜೆಮಾಡಿದನಂತರ ಈ ಮಂತ್ರವನ್ನು ಹದಿನಾಲ್ಕುಲಕ್ಷ ಜಪಿಸಿ, ಕಗ್ಗಿಕಟ್ಟಿಗೆಯ ಬೆಂಕಿಯಲ್ಲಿ ತುಪ್ಪದಿಂದ ಒಂದುಲಕ್ಷ ಅರವತ್ತುಸಾವಿರ ಹೋಮಮಾಡಬೇಕು. ಹೀಗೆ ಆಚರಿಸುವುದರಿಂದ ಮಂತ್ರಸಿದ್ಧಿಯಾಗುವುದು.

೧೦೮. ಕಮಲದಿಂದ ಹತ್ತುಸಾವಿರ ಹೋಮಮಾಡಿದರೆ ದೊರೆಯನ್ನು ವಶಪಡಿಸಿಕೊಳ್ಳಬಹುದು, ಕನ್ನೈದಿಲೆಹೂವುಗಳಿಂದ ಹೋಮಮಾಡುವವನಿಗೆ ಮಹಾಸಂಪತ್ತುಂಟಾಗುತ್ತದೆ.

ಪಲಾಶಕುಸುಮೈರ್ಹುತ್ವಾ ವತ್ಸರೇಣಕವಿರ್ಭವೇತ್ ।
ರಾಜೀಲವಣಹೋಮೇನ ವನಿತಾಂ ವಶಮಾನಯೇತ್ ॥ ೧೦೯ ॥

ಭೂಮೌ ಭೋಗಾನ್ಸ್ತು ಭುಕ್ತ್ವಾಂತೇ ವಿಷ್ಣುಲೋಕಮವಾಪ್ನುಯಾತ್ ।
ವಾಣೀ ಬೀಜಜಪಾಶಕ್ತೋ ನಾತ್ರ ಕಾರ್ಯಾ ವಿಚಾರಣಾ ॥ ೧೧೦ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ದೇವೀಮಂತ್ರನಿರೂಪಣಂ ನಾಮ
ಚತುರಶೀತಿತಮೋಽಧ್ಯಾಯಃ

---

೧೦೯. ಮುತ್ತುಗದಹೂವುಗಳಿಂದ ಹೋಮವಮಾಡಿದರೆ ಒಂದುವರ್ಷ ದಲ್ಲಿ ಕವಿಯಾಗುವನು. ಸಾಸುವೆ ಲವಣಗಳ ಹೋಮದಿಂದ ಸ್ತ್ರೀಯು ವಶಳಾಗುವಳು.

೧೧೦. ಈ ಸರಸ್ವತೀಬೀಜಮಂತ್ರಜಪದಲ್ಲಿ ಆಸಕ್ತನಾದವನು ಭೂಮಿ ಯಲ್ಲಿ ಸಕಲಭೋಗಗಳನ್ನೂ ಅನುಭವಿಸಿ ಅನಂತರ ಖಂಡಿತವಾಗಿ ವಿಷ್ಣು ಲೋಕಕ್ಕೆ ಹೋಗುವನು ; ಇದರಲ್ಲಿ ಸಂಶಯಪಡಬಾರದು.

ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾ
ಖ್ಯಾನವೆಂಬ ತೃತೀಯ ಪಾದದಲ್ಲಿ ದೇವೀಮಂತ್ರನಿರೂಪಣೆ
ಯೆಂಬ ಎಂಬತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

---

## ವಿಷಯಸಂಗ್ರಹ

ಭುವನೇಶ್ವರೀಬೀಜಮಂತ್ರ, ಶ್ರೀಬೀಜಮಂತ್ರ, ಮಹಾಸರಸ್ವತೀಬೀಜ ಮಂತ್ರಗಳನ್ನೂ ಅವುಗಳ ನ್ಯಾಸ, ಜಪ, ಹೋಮ, ಪೂಜೆ, ನಾನಾವಿಧ ಪ್ರಯೋಗ ಮುಂತಾದುವನ್ನೂ ಅಷ್ಟಶಕ್ತಿ, ಷೋಡಶಶಕ್ತಿ, ಅರವತ್ತುನಾಲ್ಕು ಶಕ್ತಿಗಳ ನಾಮಧೇಯಗಳನ್ನೂ ವಿವರಿಸಿದೆ.

# ಪಂಚಾಶೀತಿತಮೋಽಧ್ಯಾಯಃ

## ಸನತ್ಕುಮಾರ ಉವಾಚ

ವಾಗ್ದೇವತಾವತಾರೋಽನ್ಯಃ ಕಾಲಿಕೇತಿ ಪ್ರಕೀರ್ತಿತಾ ।
ತಸ್ಯಾ ಮಂತ್ರಂ ಪ್ರವಕ್ಷ್ಯಾಮಿ ಭುಕ್ತಿಮುಕ್ತಿಪ್ರದಂ ನೃಣಾಂ ॥ ೧ ॥

ಸೃಷ್ಟಿಕ್ರಿಯಾನ್ವಿತಾ ಶಾಂತಿರ್ಬಿಂದ್ವಾಢ್ಯಾ ಚ ತ್ರಿಧಾ ಪುನಃ ।
ಅರುಣಾಕ್ಷ್ಮಾದೀಪಿಕಾ ಚ ಬಿಂದುಯುಕ್ತಾ ದ್ವಿಧಾ ತತಃ ॥ ೨ ॥

ಮಾಯಾದ್ವಯಂ ತತಃ ಪಶ್ಚಾದ್ದಕ್ಷಿಣೇ ಕಾಲಿಕೇ ಪದಂ ।
ಪುನಶ್ಚ ಸಪ್ತಬೀಜಾನಿ ಸ್ವಾಹಾಂತೋಽಯಂ ಮನೂತ್ತಮಃ ॥ ೩ ॥

---

## ಎಂಬತ್ತೈದನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ವಾಗ್ದೇವತೆಯ ಇನ್ನೊಂದವತಾರವು ಕಾಲಿಕಾದೇವಿಯೆಂಬುದಾಗಿ ಹೇಳಿದೆ. ಮನುಷ್ಯರಿಗೆ ಭೋಗಮೋಕ್ಷದಾಯಕವಾದ ಆ ದೇವಿಯ ಮಂತ್ರವನ್ನು ಹೇಳುವೆನು.

೨-೩. (ಸೃಷ್ಟಿ= ಂ, ಕ್ರಿಯಾ= ರ, ಶಾಂತಿ= ಈ, ಬಿಂದು= ಂ ಇವನ್ನು ಸೇರಿಸುವುದರಿಂದ " ಕ್ರೀಂ " ಎಂದು ನಿಷ್ಪನ್ನವಾಗುವುದು. ಇದನ್ನು ಮೂರಾವರ್ತಿ ಮಂತ್ರಾದಿಯಲ್ಲಿ ಸೇರಿಸಬೇಕು. ಅರುಣ= ಹ, ಕ್ಷ್ಮಾ= ರ, ದೀಪಿಕಾ= ಊ, ಬಿಂದು= ಂ= ಹ್ರೂಂ. ಇದನ್ನು ಎರಡಾವರ್ತಿ ಸೇರಿಸಬೇಕು. ಮಾಯಾದ್ವಯಂ= ಹ್ರೀಂ, ಹ್ರೀಂ, ದಕ್ಷಿಣಕಾಳಿಕೆ, ಅನಂತರ ಹಿಂದೆಹೇಳಿದ ಏಳುಬೀಜಾಕ್ಷರಗಳು, ಕೊನೆಯಲ್ಲಿ ಸ್ವಾಹಾ ಪದ ಇವೆಲ್ಲವನ್ನೂ ಸಂಯೋಜನೆಮಾಡಿದರೆ ಇಪ್ಪತ್ತೆರಡಕ್ಷರಗಳನ್ನೊಳಗೊಂಡ ಉತ್ತಮಮಂತ್ರವು ನಿಷ್ಪನ್ನವಾಗುವುದು.)

**ಭೈರವೋಽಸ್ಯ ಋಷಿಶ್ಛಂದ ಉಷ್ಣಿಕ್ಕಾಲೀ ತು ದೇವತಾ ।**
**ಬೀಜಂ ಮಾಯಾದೀರ್ಘವರ್ಮ ಶಕ್ತಿರುಕ್ತಾ ಮುನೀಶ್ವರ ॥ ೪ ॥**

**ಷಡ್‍ದೀರ್ಘಾಢ್ಯಾದ್ಯಬೀಜೇನ ವಿದ್ಯಾಯಾ ಅಂಗಮೀರಿತಂ ।**
**ಮಾತೃಕಾರ್ಣಾನ್ದಶದಶ ಹೃದಯೇ ಭುಜಯೋಃ ಪದೋಃ ॥ ೫ ॥**

---

"ಕ್ರೀಂ, ಕ್ರೀಂ ಕ್ರೀಂ ಹ್ರೂಂ ಹ್ರೂಂ ಹ್ರೀಂ ಹ್ರೀಂ ದಕ್ಷಿಣಕಾಳಿಕೇ ಕ್ರೀಂ ಕ್ರೀಂ ಕ್ರೀಂ ಹ್ರೂಂ ಹ್ರೂಂ ಹ್ರೀಂ ಹ್ರೀಂ ಸ್ವಾಹಾ" ಎಂಬುದೇ ದ್ವಾವಿಂಶತ್ಯಕ್ಷರ ಕಾಳಿಕಾಮಂತ್ರವು.

೪. ಈ ಮಂತ್ರಕ್ಕೆ ಭೈರವನು ಋಷಿ, ಉಷ್ಣಿಕ್ ಛಂದಸ್ಸು, ದೇವತೆಯು ಕಾಳಿಯು, 'ಹ್ರೀಂ' ಎಂಬುದು ಬೀಜ, ದೀರ್ಘವರ್ಮ= ಹೂಂ ಎಂಬುದು ಶಕ್ತಿಯು ಎಂಬುದಾಗಿ ಉಕ್ತವಾಗಿದೆ.

೫. ಆ, ಈ ಮುಂತಾದ ಆರುದೀರ್ಘಸ್ವರಗಳಿಂದ ಸಹಿತವಾದ ಮೊದಲನೆಯ ಬೀಜಾಕ್ಷರದಿಂದ ಎಂದರೆ "ಕ್ರಾಂ, ಕ್ರೀಂ, ಕ್ರೂಂ, ಕ್ರೈಂ, ಕ್ರೇಂ, ಕ್ರೌಂ ಎಂಬ ಆರುವರ್ಣಗಳಿಂದ ಷಡಂಗಗಳಲ್ಲಿ ನ್ಯಾಸಮಾಡಬೇಕು. ಐವತ್ತು ಮಾತೃಕಾಕ್ಷರಗಳನ್ನು ಹತ್ತುಹತ್ತರಂತೆ ಐದುಭಾಗಮಾಡಿ ಅವನ್ನು ಹೃದಯ, ಎರಡುಭುಜಗಳು, ಮತ್ತು ಎರಡುಪಾದಗಳು ಈ ಐದುಅಂಗಗಳಲ್ಲಿ ನ್ಯಾಸ ಮಾಡಬೇಕು.

ಅದರ ಕ್ರಮ—"ಅಂ, ಆಂ, ಇಂ ಈಂ ಉಂ ಊಂ ಋಂ ೠಂ ಌಂ ೡಂ ನಮೋ ಹೃದಿ" ಎಂಬುದಾಗಿ ಹೃದಯದಲ್ಲಿ ನ್ಯಾಸಮಾಡಿ ಇದರಂತೆಯೇ "ಏಂ, ಐಂ, ಓಂ, ಔಂ, ಅಂ, ಅಃ, ಕಂ, ಖಂ, ಗಂ, ಘಂ ನಮೋ ದಕ್ಷಭುಜೇ" ಎಂಬುದಾಗಿ ಬಲಭುಜದಲ್ಲಿಯೂ, "ಙಂ, ಚಂ, ಛಂ, ಜಂ, ಝಂ, ಞಂ, ಟಂ, ಠಂ, ಡಂ, ಢಂ ನಮೋ ವಾಮಭುಜೇ" ಎಂಬುದಾಗಿ ಎರಡುಭುಜದಲ್ಲಿಯೂ, ಣಂ, ತಂ, ಥಂ, ದಂ, ಧಂ, ನಂ, ಪಂ, ಫಂ, ಬಂ, ಭಂ ನಮೋ ದಕ್ಷಪಾದೇ" ಎಂಬುದಾಗಿ ಬಲಗಾಲಿನಲ್ಲಿಯೂ, "ಮಂ, ಯಂ, ರಂ, ಲಂ, ವಂ, ಶಂ, ಷಂ, ಸಂ, ಹಂ, ಳಂ ನಮೋ ವಾಮಪಾದೇ" ಎಂಬುದಾಗಿ ಎಡಗಾಲಿನಲ್ಲಿಯೂ ನ್ಯಾಸಮಾಡಬೇಕು.

ವಿನ್ಯಸ್ಯ ವ್ಯಾಪಕಂ ಕುರ್ಯಾನ್ಮೂಲಮಂತ್ರೇಣ ಸಾಧಕಃ ।
ಶಿರಃ ಕೃಪಾಣಮಭಯಂ ವರಂ ಹಸ್ತೈಶ್ಚ ಬಿಭ್ರತೀ ॥ ೬ ॥

ಮುಂಡಸ್ರಙ್ಮಸ್ತಕಾಂ ಮುಕ್ತಕೇಶಾಂ ಪಿತೃವನಸ್ಥಿತಾಂ ।
ಸರ್ವಾಲಂಕೃತವರ್ಣಾಂ ಚ ಶ್ಯಾಮಾಂಗೀಂ ಕಾಲಿಕಾಂ ಸ್ಮರೇತ್ ॥ ೭ ॥

ಏವಂ ಧ್ಯಾತ್ವಾ ಜಪೇಲ್ಲಕ್ಷಂ ಜುಹುಯಾದಯುತಂ ತತಃ ।
ಪ್ರಸೂನೈಃ ಕರವೀರೋತ್ಥೈಃ ಪೂಜಾಯಂತ್ರಮಥೋಚ್ಯತೇ ॥ ೮ ॥

ವಿಲಿಖ್ಯ ಪೂರ್ವಂ ಷಟ್ಕೋಣಂ ತ್ರಿಕೋಣತ್ರಿತಯಂ ತತಃ ।
ಪದ್ಮಮಷ್ಟದಲಂ ಬಾಹ್ಯೇ ಭೂಪುರಂ ತತ್ರ ಪೂಜಯೇತ್ ॥ ೯ ॥

೬-೭. ಮೂಲಮಂತ್ರದಿಂದ ಸಾಧಕನು ಸರ್ವಾಂಗನ್ಯಾಸಮಾಡಬೇಕು.

ಧ್ಯಾನ :— ಕತ್ತರಿಸಿದ ತಲೆ, ಖಡ್ಗ, ಅಭಯಮುದ್ರೆ, ವರಮುದ್ರೆ ಇವನ್ನು ಕರಗಳಲ್ಲಿ ಹಿಡಿದಿರುವ, ಮುಂಡಗಳ ಮಾಲಿಕೆಯಿಂದ ಕೂಡಿದ ಶಿರಸ್ಸುಳ್ಳ, ಕೂದಲನ್ನು ಕೆದರಿಕೊಂಡಿರುವ, ಸ್ಮಶಾನದಲ್ಲಿ ವಾಸಿಸುವ, ಸಮಸ್ತಾಭರಣಗಳಿಂದ ಅಲಂಕೃತಳು ಮತ್ತು ಶ್ಯಾಮವರ್ಣದ ಅವಯವವುಳ್ಳವಳೂ ಆದ ಕಾಳಿಕಾದೇವಿಯನ್ನು ಧ್ಯಾನಿಸಬೇಕು.

೮-೯. ಈರೀತಿ ಧ್ಯಾನಿಸಿ ಒಂದುಲಕ್ಷಮಂತ್ರಜಪಮಾಡಿ, ಬಳಿಕ ಕರವೀರಪುಷ್ಪಗಳಿಂದ ಹತ್ತುಸಾವಿರ ಹೋಮಮಾಡಬೇಕು.

ಈಗ ಪೂಜಾಯಂತ್ರವು ಹೇಳಲ್ಪಡುತ್ತದೆ :— ಮೊದಲು ಆರುಮೂಲೆ (ಷಟ್ಕೋಣ) ಗಳುಳ್ಳ ರೇಖೆಯನ್ನು ಬರೆದು ಅದರ ಸುತ್ತಲೂ ಮೂರು ತ್ರಿಕೋಣ ರೇಖೆಗಳನ್ನು ರಚಿಸಿ, ಅದರ ಹೊರಗೆ ಎಂದರೆ ಸುತ್ತಲೂ ಅಷ್ಟದಳ ಪದ್ಮವನ್ನುಲ್ಲೇಖಿಸಿ, ಅದನ್ನು ಚದರ ಗೃಹದಲ್ಲಿ ಸೇರಿಸಿ ಎಂದರೆ ಪದ್ಮದ ಸುತ್ತಲೂ ಚತುರಸ್ರರೇಖೆಯನ್ನು ಗುರ್ತಿಸಿ, ಆ ಯಂತ್ರದಲ್ಲಿ ದೇವಿಯನ್ನು ಪೂಜಿಸಬೇಕು.

**ಜಯಾ ಚ ವಿಜಯಾ ಚಾಪಿ ಅಜಿತಾ ಚಾಪರಾಜಿತಾ |**
**ನಿತ್ಯಾವಿಲಾಸಿನೀ ಚಾಪಿ ದೋಗ್ಧ್ರ್ಯಘೋರಾ ಚ ಮಂಗಲಾ || ೧೦ |**

**ಪೀಠಸ್ಯ ಶಕ್ತಯೋ ಮಾಯಾತ್ಮನೇ ಹೃತ್ಪೀಠಮಂತ್ರಕಃ |**
**ಶಿವರೂಪಶವಸ್ಥಾಂ ಚ ಶಿವಾಭಿರ್ದಿಕ್ಷುವೇಷ್ಟಿತಾಂ || ೧೧ |**

**ಮಹಾಕಾಲರತಾಸಕ್ತಾಂ ಧ್ಯಾತ್ವಾಂಗಾನ್ಯರ್ಚಯೇತ್ಪುರಾ |**
**ಕಾಲೀಂ ಕಪಾಲಿನೀಂ ಕುಲ್ಲಾಂ ಕುರುಕುಲ್ಲಾಂ ವಿರೋಧಿನೀಂ || ೧೨ ||**

**ವಿಪ್ರಚಿತ್ತಾಂ ಚ ಷಟ್ಕೋಣೇ ನವಕೋಣೇ ತತೋರ್ಚಯೇತ್ |**
**ಉಗ್ರಾಮುಷ್ಣಪ್ರಭಾಂ ದೀಪ್ತಾಂ ನೀಲಾಂ ಘನಬಲಾಕಿಕೇ || ೧೩ ||**

೧೦-೧೭. ಜಯಾ, ವಿಜಯಾ, ಅಜಿತಾ, ಅಪರಾಜಿತಾ, ನಿತ್ಯಾ, ವಿಲಾಸಿನೀ, ದೋಗ್ಧ್ರೀ, ಅಘೋರಾ ಮತ್ತು ಮಂಗಳಾ ಎಂಬೀ ಒಂಬತ್ತು ಪೀಠಶಕ್ತಿಗಳು.

(ಮಾಯಾ= ಹ್ರೀಂ. ಹೃತ್= ನಮಃ) “ಹ್ರೀಂ ಆತ್ಮನೇ ನಮಃ” ಎಂಬುದು ಪೀಠಮಂತ್ರವು.

ಧ್ಯಾನ :—ಶಿವರೂಪಶವಸ್ಥಿತಳಾದ, ಶಿವಪ್ರಿಯೆಗಳಿಂದ ದಿಕ್ಕುಗಳಲ್ಲಿ ಸುತ್ತುಗಟ್ಟಲ್ಪಟ್ಟಿರುವ, ಮಹಾಕಾಲನೊಡನೆ ರತಿಯುಲ್ಲಾಸಕ್ತಳಾದ ದೇವಿಯನ್ನು ಧ್ಯಾನಿಸಬೇಕು.

ಮೊದಲು ಷಡಂಗಗಳನ್ನು ಪೂಜಿಸಿ ಬಳಿಕ ಕಾಳಿ, ಕಪಾಲಿನೀ, ಕುಲ್ಲಾ, ಕುರುಕುಲ್ಲಾ, ವಿರೋಧಿನೀ, ವಿಪ್ರಚಿತ್ತಾ ಎಂಬೀ ಆರುದೇವತೆಗಳನ್ನು ಷಟ್ಕೋಣಗಳಲ್ಲಿ ಪೂಜಿಸಬೇಕು.

ಅನಂತರ ನವಕೋಣಗಳಲ್ಲಿ ಉಗ್ರಾ, ಉಷ್ಣಪ್ರಭಾ, ದೀಪ್ತಾ, ನೀಲಾ, ಘನಾ, ಬಲಾಕಿಕಾ, ಮಾತ್ರಾ, ಮುದ್ರಾ ಮತ್ತು ಮಿತ್ರಾ ಎಂಬ ಒಂಬತ್ತು ಶಕ್ತಿಗಳನ್ನು ಪೂಜಿಸಬೇಕು.

ಪದ್ಮದ ಎಂಟುದಳಗಳಲ್ಲಿ ಬ್ರಾಹ್ಮೀ, ನಾರಾಯಣೀ, ಮಾಹೇಶ್ವರಿ, ಚಾಮುಂಡಿ, ಕೌಮಾರಿ, ಅಪರಾಜಿತೆ, ವಾರಾಹಿ ಮತ್ತು ನಾರಸಿಂಹಿ ಎಂಬ ಈ ಎಂಟು ಮಾತೃದೇವತೆಗಳನ್ನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

ಮಾತ್ರಾಂ ಮುದ್ರಾಂ ತಥಾ ಮಿತ್ರಾಂ ಪೂಜ್ಯಾಃ ಪತ್ರೇಷು ಮಾತರಃ ।
ಪದ್ಮಸ್ಯಾಷ್ಟಸು ಯತ್ನೇನ ಬ್ರಾಹ್ಮೀ ನಾರಾಯಣೀತ್ಯಪಿ ॥ ೧೪ ॥

ಮಾಹೇಶ್ವರೀ ಚ ಚಾಮುಂಡಾ ಕೌಮಾರೀ ಚಾಪರಾಜಿತಾ ।
ವಾರಾಹೀ ನಾರಸಿಂಹೀ ಚ ಪುನರೇತಾಸ್ತು ಭೂಪುರೇ ॥ ೧೫ ॥

ಭೈರವೀಂ ಮಹದಾದ್ಯಾಂ ತಾಂ ಸಿಂಹಾದ್ಯಾಂ ಧೂಮ್ರಪೂರ್ವಿಕಾಂ ।
ಭೀಮೋನ್ಮತ್ತಾದಿಕಾಂ ಚಾಪಿ ವಶೀಕರಣಭೈರವೀಂ ॥ ೧೬ ॥

ಮೋಹನಾದ್ಯಾಂ ಸಮಾರಾಧ್ಯ ಶಕ್ರಾದೀನ್ಯಾಯುಧಾನ್ಯಪಿ ।
ಏವಮಾರಾಧಿತಾ ಕಾಲೀ ಸಿದ್ಧಾ ಭವತಿ ಮಂತ್ರಿಣಾಂ ॥ ೧೭ ॥

ತತಃ ಪ್ರಯೋಗಾನ್ಕುರ್ವೀತ ಮಹಾಭೈರವಭಾಷಿತಾನ್ ।
ಆತ್ಮನೋ ವಾ ಪರಸ್ಯಾರ್ಥಂ ಕ್ಷಿಪ್ರಸಿದ್ಧಿಪ್ರದಾಯಕಾನ್ ॥ ೧೮ ॥

---

ಚತುರಸ್ರಗೃಹದಲ್ಲಿ ಪುನಃ ಭೈರವೀ, ಮಹಾಭೈರವೀ, ಸಿಂಹಭೈರವೀ, ಧೂಮ್ರಭೈರವೀ, ಭೀಮಭೈರವೀ, ಉನ್ಮತ್ತಭೈರವೀ, ವಶೀಕರಣಭೈರವೀ, ಮೋಹನಭೈರವೀ ಎಂಬೀ ಎಂಟು ಭೈರವಿಶಕ್ತಿಗಳನ್ನು ಪೂಜಿಸಿ ವಜ್ರಾದ್ಯಾಯುಧಸಹಿತರಾದ ಇಂದ್ರಾದಿ ಲೋಕಪಾಲಕರನ್ನೂ ಪೂಜಿಸಬೇಕು. ಈರೀತಿಯಾಗಿ ಆರಾಧಿಸಲ್ಪಟ್ಟ ಕಾಲಿಕಾದೇವಿಯು ಆರಾಧಕರಿಗೆ ಸಿದ್ಧಿದಾಯಕಳಾಗುವಳು.

೧೮. ತರುವಾಯ ಮಹಾಭೈರವನಿಂದ ಉಕ್ತವಾದ, ಬಹುಬೇಗ ಸಿದ್ಧಿಯನ್ನು ಕೊಡುವ ಪ್ರಯೋಗಗಳನ್ನು ತನ್ನ ಅಥವಾ ಇತರರ ಇಷ್ಟಸಿದ್ಧಿಗಾಗಿ ಮಾಡಬೇಕು.

ಸ್ತ್ರೀಣಾಂ ಪ್ರಹಾರಂ ನಿಂದಾಂ ಚ ಕೌಟಿಲ್ಯಂ ಪ್ಯಾಪ್ರಿಯಂ ವಚಃ ।
ಆತ್ಮನೋ ಹಿತಮನ್ವಿಚ್ಛನ್ ಕಾಲೀಭಕ್ತೋ ವಿವರ್ಜಯೇತ್ ॥ ೧೯ ॥

ಸುದೃಶೋ ಮದನಾವಾಸಂ ಪಶ್ಯನ್ ಯಃ ಪ್ರಜಪೇನ್ಮನುಂ ।
ಅಯುತಂ ಸೋಽಚಿರಾದೇವ ವಾಕ್ಪತೇಃ ಸಮತಾಮಿಯಾತ್ ॥ ೨೦ ॥

ದಿಗಂಬರೋ ಮುಕ್ತಕೇಶಃ ಶ್ಮಶಾನಸ್ಥೋಽಧಿಯಾಮಿನಿ ।
ಜಪೇದ್ಯೋಽಯುತಮೇತಸ್ಯ ಭವೇಯುಃ ಸರ್ವಸಿದ್ಧಯಃ ॥ ೨೧ ॥

ಶವಸ್ಯ ಹೃದಯೇ ಸ್ಥಿತ್ವಾ ನಿರ್ವಾಸಾಃ ಪ್ರೇತಭೂಮಿಗಃ ।
ಅರ್ಕಪುಷ್ಪಸಹಸ್ರೇಣಾಭ್ಯಕ್ತೇನ ಸ್ವೀಯರೇತಸಾ ॥ ೨೨ ॥

ದೇವೀಂ ಯಃ ಪೂಜಯೇದ್ಭಕ್ತ್ಯಾ ಜಪನ್ನೇಕೈಕಶೋ ಮನುಂ ।
ಸೋಽಚಿರೇಣೈವ ಕಾಲೇನ ಧರಣೀಪ್ರಭುತಾಂ ವ್ರಜೇತ್ ॥ ೨೩ ॥

---

೧೯. ತನಗೆ ಶ್ರೇಯಸ್ಸಾಗಬೇಕೆಂದು ಬಯಸುವ ಕಾಳೀದೇವಿಯ ಭಕ್ತನು ಹೆಂಗಸರನ್ನು ಹೊಡೆಯುವುದು, ನಿಂದಿಸುವುದು, ಕುಟಿಲಭಾವ ಮತ್ತು ಅಪ್ರಿಯವಚನವನ್ನಾಡುವುದು ಇವುಗಳನ್ನು ಬಿಡಬೇಕು.

೨೦. ಸ್ತ್ರೀಯರ ಭಗವನ್ನು ನೋಡುತ್ತಾ ಈ ಮಂತ್ರವನ್ನು ಹತ್ತು ಸಾವಿರ ಜಪಿಸುವವನು ಬೇಗ ವಾಗೀಶ್ವರನಿಗೆ ಸಮನಾಗುವನು.

೨೧. ದಿಗಂಬರ ಎಂದರೆ ಬಟ್ಟೆಯನ್ನುಡದೆ ಬರೀ ಮೈಯುಳ್ಳವನಾಗಿ, ಕೂದಲಗಂಟನ್ನು ಬಿಚ್ಚಿಕೊಂಡು, ಸ್ಮಶಾನದಲ್ಲಿದ್ದು ಈ ಮಂತ್ರವನ್ನು ಹತ್ತು ಸಾವಿರ ಜಪಿಸುವವನಿಗೆ ಸಕಲಸಿದ್ಧಿಗಳೂ ಸಂಭವಿಸುವುವು.

೨೨-೨೩. ಸ್ಮಶಾನದಲ್ಲಿ ಹೆಣದ ಎದೆಯಮೇಲೆ ನಿಂತು ಮೈಮೇಲೆ ಬಟ್ಟೆಯಿಲ್ಲದೆ ತನ್ನ ರೇತಸ್ಸಿನಲ್ಲಿ ನೆನೆಸಿದ ಸಾವಿರ ಎಕ್ಕೆಯ ಹೂವುಗಳನ್ನು ಒಂದೊಂದಾಗಿ ಈ ಮಂತ್ರವನ್ನು ಜಪಿಸುತ್ತಾ ದೇವಿಗೆ ಭಕ್ತಿಯಿಂದ ಪೂಜಿಸುವವನು ಬಹುಬೇಗ ಭೂಮಿಪಾಲಕನಾಗುವನು.

ರಜಃಕೀರ್ಣಂ ಭಗಂ ನಾರ್ಯಾ ಧ್ಯಾಯನ್ಯೋಽಯುತಂ ಜಪೇತ್ ।
ಸ ಕವಿತ್ವೇನ ರಮ್ಯೇಣ ಜನಾನ್ಮೋಹಯತಿ ಧ್ರುವಂ ॥ ೨೪ ॥

ತ್ರಿಪಂಚಾರೇ ಮಹಾಪೀಠೇ ಶಿವಸ್ಯ ಹೃದಿ ಸಂಸ್ಥಿತಾಂ ।
ಮಹಾಕಾಲೇನ ದೇವೇನ ಮಾರಯುದ್ಧಂ ಪ್ರಕುರ್ವತೀಂ ॥ ೨೫ ॥

ತಾಂ ಧ್ಯಾಯನ್‌ಸ್ಮೇರವದನಾಂ ವಿದಧನ್ ಸುರತಂ ಸ್ವಯಂ ।
ಜಪೇತ್ಸಹಸ್ರಮಪಿ ಯಃ ಸ ಶಂಕರಸಮೋ ಭವೇತ್ ॥ ೨೬ ॥

ಅಸ್ಥಿಲೋಮತ್ವಚಾ ಯುಕ್ತಂ ಮಾಂಸಂ ಮಾರ್ಜಾರಮೇಷಯೋಃ ।
ಉಷ್ಟ್ರಸ್ಯ ಮಹಿಷಸ್ಯಾಪಿ ಬಲಿಂ ಯಸ್ತು ಸಮರ್ಪಯೇತ್ ॥ ೨೭ ॥

ಭೂತಾಷ್ಟಮ್ಯೋರ್ಮಧ್ಯರಾತ್ರೇ ವಶ್ಯಾಃ ಸ್ಯುಸ್ತಸ್ಯ ಜಂತವಃ ।
ವಿದ್ಯಾಲಕ್ಷ್ಮೀಯಶಃಪುತ್ರೈಃ ಸ ಚಿರಂ ಸುಖಮೇಧತೇ ॥ ೨೮ ॥

೨೪. ರಜಸ್ಸು ಸ್ರವಿಸುತ್ತಿರುವ ಸ್ತ್ರೀಭಗವನ್ನು ಧ್ಯಾನಿಸುತ್ತಾ ಈ ಮಂತ್ರವನ್ನು ಹತ್ತುಸಾವಿರ ಜಪಿಸುವವನು ಮನೋಹರ ಕವಿತ್ವದಿಂದ ಜನಗಳನ್ನು ಖಂಡಿತವಾಗಿಯೂ ಮೋಹಪಡಿಸುವನು.

೨೫-೨೬. ತ್ರಿಕೋಣವಾದ ಮಹಾಪೀಠದಲ್ಲಿ ಶಿವನ ಹೃದಯಗತಳಾದ, ಮಹಾಕಾಲದೇವನೆಂಬ ತನ್ನ ಪತಿಯೊಡನೆ ಸುರತವನ್ನು ಮಾಡುತ್ತಿರುವ, ಮನೋಹರಮುಖವುಳ್ಳ, ಆ ಕಾಳಿಕಾದೇವಿಯನ್ನು ಧ್ಯಾನಿಸುತ್ತಾ, ಈ ಮಂತ್ರವನ್ನು ಒಂದುಸಾವಿರ ಜಪಮಾಡುವವನು ಶಂಕರನಿಗೆ ಸಮಾನನಾಗುವನು.

೨೭-೨೮. ಮೂಳೆ ಮತ್ತು ರೋಮವುಳ್ಳ ಚರ್ಮದಿಂದ ಸಹಿತವಾದ, ಬೆಕ್ಕು, ಆಡು, ಒಂಟೆ ಅಥವಾ ಕೋಣದ ಮಾಂಸವನ್ನು ಪಂಚಮಿ ಅಥವಾ ಅಷ್ಟಮಿಯದಿನ ಮಧ್ಯರಾತ್ರಿಯಕಾಲದಲ್ಲಿ ದೇವಿಗೆ ಬಲಿಯನ್ನಾಗಿ ಸಮರ್ಪಿಸುವವನಿಗೆ ಸಕಲಪ್ರಾಣಿಗಳೂ ವಶರಾಗುವರು. ಅಂತಹವನು ಬಹುಕಾಲಪರ್ಯಂತವಾಗಿ ವಿದ್ಯೆ, ಸಂಪತ್ತು, ಕೀರ್ತಿ ಮತ್ತು ಪುತ್ರರುಗಳಿಂದಕೂಡಿ ಸುಖವನ್ನು ಅನುಭವಿಸುವನು.

ಯೋ ಹವಿಷ್ಯಾಶನರತೋ ದಿವಾ ದೇವೀಂ ಸ್ಮರನ್ ಜಪೇತ್ ।
ನಕ್ತಂ ನಿಧುವನಾಸಕ್ತೋ ಲಕ್ಷಂ ಸ ಸ್ಯಾದ್ಧರಾಪತಿಃ ॥ ೨೯ ॥

ರಕ್ತಾಂಭೋಜೈರ್ಹುನೇನ್ಮಂತ್ರೀ ಧನೈರ್ಜಯತಿ ವಿತ್ತಪಂ ।
ಬಿಲ್ವಪತ್ರೈರ್ಭವೇದ್ರಾಜ್ಯಂ ರಕ್ತಪುಷ್ಪೈರ್ವಶೀಕೃತಿಃ ॥ ೩೦ ॥

ಅಸೃಜಾ ಮಹಿಷಾದೀನಾಂ ಕಾಲಿಕಾಂ ಯಸ್ತು ತರ್ಪಯೇತ್ ।
ತಸ್ಯ ಸ್ಯುರಚಿರಾದೇವ ಕರಸ್ಥಾಃ ಸರ್ವಸಿದ್ಧಯಃ ॥ ೩೧ ॥

ಯೋ ಲಕ್ಷಂ ಪ್ರಜಪೇನ್ಮಂತ್ರಂ ಶವಮಾರುಹ್ಯ ಮಂತ್ರವಿತ್ ।
ತಸ್ಯ ಸಿದ್ಧೋ ಮನುಃ ಸದ್ಯಃ ಸರ್ವೇಪ್ಸಿತಫಲಪ್ರದಃ ॥ ೩೨ ॥

---

೨೯. ಹೋಮಮಾಡಿ ಉಳಿದ ಹವಿಷ್ಯಾನ್ನವನ್ನು ತಿನ್ನುತ್ತಾ, ಹಗಲು ದೇವಿಯನ್ನು ಧ್ಯಾನಿಸುವವನಾಗಿ, ರಾತ್ರಿಕಾಲದಲ್ಲಿ ಮೈಥುನದಲ್ಲಿ ಆಸಕ್ತನಾಗಿ, ಈ ಮಂತ್ರವನ್ನು ಒಂದುಲಕ್ಷ ಜಪಿಸುವವನು ಭೂಪತಿಯಾಗುವನು.

೩೦. ಕೆಂಪುತಾವರೆಪುಷ್ಪಗಳಿಂದ ಹೋಮಮಾಡುವ ಮಂತ್ರಿಯು ಕುಬೇರನಿಗಿಂತಲೂ ಹೆಚ್ಚು ಧನಿಕನಾಗುವನು.

ಕೆಂಪುಹೂವುಗಳಿಂದ ಹೋಮಮಾಡುವವನು ಎಲ್ಲರನ್ನೂ ವಶಪಡಿಸಿ ಕೊಳ್ಳುವನು.

ಬಿಲ್ವಪತ್ರೆಗಳಿಂದ ಹೋಮಮಾಡುವವನು ರಾಜ್ಯವನ್ನು ಪಡೆಯುವನು.

೩೧. ಕೋಣ ಮುಂತಾದ ಪ್ರಾಣಿಗಳ ರಕ್ತದಿಂದ ಕಾಲಿಕಾದೇವಿಗೆ ತರ್ಪಣಕೊಡುವವನಿಗೆ ಬಹುಬೇಗ ಸಕಲಸಿದ್ಧಿಗಳೂ ಹಸ್ತಗತವಾಗುವುವು.

೩೨. ಹೆಣದಮೇಲೆ ಕುಳಿತು ಈ ಮಂತ್ರವನ್ನು ಒಂದುಲಕ್ಷ ಜಪಿಸುವ ಮಂತ್ರಜ್ಞನಿಗೆ ಮಂತ್ರಸಿದ್ಧಿಯಾಗಿ ಕೂಡಲೇ ಅವನ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುತ್ತವೆ.

ತೇನಾಶ್ವಮೇಧಪ್ರಮುಖೈರ್ಯಾಗೈರಿಷ್ಟಂ ಸುಜನ್ಮನಾ ।
ದತ್ತಂ ದಾನಂ ತಪಸ್ತಪ್ತಂ ಉಪಾಸ್ತೇ ಯಸ್ತು ಕಾಲಿಕಾಂ ॥ ೩೩ ॥

ಬ್ರಹ್ಮಾ ವಿಷ್ಣುಃ ಶಿವೋ ಗೌರೀ ಲಕ್ಷ್ಮೀಗಣಪತೀ ರವಿಃ ।
ಪೂಜಿತಾಃ ಸಕಲಾ ದೇವಾಃ ಯಃ ಕಾಲೀಂ ಪೂಜಯೇತ್ಸದಾ ॥ ೩೪ ॥

ಅಥಾಪರಃ ಸರಸ್ವತ್ಯಾ ಹ್ಯವತಾರೋ ನಿಗದ್ಯತೇ ।
ಯಾಂ ನಿಷೇವ್ಯ ನರಾ ಲೋಕೇ ಕೃತಾರ್ಥಾ ಸ್ಯುರ್ನ ಸಂಶಯಃ ॥ ೩೫ ॥

ಆಪ್ಯಾಯಿನೀ ಚಂದ್ರಯುಕ್ತಾ ಮಾಯಾ ಚ ವದನಾಂತರೇ ।
ಸಕಾಮಿಕಾ ಕ್ರುಧಾ ಶಾಂತಿಶ್ಚಂದ್ರಾಲಂಕೃತಮಸ್ತಕಾ ॥ ೩೬ ॥

ದೀಪಿಕಾ ಸಾಸನಾ ಚಂದ್ರಯುಗಸ್ತ್ರಂ ಮನುರೀರಿತಃ ।
ಮುನಿರಕ್ಷೋಭ್ಯ ಉದ್ದಿಷ್ಟಶ್ಛಂದಸ್ತು ಬೃಹತೀ ಮತಂ ॥ ೩೭ ॥

---

೩೩. ಕಾಲಿಕಾದೇವಿಯನ್ನು ಉಪಾಸನೆಮಾಡುವ ಸತ್ಕುಲೋತ್ಪನ್ನನಾದ ಪುರುಷನು ಅಶ್ವಮೇಧ ಮುಂತಾದ ಯಾಗಗಳನ್ನು ಮಾಡುವುದರಿಂದ, ಸಕಲದಾನಗಳನ್ನೂ ಕೊಡುವುದರಿಂದ ಮತ್ತು ಉತ್ತಮ ತಪಸ್ಸನ್ನಾಚರಿಸುವುದರಿಂದ ಸಹ ಉಂಟಾಗುವ ಫಲವನ್ನೆಲ್ಲಾ ಪಡೆಯುವನು.

೩೪. ಕಾಲಿಕಾದೇವಿಯನ್ನು ಸರ್ವದಾ ಪೂಜಿಸುವ ಮನುಷ್ಯನು ಬ್ರಹ್ಮ, ವಿಷ್ಣು, ಈಶ್ವರ, ಗೌರೀ, ಲಕ್ಷ್ಮೀ, ಗಣಪತಿ, ಸೂರ್ಯ ಮುಂತಾದ ಸಕಲ ದೇವತೆಗಳ ಪೂಜೆಮಾಡುವುದರಿಂದುಂಟಾಗುವ ಫಲವನ್ನೂ ಪಡೆಯುವನು.

೩೫. ಈಗ ಸರಸ್ವತೀದೇವಿಯ ಇನ್ನೊಂದವತಾರವನ್ನು ನಿರೂಪಿಸುವೆನು :— ಆ ದೇವಿಯನ್ನು ಉಪಾಸನೆಮಾಡುವುದರಿಂದ ಲೋಕದಲ್ಲಿ ಮನುಷ್ಯರು ಕೃತಕೃತ್ಯರಾಗುವರು ; ಸಂದೇಹವಿಲ್ಲ.

೩೬-೩೭. ಈಗ ಸರಸ್ವತೀದೇವಿಯ ಅವತಾರಳಾದ ತಾರಾದೇವಿಯ ಮಂತ್ರವನ್ನು ಹೇಳುತ್ತಾರೆ :—(ಆಪ್ಯಾಯಿನೀ= ಓ, ಚಂದ್ರ= ಂ, ಮಾಯಾ=

ತಾರಾಖ್ಯಾ ದೇವತಾ ಬೀಜಂ ದ್ವಿತೀಯಂಚ ಚತುರ್ಥಕಂ ।
ಶಕ್ತಿಃ ಷಡ್‌ದೀರ್ಘಯುಕ್ತೇನ ದ್ವಿತೀಯೇನಾಂಗಕಲ್ಪನಂ ॥ ೩೮ ॥

ಷೋಢಾ ನ್ಯಾಸಂ ತತಃ ಕುರ್ಯಾತ್ತಾರಾಯಾಃ ಸರ್ವಸಿದ್ಧಿದಂ ।
ಶ್ರೀಕಂಠಾದೀನ್ನ್ಯಸೇದ್ರುದ್ರಾನ್ ಮಾತೃಕಾವರ್ಣಪೂರ್ವಕಾನ್ ॥ ೩೯ ॥

ಮಾತೃಕೋಕ್ತಸ್ಥಲೇ ಮಾಯಾ ತೃತೀಯಕ್ರೋಧಪೂರ್ವಕಾನ್ ।
ಚತುರ್ಥೀನಮಸಾ ಯುಕ್ತಾನ್ಪ್ರಥಮೋ ನ್ಯಾಸ ಈರಿತಃ ॥ ೪೦ ॥

---

ಹ್ರೀಂ, ಸಕಾಮಿಕಾಕ್ರುಧಾಶಾಂತಿಶ್ಚಂದ್ರಾಲಂಕೃತಮಸ್ತಕಾ= ತ್ರೀಂ, ಕಾಮಿಕಾ= ತ, ಕ್ರುಧಾ = ರ, ಶಾಂತಿ = ಈ, ದೀಪಿಕಾ ಸಾಸನಾಚಂದ್ರಯುಕ್= ಹುಂ, ಅಸ್ತ್ರ= ಫಟ್)

"ಓಂ ಹ್ರೀಂ ತ್ರೀಂ ಹುಂಫಟ್" ಎಂಬುದು ಪಂಚಾಕ್ಷರತಾರಾ ಮಂತ್ರವು. ಈ ಮಂತ್ರಕ್ಕೆ ಅಕ್ಷೋಭ್ಯನು ಋಷಿ, ಬೃಹತೀ ಛಂದಸ್ಸು, ತಾರಾ ದೇವಿಯೇ ದೇವತೆ; 'ಹ್ರೀಂ' ಎಂಬುದು ಬೀಜ, 'ಹುಂ' ಎಂಬುದು ಶಕ್ತಿಯು.

ಆ, ಈ ಮುಂತಾದ ಆರು ದೀರ್ಘಸ್ವರಯುಕ್ತವಾದ ಬೀಜಾಕ್ಷರದಿಂದ ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಎಂಬುದಾಗಿ ಷಡಂಗಗಳ ನ್ನಾಚರಿಸಬೇಕು.

೩೯-೪೦ ತರುವಾಯ ಸಕಲ ಸಿದ್ಧಿದಾಯಕವಾದ, ಆರುವಿಧ ತಾರಾ ನ್ಯಾಸವನ್ನಾಚರಿಸಬೇಕು.

*ಶ್ರೀಕಂಠ ಮುಂತಾದ ರುದ್ರರನ್ನು ಮಾತೃಕಾನ್ಯಾಸಕ್ಕೆ ವಿಹಿತವಾದ ಸ್ಥಾನಗಳಲ್ಲಿ ಹ್ರೀಂ, ತ್ರೀಂ, ಹುಂ ಎಂಬ ಮಂತ್ರಾಕ್ಷರಗಳು ಮತ್ತು ಒಂದೊಂದು ಮಾತೃಕಾವರ್ಣ ಪೂರ್ವಕವಾಗಿ ಚತುರ್ಥ್ಯಂತ ಶ್ರೀಕಂಠಾದಿ ಶಬ್ದ ಮತ್ತು ನಮಃ ಶಬ್ದ ಸಹಿತವಾಗಿ ನ್ಯಾಸಮಾಡಬೇಕು.

---

*ಶ್ರೀಕಂಠ ಮುಂತಾದ ಶ್ರೀಕಂಠಮಾತೃಕಾದೇವತೆಗಳ ನಾಮಧೇಯಗಳನ್ನು ಮಂತ್ರರತ್ನಾಕರ ಇಪ್ಪತ್ತೊಂದನೆಯ ತರಂಗದಲ್ಲಿ ಹೇಳಿದೆ. ಅಲ್ಲಿ ನೋಡಿ ಅದನ್ನು ತಿಳಿಯಬಹುದು.

ಶವಪೀಠಸಮಾಸೀನಾಂ ನೀಲಕಾಂತಿಂ ತ್ರಿಲೋಚನಾಂ ।
ಅರ್ಧೇಂದುಶೇಖರಾಂ ನಾನಾಭೂಷಣಾಢ್ಯಾಂ ಸ್ಮರನ್ನ್ಯಸೇತ್ ॥ ೪೦ ॥

ದ್ವಿತೀಯಂ ತು ಗ್ರಹನ್ಯಾಸಂ ಕುರ್ಯಾತ್ತಾಂ ಸಮನುಸ್ಮರನ್ ।
ತ್ರಿಬೀಜಸ್ಸ್ವರಪೂರ್ವಂ ತು ರಕ್ತಂ ಸೂರ್ಯಂ ಹೃದಿ ನ್ಯಸೇತ್ ॥ ೪೨ ॥

ತಥಾಪವರ್ಗಪೂರ್ವಂ ತು ಶುಕ್ಲಂ ಸೋಮಂ ಭ್ರುವೋರ್ದ್ವಯೋಃ ।
ಕವರ್ಗಪೂರ್ವಂ ರಕ್ತಾಭಂ ಮಂಗಲಂ ಲೋಚನತ್ರಯೇ ॥ ೪೩ ॥

---

“ ಹ್ರೀಂ ಶ್ರೀಂ ಹುಂ ಅಂ ಶ್ರೀಕಂಠಾಯ ನಮೋ ಲಲಾಟೇ, ಹ್ರೀಂ ಶ್ರೀಂ ಹುಂ ಆಂ ಅನಂತಾಯನಮೋ ಮುಖೇ” ಮುಂತಾದ ರೀತಿಯಿಂದ ಪ್ರಯೋಗವನ್ನು ತಿಳಿಯಬೇಕು. ಇದು ಮೊದಲನೆಯ ನ್ಯಾಸವು.

೪೧. ಶವಪೀಠದಲ್ಲಿ ಕುಳಿತಿರುವ, ನೀಲಕಾಂತಿಯುಕ್ತಳಾದ, ಮೂರು ಕಣ್ಣುಗಳುಳ್ಳ, ಶಿಖೆಯಲ್ಲಿ ಅರ್ಧಚಂದ್ರನನ್ನು ಧರಿಸಿರುವ, ಬಹು ಆಭರಣ ಗಳಿಂದ ಯುಕ್ತಳಾದ ದೇವಿಯನ್ನು ಧ್ಯಾನಿಸುತ್ತಾ ಈ ಶ್ರೀಕಂಠಮಾತೃಕಾ ನ್ಯಾಸವನ್ನು ಮಾಡಬೇಕು.

೪೨. ಎರಡನೆಯದಾದ ಗ್ರಹನ್ಯಾಸವನ್ನು ಉಕ್ತದೇವಿಯನ್ನು ಧ್ಯಾನಿ ಸುತ್ತಾ ಮಾಡಬೇಕು. ಅದರಕ್ರಮ—ಮೂರು ಬೀಜಾಕ್ಷರ ಮತ್ತು ಸ್ವರಾಕ್ಷರ ಪೂರ್ವಕವಾಗಿ ರಕ್ತವರ್ಣಯುಕ್ತನಾದ ಸೂರ್ಯನನ್ನು ಹೃದಯದಲ್ಲಿ ನ್ಯಾಸ ಮಾಡಬೇಕು.

೪೩. ಬೀಜಾಕ್ಷರ ತ್ರಯ ಮತ್ತು ಯ, ರ, ಲ, ವ ಎಂಬ ಯ ವರ್ಗಾಕ್ಷರಗಳ ಸಹಿತವಾಗಿ ಶುಕ್ಲವರ್ಣೋಪೇತನಾದ ಚಂದ್ರಗ್ರಹವನ್ನು ಎರಡು ಹುಬ್ಬುಗಳಲ್ಲಿ ನ್ಯಾಸಮಾಡಬೇಕು. ಬೀಜಾಕ್ಷರತ್ರಯಕವರ್ಗ ಪೂರ್ವಕವಾಗಿ ಕೆಂಪುಬಣ್ಣದ ಕುಜಗ್ರಹವನ್ನೂ ಮೂರುಕಣ್ಣುಗಳಲ್ಲಿ ನ್ಯಾಸಮಾಡಬೇಕು.

ಚವರ್ಗಾಢ್ಯಂ ಬುಧಂ ಶ್ಯಾಮಂ ನ್ಯಸೇದ್ವಕ್ಷಃಸ್ಥಲೇ ಬುಧಃ |
ಟವರ್ಗಾಢ್ಯಂ ಪೀತವರ್ಣಂ ಕಂಠಕೂಪೇ ಬೃಹಸ್ಪತಿಂ ॥ ೪೪ ॥

ತವರ್ಗಾಢ್ಯಂ ಶ್ವೇತವರ್ಣಂ ಘುಟಿಕಾಯಾಂ ತು ಭಾರ್ಗವಂ |
ನೀಲವರ್ಣಂ ಪವರ್ಗಾಢ್ಯಂ ನಾಭಿದೇಶೇ ಶನೈಶ್ಚರಂ ॥ ೪೫ ॥

ಶವರ್ಗಾಢ್ಯಂ ಧೂಮ್ರವರ್ಣಂ ಧ್ಯಾತ್ವಾ ರಾಹುಂ ಮುಖೇ ನ್ಯಸೇತ್ |
ತ್ರಿಬೀಜಪೂರ್ವಕಶ್ಚೈವಂ ಗ್ರಹನ್ಯಾಸಃ ಸಮೀರಿತಃ ॥ ೪೬ ॥

---

೪೪. ಬೀಜತ್ರಯ ಚವರ್ಗಸಹಿತವಾಗಿ ಶ್ಯಾಮವರ್ಣದ ಬುಧನನ್ನು ವಕ್ಷಃಸ್ಥಲದಲ್ಲಿ ನ್ಯಾಸಮಾಡಬೇಕು. ಬೀಜತ್ರಯ ಟವರ್ಗಗಳಿಂದ ಹಳದೀ ಬಣ್ಣದ ಬೃಹಸ್ಪತಿಗ್ರಹವನ್ನು ಕುತ್ತಿಗೆ ಕೆಳಗಣ ಹಳ್ಳದಲ್ಲಿ ನ್ಯಾಸಮಾಡಬೇಕು.

೪೫. ಬೀಜತ್ರಯ ತ ವರ್ಗಸಹಿತವಾಗಿ ಶ್ವೇತವರ್ಣದ ಶುಕ್ರನನ್ನು ಹೃದಯಗ್ರಂಥಿಯಲ್ಲಿ ನ್ಯಾಸಮಾಡಬೇಕು ಬೀಜತ್ರಯ ಪವರ್ಗಸಹಿತವಾಗಿ ನಾಭಿಸ್ಥಾನದಲ್ಲಿ ಶನೈಶ್ಚರನನ್ನು ನ್ಯಾಸಮಾಡಬೇಕು.

೪೬. ಬೀಜತ್ರಯ, ಶಷಸಹ ಎಂಬ ಶವರ್ಗಾಕ್ಷರಗಳ ಸಹಿತವಾಗಿ ಧೂಮ್ರವರ್ಣಯುಕ್ತನಾದ ರಾಹುವನ್ನು ಧ್ಯಾನಿಸಿ ಮುಖದಲ್ಲಿ ನ್ಯಾಸಮಾಡಬೇಕು. ಬೀಜತ್ರಯ ಲ, ಕ್ಷ ವರ್ಣಸಹಿತವಾಗಿ ಕೇತುವನ್ನು ಪುನಃ ನಾಭಿದೇಶದಲ್ಲಿ ನ್ಯಾಸಮಾಡಬೇಕು. ಈರೀತಿಮಾಡುವ ನ್ಯಾಸಕ್ಕೆ ಗ್ರಹನ್ಯಾಸವೆಂದು ಹೆಸರು.

## ಗ್ರಹನ್ಯಾಸಪ್ರಯೋಗ

1. ಹ್ರೀಂ ತ್ರೀಂ ಹುಂ ಅಂ ಆಂ ಇಂ ಈಂ ಉಂ ಊಂ ಋಂ ೠಂ ಌಂ ೡಂ ಏಂ ಐಂ ಓಂ ಔಂ ಅಂ ಆಃ ರಕ್ತವರ್ಣಂ ಸೂರ್ಯಂ ಹೃದಿ.

2. ಹ್ರೀಂ ತ್ರೀಂ ಹುಂ ರಂ ಲಂ ವಂ ಶುಕ್ಲವರ್ಣಂ ಸೋಮಂ ಭ್ರುವೋರ್ಧ್ವೇಯೇ.

ತೃತೀಯಂ ಲೋಕಪಾಲಾನಾಂ ನ್ಯಾಸಂ ಕುರ್ಯಾತ್ಪ್ರಯತ್ನತಃ ।
ಮಾಯಾದಿಬೀಜತ್ರಿತಯಪೂರ್ವಕಂ ಸರ್ವಸಿದ್ಧಯೇ ॥ ೪೭ ॥

---

3. ಹ್ರೀಂ ತ್ರೀಂ ಹುಂ ಕಂ ಖಂ ಗಂ ಘಂ ಙಂ ರಕ್ತವರ್ಣಂ ಮಂಗಳಂ ಲೋಚನತ್ರಯೇ.

4. ಹ್ರೀಂ ತ್ರೀಂ ಹುಂ ಚಂ ಛಂ ಜಂ ಝಂ ಞಂ ಶ್ಯಾಮವರ್ಣಂ ಬುಧಂ ವಕ್ಷಃಸ್ಥಲೇ.

5. ಹ್ರೀಂ ತ್ರೀಂ ಹುಂ ಟಂ ಠಂ ಡಂ ಢಂ ಣಂ ಪೀತವರ್ಣಂ ಬೃಹಸ್ಪತಿಂ ಕಂಠಕೂಪೇ.

6. ಹ್ರೀಂ ತ್ರೀಂ ಹುಂ ತಂ ಥಂ ದಂ ಧಂ ನಂ ಶ್ವೇತವರ್ಣಂ ಭಾರ್ಗವಂ ಘಟಿಕಾಯಾಂ.

7. ಹ್ರೀಂ ತ್ರೀಂ ಹುಂ ಪಂ ಫಂ ಬಂ ಭಂ ಮಂ ನೀಲವರ್ಣಂ ಶನೈಶ್ಚರಂ ನಾಭಿದೇಶೇ.

8. ಹ್ರೀಂ ತ್ರೀಂ ಹುಂ ಶಂ ಷಂ ಸಂ ಹಂ ಧೂಮ್ರವರ್ಣಂ ರಾಹುಂ ಮುಖೇ.

9. ಹ್ರೀಂ ತ್ರೀಂ ಹುಂ ಲಂ ಕ್ಷಂ ಧೂಮ್ರವರ್ಣಂ ಕೇತುಂ ನಾಭೌ.

---

೪೭. ಸಕಲಸಿದ್ಧಿಗಳನ್ನೂ ಪಡೆಯಲು ಮೂರನೆಯದಾದ ಲೋಕಪಾಲಕ ನ್ಯಾಸವನ್ನು ಹ್ರೀಂ ಮುಂತಾದ ಮೂರು ಬೀಜಾಕ್ಷರಾದಿಯಾಗಿ ಪ್ರಯತ್ನಪೂರ್ವಕವಾಗಿ ಮಾಡಬೇಕು.

**ಸ್ವಮಸ್ತಕೇ ಲಲಾಟಾದೌ ದಿಕ್ಷ್ವಷ್ಟಸ್ವಥ ಊರ್ಧ್ವತಃ ।**
**ಹ್ರಸ್ವದೀರ್ಘಕಾದಿಕಾಷ್ಟವರ್ಗಪೂರ್ವಾನ್ ದಿಶಾಧಿಪಾನ್ ॥ ೪೮ ॥**

---

೪೮. ಮಂತ್ರಿಯು ತನ್ನ ತಲೆಯಲ್ಲಿ ಲಲಾಟಾದಿ ಸ್ಥಾನದಲ್ಲಿ ಎಂಟು ದಿಕ್ಕುಗಳು, ಊರ್ಧ್ವ, ಅಧೋಭಾಗ ಒಟ್ಟು ಹತ್ತುದಿಕ್ಕುಗಳಲ್ಲಿ ಹ್ರಸ್ವಸ್ವರ, ದೀರ್ಘಸ್ವರ ಮತ್ತು ಕವರ್ಗಾದಿ ಎಂಟುವರ್ಗೀಯಾಕ್ಷರಗಳು ಇವುಗಳಾದಿಯಾಗಿ ದಿಕ್ಪಾಲಕರ ನ್ಯಾಸಮಾಡಬೇಕು.

**ದಿಕ್ಪಾಲಕರ ನ್ಯಾಸಕ್ರಮ :—**

1. ಹ್ರೀಂ ತ್ರೀಂ ಹುಂ ಅಂ, ಇಂ, ಉಂ ಋಂ ಌಂ ಏಂ ಓಂ ಅಂ ಲಲಾಟಪೂರ್ವೇ ಇಂದ್ರಾಯನಮಃ.

2. ಹ್ರೀಂ ತ್ರೀಂ ಹುಂ ಆಂ ಈಂ ಊಂ ೠಂ ೡಂ ಐಂ ಔಂ ಅಃ ಲಲಾಟಾಗ್ನೇಯ್ಯಾಂ ದಿಶಿ ಅಗ್ನಯೇ ನಮಃ.

3. ಹ್ರೀಂ ತ್ರೀಂ ಹುಂ ಕಂ ಖಂ ಗಂ ಘಂ ಙಂ ಲಲಾಟದಕ್ಷಿಣೇ ಯಮಾಯ ನಮಃ

4. ಹ್ರೀಂ ತ್ರೀಂ ಹುಂ ಚಂ ಛಂ ಜಂ ಝಂ ಞಂ ಲಲಾಟನೈಋತ್ಯಾಂ ದಿಶಿ ನಿಋತಯೇ ನಮಃ.

5. ಹ್ರೀಂ ತ್ರೀಂ ಹುಂ ಟಂ ಠಂ ಡಂ ಢಂ ಣಂ ಲಲಾಟಪಶ್ಚಿಮದಿಶಿ ವರುಣಾಯ ನಮಃ.

6. ಹ್ರೀಂ ತ್ರೀಂ ಹುಂ ತಂ ಥಂ ದಂ ಧಂ ನಂ ಲಲಾಟವಾಯುವ್ಯದಿಶಿ ವಾಯುವೇ ನಮಃ.

7. ಹ್ರೀಂ ತ್ರೀಂ ಹುಂ ಪಂ ಫಂ ಬಂ ಭಂ ಮಂ ಲಲಾಟೋತ್ತರಸ್ಯಾಂ ದಿಶಿ ಸೋಮಾಯನಮಃ.

**ಶಿವಶಕ್ತ್ಯಭಿಧಂ ನ್ಯಾಸಂ ಚತುರ್ಥಂ ತು ಸಮಾಚರೇತ್ ।**
**ತ್ರಿಬೀಜಪೂರ್ವಕಾನ್ಯಸ್ಯೇತ್ ಷಟ್‌ಶಿವಾಂಚ್ಛಕ್ತಿ ಸಂಯುತಾನ್ ॥ ೪೯ ॥**

**ಆಧಾರಾದಿಷು ಚಕ್ರೇಷು ಸ್ವಚಕ್ರವರ್ಣಪೂರ್ವಕಾನ್ ।**
**ಬ್ರಹ್ಮಾಣಂ ಡಾಕಿನೀಯುಕ್ತಂ ವಾದಿಸಾಂತಾರ್ಣಪೂರ್ವಕಂ ॥ ೫೦ ॥**

**ಮೂಲಾಧಾರೇ ವಿನ್ಯಸೇಚ್ಛ ಚತುರ್ದಲಸಮನ್ವಿತೇ ।**
**ಶ್ರೀವಿಷ್ಣುಂ ರಾಕಿಣೀಯುಕ್ತಂ ಬಾದಿಲಾಂತಾರ್ಣಪೂರ್ವಕಂ ॥ ೫೧ ॥**

**ಸ್ವಾಧಿಷ್ಠಾನಾಭಿಧೇ ಚಕ್ರೇ ಲಿಂಗಸ್ಥೇ ಷಡ್‌ದಲೇ ನ್ಯಸೇತ್ ।**
**ರುದ್ರಂ ತು ಡಾಕಿನೀಯುಕ್ತಂ ಡಾದಿಫಾಂತಾರ್ಣಪೂರ್ವಕಂ ॥ ೫೨ ॥**

---

8. ಹ್ರೀಂ ತ್ರೀಂ ಹುಂ ಯಂ ರಂ ಲಂ ವಂ ಲಲಾಟೈಶಾನ್ಯಾಂ ದಿಶಿ ಈಶಾನಾಯ ನಮಃ.

9. ಹ್ರೀಂ ತ್ರೀಂ ಹುಂ ಶಂ ಷಂ ಸಂ ಹಂ ಲಲಾಟೋರ್ಧ್ವದಿಶಿ ಬ್ರಹ್ಮಣೇ ನಮಃ.

10. ಹ್ರೀಂ ತ್ರೀಂ ಹುಂ ಲಂ ಕ್ಷಂ ಲಲಾಟಾಧೋದಿಶಿ ಅನಂತಾಯ ನಮಃ. ಈರೀತಿ ತಿಳಿಯಬೇಕು.

೪೯-೫೭. ಅನಂತರ ಶಿವಶಕ್ತ್ಯಭಿಧಾನಸಹಿತವಾದ ನಾಲ್ಕನೆಯ ಷಟ್ಚಕ್ರ ನ್ಯಾಸವನ್ನಾಚರಿಸಬೇಕು. ಆಧಾರವುಂತಾದ ಚಕ್ರಗಳಲ್ಲಿ ಮೂರು ಬೀಜಾಕ್ಷರಾದಿಯಾಗಿ ಆಯಾಯಾಚಕ್ರವರ್ಣ ಮತ್ತು ಶಕ್ತಿಸಹಿತವಾದ ಆರು ಶಿವೆಗಳನ್ನು ನ್ಯಾಸಮಾಡಬೇಕು.

ನಾಲ್ಕು ದಳಗಳಿಂದ ಕೂಡಿದ ಮೂಲಾಧಾರಚಕ್ರದಲ್ಲಿ ಬೀಜತ್ರಯ ವ ಶ ಷ ಸ ವರ್ಣ ಪೂರ್ವಕವಾಗಿ ಡಾಕಿನೀಶಕ್ತಿಯುತ ಬ್ರಹ್ಮನನ್ನು ನ್ಯಾಸಮಾಡಬೇಕು. ("ಹ್ರೀಂ ತ್ರೀಂ ಹುಂ ವಂ ಶಂ ಷಂ ಸಂ ಡಾಕಿನೀಯುತಬ್ರಹ್ಮಾಣಂ ಚತುರ್ದಳಸಮನ್ವಿತ ಮೂಲಾಧಾರೇ ನ್ಯಸಾಮಿ" ಎಂದು ಅದರ ಪ್ರಯೋಗವನ್ನು ತಿಳಿಯಬೇಕು)

**ಚಕ್ರೇ ದಶದಳೇ ನ್ಯಸ್ಯೇನ್ನಾಭಿಸ್ಥೇ ಮಣಿಪೂರಕೇ ।**
**ಈಶ್ವರಂ ಕಾದಿಠಾಂತಾರ್ಣಪೂರ್ವಕಂ ಲಾಕಿನೀಯುತಂ || ೫೩ ||**

**ವಿನ್ಯಸೇದ್ದ್ವಾದಶದಲೇ ಹೃದಯಸ್ಥೇ ತ್ವನಾಹತೇ ।**
**ಸದಾಶಿವಂ ಶಾಕಿನೀಂ ಚ ಷೋಡಶಸ್ಸ್ವರಪೂರ್ವಕಂ || ೫೪ ||**

**ಕಂಠಸ್ಥೇ ಷೋಡಶದಲೇ ವಿಶುದ್ಧಾಖ್ಯೇ ಪ್ರವಿನ್ಯಸೇತ್ ।**
**ಆಜ್ಞಾಚಕ್ರೇ ಪರಶಿವಂ ಹಾಕಿನೀಸಂಯುತಂ ನ್ಯಸೇತ್ || ೪೫ ||**

**ಲಕ್ಷಾರ್ಣಪೂರ್ವಂ ಭ್ರೂಮಧ್ಯಸಂಸ್ಥಿತೇತಿಮನೋಹರೇ ।**
**ತಾರಾದಿಪಂಚಮಂ ನ್ಯಾಸಂ ಕುರ್ಯಾತ್ಸರ್ವೇಷ್ಟಸಿದ್ಧಯೇ || ೫೬ ||**

---

ಆರು ದಳಗಳಿಂದ ಕೂಡಿದ ಲಿಂಗಸ್ಥವಾದ ಸ್ವಾಧಿಷ್ಠಾನಚಕ್ರದಲ್ಲಿ ಬೀಜತ್ರಯ, ಬ ಭ ಮ ಯ ರ ಲ ವರ್ಣ ಪೂರ್ವಕವಾಗಿ ರಾಕಿನೀಶಕ್ತಿಯುತವಾದ ಶ್ರೀವಿಷ್ಣುವನ್ನು ನ್ಯಾಸಮಾಡಬೇಕು.

ನಾಭಿಯಲ್ಲಿರುವ ಹತ್ತುದಳಗಳಿಂದ ಕೂಡಿದ ಮಣಿಪೂರವೆಂಬ ಚಕ್ರದಲ್ಲಿ ಬೀಜತ್ರಯ, ಡ ಢ ಣ, ತ ಥ ದ ಧ ನ ಪ ಫ ವರ್ಣಪೂರ್ವಕವಾಗಿ ಡಾಕಿನೀ ಶಕ್ತಿಸಹಿತ ರುದ್ರನನ್ನು ನ್ಯಾಸಮಾಡಬೇಕು.

ಹೃದಯದಲ್ಲಿರುವ ಹನ್ನೆರಡುದಳಗಳಿಂದ ಸಹಿತವಾದ ಅನಾಹತವೆಂಬ ಚಕ್ರದಲ್ಲಿ ಬೀಜತ್ರಯ, ಕ ಖ ಗ ಘ ಙ ಚ ಛ ಝ ಞ ಟ ಠ ವರ್ಣಪೂರ್ವಕ ಲಾಕಿನೀ ಶಕ್ತಿಯುತನಾದ ಈಶ್ವರನನ್ನು ನ್ಯಾಸಮಾಡಬೇಕು.

ಕಂಠದಲ್ಲಿರುವ ಹದಿನಾರುದಳಗಳುಳ್ಳ ವಿಶುದ್ಧವೆಂಬ ಚಕ್ರದಲ್ಲಿ ಬೀಜತ್ರಯ, ಹದಿನಾರು ಸ್ವರಾಕ್ಷರಗಳು ಇವುಗಳಿಂದ ಸಹಿತವಾಗಿ ಶಾಕಿನೀಶಕ್ತಿಸಹಿತ ಸದಾಶಿವನನ್ನು ನ್ಯಾಸಮಾಡಬೇಕು.

ಹುಬ್ಬುಗಳ ಮಧ್ಯದಲ್ಲಿರುವ ಅತ್ಯಂತ ಮನೋಹರವಾದ ಆಜ್ಞಾಚಕ್ರದಲ್ಲಿ ಬೀಜತ್ರಯ, ಲ ಕ್ಷ ವರ್ಣಪೂರ್ವಕವಾಗಿ ಹಾಕಿನೀಶಕ್ತಿಸಹಿತ ಪರಶಿವನನ್ನು ಚಿಂತಿಸಿ ನ್ಯಾಸಮಾಡಬೇಕು.

ಅಷ್ಟೌ ವರ್ಗಾನ್ಸ್ವರದ್ವಂದ್ವಪೂರ್ವಕಾನ್ ಬೀಜಸಂಯುತಾನ್ ।
ಪೂರ್ವಂ ಪ್ರಯೋಜ್ಯ ತಾರಾದ್ಯಾ ನ್ಯಸ್ತವ್ಯಾ ಅಷ್ಟಶಕ್ತಯಃ ॥ ೫೭ ॥

ತಾರಾಥೋಗ್ರಾ ಮಹೋಗ್ರಾಪಿ ವಜ್ರಾ ಕಾಲೀ ಸರಸ್ವತೀ ।
ಕಾಮೇಶ್ವರೀ ಚ ಚಾಮುಂಡಾ ಇತ್ಯಷ್ಟೌ ತಾರಿಕಾಃ ಸ್ಮೃತಾಃ ॥ ೫೮ ॥

ಬ್ರಹ್ಮರಂಧ್ರೇ ಲಲಾಟೇ ಚ ಭ್ರೂಮಧ್ಯೇ ಕಂಠದೇಶತಃ ।
ಹೃದಿ ನಾಭೌ ಲಿಂಗಮೂಲೇ ಮೂಲಾಧಾರೇ ಕ್ರಮಾನ್ನ್ಯಸೇತ್ ॥ ೫೯ ॥

ಷಷ್ಠನ್ಯಾಸಂ ತತಃ ಕುರ್ಯಾತ್ ಪೀಠಾಖ್ಯಂ ಸರ್ವಸಿದ್ಧಿದಂ ।
ಆಧಾರೇ ಕಾಮರೂಪಾಖ್ಯಂ ಬೀಜತ್ರಸ್ವಾರ್ಣಪೂರ್ವಕಂ ॥ ೬೦ ॥

---

ಸಕಲೇಷ್ಟಾರ್ಥಸಿದ್ಧಿಯನ್ನು ಪಡೆಯಲು ಐದನೆಯದಾದ ತಾರಾದಿನ್ಯಾಸವನ್ನು ಮಾಡಬೇಕು.

೫೭-೫೯. ಬ್ರಹ್ಮರಂಧ್ರ, ಹಣೆ ಹುಬ್ಬುಗಳಮಧ್ಯ, ಕಂಠ, ಹೃದಯ, ಹೊಕ್ಕಳು, ಲಿಂಗಮೂಲ, ಮೂಲಾಧಾರ ಈ ಸ್ಥಾನಗಳಲ್ಲಿ ಕ್ರಮವಾಗಿ ತಾರಾದಿ ಎಂಟುಶಕ್ತಿಗಳು ಎಂದರೆ ತಾರಾ, ಉಗ್ರಾ, ಮಹೋಗ್ರಾ, ವಜ್ರಾ, ಕಾಳೀ, ಸರಸ್ವತೀ, ಕಾಮೇಶ್ವರೀ, ಚಾಮುಂಡಾ ಎಂಬುದಾಗಿ ಉಕ್ತವಾಗಿರುವ ಎಂಟು ತಾರಾಶಕ್ತಿಗಳನ್ನು ಬೀಜವರ್ಣತ್ರಯ, ಎರಡುಸ್ವರಾಕ್ಷರ ಮತ್ತು ಕ್ರಮವಾಗಿ ಕವರ್ಗಮುಂತಾದ ಎಂಟುವರ್ಗೀಯಾಕ್ಷರಗಳು ಇವನ್ನು ನ್ಯಾಸಮಾಡಬೇಕು.

ಈ ನ್ಯಾಸೋಪಯುಕ್ತ ಪ್ರಯೋಗವನ್ನು "ಹ್ರೀಂ ತ್ರೀಂ ಹುಂ ಅಂ ಆಂ ಕಂ ಖಂ ಗಂ ಘಂ ಙಂ ತಾರಾಯೈ ನಮೋ ಬ್ರಹ್ಮರಂಧ್ರೇ, ಹ್ರೀಂ ತ್ರೀಂ ಹುಂ ಇಂ ಈಂ ಚಂ ಛಂ ಜಂ ಝಂ ಞಂ ಉಗ್ರಾಯೈ ನಮೋ ಲಲಾಟೇ" ಇತ್ಯಾದಿ ರೀತಿಯಾಗಿ ತಿಳಿಯಬೇಕು.

೬೦-೬೧. ಅನಂತರ ಪೀಠವೆಂಬ ಸಕಲಸಿದ್ಧಿದಾಯಕವಾದ, ಆರನೆಯ ನ್ಯಾಸವನ್ನು ಮಾಡಬೇಕು. ಮೂಲಾಧಾರಸ್ಥಾನದಲ್ಲಿ ಬೀಜತ್ರಯ ಮತ್ತು

**ಹೃದಿ ಜಾಲಂಧರಂ ಬೀಜಂ ದೀರ್ಘಪೂರ್ವಂ ಪ್ರವಿನ್ಯಸೇತ್ ।**
**ಲಲಾಟೇ ಪೂರ್ಣಗಿರ್ಯಾಖ್ಯಂ ಕವರ್ಗಾದ್ಯಂ ನ್ಯಸೇತ್ಸುಧೀಃ ॥ ೬೦ ॥**

**ಉಡ್ಡೀಯಾನಂ ಚವರ್ಗಾದ್ಯಂ ಕೇಶಸಂಧೌ ಪ್ರವಿನ್ಯಸೇತ್ ।**
**ಕಂಠೇ ತು ಮಧುರಾಪೀಠಂ ಯವರ್ಗಾದ್ಯಂ ಪ್ರವಿನ್ಯಸೇತ್ ॥ ೬೨ ॥**

**ಷೋಢಾ ನ್ಯಾಸಸ್ತು ತಾರಾಯಾಃ ಪ್ರೋಕ್ತೋಽಭೀಷ್ಟಪ್ರದಾಯಕಃ ।**
**ಹೃದಿ ಶ್ರೀಮದೇಕಜಟಾಂ ತಾರಿಣೀಂ ಶಿರಸಿ ನ್ಯಸೇತ್ ॥ ೬೩ ॥**

---

ಹ್ರಸ್ವಸ್ವರವರ್ಣಗಳ ಪುರಸ್ಸರವಾಗಿ ಕಾಮರೂಪವೆಂಬ ಪೀಠವನ್ನು ನ್ಯಾಸ ಮಾಡಬೇಕು. ("ಹ್ರೀಂ ತ್ರೀಂ ಹುಂ ಅಂ ಇಂ ಉಂ ಋಂ ಌಂ ಏಂ ಓಂ ಅಂ ಕಾಮರೂಪಪೀಠಾಯ ನಮ ಆಧಾರೇ" ಎಂಬುದಾಗಿ ಈ ನ್ಯಾಸದ ಪ್ರಯೋಗಕರ್ಮವನ್ನು ತಿಳಿಯಬೇಕು. ಇದರಂತೆಯೇ ಉಕ್ತವರ್ಣಗಳನ್ನು ಸಂಯೋಜನೆಮಾಡಿ ಮುಂದಿನ ಪೀಠನ್ಯಾಸಪ್ರಯೋಗಕ್ರಮವನ್ನೂ ತಿಳಿಯ ಬೇಕು.)

ಹೃದಯದಲ್ಲಿ ಬೀಜತ್ರಯ ಮತ್ತು ದೀರ್ಘಸ್ವರಾಕ್ಷರ ಸಹಿತವಾಗಿ ಜಾಲಂಧರ ಪೀಠವನ್ನು ನ್ಯಾಸಮಾಡಬೇಕು.

ಹಣೆಯಲ್ಲಿ ಬೀಜತ್ರಯ ಮತ್ತು ಕವರ್ಗಾಕ್ಷರಗಳಾದಿಯಾಗಿ ಪೂರ್ಣಗಿರಿಯೆಂಬ ಪೀಠವನ್ನು ನ್ಯಾಸಮಾಡಬೇಕು.

೬೨. ಕೇಶಸಂಧಿಯಲ್ಲಿ ಬೀಜತ್ರಯ ಮತ್ತು ಚವರ್ಗಾಕ್ಷರಗಳಾದಿಯಾಗಿ ಉಡ್ಡೀಯಾನವೆಂಬ ಪೀಠವನ್ನು ನ್ಯಾಸಮಾಡಬೇಕು.

ಕಂಠದಲ್ಲಿ ಬೀಜತ್ರಯ ಮತ್ತು ಯ ರ ಲ ವ ಎಂಬ ವರ್ಣಗಳು ಇವುಗಳಾದಿಯಾಗಿ ಮಧುರಾಪೀಠವನ್ನು ನ್ಯಾಸಮಾಡಬೇಕು. ಈ ಪೀಠ ನ್ಯಾಸದಲ್ಲಿ ಅವಶಿಷ್ಟಭಾಗವನ್ನು ಗ್ರಂಥಾಂತರದಿಂದ ತಿಳಿಯಬೇಕು.

೬೩-೬೪. ಈರೀತಿ ಅಭೀಷ್ಟದಾಯಕವಾದ ತಾರಾಮಂತ್ರಾಂಗ ಷೋಢಾನ್ಯಾಸವು ಉಕ್ತವಾಗಿದೆ.

**ವಜ್ರೋದಕೇ ಶಿಖಾಂ ಪಾತು ಉಗ್ರತಾರಾಂ ತು ವರ್ಮಣಿ |**
**ಮಹೋಗ್ರಾ ವತ್ಸರೇ ನೇತ್ರೇ ಪಿಂಗೋಗ್ರೈಕಜಟಾಸ್ತ್ರಕೇ || ೬೪ ||**

**ಷಡ್ದೀರ್ಘಯುಕ್ತಮಾಯಾದ್ಯಾ ಏತಾನ್ಯಸ್ಯಾಃ ಷಡಂಗಕೇ |**
**ಅಂಗುಷ್ಠಾದಿಷ್ವಗುಂಲೀಷು ಪೂರ್ವಂ ವಿನ್ಯಸ್ಯ ಯತ್ನತಃ || ೬೫ ||**

---

ಬಳಿಕ ಹೃದಯದಲ್ಲಿ ಶ್ರೀಮದೇಕಜಟೆಯನ್ನು 'ಹ್ರಾಂ ತ್ರಾಂ ಹಾಂ ಏಕಜಟಾಯೈ ಹೃದಯಾಯ ನಮಃ' ಎಂಬುದಾಗಿ ನ್ಯಾಸಮಾಡಬೇಕು.

ಶಿರಸ್ಸಿನಲ್ಲಿ ತಾರಿಣೀಯನ್ನು "ಹ್ರಾಂ ತ್ರಾಂ ಹಾಂ ತಾರಿಣ್ಯೈ ಶಿರಸೇ ಸ್ವಾಹಾ'' ಎಂಬುದಾಗಿಯೂ, "ಹ್ರಾಂ ತ್ರಾಂ ಹಾಂ ವಜ್ರೋದಕಾಯೈ ಶಿಖಾಯೈವಷಟ್" ಎಂಬುದಾಗಿ ವಜ್ರೋದಕೆಯನ್ನು ಶಿಖೆಯಲ್ಲಿಯೂ, "ಹ್ರಾಂ ತ್ರಾಂ ಹಾಂ ಉಗ್ರತಾರಾಯೈ ಕವಚಾಯ ಹುಂ'' ಎಂಬುದಾಗಿ ಉಗ್ರತಾರೆಯನ್ನು ಕವಚದಲ್ಲಿಯೂ, "ಹ್ರಾಂ ತ್ರಾಂ ಹಾಂ ಮಹೋಗ್ರಾವತ್ಸರಾಯೈ ನೇತ್ರತ್ರಯಾಯ ವೌಷಟ್'' ಎಂಬುದಾಗಿ ನೇತ್ರಗಳಲ್ಲಿ ಮಹೋಗ್ರಾವತ್ಸರೆಯನ್ನೂ, ''ಹ್ರಾಂ ತ್ರಾಂ ಹಾಂ ಪಿಂಗೋಗ್ರೈಕಜಟಾಯೈ ಅಸ್ತ್ರಾಯಫಟ್'' ಎಂಬುದಾಗಿ ಅಸ್ತ್ರದಲ್ಲಿ ಪಿಂಗೋಗ್ರೈಕ ಜಟೆಯನ್ನೂ ನ್ಯಾಸಮಾಡಬೇಕು.

೬೫. ಅಂಗುಷ್ಠ, ತರ್ಜನೀ, ಮಧ್ಯಮಾ, ಅನಾಮಿಕಾ, ಕನಿಷ್ಠಿಕಾ ಎಂಬ ಐದುಕೈಬೆರಳುಗಳು ಮತ್ತು ಕರತಲಕರಪೃಷ್ಠಭಾಗಗಳಲ್ಲಿ ಏಕಜಟಾದಿಗಳನ್ನು ಉಕ್ತಷಡಂಗನ್ಯಾಸಕ್ಕಿಂತ ಮುಂಚಿತವಾಗಿ ನ್ಯಾಸಮಾಡಬೇಕು. ಈ ಅಂಗುಳಿನ್ಯಾಸದ ಪ್ರಯೋಗವನ್ನು "ಹ್ರಾಂ ತ್ರಾಂ ಹಾಂ ಏಕಜಟಾಯೈ ಅಂಗುಷ್ಠಾಭ್ಯಾಂ ನಮಃ, ಹ್ರಾಂ ತ್ರಾಂ ಹಾಂ ತಾರಿಣ್ಯೈಕ ತರ್ಜನೀಭ್ಯಾಂ ಸ್ವಾಹಾ, ಹ್ರಾಂ ತ್ರಾಂ ಹಾಂ ವಜ್ರೋದಕಾಯೈ ಮಧ್ಯಮಾಭ್ಯಾಂ ವಷಟ್, ಹ್ರಾಂ ತ್ರಾಂ ಹಾಂ ಉಗ್ರತಾರಾಯೈ ಅನಾಮಿಕಾಭ್ಯಾಂ ಹುಂ, ಹ್ರಾಂ ತ್ರಾಂ ಹಾಂ ಮಹೋಗ್ರಾವತ್ಸರಾಯೈ ಕನಿಷ್ಠಿಕಾಭ್ಯಾಂ ವೌಷಟ', ಹ್ರಾಂ ತ್ರಾಂ ಹಾಂ ಪಿಂಗೋಗ್ರೈಕಜಟಾಯೈ ಕರತಲಕರಪೃಷ್ಠಾಭ್ಯಾಂ ಫಟ್'' ಎಂಬುದಾಗಿ ತಿಳಿಯಬೇಕು.

ತರ್ಜನೀಮಧ್ಯಮಾಭ್ಯಾಂ ತು ಕೃತ್ವಾ ತಾಲತ್ರಯಂ ತತಃ |
ಛೋಟಿಕಾಮುದ್ರಯಾ ಕುರ್ಯಾದ್ದಿಗ್ಬಂಧಂ ದೇವತಾಂ ಸ್ಮರನ್ || ೧೬ ||

ವಿದ್ಯಯಾ ತಾರಪುಟಯಾ ನ್ಯಾಸೈಕಂ ಸಪ್ತಧಾ ಚರೇತ್ |
ಉಗ್ರತಾರಾಂ ತತೋ ಧ್ಯಾಯೇತ್ಸದ್ಯೋ ವಾದೇತಿಸಿದ್ಧಿದಾಂ || ೧೭ ||

ಲಯಾಬ್ಧಾವಂಬುಜನ್ಮಸ್ಥಾಂ ನೀಲಾಭಾಂ ದಿವ್ಯಭೂಷಣಾಂ |
ಕಂಬುಂ ಕಡ್ಗಂ ಕಪಾಲಂ ಚ ನೀಲಾಬ್ಜಂ ದಧತೀಂ ಕರೈಃ || ೧೮ ||

ನಾಗಶ್ರೇಷ್ಠಾಲಂಕೃತಾಂಗೀಂ ರಕ್ತನೇತ್ರತ್ರಯಾಂ ಸ್ಮರೇತ್ |
ಜಪೇಲ್ಲಕ್ಷಚತುಷ್ಕಂ ಹಿ ದಶಾಂಶಂ ರಕ್ತಪದ್ಮಕೈಃ || ೧೯ ||

---

೧೬. ಅನಂತರ ತರ್ಜನೀಮಧ್ಯಮಬೆರಳುಗಳಿಂದ ಮೂರು ಚಪ್ಪಾಳೆ (ತಾಲ) ಗಳನ್ನು ಹೊಡೆದು, ದೇವತೆಯನ್ನು ಧ್ಯಾನಿಸುತ್ತಾ ಛೋಟಿಕಾಮುದ್ರೆಯಿಂದ ಎಂದರೆ ಚುಟಿಕೆಯಿಂದ ದಿಗ್ಬಂಧನೆಮಾಡಬೇಕು.

೧೭. ತಾರಸಂಪುಟಿತವಾದ ಉಕ್ತವಿದ್ಯೆಯಿಂದ ಏಳಾವರ್ತಿ ಸರ್ವಾಂಗ ನ್ಯಾಸಮಾಡಬೇಕು. ತರುವಾಯ ವಾದವಲ್ಲಿ ತಕ್ಷಣದಲ್ಲಿಯೇ ಅತಿಶಯ ಸಿದ್ಧಿದಾಯಕವಾದ ಉಗ್ರತಾರೆಯನ್ನು ಧ್ಯಾನಿಸಬೇಕು.

೧೮-೨೦. ಧ್ಯಾನ :—ಪ್ರಳಯಸಮುದ್ರದಲ್ಲಿ ನೀರಿನಲ್ಲಿ ಹುಟ್ಟಿದ ಕಮಲದಲ್ಲಿರುವ, ನೈಲ್ಯದಿಂದ ಹೊಳೆಯುತ್ತಿರುವ, ಮನೋಹರವಾದ ಆಭರಣಗಳನ್ನು ಧರಿಸಿರುವ, ಕೈಗಳಲ್ಲಿ ಶಂಖ (ಕಂಬು), ಕತ್ತಿ, ಕಪಾಲ ಮತ್ತು ಕನ್ನೈದಿಲೇ ಹೂವುಗಳನ್ನು ಹಿಡಿದುಕೊಂಡಿರುವ, ಶ್ರೇಷ್ಠಸರ್ಪದಿಂದ ಅಲಂಕರಿಸಲ್ಪಟ್ಟ ಅವಯವಗಳುಳ್ಳ, ಮೂರು ಕೆಂಗಣ್ಣುಗಳುಳ್ಳ ದೇವಿಯನ್ನು ಧ್ಯಾನಿಸಬೇಕು.

ಬಳಿಕ ಈ ಮಂತ್ರವನ್ನು ನಾಲ್ಕುಲಕ್ಷಜಪಿಸಿ ಹಾಲು ತುಪ್ಪಗಳಿಂದ ಮಿಶ್ರಮಾಡಿದ ಕೆಂಪುಕಮಲಗಳಿಂದ ನಲವತ್ತುಸಾವಿರ ಹೋಮಮಾಡಬೇಕು.

**ಹುನೇತ್ ಕ್ಷೀರಾಜ್ಯಸಂಮಿಶ್ರೈಃ ಶಂಖಂ ಸಂಸ್ಥಾಪ್ಯ ಸಂಜಪೇತ್ ।**
**ನಾರೀಂ ಪಶ್ಯನ್ ಸ್ಪೃಶನ್ ಗಚ್ಛನ್ ಮಹಾನಿಶಿ ಬಲಿಂ ಚರೇತ್ ॥ ೨೦ ॥**

**ಶ್ಮಶಾನೇ ಶೂನ್ಯಸದನೇ ದೇವಾಗಾರೇಥ ನಿರ್ಜನೇ ।**
**ಪರ್ವತೇ ವನಮಧ್ಯೇ ವಾ ಶವಮಾರುಹ್ಯ ಮಂತ್ರವಿತ್ ॥ ೨೧ ॥**

**ಸಮರೇ ಶತ್ರುನಿಹತಂ ಯದ್ವಾ ಷಾಣ್ಮಾಸಿಕಂ ಶಿಶುಂ ।**
**ವಿದ್ಯಾಂ ಸಾಧಯತಃ ಶೀಘ್ರಂ ಸಾಧಿತೈವಂ ಪ್ರಸಿಧ್ಯತಿ ॥ ೨೨ ॥**

**ಮೇಧಾ ಪ್ರಜ್ಞಾ ಪ್ರಭಾ ವಿದ್ಯಾ ಧೀರ್ವೃತ್ತಿಸ್ಮೃತಿ ಬುದ್ಧಯಃ ।**
**ವಿಶ್ವೇಶ್ವರೀತಿ ಸಂಪ್ರೋಕ್ತಾಃ ಪೀಠಸ್ಯ ನವಶಕ್ತಯಃ ॥ ೨೩ ॥**

**ಭೃಗುಮನ್ವಿಂದು ಸಂಯುಕ್ತಂ ಮೇಘವರ್ತ್ಮ ಸರಸ್ವತೀ ।**
**ಯೋಗಪೀಠಾತ್ಮನೇ ಹಾರ್ದಂ ಪೀಠಸ್ಯ ಮನುರೀರಿತಃ ॥ ೨೪ ॥**

---

ಜಪಸ್ಥಾನದಲ್ಲಿ ಕಪಾಲವನ್ನು ಸ್ಥಾಪಿಸಿ ಜಪಿಸಬೇಕು. ಅರ್ಧರಾತ್ರಿಯಲ್ಲಿ ಸ್ತ್ರೀಯನ್ನು ನೋಡುತ್ತಾ, ಸ್ಪರ್ಶಮಾಡುತ್ತಾ, ತಿರುಗಾಡುತ್ತಾ ಬಲಿಯನ್ನು ಕೊಡಬೇಕು.

೨೧-೨೨. ಸ್ಮಶಾನ, ಯಾರೂ ಇಲ್ಲದಿರುವಮನೆ, ದೇವಾಲಯ ಅಥವಾ ನಿರ್ಜನವಾದ ಪರ್ವತಪ್ರದೇಶ ಇಲ್ಲವೇ ಮಧ್ಯಕಾಡು ಇವುಗಳಲ್ಲಿ ಮಂತ್ರಜ್ಞನು ಯುದ್ಧದಲ್ಲಿ ಶತ್ರುವಿನಿಂದ ಹತವಾದ ಅಥವಾ ಆರುತಿಂಗಳು ಶಿಶುವಿನ ಹೆಣದ ಮೇಲೆ ಕುಳಿತು ಈ ವಿದ್ಯೆಯನ್ನು ಸಾಧಿಸಿದಪಕ್ಷದಲ್ಲಿ ಬಹುಬೇಗ ವಿದ್ಯೆಯು ಸಿದ್ಧವಾಗುತ್ತದೆ.

೨೩. ಮೇಧಾ, ಪ್ರಜ್ಞಾ, ಪ್ರಭಾ, ವಿದ್ಯಾ, ಧೀ, ವೃತ್ತಿ, ಸ್ಮೃತಿ, ಬುದ್ಧಿ ಮತ್ತು ವಿಶ್ವೇಶ್ವರೀ ಎಂಬೀ ಒಂಬತ್ತು ಪೀಠಶಕ್ತಿಗಳು.

೨೪. ಪೀಠಮಂತ್ರವನ್ನು ಹೇಳುತ್ತಾರೆ-(ಭೃಗು= ಸ, ಮನು= ಔ, ಇಂದು= ಂ, ಮೇಘವರ್ತ್ಮ= ಹ, ಹಾರ್ದ= ನಮಃ)

**ದತ್ವಾನೇನಾಸನಂ ಮೂರ್ತಿಂ ಮೂಲಮಂತ್ರೇಣ ಕಲ್ಪಯೇತ್ |**
**ಪೂಜಯೇದ್ವಿಧಿವದ್ದೇವೀಂ ತದ್ವಿಧಾನಮಥೋಚ್ಯತೇ || ೭೫ ||**

**ತಾರೋ ಮಾಯಾ ಭಗಂ ಬ್ರಹ್ಮಾ ಜಟೇ ಸೂರ್ಯಃ ಸದೀರ್ಘಕಂ |**
**ಯಕ್ಷಾಧಿಪತಯೇ ತಂದ್ರೀ ಮೋಪನೀತಂ ಬಲಿಂ ತತಃ || ೭೬ ||**

**ಗೃಹ್ಣ ಯುಗ್ಮಂ ಶಿವಾ ಸ್ವಾಹಾ ಬಲಿಮಂತ್ರೋಯಮೀರಿತಃ |**
**ದದ್ಯಾನ್ನಿತ್ಯಂ ಬಲಿಂ ತೇನ ಮಧ್ಯರಾತ್ರೇ ಚತುಷ್ಪಥೇ || ೭೭ ||**

**ಜಲದಾನಾದಿಕಂ ಮಂತ್ರೈರ್ವಿದಧ್ಯಾದ್ದಶಭಿಸ್ತತಃ |**
**ಧ್ರುವೋ ವಜ್ರೋದಕೇ ವರ್ಮ ಫಟ್ ಸಪ್ತಾರ್ಣೋ ಜಲಗ್ರಹೇ || ೭೮ ||**

---

"ಹೌಂ ಸರಸ್ವತೀಯೋಗಪೀಠಾತ್ಮನೇ ನಮಃ" ಎಂಬುದು ಪೀಠಮಂತ್ರವೆಂದು ಉಕ್ತವಾಗಿದೆ.

೭೫. ಈ ಮಂತ್ರದಿಂದ ಆಸನವನ್ನರ್ಪಿಸಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ದೇವಿಯನ್ನು ಆವಾಹನೆಮಾಡಿ ವಿಧ್ಯುಕ್ತ ಪ್ರಕಾರ ಪೂಜಿಸಬೇಕು. ಆ ಪೂಜೆಯ ವಿಧಾನವನ್ನು ಹೇಳುವೆನು :—

## ನಿತ್ಯಬಲಿದಾನಮಂತ್ರ

೭೬-೭೧. (ತಾರ= ಓಂ, ಮಾಯಾ= ಹ್ರೀಂ, ಭಗ= ಏ, ಬ್ರಹ್ಮ= ಕ, ಸೂರ್ಯ= ಮ, ಸದೀರ್ಘಖಂ= ಹಾ, ತಂದ್ರೀ= ನ, ಶಿವಾ= ಹ್ರೀಂ ಉಳಿದ ಶಬ್ದಗಳನ್ನು ಹಾಗೆಯೇ ಮಂತ್ರದಲ್ಲಿ ಸೇರಿಸಬೇಕು.)

"ಓಂ ಹ್ರೀಂ ಏಕಜಟೇ ಮಹಾಯಕ್ಷಾಧಿಪತಯೇ ನಮೋಪನೀತಂ ಬಲಿಂ ಗೃಹ್ಣಗೃಹ್ಣ ಹ್ರೀಂ ಸ್ವಾಹಾ" ಎಂಬುದು ಬಲಿಮಂತ್ರವು. ಈ ಮಂತ್ರದಿಂದ ನಿತ್ಯವೂ ನಾಲ್ಕುದಾರಿಸೇರುವಚೌಕದಲ್ಲಿ ಮಧ್ಯರಾತ್ರಿಕಾಲದಲ್ಲಿ ಬಲಿ ಪ್ರದಾನಮಾಡಬೇಕು.

ಹೀಗೆ ಬಲಿದಾನಾದಿ ಹತ್ತುವಿಧಾನಗಳನ್ನು ಹತ್ತುಮಂತ್ರಗಳಿಂದ ಮಾಡಬೇಕು.

ತಾರಾದ್ಯಾ ವಹ್ನಿಜಾಯಾಂತಾ ಮಾಯೊಂಘ್ರಿ ಕ್ಷಾಳನೇ ಮತಾ ।
ತಾರೋ ಮಾಯಾಃ ಭೃಗುಃ ಕರ್ಣೇ ವಿಶುದ್ಧಧರ್ಮವರ್ಣತಃ ॥ ೭೯ ॥

ಸರ್ವಪಾಪಾನಿ ಶಾಮ್ಯಾಶೇ ಶ್ವೇತೋ ನೇತ್ರಯುತಂ ಜಲಂ ।
ಕಲ್ಪಾನಪನಯ ಸ್ವಾಹಾ ಮಂತ್ರ ಆಚಮನೇ ಮತಃ ॥ ೮೦ ॥

ಧ್ರುವೋ ಮಣಿಧರೀತ್ಯಂತೇ ವಜ್ರಿಣ್ಯಕ್ಷಿಯುತಾ ಮೃತಿಃ ।
ಹುರಿವಿದ್ಯಾಯುಗ್ರಿಜಶ್ಚ ಸರ್ವವಾಂತೇ ಬಕೋಬ್ಜವಾನ್ ॥ ೮೧ ॥

ಕರಿಣ್ಯಂತೇ ದೀರ್ಘವರ್ಮ ಅಸ್ತ್ರಂ ವಹ್ನಿಪ್ರಿಯಾಂತಿಮಃ ।
ತ್ರಯೋವಿಂಶತಿವರ್ಣಾತ್ಮಾ ಶಿಖಾಯಾ ಬಂಧನೇ ಮನುಃ ॥ ೮೨ ॥

---

## ಜಲಗ್ರಹಣಮಂತ್ರ

"ಓಂ ವಜ್ರೋದಕೇ ಹುಂ ಫಟ್" ಎಂಬ ಏಳುಅಕ್ಷರಗಳ ಮಂತ್ರವನ್ನು ಜಲಗ್ರಹಣಕ್ಕೆ ಉಪಯೋಗಿಸಬೇಕು.

## ಪಾದಪ್ರಕ್ಷಾಳನಮಂತ್ರ

"ಓಂ ಹ್ರೀಂ ಸ್ವಾಹಾ" ಎಂಬುದು ಪಾದಪ್ರಕ್ಷಾಳನಮಂತ್ರ.

## ಆಚಮನಮಂತ್ರ

(ಕರ್ಣೇ ಭೃಗು= ಉ ಎಂಬ ವರ್ಣಸಹಿತ ಸ= ಸು, ಶ್ವೇತಃ= ವ, ನೇತ್ರಯುತಂ ಜಲಂ= ವಿ. ಉಳಿದ ವರ್ಣಗಳನ್ನು ಹಾಗೆಯೇ ಮಂತ್ರದಲ್ಲಿ ಸೇರಿಸಬೇಕು.) "ಓಂ ಹ್ರೀಂ ಸುವಿಶುದ್ಧಧರ್ಮ ಸರ್ವಪಾಪಾನಿ ಶಾಮ್ಯಾಶೇಷ ವಿಕಲ್ಪಾನಪನಯ ಸ್ವಾಹಾ" ಎಂಬ ಇಪ್ಪತ್ತಾರಕ್ಷರದ ಮಂತ್ರವೇ ಆಚಮನ ಮಂತ್ರವೆಂದೂ, ಈ ಮಂತ್ರದಿಂದ ಆಚಮನಮಾಡಬೇಕೆಂತಲೂ ಉಕ್ತವಾಗಿದೆ.

**ಪ್ರಣವೋ ರಕ್ಷಯುಗಲಂ ದೀರ್ಘವರ್ಮಾಸ್ತ್ರಠದ್ವಯಂ ।**
**ನವಾರ್ಣೇನಾಮುನಾ ಮಂತ್ರೀ ಕುರ್ಯಾದ್ಭೂಮಿವಿಶೋಧನಂ ॥ ೮೩ ॥**

**ತಾರಾಂತೇ ಸರ್ವವಿಘ್ನಾನುತ್ಸಾರಯೇತಿ ಪದಂ ತತಃ ।**
**ಹುಂ ಫಟ್ ಸ್ವಾಹಾ ಗುಣೇಂದ್ವರ್ಣೋ ಮನುರ್ವಿಘ್ನನಿವಾರಣಂ ॥ ೮೪ ॥**

**ಮಾಯಾಬೀಜಂ ಜಪಾಪುಷ್ಪದಿಭಂ ನಾಭೌ ವಿಂಚಿತಯೇತ್ ।**
**ತದುತ್ಥೇನಾಗ್ನಿನಾ ದೇಹಂ ದಹೇತ್ಸಾರ್ಧಂ ಸ್ವಪಾಪ್ಮನಾ ॥ ೮೫ ॥**

**ತಾರಾಬೀಜಂ ಸುವರ್ಣಾಭಂ ಚಿಂತಯೇದ್ಧೃದಿ ಮಂತ್ರವಿತ್ ।**
**ಪವನೇನ ತದುತ್ಥೇನ ಪಾಪಭಸ್ಮ ಕ್ಷಿಪೇದ್ಭುವಿ ॥ ೮೬ ॥**

---

## ಶಿಖಾಬಂಧನಮಂತ್ರ

(ಅಕ್ಷಿಯುತಾವ್ಯತಿಃ= ಶಿ, ವಿದ್ಯಾಯುಗ್ರಿಜ= ಣಿ. ವಕೋಬ್ಜವಾನ್= ಶಂ, ದೀರ್ಘವರ್ಮ= ಹೂಂ, ಅಸ್ತ್ರಂ= ಫಟ್, ವಹ್ನಿಪ್ರಿಯಾ= ಸ್ವಾಹಾ, ಉಳಿದುದನ್ನು ಹಾಗೆಯೇ ಮಂತ್ರದಲ್ಲಿ ಸೇರಿಸಬೇಕು.) "ಓಂ ಮಣಿಧರಿ ವಜ್ರಿಣಿ ಶಿಖರಿಣಿ ಸರ್ವವಶಂಕರಿಣಿ ಹೂಂ ಫಟ್ ಸ್ವಾಹಾ" ಎಂಬೀ ಇಪ್ಪತ್ತು ಮೂರು ವರ್ಣಗಳ ಮಂತ್ರವು ಶಿಖೆಯುಬಂಧನಕ್ಕಾಗಿ ವಿನಿಯೋಗಿ ಸಲ್ಪಡತಕ್ಕುದು.

## ಭೂಶೋಧನಮಂತ್ರ

(ಪ್ರಣವ= ಓಂ, ಠದ್ವಯ= ಸ್ವಾಹಾ) "ಓಂ ರಕ್ಷರಕ್ಷ ಹೂಂ ಫಟ್ ಸ್ವಾಹಾ" ಎಂಬ ಒಂಬತ್ತುಅಕ್ಷರದ ಮಂತ್ರದಿಂದ ಮಂತ್ರಿಯು ಭೂಮಿ ಶೋಧನೆಮಾಡಬೇಕು.

## ವಿಘ್ನನಿವಾರಣಮಂತ್ರ

"ಓಂ ಸರ್ವವಿಘ್ನಾನುತ್ಸಾರಯ ಹುಂ ಫಟ್ ಸ್ವಾಹಾ" ಎಂಬ ಹದಿ ಮೂರಕ್ಷರ ಮಂತ್ರದಿಂದ ವಿಘ್ನನಿವಾರಣೆಮಾಡಿಕೊಳ್ಳಬೇಕು. ಜಪಾಕುಸು

**ತುರೀಯಂ ಚಂದ್ರಕುಂದಾಭಂ ಬೀಜಂ ಧ್ಯಾತ್ವಾ ಲಲಾಟತಃ |**
**ತದುತ್ಥಸುಧಯಾ ದೇಹಂ ರಚಯೇದ್ದೇವತಾನಿಭಂ ॥ ೮೭ ॥**

**ಅನಯಾ ಭೂತಶುದ್ಧ್ಯಾ ತು ದೇವೀಸಾದೃಶ್ಯಮಾಪ್ನುಯಾತ್ |**
**ತಾರೋಽನಂತೋ ಭೃಗುಃ ಕರ್ಣೀ ಪದ್ಮನಾಭಯುತೋ ಬಲೀ ॥ ೮೮ ॥**

**ಖೇ ವಜ್ರರೇಖೇ ಕ್ರೋಧಾಖ್ಯಂ ಬೀಜಂ ಪಾವಕವಲ್ಲಭಾ |**
**ಅಮುನಾ ದ್ವಾದಶಾರ್ಣೇನ ರಚಯೇನ್ಮಂಡಲಂ ಶುಭಂ ॥ ೮೯ ॥**

**ತಾರೋ ಯಥಾಗತಾ ನಿದ್ರಾ ಸದೃಕ್ಷೇಕಭೃಗುರ್ವಿಷಂ |**
**ಸದೀರ್ಘಂ ಸ್ಮೃತಿರೌ ಸಾಕ್ಷೌ ಮಹಾಕಾಲೋ ಭಗಾನ್ವಿತಃ ॥ ೯೦ ॥**

---

ಮಕ್ಕೆ ಸಮಾನವಾದ "ಹ್ರೀಂ" ಎಂಬ ಮಾಯಾಬೀಜವನ್ನು ನಾಭಿಯಲ್ಲಿ ಚಿಂತಿಸಿ, ಅದರಿಂದ ಉತ್ಪನ್ನವಾದ ಅಗ್ನಿಯಿಂದ ದೇಹವನ್ನು ತನ್ನ ಪಾಪದೊಡನೆ ಸುಡಬೇಕು. ಮಂತ್ರಜ್ಞನು ಬಂಗಾರದಂತೆ ಹೊಳೆಯುತ್ತಿರುವ "ಓಂ" ಎಂಬ ತಾರಬೀಜವನ್ನು ಹೃದಯದಲ್ಲಿ ಚಿಂತಿಸಿ, ಅದರಿಂದ ಹುಟ್ಟಿದ ಗಾಳಿಯಿಂದ ಸುಟ್ಟ ಪಾಪದ ಭಸ್ಮವನ್ನು ಭೂಮಿಯಲ್ಲಿ ಹಾಕಬೇಕು. ಚಂದ್ರನ ಧಾವಳ್ಯದಂತೆ ಹೊಳೆಯುತ್ತಿರುವ "ಹುಂ" ಎಂಬ ಬೀಜವನ್ನು ಲಲಾಟದಲ್ಲಿ ಧ್ಯಾನಿಸಿ, ಅದರಿಂದ ಹುಟ್ಟಿದ ಅಮೃತದಿಂದ ದೇಹಕ್ಕೆ ಅಭಿಷೇಕಮಾಡಿ ಅದನ್ನು ದೇವಶರೀರಕ್ಕೆ ಸಮವಾಗಿ ಮಾಡಬೇಕು. ಈ ಪ್ರಕಾರವಾದ ಭೂತಶುದ್ಧಿಯಿಂದ ಆರಾಧಕನು ದೇವೀಸಾದೃಶ್ಯವನ್ನು ಹೊಂದುವನು.

## ಮಂಡಲಮಂತ್ರ

(ತಾರ= ಓಂ, ಅನಂತ= ಆ, ಭೃಗುಃಕರ್ಣೀ= ಸು, ಪದ್ಮನಾಭಯುತೋಬಲಿ= ಏ ಯುತೋರಃ= ರೇ, ಕ್ರೋಧಾಖ್ಯಂ ಬೀಜಂ= ಹುಂ, ಪಾವಕವಲ್ಲಭಾ= ಸ್ವಾಹಾ) "ಓಂ ಆಸುರೇಖೇ ವಜ್ರರೇಖೇ ಹುಂ ಸ್ವಾಹಾ" ಎಂಬ ಹನ್ನೆರಡಕ್ಷರಗಳ ಮಂತ್ರದಿಂದ ಶುಭಮಂಡಲವನ್ನು ರಚಿಸಬೇಕು.

ಕ್ರೋಧೋಸ್ತ್ರಂ ಮನುವರ್ಣೋಽಯಂ ಮನುಃ ಪುಷ್ಪಾದಿಶೋಧನೇ ।
ತಾರಃ ಪಾಶಃ ಪರಾ ಸ್ವಾಹಾ ಪಂಚಾರ್ಣಶ್ಚಿತ್ತಶೋಧನೇ ॥ ೯೧ ॥

ಮನವೋ ದಶ ಸಂಪ್ರೋಕ್ತಾ ಅರ್ಘ್ಯಸ್ಥಾಪನಮುಚ್ಯತೇ ।
ಸೇಂದುಭ್ಯಾಂ ಮಾಂಸತೋಯಾಭ್ಯಾಂ ಭುವಂ ಸಂಸೃಜ್ಯ ಭೂಗೃಹಂ ॥೯೨॥

ವೃತ್ತಂ ತ್ರಿಕೋಣಸಂಯುಕ್ತಂ ಕುರ್ಯಾನ್ಮಂಡಲಮಂತ್ರತಃ ।
ಯಜೇತ್ತತ್ರಾಧಾರಶಕ್ತಿಂ ವಹ್ನಿಮಂಡಲಮಧ್ಯಗಾಂ
ವಹ್ನಿಮಂಡಲಮಭ್ಯರ್ಚ್ಯ ಮಹಾಶಂಖಂ ನಿಧಾಪಯೇತ್ ॥ ೯೩ ॥

---

## ಪುಷ್ಪಶೋಧನಮಂತ್ರ

(ಸದೃಕ್ = ಇ ಯುತಃ ನಿದ್ರಾ = ಭಃ = ಭಿ, ಭೃಗುಃ = ಸ, ಸದೀರ್ಘಂ ವಿಷಂ= ಮಾ, ಸಾಕ್ಷ= ಇಯುತ ಸ್ಮೃತಿ= ಗ= ಗಿ, ಭಗಾಸ್ವಿತೋ = ಮಹಾಕಾಲ = ಏಯುತೋಮಃ = ಮೇ, ಕ್ರೋಧ = ಹುಂ, ಅಸ್ತ್ರಂ= ಫಟ್) "ಓಂ ಯಥಾಗತಾಭಿಷೇಕಸಮಾಗ್ರಿಮೇ ಹುಂ ಫಟ್" ಎಂಬ ಹನಿನಾಲ್ಕು ವರ್ಣಗಳ ಮಂತ್ರವು ಪುಷ್ಪಾದಿಗಳನ್ನು ಶುದ್ಧಿಪಡಿಸುವುದಕ್ಕಾಗಿ ವಿಹಿತವಾಗಿದೆ.

## ಚಿತ್ತಶೋಧನಮಂತ್ರ

(ತಾರಃ= ಓಂ, ಪಾಶ= ಆಂ, ಪರಾ= ಹ್ರೀಂ) "ಓಂ ಆಂ ಹ್ರೀಂ ಸ್ವಾಹಾ" ಎಂಬ ಪಂಚಾಕ್ಷರಮಂತ್ರವನ್ನು ಚಿತ್ತಶೋಧನೆಗಾಗಿ ಜಪಿಸಬೇಕು.

೯೨-೯೩. ಹತ್ತು ಮಂತ್ರಗಳು ಹೇಳಲ್ಪಟ್ಟುವು. ಈಗ ಅರ್ಘ್ಯಸ್ಥಾಪನೆಯ ಕ್ರಮವು ನಿರೂಪಿಸಲ್ಪಡುತ್ತದೆ :—(ಮಾಂಸ= ಲ, ತೋಯ= ವ) ಸೇಂದುಭ್ಯಾಂ ಮಾಂಸತೋಯಾಭ್ಯಾಂ= "ಲಂ ವಂ" ಎಂಬ ಬೀಜಾಕ್ಷರಗಳಿಂದ ನೆಲವನ್ನು ಪ್ರೋಕ್ಷಿಸಿ ಶುದ್ಧಿಮಾಡಿ ಪೂರ್ವೋಕ್ತ ಮಂಡಲ ಮಂತ್ರದಿಂದ ತ್ರಿಕೋಣವನ್ನೊಳಗೊಂಡಿರುವ ಚತುರಸ್ರಮಂಡಲ ಮಾಡಬೇಕು.

ವಾಮಕರ್ಣೇಂದುಯುಕ್ತೇನ ಷಡಂತೇನ ವಿಹಾಯಸಾ ।
ಪ್ರಕ್ಷಾಲಿತಂ ಭೃಗುಂ ದಂಡಂ ತ್ರಿಮೂರ್ತೀಂದುಯುತಂ ಪಠೇತ್ ॥ ೯೪ ॥

ತತೋರ್ಚಯೇನ್ಮಹಾಶಂಖಂ ಜಪನ್ಮಂತ್ರಚತುಷ್ಟಯಂ ।
ದೀರ್ಘತ್ರಯಾನ್ವಿತಾ ಮಾಯಾ ಕಾಲೀ ಸೃಷ್ಟಿಃ ಸದೀರ್ಘಪಃ ॥ ೯೫ ॥

ಪ್ರತಿಷ್ಠಾಸಂಯುತಂ ಮಾಸಂ ಪವನೀಹೃದಯಂ ತತಃ ।
ಏಕಾದಶಾರ್ಣಃ ಪ್ರಥಮೋ ಮಹಾಶಂಖಾರ್ಚನೇ ಮನುಃ ॥ ೯೬ ॥

ಹಂಸೋ ಹರಿಭುಜಂಗೇಶಯುಕ್ತೋ ದೀರ್ಘತ್ರಯೇಂದುಯುಕ್ ।
ತಾರಿಣ್ಯಂತೇ ಕಪಾಲಾಯ ನಮೋಂತೋ ದ್ವಾದಶಾಕ್ಷರಃ ॥ ೯೭ ॥

---

೯೩-೯೪. ಅಲ್ಲಿ ಅಗ್ನಿಮಂಡಲಮಧ್ಯವರ್ತಿಯಾದ ಆಧಾರಶಕ್ತಿಯನ್ನು ಪೂಜಿಸಿ ಅನಂತರ ಆ ಮಂಡಲದಲ್ಲಿ "ಹುಂ ಫಟ್" ಎಂಬ ಮಂತ್ರದಿಂದ ತೊಳೆದ ಮಹಾಶಂಖ (ನರಕಪಾಲ) ವನ್ನು ಸ್ಥಾಪಿಸಿ "ಸ್ಥೀಂ" ಎಂಬ ಬೀಜಾಕ್ಷರವನ್ನು ಪಠನೆಮಾಡಬೇಕು.

೯೫-೯೬. ತರುವಾಯ ಮುಂದೆ ಹೇಳುವ ನಾಲ್ಕುಮಂತ್ರಗಳನ್ನು ಜಪಿಸುತ್ತಾ ಆ ನರಕಪಾಲವನ್ನು ಪೂಜಿಸಬೇಕು.

ಒಂದನೆಯ ಮಂತ್ರ :—(ದೀರ್ಘತ್ರಯ= ಆ, ಈ, ಊ, ತದನ್ವಿತಾ ಮಾಯಾ= ಹ್ರಾಂ, ಹ್ರೀಂ, ಹ್ರೂಂ, ಸೃಷ್ಟಿ= ಕ, ಸದೀರ್ಘಪಃ= ಬಾ, ಪ್ರತಿಷ್ಠಾಸಂಯುತಂ ಮಾಸಂ= ಲಾ, ಪವನ= ಯ, ಹೃದಯಂ= ನಮಃ) "ಹ್ರಾಂ ಹ್ರೀಂ ಹ್ರೂಂ ಕಾಳೀಕಪಾಲಾಯನಮಃ" ಎಂಬ ಹನ್ನೊಂದಕ್ಷರಗಳ ಮಂತ್ರವೇ ಮಹಾಶಂಖಾರ್ಚನೆಯ ಪ್ರಥಮಮಂತ್ರವು.

೯೭. ಎರಡನೆಯ ಮಂತ್ರ :—(ಹರಿ = ತ, ಭುಜಂಗೇಶ = ರ, ದೀರ್ಘತ್ರಯ= ಆ, ಈ, ಊ, ಇಂದು= ಂ, ಹಂಸ= ಸ, ಹರಿಭುಜಂಗೇಶ ಯುಕ್ತೋ ದೀರ್ಘತ್ರಯೇಂದು ಯುಕ್ ಹಂಸಃ= ಸ್ತ್ರಾಂ, ಸ್ತ್ರೀಂ, ಸ್ತ್ರೂಂ. ಉಳಿದುದು ಶಬ್ದಸ್ವರೂಪ.)

ಖಂ ದೀರ್ಘತ್ರಯಬಿಂದ್ವಾಢ್ಯಂ ಮೇಷೋ ವಾಮದೃಗನ್ವಿತಃ |
ಲಾಕಪಾಲಾಯ ಹೃದಯಂ ತೃತೀಯೋಯಂ ಶಿವಾಕ್ಷರಃ || ೯೮ ||

ಮಾಯಾಸ್ತ್ರೀಬೀಜಮರ್ಘೇಂದುಯುತಂ ಖಂ ಸ್ವರ್ಗಖಾದಿಮಃ |
ಪಾಲಾಯ ಸರ್ವಾಧಾರಾಯ ಸರ್ವಃ ಸರ್ವೋದ್ಭವಸ್ತಥಾ || ೯೯ ||

ಸರ್ವಶುದ್ಧಿಮಯಶ್ಚೇತಿ ಚೇಂತಾಃ ಸರ್ವಾಸುರಾಂತಿಕಂ |
ರುಧಿರಾ ರತಿದೀರ್ಘಾ ಚ ವಾಯುಃ ಶುಭ್ರಾನಿಲಃ ಸುರಾ || ೧೦೦ ||

ಭಾಜನಾಯ ಭಗೀ ಸತ್ಯೋ ವಿಕಪಾಲಾಯ ಹೃನ್ಮನುಃ |
ತುರ್ಯೋ ರಸೇಷು ವರ್ಣೋಯಂ ಮಹಾಶಂಖಪ್ರಪೂಜನೇ || ೧೦೧ ||

---

" ಸ್ತ್ರಾಂ ಸ್ತ್ರೀಂ ಸ್ತ್ರೂಂ ತಾರಿಣಿ ಕಪಾಲಾಯ ನಮಃ " ಎಂಬ ಹನ್ನೆರಡಕ್ಷರಗಳ ಮಂತ್ರವೇ ಎರಡನೆಯದು.

೯೮. ಮೂರನೆಯ ಮಂತ್ರ ;—(ದೀರ್ಘತ್ರಯಬಿಂದ್ವಾಢ್ಯಂ ಖಂ= ಹಾಂ, ಹೀಂ, ಹೂಂ, ವಾಮದೃಗನ್ವಿತೋ ಮೇಷಃ= ನೀ, ಉಳಿದುದು ಶಬ್ದಸ್ವರೂಪ.)

" ಹಾಂ ಹೀಂ ಹೂಂ ನೀಲಾ ಕಪಾಲಾಯನಮಃ " ಎಂಬ ಹನ್ನೊಂದಕ್ಷರ ಮಂತ್ರವು ಮೂರನೆಯದು.

೯೯-೧೦೧. ನಾಲ್ಕನೆಯ ಮಂತ್ರ :—(ಮಾಯಾ = ಹ್ರೀಂ, ಸ್ತ್ರೀ ಬೀಜ = ಸ್ತ್ರೀಂ, ಅರ್ಘೇಂದುಯುತಂ ಖಂ = ಹೂಂ, ಖಾದಿಮ = ಕ, ದೀರ್ಘಾರತಿ= ಣಾ, ವಾಯು= ಯ, ಅನಿಲ= ಯ, ಭಗೀಸತ್ಯ= ದೇ, ಹೃತ್= ನಮಃ, ಉಳಿದುದು ಮಂತ್ರದಲ್ಲಿ ಸೇರಿಸಬೇಕಾದ ಶಬ್ದಸ್ವರೂಪ)

" ಹ್ರೀಂ ಸ್ತ್ರೀಂ ಹೂಂ ಸ್ವರ್ಗ ಕಪಾಲಾಯ ಸರ್ವಾಧಾರಾಯ ಸರ್ವಾಯ ಸರ್ವೋದ್ಭವಾಯ ಸರ್ವಶುದ್ಧಿಮಯಾಯ ಸರ್ವಾಸುರರುಧಿರಾರುಣಾಯ ಶುಭ್ರಾಯ ಸುರಾಭಾಜನಾಯ ದೇವಿ ಕಪಾಲಾಯ ನಮಃ " ಎಂಬ ಐವತ್ತಾರುವರ್ಣಗಳ ಮಂತ್ರವೇ ನಾಲ್ಕನೆಯ ಮಹಾಶಂಖಾರ್ಚನೆ ಮಂತ್ರ.

ನವಾರ್ಕಮಂಡಲಂ ಚೇಷ್ಟ್ವಾ ಸಲಿಲಂ ಮೂಲಮಂತ್ರತಃ ।
ಪ್ರಪೂರಯೇತ್ಸುಧಾಬುದ್ಧ್ಯಾ ಗಂಧಪುಷ್ಪಾಕ್ಷತಾದಿಭಿಃ ॥ ೧೦೨ ॥

ಮುದ್ರಾಂ ತ್ರಿಖಂಡಾಂ ಸಂದರ್ಶ್ಯ ಪೂಜಯೇಚ್ಚಂದ್ರಮಂಡಲಂ ।
ವಾಕ್ ಶಕ್ತಿ ಪದ್ಮಾಗಗನಂ ರೇಫಾನುಗ್ರಹಬಿಂದುಯುಕ್ ॥ ೧೦೩ ॥

ಮೂಲಮಂತ್ರೋ ವಿಯದ್ಧಂಸ ಮನುಸರ್ಗಸಮನ್ವಿತಂ ।
ಅಷ್ಟಕೃತ್ವೋಽಮುನಾ ಮಂತ್ರೀ ಮಂತ್ರಯೇತ್ ಪ್ರಯತೋ ಜಲಂ ॥೧೦೪॥

---

೧೦೨. ಅಲ್ಲಿ ಸೂರ್ಯಮಂಡಲವನ್ನು 'ಅಂ ಸೂರ್ಯಮಂಡಲಾಯ ನಮಃ' ಎಂಬುದಾಗಿ ಹೇಳಿ ಪೂಜಿಸಿ, ಮೂಲಮಂತ್ರವನ್ನು ಹೇಳುತ್ತಾ ಸುಧಾ = ಸುರಾ ಎಂಬ ಭಾವನೆಯಿಂದ ನೀರನ್ನು ಪಾತ್ರೆಗೆ ತುಂಬಿಸಿ ಗಂಧ, ಪುಷ್ಪ, ಅಕ್ಷತೆಗಳನ್ನು ಅದರಲ್ಲಿ ಹಾಕಬೇಕು.

೧೦೩-೧೦೪. ತ್ರಿಖಂಡ ಮುದ್ರೆಯನ್ನು ತೋರಿಸಿ ಚಂದ್ರಮಂಡಲ ವನ್ನು "ಓಂ ಸೋಮಮಂಡಲಾಯ ನಮಃ" ಎಂದು ಪೂಜಿಸಬೇಕು.

ಈಗ ಏಕಾದಶಾಕ್ಷರಮಂತ್ರವನ್ನು ಹೇಳುತ್ತಾರೆ :- (ವಾಕ್ = ಐಂ, ಶಕ್ತಿ = ಹ್ರೀಂ, ಪದ್ಮಾ = ಶ್ರೀಂ, ರೇಫಾನುಗ್ರಹ ಬಿಂದುಯುಕ್ ಗಗನಂ = ಹ್ರಾಂ, ಮೂಲಮಂತ್ರ = ಓಂ ಹ್ರೀಂ ತ್ರೀಂ ಹುಂ ಫಟ್, ಹಂಸ ಮನುಸರ್ಗ ಸಮನ್ವಿತಂ ವಿಯತ್ = ಹಸೌಃ)

"ಐಂ ಹ್ರೀಂ ತ್ರೀಂ ಶ್ರೀಂ ಹ್ರಾಂ ಓಂ ಹ್ರೀಂ ತ್ರೀಂ ಹುಂ ಫಟ್ ಹಸೌಃ" ಎಂಬುದು ಏಕಾದಶಾಕ್ಷರ ಮಂತ್ರವು. ಇದರಿಂದ ಎಂಟಾವರ್ತಿ ಮಂತ್ರಿಯು ಜಲವನ್ನು ಅಭಿಮಂತ್ರಿಸಬೇಕು.

ಮಾಯಯಾ ಮದಿರಾಂ ಕ್ಷಿಪ್ತ್ವಾ ಶಂಖಂ ಯೋನಿಂ ಚ ದರ್ಶಯೇತ್ ।
ತತ್ರ ವೃತ್ತಾಷ್ಟಷಟ್ಕೋಣಂ ಧ್ಯಾತ್ವಾ ದೇವೀಂ ವಿಚಿಂತಯೇತ್ ॥ ೧೦೫ ॥

ಪೂರ್ವೋಕ್ತಾಂ ಪೂಜಯೇತ್ತ್ವೇನಾಂ ಮೂಲೇನಾಥ ಪ್ರತರ್ಪಯೇತ್ ।
ತರ್ಜನೀಮಧ್ಯಮಾನಾಮಾಕನಿಷ್ಠಾಭಿರ್ಮಹೇಶ್ವರೀಂ ॥ ೧೦೬ ॥

ಸಾಂಗುಷ್ಠಾಭಿಶ್ಚತುರ್ವಾರಂ ಮಹಾಶಂಖಸ್ಥಿತೇ ಜಲೇ ।
ಖಂ ರೇಫಮನು ಬಿಂದ್ವಾಢ್ಯಂ ಭೃಗುಮನ್ವಿಂದು ಯುಕ್ತಯಾ ॥ ೧೦೭ ॥

ಧ್ರುವಾದ್ಯೇನ ನಮೋಂತೇನ ತರ್ಪ್ಯಾದಾನಂದಭೈರವಂ ।
ತತಸ್ತೇನಾರ್ಘತೋಯೇನ ಪ್ರೋಕ್ಷೇತ್ಪೂಜನಸಾಧನಂ ॥ ೧೦೮ ॥

---

೧೦೫. ಅನಂತರ 'ಹ್ರೀಂ' ಎಂಬ ಮಾಯಾಬೀಜದಿಂದ ಆ ನೀರಿನಲ್ಲಿ ಮದ್ಯವನ್ನು ಹಾಕಿ, ಶಂಖಯೋನಿ ಮುದ್ರೆಗಳನ್ನು ತೋರಿಸಬೇಕು. ಬಳಿಕ ಅರ್ಘ್ಯಜಲದಲ್ಲಿ ವೃತ್ತ ಅಷ್ಟಷಟ್ಕೋಣರೂಪಯಂತ್ರವನ್ನು ಅನುಸಂಧಾನಮಾಡಿ ಪೂರ್ವೋಕ್ತದೇವಿಯನ್ನು ಧ್ಯಾನಿಸಬೇಕು.

೧೦೬-೧೦೮. ಬಳಿಕ ಈ ದೇವಿಯನ್ನು ಮೂಲಮಂತ್ರದಿಂದ ಪೂಜಿಸಿ ತರ್ಪಣಕೊಡಬೇಕು.

ಅಂಗುಷ್ಠ, ತರ್ಜನೀ, ಮಧ್ಯಮಾ, ಅನಾಮಿಕಾ, ಕನಿಷ್ಠಾ ಎಂಬ ಐದು ಬೆರಳುಗಳಿಂದ ಕಪಾಲದಲ್ಲಿನ ಜಲವನ್ನು ತೆಗೆದುಕೊಂಡು ನಾಲ್ಕಾವರ್ತಿ ಮಹೇಶ್ವರಿಗೆ ಮೂಲಮಂತ್ರದಿಂದ ತರ್ಪಣಕೊಡಬೇಕು.

"ಓಂ ಹ್ರಾಂ ಸೌಂ ನಮಃ" ಎಂಬ ಮಂತ್ರದಿಂದ ಆನಂದಭೈರವನಿಗೆ ತರ್ಪಣಕೊಡಬೇಕು. ತರುವಾಯ ಆ ಅರ್ಘ್ಯೋದಕದಿಂದ ಪೂಜಾಸಾಧನ ವಸ್ತುಗಳನ್ನು ಪ್ರೋಕ್ಷಣೆಮಾಡಬೇಕು.

**ಯೋನಿಮುದ್ರಾಂ ಪ್ರದರ್ಶ್ಯಾಪಿ ಪ್ರಣಮೇದ್ಭವತಾರಿಣೀಂ ।**
**ವಿಧಾನಮರ್ಘ್ಯೇ ಸಂಪ್ರೋಕ್ತಂ ಸರ್ವಸಿದ್ಧಿಪ್ರದಾಯಕಂ ॥ ೧೦೯ ॥**

**ಪೂರ್ವೋಕ್ತೇ ಪೂಜಯೇತ್ಪೀಠೇ ಪದ್ಮೇ ಷಟ್ಕೋಣಕರ್ಣಿಕೇ ।**
**ಧರಾಗೃಹಾವೃತೇ ರಮ್ಯೇ ದೇವೀಂ ರಮ್ಯೋಪಚಾರಕೈಃ ॥ ೧೧೦ ॥**

**ಮಹೀಗೃಹೇ ಚತುರ್ದಿಕ್ಷು ಗಣೇಶಾದೀನ್ಪ್ರಪೂಜಯೇತ್ ।**
**ಪಾಶಾಂಕುಶೌ ಕಪಾಲಂ ಚ ತ್ರಿಶೂಲಂ ದಧತಂ ಕರೈಃ ॥ ೧೧೧ ॥**

**ಅಲಂಕಾರಚಯೋಪೇತಂ ಗಣೇಶಂ ಪ್ರಾಕ್ಸಮರ್ಚಯೇತ್ ।**
**ಕಪಾಲಶೂಲೇ ಹಸ್ತಾಭ್ಯಾಂ ದಧತಂ ಸರ್ವಭೂಷಣಂ ॥ ೧೧೨ ॥**

---

೧೦೯. ಅನಂತರ ಯೋನಿಮುದ್ರೆಯನ್ನು ತೋರಿಸಿ ಸಂಸಾರವನ್ನು ದಾಟಿಸುವ ದೇವಿಯನ್ನು ನಮಸ್ಕರಿಸಬೇಕು. ಈರೀತಿಯಾಗಿ ಸಕಲಸಿದ್ಧಿದಾಯಕವಾದ ಅರ್ಘ್ಯವಿಧಾನವು ಉಕ್ತವಾಯಿತು.

೧೧೦. ಅರ್ಘ್ಯವಿಧಾನವನ್ನಾಚರಿಸಿದಬಳಿಕ ಮೇಧಾದಿ ನವಶಕ್ತಿಯುತವಾದ, ಚತುರಸ್ರರೇಖೆ (ಗೃಹ)ಯ ಒಳಭಾಗದಲ್ಲಿ ಲಿಖಿತವಾದ, ಮನೋಹರವಾದ, ಷಟ್ಕೋಣಕೋಶವುಳ್ಳ ಪದ್ಮಪೀಠದಲ್ಲಿ ದಿವ್ಯೋಪಚಾರಗಳಿಂದ ದೇವಿಯನ್ನು ಪೂಜಿಸಬೇಕು.

೧೧೧-೧೧೬. ಆ ಚತುರಸ್ರಮಂಡಲದ ನಾಲ್ಕು ದಿಕ್ಕುಗಳಲ್ಲಿಯೂ ಪೀಠಶಕ್ತಿ ಪೂಜಾಂಗವಾಗಿ ಗಣೇಶಾದಿಗಳನ್ನು ಪೂಜಿಸಬೇಕು.

ಪೂರ್ವದಿಕ್ಕಿನಲ್ಲಿ ಪಾಶ, ಅಂಕುಶ, ಕಪಾಲ ಮತ್ತು ತ್ರಿಶೂಲಗಳನ್ನು ಕರಗಳಲ್ಲಿ ಧರಿಸಿರುವ, ಆಭರಣಸಮೂಹಗಳನ್ನಿಟ್ಟುಕೊಂಡಿರುವ ಗಣೇಶನನ್ನು ಪೂಜಿಸಬೇಕು.

ಸ್ವಯೂಥವೇಷ್ಟಿತಂ ರಮ್ಯಂ ವಟುಕಂ ದಕ್ಷಿಣೇರ್ಚಯೇತ್ ।
ಅಸಿಶೂಲಕಪಾಲಾನಿ ಡಮರುಂ ದಧತಂ ಕರೈಃ ॥ ೧೧೩ ॥

ಕೃಷ್ಣಂ ದಿಗಂಬರಂ ಕ್ರೂರಂ ಕ್ಷೇತ್ರಪಾಲಂ ಚ ಪಶ್ಚಿಮೇ ।
ಕಪಾಲಂ ಡಮರುಂ ಪಾಶಂ ಲಿಂಗಂ ಸಂಬಿಭ್ರತೀಂ ಕರೈಃ ॥ ೧೧೪ ॥

ಅಧ್ಯಾಕನ್ಯಾ ರಕ್ತವಸ್ತ್ರಯೋಗಿನೀರುತ್ತರೇ ಯಜೇತ್ ।
ಅಕ್ಷೋಭ್ಯಂ ಪ್ರಯಜೇನ್ಮೂರ್ಧ್ನಿ ದೇವ್ಯಾ ಮಂತ್ರಋಷಿಂ ಶುಭಂ ॥೧೧೫॥

ಅಕ್ಷ್ಯೋಭ್ಯ ವಜ್ರಪುಷ್ಪಂ ಚ ಪ್ರತೀಚ್ಛಾನಲವಲ್ಲಭಾ ।
ಅಕ್ಷೋಭ್ಯಪೂಜನೇಮಂತ್ರಃ ಷಟ್ಕೋಣೇಷು ಷಡಂಗಕಂ ॥ ೧೧೬ ॥

---

ದಕ್ಷಿಣದಿಕ್ಕಿನಲ್ಲಿ ಎರಡು ಕೈಗಳಿಂದ ಕಪಾಲಶೂಲಗಳನ್ನು ಹಿಡಿದುಕೊಂಡಿರುವ, ಸರ್ಪದಿಂದಲಂಕೃತನಾದ, ತನ್ನ ಗಣಮಧ್ಯದಲ್ಲಿರುವ ಮನೋಹರವಟುಕನನ್ನು ಪೂಜಿಸಬೇಕು.

ಪಶ್ಚಿಮದಿಕ್ಕಿನಲ್ಲಿ ಖಡ್ಗ, ತ್ರಿಶೂಲ, ಕಪಾಲ ಮತ್ತು ಡಮರುಗಳನ್ನು ಕೈಗಳಲ್ಲಿಟ್ಟುಕೊಂಡಿರುವ, ಕಪ್ಪಗಿರುವ, ದಿಗಂಬರನಾದ, ಭಯಂಕರ ಕ್ಷೇತ್ರಪಾಲನನ್ನು ಪೂಜಿಸಬೇಕು.

ಉತ್ತರದಿಕ್ಕಿನಲ್ಲಿ ಕಪಾಲ, ಡಮರು, ಪಾಶ, ಲಿಂಗಗಳನ್ನು ಕೈಗಳಲ್ಲಿ ಧರಿಸಿರುವ ಅಧ್ಯಾಕನ್ಯೆಯರಾದ, ಕೆಂಪುವಸ್ತ್ರವನ್ನುಟ್ಟಿರುವ, ಯೋಗಿನೀಶಕ್ತಿಗಳನ್ನು ಪೂಜಿಸಬೇಕು.

ದೇವಿಮಂತ್ರಕ್ಕೆ ಋಷಿಯಾದ ಶುಭಕರನಾದ ಅಕ್ಷೋಭ್ಯನನ್ನು ಶಿರಸ್ಸಿನಲ್ಲಿ ೂಜಿಸಬೇಕು.

ಈ ಪೂಜೆಗೆ "ಅಕ್ಷೋಭ್ಯ ವಜ್ರಪುಷ್ಪಂ ಪ್ರತೀಚ್ಛ ಸ್ವಾಹಾ" ಎಂಬ ಮಂತ್ರವನ್ನು ಉಪಯೋಗಿಸಬೇಕು. ಷಟ್ಕೋಣಗಳಲ್ಲಿ ಷಡಂಗಗಳನ್ನು ರಚಿಸಬೇಕು.

ವೈರೋಚನಂ ಚಾಮಿತಾಭಂ ಪದ್ಮನಾಭಾಭಿಧಂ ತಥಾ ।
ಶಂಖಂ ಪಾಂಡುರಸಂಜ್ಞಂ ಚ ದಿಗ್ದಲೇಷು ಪ್ರಪೂಜಯೇತ್ ॥ ೧೧೭ ॥

ಲಾಭಕಾಂ ಮಾನಕಾಂ ಚೈವ ಪಾಂಡುರಾಂ ತಾರಕಾಂ ತಥಾ ।
ವಿದಿಗ್ಗತಾಬ್ಜಪತ್ರೇಷು ಪೂಜಯೇದಿಷ್ಟಸಿದ್ಧಯೇ ॥ ೧೧೮ ॥

ಬಿಂದುನಾಮಾದಿವರ್ಣಾದ್ಯಾಃ ಸಂಬುದ್ಧ್ಯಂತಾಸ್ತಥಾಭಿಧಾಃ ।
ವಜ್ರಪುಷ್ಪಂ ಪ್ರತೀಚ್ಛಾಗ್ನಿಪ್ರಿಯಾಂತಾಃ ಪ್ರಣವಾದಿಕಾಃ ॥ ೧೧೯ ॥

ವೈರೋಚನಾದಿಪೂಜಾಯಾಂ ಮನವಃ ಪರಿಕೀರ್ತಿತಾಃ ।
ಭೂಗೃಹಸ್ಯ ಚತುರ್ದ್ವಾರ್ಷು ಪದ್ಮಾಂತಕಯಮಾಂತಕೌ ॥ ೧೨೦ ॥

ವಿದ್ಯಾಂತಕಾಭಿಧಃ ಪಶ್ಚಾನ್ನರಾಂತಕ ಇಮಾನ್ಯಜೇತ್ ।
ಶಕ್ರಾದೀಂಲ್ಲೋಕೇಶಾಂಶ್ಚೈವ ವಜ್ರಾದೀನ್ಪ್ರಯಜೇತ್ತದನಂತರಂ ॥ ೧೨೧ ॥

---

೧೧೭. ಪೂರ್ವಾದಿ ದಿಗ್ದಳಗಳಲ್ಲಿ ವೈರೋಚನ, ಅಮಿತಾಭ, ಪದ್ಮನಾಭ ಮತ್ತು ಪಾಂಡುರನಾಮಕ ಶಂಖಗಳನ್ನು ಪೂಜಿಸಬೇಕು.

೧೧೮. ಆಗ್ನೇಯಾದಿ ವಿದಿಕ್ಕುಗಳಲ್ಲಿರುವ ಪದ್ಮಪತ್ರಗಳಲ್ಲಿ ಇಷ್ಟ ಸಿದ್ಧ್ಯರ್ಥವಾಗಿ ಲಾಭಕಾ, ಮಾನಕಾ, ಪಾಂಡುರಾ ಮತ್ತು ತಾರಕಾ ಇವರನ್ನು ಪೂಜಿಸಬೇಕು.

೧೧೯.೧೨೧. ವೈರೋಚನಾದಿಗಳ ಪೂಜೆಗೆ ಆದಿಯಲ್ಲಿ ಓಂ, ಅನಂತರ ಅನುಸ್ವಾರಸಹಿತವಾದ ಅವರವರ ಹೆಸರಿನ ಆದಿವರ್ಣ, ತರುವಾಯ ಸಂಬೋಧನ ಪ್ರಥಮಾವಿಭಕ್ತ್ಯಂತವಾದ ಅವರವರ ನಾಮಧೇಯ, ಆಮೇಲೆ 'ವಜ್ರಪುಷ್ಪಂ ಪ್ರತೀಚ್ಛಸ್ವಾಹಾ' ಎಂಬುದನ್ನು ಸೇರಿಸಿ ನಿಷ್ಪನ್ನವಾಗುವ 'ಓಂ ವೈಂ ವೈರೋಚನ ವಜ್ರಪುಷ್ಪಂ ಪ್ರತೀಚ್ಛಸ್ವಾಹಾ' ಇತ್ಯಾದಿ ಮಂತ್ರಗಳು ವಿಹಿತವಾಗಿವೆ.

ಚತುರಸ್ರಮಂಡಲದ ನಾಲ್ಕುದ್ವಾರಗಳಲ್ಲಿ ಪದ್ಮಾಂತಕ, ಯಮಾಂತಕ, ವಿದ್ಯಾಂತಕ, ನರಾಂತಕ ಇವರನ್ನು ಪೂಜಿಸಬೇಕು. ಅನಂತರ ಇಂದ್ರಾದಿ ಲೋಕಪಾಲಕರು ಮತ್ತು ವಜ್ರಾದಿ ಆಯುಧ ಇವುಗಳನ್ನು ಪೂಜಿಸಬೇಕು.

ಏವಂ ಸಂಪೂಜಯೇನ್ದೇವೀಂ ಪಾಂಡಿತ್ಯಂ ಘನಮದ್ಭುತಂ ।
ಪುತ್ರಾನ್ ಪೌತ್ರಾನ್ ಶುಭಾಂ ಕೀರ್ತಿಂ ಲಭತೇ ಜನವಶ್ಯತಾಂ ॥ ೧೨೨ ॥

ತಾರೋ ಮಾಯಾ ಶ್ರೀಮದೇಕಜಟೇ ನೀಲಸರಸ್ವತೀ ।
ಮದೋಗ್ರತಾರೇ ದೇವಾಲಃ ಸನೇತ್ರೋ ಗದಿಯುಗ್ಮಕಂ ॥ ೧೨೩ ॥

ಸರ್ವಭೂತಪಿಶಾಕೂರ್ಮೋ ದೀರ್ಘೋಗ್ನಿರ್ಮೇರುಸಾನ್ಗ್ರಸ ।
ಗ್ರಭೃಗುರ್ಮಮ ಜಾಡ್ಯಂ ಚ ಭೇದಯದ್ವಿತಯಂ ರಮಾ ॥ ೧೨೪ ॥

ಮಾಯಾಸ್ತ್ರಾಗ್ನಿಪ್ರಿಯಾಂತೋಯಂ ದ್ವಿಪಂಚಾಶಲ್ಲಿಪಿರ್ಮನುಃ ।
ಅನೇನ ನಿತ್ಯಂ ಪೂಜಾಂತೇನ್ವಹಂ ದೇವ್ಯೈ ಬಲಿಂ ಹರೇತ್ ॥ ೧೨೫ ॥

೧೨೨. ಈರೀತಿಯಾಗಿ ದೇವಿಯನ್ನು ಪೂಜಿಸುವವನು ಪಾಂಡಿತ್ಯ, ಅದ್ಭುತವಾದ ಐಶ್ವರ್ಯ, ಪುತ್ರ, ಪೌತ್ರರು, ಒಳ್ಳೆಯ ಕೀರ್ತಿ ಜನವಶ್ಯತೆ ಇವುಗಳನ್ನು ಪಡೆಯುವನು.

## ನಿತ್ಯಪೂಜಾಂತ್ಯದಲ್ಲಿನ ಬಲಿದಾನ ಮಂತ್ರ

೧೨೩-೧೨೫. (ತಾರ = ಓಂ, ಮಾಯಾ = ಹ್ರೀಂ, ವಾಲ = ವ+ ಸನೇತ್ರ = ಇಯುತಃ = ವಿ, ಗದಿ = ಖ, ಕೂರ್ಮ = ಚ, ದೀರ್ಘೋಗ್ನಿ = ರಾ, ಮೇರು = ಕ್ಷ, ಬೃಗು= ಸ, ಅಸ್ತ್ರ= ಪಟ್, ಅಗ್ನಿಪ್ರಿಯಾ= ಸ್ವಾಹಾ

"ಓಂ ಹ್ರೀಂ ಶ್ರೀಮದೇಕಜಟೇ ನೀಲಸರಸ್ವತೀ ಮಹೋಗ್ರತಾರೇ ದೇವಿ ಖಖ ಸರ್ವಭೂತಪಿಶಾಚರಾಕ್ಷಸಾನ್ ಗ್ರಸಗ್ರಸ ಮಮ ಜಾಡ್ಯಂ ಭೇದಯ ಭೇದಯ ಶ್ರೀಂ ಹ್ರೀಂ ಫಟ್ ಸ್ವಾಹಾ'' ಎಂಬ ಐವತ್ತೆರಡುವರ್ಣಗಳ ಮಂತ್ರದಿಂದ ನಿತ್ಯಪೂಜೆಯ ಅವಸಾನದಲ್ಲಿ ಪ್ರತಿದಿನವೂ ಬಲಿಪ್ರದಾನಮಾಡಬೇಕು.

ಏವಂ ಸಿದ್ಧೇ ಮನೌ ಮಂತ್ರೀ ಪ್ರಯೋಗಾನ್ವಿದಧಾತಿ ಚ ।
ಜಾತಮಾತ್ರಸ್ಯ ಬಾಲಸ್ಯ ದಿವಸತ್ರಿತಯಾದಧಃ ॥ ೧೨೬ ॥

ಜಿಹ್ವಾಯಾಂ ವಿಲಿಖೇನ್ಮಂತ್ರಂ ಮಧ್ವಾಜ್ಯಾಭ್ಯಾಂ ಶಲಾಕಯಾ ।
ಸುವರ್ಣಕೃತಯಾ ಯದ್ವಾ ಮಂತ್ರೀ ಧವಲದೂರ್ವಯಾ ॥ ೧೨೭ ॥

ಗತೇಽಷ್ಟಮೇಽಬ್ದೇ ಬಾಲೋಪಿ ಜಾಯತೇ ಕವಿರಾಟ್ ಧ್ರುವಂ ।
ತಥಾ ಪರೈರಜೇಯೋಪಿ ಭೂಪಸಂಘೈರ್ಧನಾರ್ಚಿತಃ ॥ ೧೨೮ ॥

ಉಪರಾಗೇ ದತಾಽಽನೀಯ ತರುದಾರು ಸರೋಜಲೇ ।
ನಿರ್ಮಾಯ ಕೀಲಕಂ ತೇನ ತೈಲಮಧ್ವಮೃತೈರ್ಲಿಖೇತ್ ॥ ೧೨೯ ॥

ಸರೋಜಿನೀದಲೇ ಮಂತ್ರಂ ವೇಷ್ಟಯೇನ್ಮಾತೃಕಾಕ್ಷರೈಃ ।
ನಿಖಾಯ ತದ್ದಲಂ ಕುಂಡೇ ಚತುರಸ್ರೇ ಸಮೇಽಖಲೇ ॥ ೧೩೦ ॥

೧೨೬-೧೨೮. ಈರೀತಿ ಆಚರಿಸಿ ಸಿದ್ಧಿಯನ್ನು ಪಡೆದ ಮಂತ್ರಿಯು ಪ್ರಯೋಗಗಳನ್ನು ಮಾಡಬಹುದು.

ಮಗುವು ಹುಟ್ಟಿದ ಮೂರುದಿನಗಳೊಳಗೆ ಸಿದ್ಧಮಂತ್ರಿಯು ಮಗುವಿನ ನಾಲಿಗೆಯಲ್ಲಿ ಬಂಗಾರದಸಲಾಕಿ ಅಥವಾ ಬಿಳಿಯಗರಿಕೇಹುಲ್ಲಿನಿಂದ ಈಮಂತ್ರ ವನ್ನು ಬರೆದರೆ ಆಶಿಶುವು ಎಂಟುವರ್ಷವಾದಮೇಲೆ ಶ್ರೇಷ್ಠಕವಿಯಾಗುವನು ಮತ್ತು ಇತರರಿಂದ ಅಜೇಯನು, ಭೂಪಾಲಸಮೂಹಗಳಿಂದ ಪೂಜಿತನಾಗಿ ಹಣವನ್ನು ಪಡೆಯುವವನೂ ಆಗುತ್ತಾನೆ.

೧೨೯-೧೩೧. ಗ್ರಹಣಕಾಲದಲ್ಲಿ ಕೆರೆಯಲ್ಲಿದ್ದ ತರುಕಾಷ್ಠವನ್ನು ದಂತ ದಿಂದ ತೆಗೆದುಕೊಂಡು ಅದರಿಂದ ಲೇಖಣಿಯನ್ನು ರಚಿಸಿ, ಪದ್ಮಪತ್ರದಲ್ಲಿ ಎಣ್ಣೆ, ಜೇನುತುಪ್ಪ ಅಥವಾ ಅಮೃತದಿಂದ ಮಂತ್ರವನ್ನು ಬರೆದು, ಮಾತೃಕಾಕ್ಷರ ಗಳಿಂದ ವೇಷ್ಟನೆಮಾಡಿ ಎಂದರೆ ಸುತ್ತಲೂ ಮಾತೃಕಾಕ್ಷರಗಳನ್ನು ಬರೆದು,

**ಸಂಸ್ಥಾಪ್ಯ ಪಾವಕಂ ತತ್ರ ಜುಹುಯಾನ್ಮನುನ್ಯಾಮುನಾ ।**
**ಸಹಸ್ರಂ ರಕ್ತಪದ್ಮಾನಾಂ ಧೇನುದುಗ್ಧಜಲಾಪ್ಲುತಂ ॥ ೧೩೦ ॥**

**ಹೋಮಾಂತೇ ವಿವಿಧೈರತ್ನೈಃ ಫಲೈರಪಿ ಬಲಿಂ ಹರೇತ್ ।**
**ಬಲಿಮಂತ್ರೇಣ ವಿಧಿವದ್ಬಲಿಮಂತ್ರಃ ಪ್ರಕಾಶ್ಯತೇ ॥ ೧೩೨ ॥**

**ತಾರಃ ಪದ್ಮೇ ಯುಗಂ ತಂದ್ರೀ ವಿಯದ್ದೀರ್ಘಂ ಚ ಲೋಹಿತಃ ।**
**ಅತ್ರಿರ್ವಿಷಭಗಾರೂಢೋ ವದೇತ್ಪದ್ಮಾವತೀ ಪದಂ ॥ ೧೩೩ ॥**

**ಝಿಂಟೀಶಾಢ್ಯೋನಿಲಸ್ವಾಹಾ ಷೋಡಶಾರ್ಣೋ ಬಲೇರ್ಮನುಃ ।**
**ತತೋ ನಿಶೀಥೇ ಚ ಬಲಿಂ ಪೂರ್ವೋಕ್ತಮನುನಾ ಹರೇತ್ ॥ ೧೩೪ ॥**

ಭೂಮಿಯಲ್ಲಿ ಅಗೆದು ಮೇಖಲಯುಕ್ತವಾದ ಚತುರಸ್ರಕುಂಡವನ್ನು ರಚಿಸಿ ಅದರಲ್ಲಿ ಆ ಪದ್ಮಪತ್ರವನ್ನಿಟ್ಟು ಅಗ್ನಿಪ್ರತಿಷ್ಠೆಮಾಡಿ, ಅದರಲ್ಲಿ ಹಸುವಿನಹಾಲು ನೀರುಗಳಲ್ಲಿ ನೆನೆಸಿದ ಸಾವಿರ ಕೆಂಪುಕಮಲಗಳನ್ನು ಈಮಂತ್ರದಿಂದ ಹೋಮ ಮಾಡಬೇಕು.

೧೩೨ ಹೋಮವಾದಮೇಲೆ ನಾನಾವಿಧ ರತ್ನಫಲಗಳಿಂದ ಬಲಿಯನ್ನು ಬಲಿಮಂತ್ರ ಕಥನಪೂರ್ವಕವಾಗಿ ವಿಧಾನಾನುಸಾರ ಅರ್ಪಿಸಬೇಕು. ಈಗ ಬಲಿಮಂತ್ರವನ್ನು ಹೇಳುವೆನು:—

೧೩೩-೧೩೪. ಷೋಡಶಾಕ್ಷರ ಬಲಿದಾನ ಮಂತ್ರ :— (ತಾರ = ಓಂ, ತಂದ್ರೀ = ಮ, ವಿಯದ್ದೀರ್ಘ = ಹಾ, ಲೋಹಿತ = ಪ, ವಿಷಭಗಾರೂಢೋತ್ರಿಃ = ಮ ಏ ಯುತೋದಃ = ದ್ಮೇ, ಝಿಂಟೀಶಾಢ್ಯೋನಿಲಃ = ಏಯುತೋಯಃ = ಯೇ)

"ಓಂ ಪದ್ಮೇಪದ್ಮೇ ಮಹಾಪದ್ಮೇ ಪದ್ಮಾವತೀಯೇ ಸ್ವಾಹಾ" ಎಂಬುದು ಷೋಡಶಾಕ್ಷರ ಬಲಿದಾನಮಂತ್ರವು. ಇದರಿಂದ ಅರ್ಧರಾತ್ರಿಕಾಲ ದಲ್ಲಿ ಬಲಿಪ್ರದಾನ ಮಾಡಬೇಕು.

ಏವಂ ಕೃತೇ ಪಂಡಿತಾನಾಂ ಸ ಜಯಿೀ ಕವಿರಾಡ್ಭವೇತ್ ।
ನಿವಾಸೋ ಭಾರತೀಲಕ್ಷ್ಮ್ಯೋರ್ಜನತಾರಂಜನಕ್ಷಮಃ　　　　　　　|| ೧೩೫ ||

ಶತಾಭಿಜಪ್ತ್ಯಾ ಯೋ ಮಂತ್ರೀ ರೋಚನಾಂ ಮಸ್ತಕೇ ಧರೇತ್ ।
ಯಂ ಯಂ ಪಶ್ಯತಿ ತಸ್ಯಾಸೌ ದಾಸವಜ್ಜಾಯತೇ ಕ್ಷಣಾತ್　　　|| ೧೩೬ ||

ಶ್ಮಶಾನಾಂಗಾರಮಾಹೃತ್ಯ ಶರ್ವರ್ಯಾಂ ಕುಜವಾಸರೇ ।
ತೇನ ಮಂತ್ರೇಣ ಸಂವೇಷ್ಟ್ಯ ನಿಬದ್ಧಂ ರಕ್ತತಂತುಭಿಃ　　　　　|| ೧೩೭ ||

ಶತಾಭಿಜಪ್ತಮೂಲೇನ ನಿಕ್ಷಿಪೇದ್ವೈರಿವೇಶ್ಮನಿ ।
ಉಚ್ಚಾಟಯತಿ ಸಪ್ತಾಹಾತ್ಸಕುಟುಂಬಾನ್ನಿರೋಧಿನಃ　　　　　|| ೧೩೮ ||

---

೧೩೫. ಈರೀತಿಯಾಗಿ ಮಾಡುವವನು ಪಂಡಿತರನ್ನು ಜಯಿಸುವವನು, ಕವಿಶ್ರೇಷ್ಠನೂ ಮತ್ತು ವಿದ್ಯೆ, ಐಶ್ವರ್ಯಗಳಿಗೆ ನಿವಾಸಸ್ಥಾನನೂ ಆಗಿ ಜನಗಳನ್ನು ಸಂತೋಷಪಡಿಸಲು ಸಮರ್ಥನಾಗುವನು.

೧೩೬. ಒಂದುನೂರಾವರ್ತಿ ಈಮಂತ್ರಜಪದಿಂದ ಗೋರೋಜನವನ್ನು ಅಭಿಮಂತ್ರಿಸಿ ಅದರಿಂದ ಹಣೆಯಲ್ಲಿ ತಿಲಕವನ್ನು ಧರಿಸುವಮಂತ್ರಿಯು ಯಾರು ಯಾರನ್ನು ನೋಡುವನೋ ಅವರೆಲ್ಲರೂ ಕ್ಷಣಮಾತ್ರದಲ್ಲಿ ಮಂತ್ರಿಗೆ ದಾಸನಂತೆ ವಶರಾಗುವರು.

೧೩೭-೧೩೮. ಮಂಗಳವಾರ ರಾತ್ರಿ ಶ್ಮಶಾನದಿಂದ ಅಂಗಾರವನ್ನು ತಂದು, ಆ ಮಂತ್ರದಿಂದ ಬಟ್ಟೆಯಲ್ಲಿಸುತ್ತಿ ಕೆಂಪುದಾರದಿಂದಕಟ್ಟಿ ನೂರಾವರ್ತಿ ಮೂಲಮಂತ್ರಜಪವನ್ನಾಚರಿಸಿ, ಆ ಗಂಟನ್ನಭಿಮಂತ್ರಿಸಿ ಶತ್ರುಗೃಹದಲ್ಲಿಡಬೇಕು. ಹಾಗೆ ಇಟ್ಟ ಏಳುದಿನಗಳೊಳಗಾಗಿ ಅದು ಸಕುಟುಂಬರಾದ ಶತ್ರುಗಳನ್ನು ಹೊರಕ್ಕೆ ಹೊರಡಿಸುತ್ತದೆ.

ಕ್ಷಾರಾಢ್ಯನಿಶಯಾ ಮಂತ್ರಂ ಲಿಖಿತ್ವಾ ಪೌರುಷೇಸ್ಥನಿ ।
ರವಿವಾರೇ ನಿಶೀಥಿನ್ಯಾಂ ಸಹಸ್ರಮಭಿಮಂತ್ರಯೇತ್ ॥ ೧೩೯ ॥

ತತ್ ಕ್ಷಿಪ್ತಂ ಶತ್ರುಸದನೇ ಮಂಡಲಾದ್ಭ್ರಂಶಕಂ ಭವೇತ್ ।
ಕ್ಷೇತ್ರೇ ಕ್ಷಿಪ್ತಂ ಸಸ್ಯಹಾನ್ಯೈ ಜವಹೃತ್ತುರಗಾಲಯೇ ॥ ೧೪೦ ॥

ಷಟ್ಕೋಣಾಂತರ್ಲಿಖೇನ್ಮೂಲಂ ಸಾಧ್ಯಾರ್ಣಂ ಕೇಸರೇ ಸ್ವರೈಃ ।
ಬಾಹ್ಯೇಷ್ಟವರ್ಗಯುಕ್ಪತ್ರಂ ಪದ್ಮಭೂಮಿಪುರಾವೃತಂ ॥ ೧೪೧ ॥

ಯಂತ್ರಂ ಭೂರ್ಜೇ ಜತುರಸೈರ್ಲಿಖೇತ್ಪೀತಾಂಬರಾವೃತಂ ।
ಪಟ್ಟಸೂತ್ರೇಣ ಸನ್ನದ್ಧಂ ಶಿಶುಕಂಠಗತಂ ಧ್ರುವಂ ॥ ೧೪೨ ॥

---

೧೩೯. ಮನುಷ್ಯನ ಮೂಳೆಯಲ್ಲಿ ಉಪ್ಪುಮಿಶ್ರವಾದ ಅರಿಶಿನದಿಂದ ಮಂತ್ರವನ್ನು ಬರೆದು ಭಾನುವಾರದ ದಿನ ಅರ್ಧರಾತ್ರಿಯಕಾಲದಲ್ಲಿ ಅದನ್ನು ಒಂದುಸಾವಿರ ಆವರ್ತಿ ಮಂತ್ರದಿಂದ ಅಭಿಮಂತ್ರಿಸಬೇಕು.

೧೪೦. ಹಾಗೆ ಅಭಿಮಂತ್ರಿಸಿದ ಯಂತ್ರವನ್ನು ಶತ್ರುಗಳಮನೆಯಲ್ಲಿಟ್ಟರೆ ಆ ಮನೆಯು ನಲವತ್ತುದಿನಗಳೊಳಗೆ ಹಾಳಾಗುವುದು. ಅದನ್ನು ಗದ್ದೆಹೊಲಗಳಲ್ಲಿಟ್ಟರೆ ಪೈರು ಹಾಳಾಗುವುದು. ಅಶ್ವಾಗಾರದಲ್ಲಿಟ್ಟರೆ ಕುದುರೆಗಳ ವೇಗವನ್ನಪಹರಿಸುವುದು.

೧೪೧. ತಾರಾಧಾರಣ ಯಂತ್ರ ಲೇಖನಕ್ರಮವನ್ನು ಹೇಳುತ್ತಾರೆ :- ಒಳಗಿನ ಷಟ್ಕೋಣದ ಕೋಶದೊಳಗೆ 'ಅಮುಕಂ ರಕ್ಷರಕ್ಷ' ಮುಂತಾದ ಸಾಧ್ಯಾಂಶ ಸಹಿತವಾದ 'ಓಂ ಹ್ರೀಂ ತ್ರೀಂ ಹುಂ ಫಟ್' ಎಂಬ ಮೂಲಮಂತ್ರವನ್ನು ಬರೆದು, ಕೇಸರಗಳಲ್ಲಿ ಎರಡೆರಡರಂತೆ ಸ್ವರಾಕ್ಷರಗಳನ್ನುಲ್ಲೇಖಿಸಿ, ಅದರ ಹೊರಗಿನ ಅಷ್ಟದಳಗಳಲ್ಲಿ ಕವರ್ಗಾದಿ ಎಂಟುವರ್ಗಗಳ ಅಕ್ಷರಗಳನ್ನೂ ಬರೆದು ಅದನ್ನು ಚತುರಸ್ರ ಮಂಡಲದಲ್ಲಡಗುವಂತೆ ಭೂಗೃಹವನ್ನು (ಚತುರಸ್ರ ಮಂಡಲ) ಬರೆಯಬೇಕು. ಇದೇ ಯಂತ್ರವು.

೧೪೨-೧೪೩. ಇದನ್ನು ಭೂರ್ಜಪತ್ರದಲ್ಲಿ ಅರಗಿನ ರಸದಿಂದ ಬರೆಯು

ಭೂತಭೀತಿಹರಂ ವಾಮಬಾಹೌ ಸ್ತ್ರೀಣಾಂ ಚ ಪುತ್ರದಂ ।
ನೃಣಾಂ ದಕ್ಷಿಣಬಾಹುಸ್ಥಂ ನಿರ್ಧನಾನಾಂ ಧನಪ್ರದಂ　　　　|| ೧೪೩ ||

ಜ್ಞಾನದಂ ಜ್ಞಾನಮಿಚ್ಛೂನಾಂ ರಾಜ್ಞಾಂ ತು ವಿಜಯಪ್ರದಂ || ೧೪೪ ||

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ಯಕ್ಷಿಣೀಮಂತ್ರಭೇದನಿರೂಪಣಂ ನಾಮ
ಪಂಚಾಶೀತಿತಮೋಽಧ್ಯಾಯಃ

---

ಬೇಕು. ಹೀಗೆ ಬರೆದ ಯಂತ್ರವನ್ನು ಪೀತಾಂಬರದಲ್ಲಿ ಸುತ್ತಿ ರೇಷ್ಮೆದಾರದಿಂದ ಮಕ್ಕಳ ಕುತ್ತಿಗೆಯಲ್ಲಿ ಕಟ್ಟಿದರೆ ನಿಜವಾಗಿಯೂ ಭೂತಭಯ ಪರಿಹಾರವಾಗುವುದು. ಹೆಂಗಸರಿಗೆ ಎಡಬಾಹುವಿನಲ್ಲಿ ಕಟ್ಟಿದರೆ ಅದು ಮಕ್ಕಳನ್ನು ಕೊಡುತ್ತದೆ. ಬಡವರಾದ ಮನುಷ್ಯರು ಬಲಬಾಹುವಿನಲ್ಲಿ ಅದನ್ನು ಕಟ್ಟಿಕೊಂಡರೆ ಐಶ್ವರ್ಯವನ್ನು ಪಡೆಯುವರು.

೧೪೪. ಜ್ಞಾನವನ್ನು ಬಯಸುವವರಿಗೆ ಅದು ಜ್ಞಾನವನ್ನು ಕೊಡುತ್ತದೆ. ರಾಜರು ಅದನ್ನು ಧರಿಸಿದರೆ ಅವರಿಗೆ ವಿಜಯಲಕ್ಷ್ಮಿಯು ಕರಗತಳಾಗುವಳು.

ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾ
ಖ್ಯಾನವೆಂಬ ಮೂರನೆಯ ಪಾದದಲ್ಲಿ ಯಕ್ಷಣೀಮಂತ್ರಪ್ರಭೇದ
ನಿರೂಪಣವೆಂಬ ಎಂಬತ್ತೈದನೆಯ
ಅಧ್ಯಾಯವು ಮುಗಿದುದು.

## ವಿಷಯ ಸಂಗ್ರಹ

ಕಾಳೀ ಮಂತ್ರಗಳು, ತಾರಾಮಂತ್ರ, ಅವುಗಳ ನ್ಯಾಸಾದಿಗಳು, ಬಲಿದಾನಮಂತ್ರ, ಪೂಜಾ, ಹೋಮ, ಯಂತ್ರ, ಅವುಗಳ ಫಲ, ನಾನಾವಿಧ ಪ್ರಯೋಗ ಮುಂತಾದ ಅಂಗಗಳು, ಮಂತ್ರಸಾಧನಕ್ರಮ ಮುಂತಾದುವೆಲ್ಲವೂ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ.

# ಷಡಶೀತಿತಮೋಽಧ್ಯಾಯಃ

**ಸನತ್ಕುಮಾರ ಉವಾಚ**

**ಸರಸ್ವತ್ಯವತಾರಾಸ್ತೇ ಕಥಿತಾಃ ಸಿದ್ಧಿದಾ ನೃಣಾಂ ।**
**ಅಥ ಲಕ್ಷ್ಮ್ಯವತಾರಾಂಸ್ತೇ ವಕ್ಷ್ಯೇ ಸರ್ವಾರ್ಥಸಿದ್ಧಿದಾನ್ ॥ ೧ ॥**

**ವಾಣೀ ಮನ್ಮಥಶಕ್ತ್ಯಾಖ್ಯಂ ಬೀಜತ್ರಿತಯಮೀರಿತಂ ।**
**ಋಷಿಃ ಸ್ಯಾದ್ದಕ್ಷಿಣಾಮೂರ್ತಿಃ ಪಂಕ್ತಿಶ್ಛಂದಃ ಪ್ರಕೀರ್ತಿತಂ ॥ ೨ ॥**

**ದೇವತಾ ತ್ರಿಪುರಾ ಬಾಲಾ ಮಧ್ಯಾಂತೇ ಶಕ್ತಿಬೀಜಕೇ ।**
**ನಾಭೇರಾಪಾದ್ಯಮಾದ್ಯಂ ತು ನಾಭ್ಯಂತಂ ಹೃದಯಾತ್ಪರಂ ॥ ೩ ॥**

---

## ಎಂಬತ್ತಾರನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :— ನಾರದನೇ! ನಿನಗೆ ಸಿದ್ಧಿದಾಯಕಳಾಗದ ಸರಸ್ವತ್ಯವತಾರಗಳನ್ನು ಹೇಳಿದೆನು. ಈಗ ಸಕಲೇಷ್ಟಸಿದ್ಧಿಪ್ರದಳಾದ ಲಕ್ಷ್ಮೀದೇವಿಯ ಅವತಾರಗಳನ್ನು ಹೇಳುವೆನು.

೨-೩. ಈಗ ಬಾಲಾಮಂತ್ರವನ್ನು ಹೇಳುತ್ತಾರೆ :— (ವಾಣೀ = ಐಂ, ಮನ್ಮಥ = ಕ್ಲೀಂ, ಶಕ್ತಿಃ = ಸೌಃ) 'ಐಂ ಕ್ಲೀಂ ಸೌಃ' ಎಂಬುದು ತ್ರಿಬೀಜಬಾಲಾಮಂತ್ರವೆನಿಸುವುದು.

ಈ ಮಂತ್ರಕ್ಕೆ ದಕ್ಷಿಣಾಮೂರ್ತಿಯು ಋಷಿ, ಪಂಕ್ತಿ ಛಂದಸ್ಸು, ತ್ರಿಪುರಬಾಲೆಯು ದೇವತೆ, 'ಕ್ಲೀಂ' ಎಂಬುದು ಶಕ್ತಿ, 'ಸೌಃ' ಎಂಬುದು ಬೀಜವು.

ನಾಭಿಯಿಂದ ಪಾದದವರೆಗೆ 'ಐಂ' ಎಂಬ ಮೊದಲನೆಯ ಬೀಜವನ್ನೂ, ನಾಭಿಯಿಂದ ಹೃದಯದವರೆಗೆ 'ಕ್ಲೀಂ' ಎಂಬ ಎರಡನೆಯ ಬೀಜವನ್ನೂ ತಲೆಯಿಂದ ಹೃದಯದವರೆಗೆ 'ಸೌಃ' ಎಂಬ ಮೂರನೆಯ ಬೀಜವನ್ನೂ ಕ್ರಮವಾಗಿ ದೇಹಗಳಲ್ಲಿ ನ್ಯಾಸಮಾಡಬೇಕು. ಅನಂತರ ಆದ್ಯಬೀಜವನ್ನು ಎಡಗೈ

**ಮೂರ್ಧ್ನೀ ಹೃದಂತಂ ತಾರ್ತೀಯಂ ಕ್ರಮಾದ್ದೇಹೇಷು ವಿನ್ಯಸೇತ್ ।**
**ಆದ್ಯಂ ವಾಮಕರೇ ದಕ್ಷಕರೇನ್ಯದುಭಯೋಃ ಪರಂ ।			॥ ೪ ॥**

**ಪುನರ್ಬೀಜ ತ್ರಯಂ ನ್ಯಸ್ಯ ಮೂರ್ಧ್ನಿ ಗುಹ್ಯೇ ಚ ವಕ್ಷಸಿ ।**
**ನವಯೋನ್ಯಭಿಧೇ ನ್ಯಾಸೇ ನವಕೃತ್ವೋ ಮನುಂ ನ್ಯಸೇತ್			॥ ೫ ॥**

**ಕರ್ಣಯೋಶ್ಚಿಬುಕೇ ನ್ಯಸ್ಯೇಚ್ಛಂಖಯೋರ್ಮುಖಪಂಕಜೇ ।**
**ನೇತ್ರಯೋರ್ನಾಸಿಕಾಯಾಂ ಚ ಸ್ಕಂಧಯೋರುದರೇ ತಥಾ			॥ ೬ ॥**

**ನ್ಯಸೇತ್ಕೂರ್ಪರಯೋರ್ನಾಭೌ ಜಾನುನೋರ್ಲಿಂಗಮಸ್ತಕೇ ।**
**ಪಾದಯೋರಪಿ ಗುಹ್ಯೇ ಚ ಪಾರ್ಶ್ವಯೋರ್ಹೃದಯೇ ಪುನಃ			॥ ೭ ॥**

**ಸ್ತನಯೋಃ ಕಂಠದೇಶೇ ಚ ವಾಮಾಂಗಾದಿ ಪ್ರವಿನ್ಯಸೇತ್ ।**
**ವಾಗ್ಭವಾದ್ಯಾಂ ರತಿಂ ಗುಹ್ಯೇ ಪ್ರೀತಿಮಂತ್ಯಾದಿಕಾಂ ಹೃದಿ			॥ ೮ ॥**

---

ಯಲ್ಲಿಯೂ, ಎರಡನೆಯ ಬೀಜವರ್ಣವನ್ನು ಬಲಗೈಯಲ್ಲಿಯೂ, ಮೂರನೆಯದನ್ನು ಎರಡು ಕೈಗಳಲ್ಲಿಯೂ ನ್ಯಾಸಮಾಡಿ, ಪುನಃ ಈ ಮೂರು ಬೀಜಾಕ್ಷರಗಳನ್ನು ಶಿರಸ್ಸು, ಗುಹ್ಯಾವಯವ ಮತ್ತು ವಕ್ಷಃಸ್ಥಲಗಳಲ್ಲಿ ನ್ಯಾಸಮಾಡಬೇಕು. ನವಯೋನಿ ನಾಮಕ ನ್ಯಾಸದಲ್ಲಿ ಒಂಬತ್ತಾವರ್ತಿ ಮಂತ್ರವನ್ನು ನ್ಯಾಸಮಾಡಬೇಕು.

೬-೧೨. ಕಿವಿಗಳು ಗಡ್ಡಗಳಲ್ಲಿ, ಹಣೆಯ ಮೂಳೆಗಳು ಮುಖಕಮಲಗಳಲ್ಲಿ, ಕಣ್ಣುಗಳು ಮೂಗಿನಲ್ಲಿ, ಬುಜಗಳು ಹೊಟ್ಟೆಗಳಲ್ಲಿ, ಕೂರ್ಪರ ನಾಭಿಗಳಲ್ಲಿ, ಮೊಣಕಾಲು ಶಿಶ್ನಾಗ್ರಗಳಲ್ಲಿ, ಪಾದ ಗುಹ್ಯಗಳಲ್ಲಿ, ಪಕ್ಕೆಗಳು ಹೃದಯಗಳಲ್ಲಿ ಮತ್ತು ಸ್ತನ ಕುತ್ತಿಗೆಗಳಲ್ಲಿಯೂ ಸಹ ಈಮಂತ್ರವನ್ನು ವಾಮಾಂಗಾದಿಯಾಗಿ ನ್ಯಾಸಮಾಡಬೇಕು.

ಅನಂತರ ಗುಹ್ಯಾವಯವದಲ್ಲಿ "ಐಂ ರತ್ಯೈ ನಮೋ ಗುಹ್ಯೇ" ಎಂಬುದಾಗಿ ರತಿಯನ್ನೂ, ಹೃದಯದಲ್ಲಿ "ಸೌಃ ಪ್ರೀತ್ಯೈ ನಮೋ ಹೃದಿ" ಎಂಬು

ಕಾಮಬೀಜಾದಿಕಾಂ ಪಶ್ಯೇದ್ಭ್ರೂಮಧ್ಯೇ ತು ಮನೋಭವಾಂ ।
ಪುನರ್ವಾಗಂತ್ಯಕಾಮಾದ್ಯಾಸ್ತಿಸ್ರ ಏಷ್ವೇವ ವಿನ್ಯಸೇತ್ ॥ ೯ ॥

ಅಮೃತೇಶೀಂ ಚ ಯೋಗೇಶೀಂ ವಿಶ್ವಯೋನಿಂ ತೃತೀಯಕಾಂ ।
ಮೂರ್ಧ್ನಿ ವಕ್ತ್ರೇ ಹೃದಿ ನ್ಯಸ್ಯೇದ್ಗುಹ್ಯೇ ಚರಣಯೋರಪಿ ॥ ೧೦ ॥

ಕಾಮೇಶೀ ಪಂಚಬೀಜಾಢ್ಯಾಂ ಸ್ಮರಾತ್ಪಂಚ ನ್ಯಸೇತ್ಕ್ರಮಾತ್ ।
ಮಾಯಾಕಾಮೌ ಚ ವಾಗ್ಲಕ್ಷ್ಮ್ಯೌ ಕಾಮೇಶೀ ಪಂಚಬೀಜಕಂ ॥ ೧೧ ॥

ಮನೋಭವಶ್ಚ ಮಕರಧ್ವಜಕಂದರ್ಪಮನ್ಮಥಾಃ ।
ಕಾಮದೇವಃ ಸ್ಮರಃ ಪಂಚ ಕೀರ್ತಿತಾ ನ್ಯಾಸಸಿದ್ಧಿದಾಃ ॥ ೧೨ ॥

---

ದಾಗಿ ಪ್ರೀತಿಯನ್ನೂ, ಹುಬ್ಬುಗಳ ಮಧ್ಯದಲ್ಲಿ "ಕ್ಲೀಂ ಮನೋಭವಾಯೈ ನಮಃ" ಎಂಬುದಾಗಿ ಮನೋಭವೆಯನ್ನೂ ನ್ಯಾಸಮಾಡಬೇಕು.

ಪುನಃ ಐಂ, ಸೌಃ, ಕ್ಲೀಂ ಎಂಬ ಬೀಜಾಕ್ಷರಗಳಪೂರ್ವಕವಾಗಿ ಅಮೃತೇಶೀ ಯೋಗೇಶೀ ವಿಶ್ವಯೋನಿಗಳನ್ನು ಗುಹ್ಯ, ಹೃದಯ, ಭ್ರೂಮಧ್ಯಗಳಲ್ಲಿಯೇ ನ್ಯಾಸಮಾಡಬೇಕು.

ಪ್ರಯೋಗವು:— "ಐಂ ಅಮೃತೇಶ್ಯೈ ನಮಃ" ಇತ್ಯಾದಿ.

"ಹ್ರೀಂ, ಕ್ಲೀಂ, ಐಂ, ಬ್ಲೂಂ, ಸ್ತ್ರೀಂ" ಎಂಬ ಐದು ಅಕ್ಷರಗಳು ಕಾಮೇಶೀಬೀಜಗಳೆನಿಸುವುವು. ಮನೋಭವ, ಮಕರಧ್ವಜ, ಕಂದರ್ಪ, ಮನ್ಮಥ, ಕಾಮದೇವ, ಈ ಐದು ನ್ಯಾಸಸಿದ್ಧಿದಾಯಕವಾದ ಸ್ಮರಪಂಚಕವು.

ಹ್ರೀಂ ಮುಂತಾದ ಕಾಮೇಶೀಬೀಜಗಳಾದಿಯಾಗಿ ಕ್ರಮವಾಗಿ ಮನೋಭವಾದಿ ಸ್ಮರಪಂಚಕವನ್ನು ಶಿರಸ್ಸು, ಮುಖ, ಹೃದಯ, ಗುಹ್ಯ ಚರಣಗಳಲ್ಲಿ ನ್ಯಾಸಮಾಡಬೇಕು.

ಶಿರಃ ಪನ್ಮುಖಗುಹ್ಯೇಷು ಹೃದಯೇ ಬಾಣದೇವತಾಃ |
ದ್ರಾವಿಣ್ಯಾದ್ಯಾಃ ಕ್ರಮಾನ್ನ್ಯಸ್ಯೇದ್ಬಾಣೇಶೀಬೀಜಪೂರ್ವಕಾಃ || ೧೩ ||

ದ್ರಾಂದ್ರೀಂ ಕ್ಲೀಂಜೂಂಸ ಇತಿ ವೈ ಬಾಣೇಶೀ ಬೀಜಪಂಚಕಂ |
ದ್ರಾವಿಣೀ ಕ್ಷೋಭಿಣೀ ವಶೀಕರಣ್ಯಾಕರ್ಷಿಣೀ ತಥಾ || ೧೪ ||

ಸಂಮೋಹನೀ ಚ ಬಾಣಾನಾಂ ದೇವತಾಃ ಪಂಚಕೀರ್ತಿತಾಃ |
ತಾರ್ತೀಯವಾಗ್ಮಧ್ಯಗೇನ ಕಾಮೇನ ಸ್ಯಾತ್ ಷಡಂಗಕಂ || ೧೫ ||

ಷಡ್ದೀರ್ಘಸ್ವರಯುಕ್ತೇನ ತತೋ ದೇವೀಂ ವಿಚಿಂತಯೇತ್ |
ಧ್ಯಾಯೇದ್ರಕ್ತಸರೋಜಸ್ಥಾಂ ರಕ್ತವಸ್ತ್ರಾಂ ತ್ರಿಲೋಚನಾಂ || ೧೬ ||

---

೧೩. ಶಿರಸ್ಸು, ಪಾದ, ಮುಖ, ಗುಹ್ಯ, ಹೃದಯಗಳಲ್ಲಿ ಬಾಣೇಶೀ ಬೀಜಪೂರ್ವಕಳಾದ ದ್ರಾವೀಣ್ಯಾದಿ ಬಾಣದೇವತೆಗಳನ್ನು ಕ್ರಮವಾಗಿ ನ್ಯಾಸ ಮಾಡಬೇಕು.

೧೪-೧೫. "ದ್ರಾಂ, ದ್ರೀಂ, ಕ್ಲೀಂ, ಜೂಂ, ಸ" ಎಂಬುದು ಬಾಣೇಶೀಬೀಪಂಚಕವು. ದ್ರಾವಿಣೀ, ಕ್ಷೋಭಿಣೀ, ವಶೀಕರಣೀ, ಆಕರ್ಷಿಣಿ ಮತ್ತು ಮೋಹಿನೀ ಎಂಬೀ ಐದು ಬಾಣದೇವತೆಗಳೆಂದು ಉಕ್ತವಾಗಿವೆ.

"ಸೌಃ ಕ್ಲೀಂ ಐಂ" ಎಂಬ ದೀರ್ಘಸ್ವರಯುಕ್ತವಾದ ಬೀಜತ್ರಯದಿಂದ ಹೃದಯಾದಿ ಷಡಂಗಗಳನ್ನು ನ್ಯಾಸವಮಾಡಬೇಕು.

"ಸೌಃ ಕ್ಲೀಂ ಐಂ ಹೃತ್", "ಸೌಃ ಕ್ಲೀಂ ಐಂ ಶಿರಃ" ಇತ್ಯಾದಿ ರೀತಿಯಾಗಿ ಪ್ರಯೋಗಗಳನ್ನು ತಿಳಿಯಬೇಕು.

ತರುವಾಯ ದೇವಿಯನ್ನು ಧ್ಯಾನಿಸಬೇಕು. ಧ್ಯಾನ:—ಕೆಂಪು ಪದ್ಮ ದಲ್ಲಿರುವ, ಕೆಂಪು ವಸ್ತ್ರವನ್ನುಟ್ಟಿರುವ, ಮೂರು ಕಣ್ಣುಗಳುಳ್ಳ, ಉದಯಿಸು ತ್ತಿರುವ ಸೂರ್ಯನಂತೆ ಹೊಳೆಯುತ್ತಿರುವ, ವಿದ್ಯಾ, ಅಕ್ಷಮಾಲಾ, ಅಭಯ ವರಮುದ್ರೆಗಳನ್ನು ಕೈಗಳಲ್ಲಿ ಧರಿಸಿರುವ ದೇವಿಯನ್ನು ಧ್ಯಾನಿಸಬೇಕು.

ಉದ್ಯದರ್ಕನಿಭಾಂ ವಿದ್ಯಾಮಾಲಾಭಯವರೋದ್ವಹಾಂ ।
ಲಕ್ಷತ್ರಯಂ ಜಪೇನ್ಮಂತ್ರಂ ದಶಾಂಶಂ ಕಿಂಶುಕೋದ್ಭವೈಃ ॥ ೧೭ ॥

ಪುಷ್ಪೈರ್ಹಯಾರಿಜೈರ್ವಾಪಿ ಜುಹುಯಾನ್ಮಧುರಾನ್ವಿತೈಃ ।
ನವಯೋನ್ಯಾತ್ಮಕಂ ಯಂತ್ರಂ ಬಹಿರಷ್ಟದಲಾವೃತಂ ॥ ೧೮ ॥

ಕೇಸರೇಷು ಸ್ವರಾನ್ನ್ಯಸ್ಯೇದ್ವರ್ಗಾನಷ್ಟೌ ದಲೇಷ್ವಪಿ ।
ದಲಾಗ್ರೇಷು ತ್ರಿಶೂಲಾನಿ ಪದ್ಮಂ ತು ಮಾತೃಕಾವೃತಂ ॥ ೧೯ ॥

ಏವಂ ವಿಲಿಖಿತೇ ಯಂತ್ರೇ ಪೀಠಶಕ್ತೀಃ ಪ್ರಪೂಜಯೇತ್ ।
ಇಚ್ಛಾ ಜ್ಞಾನಾ ಕ್ರಿಯಾ ಚೈವ ಕಾಮಿನೀ ಕಾಮದಾಯಿನೀ ॥ ೨೦ ॥

ರತೀ ರತಿಪ್ರಿಯಾ ನಂದಾ ಮನೋನ್ಮನ್ಯಪಿ ಚೋದಿತಾಃ ।
ಪೀಠಶಕ್ತೀರಿಮಾ ಇಷ್ಟ್ವಾ ಪೀಠಂ ತನ್ಮನುನಾ ದಿಶೇತ್ ॥ ೨೧ ॥

---

ಅನಂತರ ಈ ಮಂತ್ರವನ್ನು ಮೂರು ಲಕ್ಷ ಜಪಮಾಡಿ ಮುತ್ತುಗದ ಹೂವು ಅಥವಾ ಹಯಾರಿ ಕುಸುಮಗಳಿಂದ ಸಕ್ಕರೆ ಮುಂತಾದ ಮಧುರವಸ್ತು ಸಹಿತವಾಗಿ ಮೂವತ್ತುಸಾವಿರ ಹೋಮ ಮಾಡಬೇಕು.

ಹೊರಗೆ ಸುತ್ತಲೂ ಅಷ್ಟದಳಗಳಿಂದ ಕೂಡಿದ, ಒಂಬತ್ತು ಮೂಲೆಗಳಿಂದ ಯುಕ್ತವಾದ, ಚತುರಸ್ರಮಂಡಲದೊಳಗಡಗಿರುವ, ನವಯೋನ್ಯಾತ್ಮಕ ಯಂತ್ರವನ್ನು ಬರೆದು ಅದರೊಳಗೆ ಕೇಸರಗಳಲ್ಲಿ ಸ್ವರಗಳನ್ನೂ, ಕವರ್ಗಾದಿ ಎಂಟು ವರ್ಗಗಳನ್ನು ಅಷ್ಟದಳಗಳಲ್ಲಿಯೂ, ದಳಗಳ ಕೊನೆಯ ಭಾಗದಲ್ಲಿ ತ್ರಿಶೂಲಗಳನ್ನೂ, ಪದ್ಮದ ಸುತ್ತಲೂ ಮಾತೃಕಾಕ್ಷರಗಳನ್ನೂ ಬರೆಯಬೇಕು. ಈ ರೀತಿ ಬರೆದ ಯಂತ್ರದಲ್ಲಿ ಬಾಲಾದೇವಿಯನ್ನು ಪೂಜಿಸಬೇಕು.

೨೦-೨೨. ಈ ಪ್ರಕಾರ ಲಿಖಿತಯಂತ್ರದಲ್ಲಿ ಮೊದಲು ಪೀಠಶಕ್ತಿಗಳನ್ನು ಪೂಜಿಸಬೇಕು. ಇಚ್ಛಾ, ಜ್ಞಾನ, ಕ್ರಿಯಾ, ಕಾಮಿನೀ, ಕಾಮದಾಯಿನೀ,

ವ್ಯೋಮಪೂರ್ವಂ ತು ತಾರ್ತೀಯಂ ಸದಾಶಿವಮಹಾಪದಂ |
ಪ್ರೇತಪದ್ಮಾಸನಂ ಜೇಂತಂ ನಮೋಂತಃ ಪೀಠಮಂತ್ರಕಃ || ೨೨ ||

ಷೋಡಶಾರ್ಣಸ್ತತೋ ಮೂರ್ತೌ ಕ್ಲೃಪ್ತಾಯಾಂ ಮೂಲಮಂತ್ರತಃ |
ಆವಾಹ್ಯ ಪೂಜಯೇದ್ದೇವೀಮುಪಚಾರೈಃ ಪೃಥಗ್ವಿಧೈಃ || ೨೩ ||

ದೇವೀಮಿಷ್ಟ್ವಾ ಮಧ್ಯಯೋನೌ ತ್ರಿಕೋಣೇ ರತಿಪೂರ್ವಿಕಾಂ |
ವಾಮಕೋಣೇ ರತಿಂ ದಕ್ಷೇ ಪ್ರೀತಿಮಗ್ರೇ ಮನೋಭವಾಂ || ೨೪ ||

ಯೋನ್ಯಂತರ್ವಹ್ನಿಕೋಣಾದಾವಂಗಾನ್ಯಗ್ನೇರ್ವಿದಿಕ್ಷ್ವಪಿ |
ಮಧ್ಯಯೋನೇರ್ಬಹಿಃ ಪೂರ್ವಾದಿಷು ಚಾಗ್ರೇ ಸ್ಮರಾನಪಿ || ೨೫ ||

---

ರತಿ, ರತಿಪ್ರಿಯಾ, ನಂದಾ ಮತ್ತು ಮನೋನ್ಮನೀ ಎಂಬುದಾಗಿ ಉಕ್ತರಾದ ಒಂಬತ್ತು ಪೀಠಶಕ್ತಿಗಳನ್ನು ಪೂಜಿಸಿದಮೇಲೆ ಪೀಠಮಂತ್ರದಿಂದ ಪೀಠವನ್ನು ಕಲ್ಪಿಸಬೇಕು.

ಪೀಠಮಂತ್ರ:—(ವ್ಯೋಮ = ಹ್, ತಾರ್ತೀಯಂ = ಸೌಃ) "ಹ್ ಸೌಃ ಸದಾಶಿವಮಹಾಪ್ರೇತಪದ್ಮಾಸನಾಯ ನಮಃ" ಎಂಬುದೇ ಹದಿನಾರಕ್ಷರಗಳ ಪೀಠಮಂತ್ರವು.

೨೩. ಅನಂತರ ಮೂಲಮಂತ್ರದಿಂದ ಕ್ಲೃಪ್ತವಾದ ಮೂರ್ತಿಯಲ್ಲಿ ದೇವಿಯನ್ನು ಆವಾಹನೆಮಾಡಿ ನಾನಾವಿಧವಾದ ಉಪಚಾರಗಳಿಂದ ದೇವಿಯನ್ನು ಪೂಜಿಸಬೇಕು.

೨೪-೨೭. ದೇವಿಯನ್ನು ಪೂಜಿಸಿ ಯೋನ್ಯಾಕಾರವಾದ ಮಧ್ಯತ್ರಿಕೋಣದಲ್ಲಿ ರತಿಪ್ರಿಯೆಯನ್ನೂ, ಎಡಭಾಗದ ಕೋಣದಲ್ಲಿ ರತಿಯನ್ನೂ, ಬಲಭಾಗದಲ್ಲಿ ಪ್ರೀತಿಯನ್ನೂ, ಮೇಲ್ಭಾಗದಲ್ಲಿ ಮನೋಭವೆಯನ್ನೂ, ಯೋನಿಯ

ಬಾಣದೇವೀಸ್ತದ್ವದೇವ ಶಕ್ತೀರಷ್ಟಸು ಯೋನಿಷು |
ಸುಭಗಾಖ್ಯಾ ಭಗಾ ಪಶ್ಚಾತ್ತೃತೀಯಾ ಭಗಸರ್ಪಿಣೀ || ೨೬ ||

ಭಗಮಾಲಾ ತಥಾನಂಗಾನಂಗಾದ್ಯಾ ಕುಸುಮಾಪರಾ |
ಅನಂಗಮೇಖಲಾನಂಗಮದನೇತ್ಯಷ್ಟಶಕ್ತಯಃ || ೨೭ ||

ಪದ್ಮಕೇಶರಗಾ ಬ್ರಾಹ್ಮೀಮುಖಾಃ ಪತ್ರೇಷುಭೈರವಾಃ |
ದೀರ್ಘಾದ್ಯಾ ಮಾತರಃ ಪೂಜ್ಯಾ ಹ್ರಸ್ವಾದ್ಯಾಶ್ಚಾಷ್ಟಭೈರವಾಃ || ೨೮ ||

ದಲಾಗ್ರೇಷ್ವಷ್ಟಪೀಠಾನಿ ಕಾಮರೂಪಾಖ್ಯಮಾದಿಮಂ |
ಮಲಯಂ ಕೊಲ್ಲಗಿರ್ಯಾಖ್ಯಂ ಚೌಹಾರಾಖ್ಯಂ ಕುಲಾಂತಕಂ || ೨೯ ||

---

ಒಳಭಾಗದಲ್ಲಿ ವಹ್ನಿಕೋಣಾದಿಗಳಲ್ಲಿ ಆಗ್ನೇಯಾದಿವಿದಿಕ್ಕುಗಳಲ್ಲಿ ಅಂಗಗಳನ್ನೂ ಪೂಜಿಸಬೇಕು.

ಮಧ್ಯಯೋನಿಯ ಹೊರಭಾಗದಲ್ಲಿ, ಪೂರ್ವಾದಿ ದಿಕ್ಕುಗಳಲ್ಲಿ ಸ್ಮರಮುಂತಾದವರನ್ನೂ, ಬಾಣದೇವತೆಗಳನ್ನೂ, ಅದರಂತೆಯೇ ಅಷ್ಟಯೋನಿಗಳಲ್ಲಿ ಶಕ್ತಿಗಳನ್ನೂ ಸಹ ಪೂಜಿಸಬೇಕು.

ಸುಭಗಾಖ್ಯಾ, ಭಗಾ, ಭಗಸರ್ಪಿಣೀ, ಭಗಮಾಲಾ, ಅನಂಗಾ, ಅನಂಗಕುಸುಮಾ, ಅನಂಗಮೇಖಲಾ ಮತ್ತು ಅನಂಗಮದನಾ ಎಂಬಿವು ಅಷ್ಟಶಕ್ತಿಗಳು.

೨೮. ಪದ್ಮಕೇಸರಗಳಲ್ಲಿರುವ ಬ್ರಾಹ್ಮೀ ಮುಂತಾದವರನ್ನೂ, ದಳಗಳಲ್ಲಿ ಭೈರವರಾದ ದೀರ್ಘಾದಿ ಮಾತೃಗಳನ್ನೂ, ಹ್ರಸ್ವಾದ್ಯಷ್ಟಭೈರವರನ್ನೂ ಪೂಜಿಸಬೇಕು.

೨೯-೩೧. ದಳಗಳ ಅಗ್ರಭಾಗಗಳಲ್ಲಿ ಎಂಟು ಪೀಠಗಳನ್ನು ಪೂಜಿಸಬೇಕು. ಅವುಗಳಲ್ಲಿ ಮೊದಲನೆಯದು ಕಾಮರೂಪಪೀಠ, ಮಲಯ, ಕೊಲ್ಲ

ಜಾಲಂಧರಂ ತಥೋನ್ನಾಸಂ ಕೋಟಪೀಠಮಥಾಷ್ಟಮಂ ।
ಭೂಗೃಹೇ ದಶದಿಕ್ಷ್ವರ್ಚೇದ್ಧೇತುಕಂ ತ್ರಿಪುರಾಂತಕಂ || ೩೦ ||

ವೈತಾಲಮಗ್ನಿಜಿಹ್ವಂ ಚ ಕಾಲಾಂತಕಕಪಾಲಿನೌ ।
ಏಕಪಾದಂ ಭೀಮರೂಪಂ ವಿಮಲಂ ಹಾಟಕೇಶ್ವರಂ || ೩೧ ||

ಶಕ್ರಾದ್ಯಾನಾಯುಧೈಃ ಸಾರ್ಧಂ ಸ್ವಸ್ವದಿಕ್ಷು ಸಮರ್ಚಯೇತ್ ।
ತದ್ಬಹಿರ್ದಿಕ್ಷು ಬಟುಕಂ ಯೋಗಿನೀಂ ಕ್ಷೇತ್ರನಾಯಕಂ || ೩೨ ||

ಗಣೇಶಂ ವಿದಿಶಾಸ್ವರ್ಚೇದ್ವಸೂನ್ಸೂರ್ಯಾಂಚ್ಛಿವಾಂಸ್ತಥಾ ।
ಭೂತಾಂಶ್ಚೇತ್ಥಂ ಭಜನ್ಬಾಲಾಮೀಶಃ ಸ್ಯಾದ್ಧನವಿದ್ಯಯೋಃ || ೩೩ ||

---

ಗಿರಿ, ಚೌಹಾರ, ಕುಲಾಂತಕ, ಜಾಲಂಧರ, ಉನ್ನಾಸ ಮತ್ತು ಎಂಟನೆಯದಾದ ಕೋಟಪೀಠ ಎಂಬಿವು ಅಷ್ಟಪೀಠಗಳು.

ಚತುರಸ್ರಮಂಡಲದಲ್ಲಿ ದಶ ದಿಕ್ಕುಗಳಲ್ಲಿ ಹೈತುಕ, ತ್ರಿಪುರಾಂತಕ, ವೈತಾಳ, ಅಗ್ನಿಜಿಹ್ವಾ, ಕಾಲಾಂತಕ, ಕಪಾಲಿ, ಏಕಪಾದ, ಭೀಮರೂಪ, ವಿಮಲ, ಹಾಟಕೇಶ್ವರ ಎಂಬೀ ಹತ್ತು ಶಕ್ತಿಗಳನ್ನು ಪೂಜಿಸಬೇಕು.

೩೨-೩೩. ಇಂದ್ರ ಮುಂತಾದ ಲೋಕಪಾಲಕರನ್ನು ಅವರವರ ಆಯುಧ ಸಹಿತವಾಗಿ ಆಯಾಯಾ ದಿಕ್ಕುಗಳಲ್ಲಿ ಪೂಜಿಸಬೇಕು. ಅದರ ಹೊರಗೆ ಪೂರ್ವಾದಿ ದಿಕ್ಕುಗಳಲ್ಲಿ ವಟುಕ, ಯೋಗಿನೀ, ಕ್ಷೇತ್ರನಾಯಕ ಮತ್ತು ಗಣೇಶ ಇವರನ್ನೂ ಆಗ್ನೇಯಾದಿ ವಿದಿಕ್ಕುಗಳಲ್ಲಿ ವಸು, ಸೂರ್ಯ, ಶಿವ ಮತ್ತು ಭೂತ ಇವರನ್ನೂ ಪೂಜಿಸಬೇಕು. ಈ ರೀತಿಯಾಗಿ ಬಾಲಾದೇವಿಯನ್ನು ಭಜಿಸುವವನು ಧನ ನಾಯಕನೂ ಮತ್ತು ವಿದ್ಯೇಶನೂ ಆಗುವನು.

ರಕ್ತಾಂಭೋಜೈರ್ಹುತೈರ್ನಾರ್ಯೋ ವಶ್ಯಾಃ ಸ್ಯುಃ ಸರ್ಷಪೈರ್ನೃಪಾಃ ।
ನಂದ್ಯಾವರ್ತೈ ರಾಜವೃಕ್ಷೈಃ ಕುಂದೈಃ ಪಾಟಲಚಂಪಕೈಃ ॥ ೩೪ ॥

ಪುಷ್ಪೈರ್ಬಿಲ್ವಫಲೈರ್ವಾಪಿ ಹೋಮಾಲ್ಲಕ್ಷ್ಮೀಃ ಸ್ಥಿರಾ ಭವೇತ್ ।
ಅಪಮೃತ್ಯುಂ ಜಯೇನ್ಮಂತ್ರೀ ಗುಡೂಚ್ಯಾ ದುಗ್ಧಯುಕ್ತಯಾ ॥ ೩೫ ॥

ಯಥೋಕ್ತದೂರ್ವಾಹೋಮೇನ ನೀರೋಗಾಯುಃ ಸಮಶ್ನುತೇ ।
ಜ್ಞಾನಂ ಕವಿತ್ವಂ ಲಭತೇ ಚಂದ್ರಾಗರುಪುರೈರ್ಹುತೈಃ ॥ ೩೬ ॥

ಪಲಾಶಪುಷ್ಪೈರ್ವಾಕ್‌ಸಿದ್ಧಿರನ್ನಾಪ್ತಿಶ್ಚಾನ್ನಹೋಮತಃ ।
ಸುರಭಿಕ್ಷೀರಪಧ್ಯಕ್ತಾನ್ ಲಾಜಾನ್‌ಹುತ್ವಾ ರುಜೋ ಜಯೇತ್ ॥ ೩೭ ॥

---

೩೪-೩೫. ರಕ್ತ ಕಮಲಗಳಿಂದ ಹೋಮಮಾಡಿದರೆ ಸ್ತ್ರೀಯರೂ, ಸಾಸುವೆಯಿಂದ ಹೋಮವಮಾಡಿದರೆ ದೊರೆಗಳೂ ವಶರಾಗುವರು. ನಂದ್ಯಾವರ್ತಪುಷ್ಪ, ರಾಜವೃಕ್ಷ, ಕುಂದಪುಷ್ಪ, ಪಾದರೀ ಅಥವಾ ಸಂಪಿಗೆಯ ಹೂವು, ಬಿಲ್ವಪುಷ್ಪ ಅಥವಾ ಫಲ ಇವುಗಳಿಂದ ಹೋಮ ಮಾಡಿದರೆ ಸ್ಥಿರವಾದ ಸಂಪತ್ತು ಲಭಿಸುವುದು. ಹಾಲಿನಲ್ಲಿ ನೆನೆಸಿದ ಅಮೃತಬಳ್ಳಿಯಿಂದ ಹೋಮ ಮಾಡಿದರೆ ಮಂತ್ರಿಯು ಅಪಮೃತ್ಯುವನ್ನು ಗೆಲ್ಲುವನು.

೩೬-೩೭ ಹಾಲಿನಲ್ಲಿ ನೆನೆಸಿದ ಗರಿಕೆಯ ಹೋಮ ಮಾಡುವುದರಿಂದ ಆರೋಗ್ಯ, ಆಯುಸ್ಸುಗಳನ್ನು ಪಡೆಯುವನು.

ಚಂದ್ರಾಗರು ಮತ್ತು ಗುಗ್ಗುಲಗಳಿಂದ ಹೋಮ ಮಾಡುವವನು ಜ್ಞಾನವನ್ನೂ ಮತ್ತು ಕವಿತ್ವ ಶಕ್ತಿಯನ್ನೂ ಪಡೆಯುವನು.

ಮುತ್ತುಗದ ಹೂವಿನಿಂದ ಹೋಮ ಮಾಡುವುದರಿಂದ ವಾಕ್ಸಿದ್ಧಿಯೂ, ಅನ್ನ ಹೋಮದಿಂದ ಅನ್ನ ಲಾಭವೂ ಆಗುವುದು. ಮಧು ಹಾಲು ಮೊಸರುಗಳಲ್ಲಿ ಕಲೆಸಿದ ಅರಳನ್ನು ಹೋಮ ಮಾಡುವುದರಿಂದ ರೋಗಪರಿಹಾರವಾಗುವುದು.

**ರಕ್ತಚಂದನಕರ್ಪೂರಕಚೋರಾಗುರುರೋಚನಾಃ ।**
**ಚಂದನಂ ಕೇಸರಂ ಮಾಸೀಂ ಕ್ರಮಾದ್ಭಾಗೈರ್ನಿಯೋಜಯೇತ್ ॥ ೩೮ ॥**

**ಭೂಮಿಚಂದ್ರೈಕನಂದಾಬ್ಧಿದಿಕ್ಸಪ್ತನಿಗಮೋನ್ಮಿತೈಃ ।**
**ಶ್ಮಶಾನೇ ಕೃಷ್ಣಭೂತಸ್ಯ ನಿಶಿ ನೀಹಾರಪಾಥಸಾ ॥ ೩೯ ॥**

**ಕುಮಾರ್ಯಾ ಪೇಷಯೇತ್ತಾನಿ ಮಂತ್ರೇಣಾಥಾಭಿಮಂತ್ರ್ಯ ಚ ।**
**ವಿದಧ್ಯಾತ್ತಿಲಕಂ ತೇನ ದರ್ಶನಾದ್ವಶಯೇಜ್ಜನಾನ್ ॥ ೪೦ ॥**

**ಗಜಸಿಂಹಾದಿಭೂತಾನಿ ರಾಕ್ಷಸಾಂಛಾಕಿನೀರಪಿ ।**
**ಪ್ರಯೋಜನಾನಾಂ ಸಿದ್ಧ್ಯೈ ತು ದೇವ್ಯಾಃ ಶಾಪಂ ನಿವರ್ತ್ಯ ಚ ॥ ೪೧ ॥**

---

೩೮-೪೩. ರಕ್ತಚಂದನ, ಕರ್ಪೂರ, ಕಚೋರ, ಅಗರು, ಗೋರೋಜನ, ಶ್ರೀಗಂಧ, ಕೇಸರ, ಜಟಾಮಾಂಸೀ ಇವುಗಳನ್ನು ಕ್ರಮವಾಗಿ ೧, ೧, ೧, ೯, ೪, ೧೦, ೭, ೪ ಭಾಗಗಳಷ್ಟನ್ನು ಸೇರಿಸಿ ಸ್ಮಶಾನದಲ್ಲಿ ಕೃಷ್ಣಪಕ್ಷದ ಚತುರ್ದಶೀ ದಿನದ ರಾತ್ರಿಯ ಕಾಲದಲ್ಲಿ ಅದನ್ನು ತಣ್ಣೀರು ಹಾಕಿ ಕುಮಾರಿಯಿಂದ ಕಲೆಸಿಸಿ, ಮಂತ್ರದಿಂದ ಅಭಿಮಂತ್ರಿಸಿ ಆ ಗಂಧದಿಂದ ತಿಲಕವನ್ನು ಧರಿಸಬೇಕು.

ಆ ತಿಲಕದ ದರ್ಶನಮಾತ್ರದಿಂದ ಜನಗಳು, ಆನೆ, ಸಿಂಹ ಮುಂತಾದ ಪ್ರಾಣಿಗಳು, ರಾಕ್ಷಸರು, ಮತ್ತು ಶಾಕಿನೀಶಕ್ತಿಗಳೂ ಸಹ ವಶವಾಗುವುವು.

ಈ ದೇವೀ ಮಂತ್ರದಿಂದ ಪ್ರಯೋಜನ ಸಿದ್ಧಿಯಾಗಬೇಕಾದರೆ ದೇವಿಯ ಶಾಪವನ್ನು ಪರಿಹಾರ ಮಾಡಿಕೊಂಡು ನಿಷ್ಕೀಲತೆಯನ್ನು ಮಾಡಿ ಅನಂತರ ಈ ಮಂತ್ರವನ್ನು ಜಪಿಸಬೇಕು.

## ಶಾಪೋದ್ಧಾರ ಪ್ರಕಾರ

(ವರಾಹ =ಹ, ಭೃಗು =ಸ, ಪಾವಕ =ರ, ನಭ =ಹ, ಹಂಸ =ಸ, ಖ =ಹ, ಧೂಮ್ರಕೇತನ =ರ) ಮೊದಲನೆಯ ಬೀಜಾಕ್ಷರವಾದ 'ಐಂ' ಎಂಬು

ವಿಧಾಯೋತ್ಕೀಲಿತಾಂ ಪಶ್ಚಾಜ್ಜಪಮಸ್ಯ ಸಮಾಚರೇತ್ ।
ಯೋಜಯೇದಾದಿಮೇ ಬೀಜೇ ವರಾಹಭೃಗುಪಾವಕಾನ್ ॥ ೪೨ ॥

ಮಧ್ಯಮಾದೌ ನಭೋಹಂಸೌ ಮಧ್ಯಮಾಂತೇ ತು ಪಾವಕಂ ।
ಆದಾವಂತೇ ಚ ತಾರ್ತೀಯೇ ಕ್ರಮಾತ್ಸಂ ಧೂಮ್ರಕೇತನಂ ॥ ೪೩ ॥

ಏವಂ ಜಪ್ತ್ವಾ ಶತಂ ವಿದ್ಯಾ ಶಾಪಹೀನಾ ಫಲಪ್ರದಾ ।
ಯದ್ವಾದ್ಯೇ ಚರಮೇ ಬೀಜೇ ನೈವ ರೇಫಂ ನಿಯೋಜಯೇತ್ ॥ ೪೪ ॥

ಶಾಪೋದ್ಧಾರಪ್ರಕಾರಾನ್ಯೋ ಯದ್ವಾಯಂ ಕೀರ್ತಿತೋ ಬುಧೈಃ ।
ಆದ್ಯಮಾದ್ಯಂ ಹಿ ತಾರ್ತೀಯಂ ಕಾಮಃ ಕಾಮೋಥ ವಾಗ್ಭವಂ ॥ ೪೫ ॥

ಅಂತ್ಯಮಂತ್ಯಮನಂಗಶ್ಚ ನವಾರ್ಣಃ ಕೀರ್ತಿತೋ ಮನುಃ ।
ಜಪ್ತೋಽಯಂ ಶತಧಾ ಶಾಪಂ ಬಾಲಾಯಾ ವಿನಿವರ್ತಯೇತ್ ॥ ೪೬ ॥

---

ದಕ್ಕೆ 'ಹ್ ಸ್ರ' ಎಂಬುದನ್ನು ಸೇರಿಸಬೇಕು. ಸೇರಿಸಿದ ಮೇಲೆ 'ಹ್ಸ್ರೈಂ' ಎಂದು ಸಿದ್ಧವಾಗುತ್ತದೆ. ಎರಡನೆಯದಾದ 'ಕ್ಲೀಂ' ಎಂಬುದಕ್ಕೆ ಆದಿಯಲ್ಲಿ ಹ, ಸ ವರ್ಣ, ಕೊನೆಯಲ್ಲಿ ರೇಫ (ರ) ಇವುಗಳನ್ನು ಸೇರಿಸಬೇಕು. ಮೂರನೆಯದಾದ 'ಸೌಃ' ಎಂಬ ಬೀಜದಲ್ಲಿ ಹೆ, ರ ಗಳನ್ನು ಸೇರಿಸಬೇಕು. ಅದರಿಂದ 'ಹ್ರಸೌಃ' ಎಂದು ಮೂರನೆಯ ಬೀಜವು ನಿಷ್ಪನ್ನವಾಗುವುದು.

೪೪. ಈ ರೀತಿ ಸೇರಿಸಿ ನಿಷ್ಪನ್ನವಾದ ವಿದ್ಯೆಯನ್ನು ನೂರಾವರ್ತಿ ಜಪಿಸಿದರೆ ದೇವಿಯ ಶಾಪವು ಹೋಗಿ ವಿದ್ಯೆಯು ಫಲದಾಯಕವಾಗುವುದು.

ಅಥವಾ ಮೊದಲನೆಯ ಮತ್ತು ಕೊನೆಯ ಬೀಜದಲ್ಲಿ ರೇಫವನ್ನು ಸೇರಿಸದೆ ಉಳಿದುದನ್ನು ಮಾತ್ರ ಸೇರಿಸಿ ಜಪಿಸುವುದೂ ಒಂದು ಶಾಪೋದ್ಧಾರಕ್ರಮವು.

೪೫-೪೬. ಇದೂ ಇನ್ನೊಂದು ಶಾಪೋದ್ಧಾರ ವಿಧಾನವೆಂದು ಪಂಡಿತರಿಂದ ಉಕ್ತವಾಗಿದೆ:—"ಐಂ ಐಂ ಸೌಃ ಕ್ಲೀಂ ಕ್ಲೀಂ ಐಂ ಸೌಃ ಸೌಃ ಕ್ಲೀಂ" ಎಂಬ ಒಂಬತ್ತಕ್ಷರಗಳ ಮಂತ್ರವನ್ನು ನೂರಾವರ್ತಿ ಜಪಿಸಿದರೆ ಬಾಲಾದೇವಿಯ ಶಾಪ ಪರಿಹಾರವಾಗುತ್ತದೆ.

ಚೇತನ್ಯಾಹ್ಲಾದಿನೀಮಂತ್ರೌ ಜಪ್ತ್ವಾ ನಿಷ್ಕೀಲತಾಕರೌ ।
ತ್ರಿಸ್ವರಾಶ್ಚೇತನೀ ಮಂತ್ರೋಽಧರಃ ಶಾಂತಿರನುಗ್ರಹಃ ॥ ೪೭ ॥

ತಾರಾದಿಹೃದಯೋಂತಃ ಸ್ಯಾತ್ಕಾಮ ಆಹ್ಲಾದಿನೀ ಮನುಃ ।
ತಥಾ ತ್ರಯಾಣಾಂ ಬೀಜಾನಾಂ ದೀಪನೈರ್ಮನುಭಿಸ್ತ್ರಿಭಿಃ ॥ ೪೮ ॥

ಸುದೀಪ್ತಾನಿ ವಿಧಾಯಾದೌ ಜಪೇತ್ತಾನೀಷ್ಟಸಿದ್ಧಯೇ ।
ವದಯುಗ್ಮಂ ಸದೀರ್ಘಾಂಬು ಸ್ಮೃತಿಬಾಲಾವನಂತಗೌ ॥ ೪೯ ॥

ಸತ್ಯಃ ಸನೇತ್ರೋ ನಸ್ತಾದೃಗ್ವಾಕ್ ನವಾರ್ಣಾದ್ಯದೀಪಿನೀ ।
ಕ್ಲಿನ್ನೇ ಕ್ಲೇದನಿ ವೈಕುಂಠೋ ದೀರ್ಘಂ ಖಂ ಸದ್ಯಗೋಂತಿಮಃ ॥ ೫೦ ॥

---

೪೭. ಚೇತಸೀ ಮತ್ತು ಆಹ್ಲಾದಿನೀ ಮಂತ್ರಗಳನ್ನು ಜಪಿಸಿದರೆ ನಿಷ್ಕೀಲತೆಯುಂಟಾಗುವುದು.

(ಅಧರ = ಐಂ, ಶಾಂತಿ = ಈ, ಅನುಗ್ರಹ = ಔ) "ಐಂ ಈ ಔಂ" ಎಂಬ ಮೂರು ಸ್ವರಗಳುಳ್ಳದೇ ಚೇತಸೀ ಮಂತ್ರವು.

೪೮-೫೧. "ಓಂ ಕ್ಲೀಂ ನಮಃ" ಎಂಬುದು ಆಹ್ಲಾದಿನೀ ಮಂತ್ರವು.

ಈ ಎರಡು ಮಂತ್ರಗಳನ್ನು ಜಪಿಸಿ ಬಾಲಾಮಂತ್ರದ ಕೀಲವನ್ನು ಪರಿಹರಿಸಬೇಕು. ಮತ್ತು ಮೂರು ಬೀಜಗಳಿಗೆ ದೀಪಕವಾದ ಮೂರು ಮಂತ್ರಗಳಿಂದ ಅವನ್ನು ಚೆನ್ನಾಗಿ ಪ್ರಕಾಶಿತಗಳನ್ನಾಗಿ ಮಾಡಿ ಅವುಗಳನ್ನು ಇಷ್ಟ ಸಿದ್ಧ್ಯರ್ಥವಾಗಿ ಆದಿಯಲ್ಲಿ ಜಪಿಸಬೇಕು.

## ವಾಗ್ಬೀಜದೀಪಕಮಂತ್ರ

(ಸದೀರ್ಘಾಂಬು= ವ, ಅನಂತಗೌ ಸ್ಮೃತಿಬಾಲೌ= ಗವೌ= ಗ್ವಾ, ಸನೇತ್ರಸತ್ಯ= ದಿ, ತಾದೃಗ್‌ನ= ನಿ, ವಾಕ್= ಐಂ) "ವದ ವದ ವಾಗ್ವಾದಿನಿ ಐಂ" ಎಂಬ ಒಂಬತ್ತುವರ್ಣಗಳ ಮಂತ್ರವು ವಾಗ್ಬೀಜಪ್ರಕಾಶಕವು.

## ಕಾಮಬೀಜದೀಪಕಮಂತ್ರ

(ವೈಕುಂಠ= ಮ, ದೀರ್ಘಂ ಖಂ= ಹಾ, ಅಂತಿಮ= ಕ್ಷ+ಸದ್ಯಗ= ಓಯುಕ್ತ= ಕ್ಷೋ, ಸಚಂದ್ರಾನಿದ್ರಾ= ಭಂ) 'ಕ್ಲಿನ್ನೇ ಕ್ಲೇದಿನಿ ಮಹಾಕ್ಷೋಭಂ

ನಿದ್ರಾ ಸಚೇಂದ್ರಾ ಕುರ್ವಂತಾ ಶಿವಾರ್ಣಾ ಮಧ್ಯದೀಪಿನೀ ।
ತಾರೋ ಮೋಕ್ಷಂ ಚ ಕುರ್ವಂತಾ ಪಂಚಾರ್ಣಾಂತ್ಯಸ್ಯ ದೀಪಿನೀ ॥ ೩೦ ॥

ದೀಪಿನೀಃ ಮಂತರಾ ಬಾಲಾ ಸಾಧಿತಾಪಿ ನ ಸಿದ್ಧ್ಯತಿ ।
ವಾಗಂತ್ಯಕಾಮಾನ್ ಪ್ರಜಪೇದರೀಣಾಂ ಕ್ಷೋಭಹೇತವೇ ॥ ೩೧ ॥

ಕಾಮವಾಗಂತ್ಯಬೀಜಾನಿ ತ್ರೈಲೋಕ್ಯಸ್ಯ ವಶೀಕೃತೌ ।
ಕಾಮಾಂತ್ಯವಾಣೀಬೀಜಾನಿ ಮುಕ್ತಯೇ ನಿಯತೋ ಜಪೇತ್ ॥ ೩೨ ॥

ಪೂಜಾರಂಭೇ ತು ಬಾಲಾಯಾಸ್ತ್ರಿವಿಧಾನರ್ಚಯೇದ್ಗುರೂನ್ ।
ದಿವ್ಯೌಘಶ್ಚೈವ ಸಿದ್ಧೌಘೋ ಮಾನವೌಘ ಇತಿ ತ್ರಿಧಾ ॥ ೩೩ ॥

---

ಕುರು' ಎಂಬ ಹನ್ನೊಂದಕ್ಷರಮಂತ್ರವು ಮಧ್ಯಬೀಜವಾದ ಕಾಮಬೀಜಕ್ಕೆ ಪ್ರಕಾಶಕವು.

### ಶಕ್ತಿಬೀಜಪ್ರಕಾಶಕಮಂತ್ರ

"ಓಂ ಮೋಕ್ಷಂ ಕುರು" ಎಂಬ ಐದು ವರ್ಣಗಳ ಮಂತ್ರವು ಕೊನೆಯದಾದ ಶಕ್ತಿಬೀಜಕ್ಕೆ ಪ್ರಕಾಶಕವು.

೩೧. ಈ ದೀಪಕಮಂತ್ರಗಳನ್ನು ಜಪಿಸದೇ ಬಾಲಾಮಂತ್ರವನ್ನು ಜಪಿಸಿದಾಗ್ಯೂ ಅದು ಸಿದ್ಧವಾಗುವುದಿಲ್ಲ.

ಶತ್ರುನಾಶವಾಗಬೇಕೆಂಬ ಅಪೇಕ್ಷಿಸುವಾಗ ಈ ಮಂತ್ರವನ್ನು 'ಐಂ ಸೌಃ ಕ್ಲೀಂ' ಎಂಬುದಾಗಿ ಜಪಿಸಿದರೆ ಶತ್ರುನಾಶವಾಗುವುದು.

೩೨. ಲೋಕತ್ರಯವನ್ನು ವಶಪಡಿಸಿಕೊಳ್ಳಲು "ಕ್ಲೀಂ ಐಂ ಸೌಃ" ಎಂಬುದಾಗಿ ಜಪಿಸಬೇಕು. ಮುಕ್ತಿಯನ್ನು ಬಯಸುವವನು 'ಕ್ಲೀಂ ಸೌಃ ಐಂ' ಎಂಬುದಾಗಿ ಜಪಿಸಬೇಕು.

೩೩. ಬಾಲಾದೇವಿಯ ಪೂಜೆಯನ್ನು ಪ್ರಾರಂಭಿಸುವಾಗ ಮೂರುವಿಧ ಗುರುಗಳನ್ನು ಪೂಜಿಸಬೇಕು. ದಿವ್ಯೌಘ, ಸಿದ್ಧೌಘ, ಮಾನವೌಘ ಎಂಬುದಾಗಿ ಗುರುಗಳು ಮೂರು ವಿಧರು.

ಪರಪ್ರಕಾಶಃ ಪರಮೇಶಾನಃ ಪರಶಿವಸ್ತಥಾ ।
ಕಾಮೇಶ್ವರಸ್ತತೋ ಮೋಕ್ಷಃ ಷಷ್ಠಃ ಕಾಮೋಽಮೃತಾಂತಿಮಃ ॥ ೩೫ ॥

ಏತೇ ಸಪ್ತೈವ ದಿವ್ಯೌಘಾ ಆನಂದಪದಪಶ್ಚಿಮಾಃ ।
ಈಶಾನಾಖ್ಯಸ್ತತ್ಪುರುಷೋಽಘೋರಾಖ್ಯೋ ವಾಮದೇವಕಃ ॥ ೩೬ ॥

ಸದ್ಯೋಜಾತ ಇಮೇ ಪಂಚ ಸಿದ್ಧೌಘಾಖ್ಯಾಃ ಸ್ಮೃತಾ ಮುನೇ ।
ಮಾನವೌಘಾಃ ಪರಿಜ್ಞೇಯಾಃ ಸ್ವಗುರೋಃ ಸಂಪ್ರದಾಯತಃ ॥ ೩೭ ॥

ನವಯೋನ್ಯಾತ್ಮಕೇ ಯಂತ್ರೇ ವಿಲಿಖೇನ್ಮಧ್ಯಯೋನಿತಃ ।
ಪ್ರಾದಕ್ಷಿಣ್ಯೇನ ಬೀಜಾನಿ ತ್ರಿವಾರಂ ಸಾಧಕೋತ್ತಮಃ ॥ ೩೮ ॥

ತ್ರೀಂಸ್ತ್ರೀನ್ವರ್ಣಾಂಸ್ತು ಗಾಯತ್ರ್ಯಾ ಅಷ್ಟಪತ್ರೇಷು ಸಂಲಿಖೇತ್ ।
ಬಹಿರ್ಮಾತೃಕಯಾವೇಷ್ಟ್ಯ ತದ್ಬಹಿರ್ಭೂಪುರದ್ವಯಂ ॥ ೩೯ ॥

೩೫–೩೭. ಪರಪ್ರಕಾಶಾನಂದ, ಪರಮೇಶಾನಾನಂದ, ಪರಶಿವಾನಂದ, ಕಾಮೇಶ್ವರಾನಂದ, ಮೋಕ್ಷಾನಂದ, ಕಾಮಾನಂದ, ಅಮೃತಾನಂದ ಎಂಬ ಏಳು ಗುರುಗಳು ದಿವ್ಯೌಘರೆನಿಸುವರು.

ಈಶಾನಾಖ್ಯ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂಬುದಾಗಿ ಐದು ಗುರುಗಳು ಸಿದ್ಧೌಘರು ಎಂದು ಉಕ್ತವಾಗಿದೆ. ತಮ್ಮ ಕುಲಗುರು ಸಂಪ್ರದಾಯದಿಂದ ಮಾನವೌಘರನ್ನು ತಿಳಿಯಬೇಕು

೩೮. ಬಾಲಾಧಾರಣ ಯಂತ್ರ :—ಸಾಧಕೋತ್ತಮನು ನವಯೋನ್ಯಾತ್ಮಕಯಂತ್ರದಲ್ಲಿ ಮಧ್ಯಯೋನಿಯಿಂದ ಪ್ರದಕ್ಷಿಣಾಕಾರವಾಗಿ ಬೀಜಾಕ್ಷರಗಳನ್ನು ಬರೆಯಬೇಕು.

೩೯. ಅದರ ಎಂಟು ದಳಗಳಲ್ಲಿ ಬಾಲಾತ್ರಿಪುರಾಗಾಯತ್ರೀಮಂತ್ರದ ಮೂರು ಮೂರು ವರ್ಣಗಳನ್ನು ಬರೆಯಬೇಕು. ಅದರ ಹೊರಗೆ ಸುತ್ತಲೂ ಮಾತೃಕಾಕ್ಷರಗಳನ್ನು ಬರೆದು ಅದನ್ನು ಎರಡು ಚತುಷ್ಕೋಣಗಳಲ್ಲಿ ಅಡಗಿಸಬೇಕು.

ಕಾಮಬೀಜಲಸತ್ಕೋಣಂ ವ್ಯತಿಭಿನ್ನಂ ಪರಸ್ಪರಂ ।
ಯಂತ್ರಂ ತ್ರೈಪುರಮಾಖ್ಯಾತಂ ಜಪ್ತಂ ಸಂಪಾತಸಾಧಿತಂ ॥ ೬೦ ॥

ಬಾಹುನಾ ವಿಧೃತಂ ದದ್ಯಾದ್ಧನಂ ಕೀರ್ತಿಂ ಸುಖಂ ಸುತಾನ್ ।
ಕಾಮಾಂತೇ ತ್ರಿಪುರಾದೇವಿ ವಿದ್ಮಹೇ ಕಾ ವಿಷಂ ಭಗಿ ॥ ೬೧ ॥

ಬಕಃ ಖಡ್ಗೀಶಮಾರೂಢಃ ಸನೇತ್ರೋಽಗ್ನಿಶ್ಚ ಧೀಮಹಿ ।
ತನ್ನಃ ಕ್ಲಿನ್ನೇ ಪ್ರಚೋದಾಂತೇ ಯಾದಿತ್ಯೇಷಾ ಪ್ರಕೀರ್ತಿತಾ ॥ ೬೨ ॥

---

೬೦-೬೨. ಆ ಎರಡು ಚತುಷ್ಕೋಣಗಳಲ್ಲಿ ಒಂದು ಪೂರ್ವಾದಿ ದಿಕ್ಕುಗಳಲ್ಲಿ ಕೋಣವುಳ್ಳುದಾಗಿಯೂ, ಇನ್ನೊಂದು ಆಗ್ನೇಯಾದಿ ವಿದಿಕ್ಕುಗಳಲ್ಲಿ ಕೋಣವುಳ್ಳುದಾಗಿಯೂ ಇರುವಂತೆ ಬರೆಯಬೇಕು. ಆದರ ಕೋಣಗಳಲ್ಲೆಲ್ಲಾ 'ಕ್ಲೀಂ' ಎಂಬ ಕಾಮಬೀಜವನ್ನು ಬರೆಯಬೇಕು. ಈರೀತಿಯಾಗಿ ರಚಿಸಿದ ಯಂತ್ರಕ್ಕೆ 'ತ್ರೈಪುರಯಂತ್ರ' ವೆಂದು ಹೆಸರು. ಅದನ್ನು ಹೋಮ ಮಾಡಿ, ಉಳಿದ ತುಪ್ಪದಿಂದ ಸಂಯೋಜನೆ ಮಾಡಿ, ಮಂತ್ರಜಪದಿಂದ ಅಭಿಮಂತ್ರಿಸಿ, ಬಾಹುವಿನಲ್ಲಿ ಧರಿಸಿದರೆ ಅದು ಧನ, ಯಶಸ್ಸು, ಸುಖ, ಮಕ್ಕಳು, ಇವುಗಳನ್ನು ಕೊಡುತ್ತದೆ.

## ಬಾಲಾತ್ರಿಪುರಾಗಾಯತ್ರೀಮಂತ್ರ

(ಕಾಮ= ಕ್ಲೀಂ, ಭಗಿ= ಏಯುತಂ ವಿಷಂ= ಮ= ಮೇ, ಬಕ= ಶ, ಖಡ್ಗೀಶ= ವಂ, ಆರೂಢ= ಶ್ವ, ಸನೇತ್ರೋಽಗ್ನಿ= ರಿ. ಉಳಿದುದು ಮಂತ್ರದಲ್ಲಿ ಸೇರಿಸಬೇಕಾದುದು)

"ಕ್ಲೀಂ ತ್ರಿಪುರಾದೇವಿ ವಿದ್ಮಹೇ ಕಾಮೇಶ್ವರಿ ಧೀಮಹಿ ತನ್ನಃ ಕ್ಲಿನ್ನೇ ಪ್ರಚೋದಯಾತ್" ಎಂಬುದು ಸಕಲ ಸಿದ್ಧಿಪ್ರದವು, ದೇವತೆಗಳಿಂದ ಸೇವಿಸಲ್ಪಟ್ಟುದೂ ಆದ ಬಾಲಾತ್ರಿಪುರಾಗಾಯತ್ರೀಯೆಂದು ಉಕ್ತವಾಗಿದೆ.

ಗಾಯತ್ರೀ ತ್ರೈಪುರಾ ಸರ್ವಸಿದ್ಧಿದಾ ಸುರಸೇವಿತಾ ।
ಅಥ ಲಕ್ಷ್ಮ್ಯವತಾರೋಽನ್ಯಃ ಕೀರ್ತ್ಯತೇ ಸಿದ್ಧಿದೋ ನೃಣಾಂ ॥ ೬೩ ॥

ವೇದಾದಿರ್ಗಿರಿಜಾ ಪದ್ಮಾ ಮನ್ಮಥೋ ಹೃದಯಂ ಭಗ ।
ವತಿ ಮಾಹೇಶ್ವರಿ ಪ್ರಾಂತೇಽನ್ನಪೂರ್ಣೇ ದಹನಾಂಗನಾ ॥ ೬೪ ॥

ಪ್ರೋಕ್ತಾ ವಿಂಶತಿವರ್ಣೇಯಂ ವಿದ್ಯಾ ಸ್ಯಾದ್ದ್ರುಹಿಣೋ ಮುನಿಃ ।
ಧೃತಿಶ್ಛಂದೋಽನ್ನಪೂರ್ಣೇಶೀ ದೇವತಾ ಪರಿಕೀರ್ತಿತಾ ॥ ೬೫ ॥

ಷಡ್ದೀರ್ಘಾಢ್ಯೇನ ಹೃಲ್ಲೇಖಾಬೀಜೇನ ಸ್ಯಾತ್ಷಡಂಗಕಂ ।
ಮುಖನಾಸಾಕ್ಷಿಕರ್ಣಾಂಸಗುದೇಷು ನವಸು ನ್ಯಸೇತ್ ॥ ೬೬ ॥

---

ಈಗ ಇನ್ನೊಂದು ಲಕ್ಷ್ಮೀದೇವಿಯ ಅವತಾರದ ಮಂತ್ರಾದಿ ಪೂಜಾ ವಿಧಾನವು ಹೇಳಲ್ಪಡುತ್ತದೆ. ಅದು ಮನುಷ್ಯರಿಗೆ ಸಿದ್ಧಿದಾಯಕವು.

### ಅನ್ನಪೂರ್ಣೇಶ್ವರೀಮಂತ್ರ

೬೪-೬೫. (ವೇದಾದಿ= ಓಂ, ಗಿರಿಜಾ= ಹ್ರೀಂ, ಪದ್ಮಾ= ಶ್ರೀಂ ಮನ್ಮಥ= ಕ್ಲೀಂ, ಹೃದಯ= ನಮಃ, ದಹನಾಂಗನಾ= ಸ್ವಾಹಾ.)

“ಓಂ ಹ್ರೀಂ ಶ್ರೀಂ ಕ್ಲೀಂ ನಮೋ ಭಗವತಿ ಮಾಹೇಶ್ವರಿ ಅನ್ನಪೂರ್ಣೇ ಸ್ವಾಹಾ” ಎಂಬುದು ಇಪ್ಪತ್ತಕ್ಷರಗಳ ಅನ್ನಪೂರ್ಣೇಶ್ವರೀ ಮಂತ್ರವೆಂದು ಉಕ್ತವಾಗಿದೆ.

ಈ ಮಂತ್ರಕ್ಕೆ ಬ್ರಹ್ಮನು (ದ್ರುಹಿಣ) ಋಷಿ, ಕೃತಿಯು ಛಂದಸ್ಸು. ಅನ್ನಪೂರ್ಣೇಶ್ವರಿಯು ದೇವತೆ ಎಂದು ವಿಹಿತವಾಗಿದೆ.

೬೬-೬೭. ಆ, ಈ ಮುಂತಾದ ಆರು ದೀರ್ಘಯುಕ್ತವಾದ ‘ಹ್ರೀಂ’ ಎಂಬ ಬೀಜದಿಂದ (ಹ್ರಾಂ, ಹ್ರೀಂ, ಇತ್ಯಾದಿ) ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು. ಈ ಮಂತ್ರದಲ್ಲಿನ ಒಂಬತ್ತು ಪದಗಳನ್ನು ಮುಖ,

ಪದಾನಿ ನವ ತದ್ವರ್ಣಸಂಖ್ಯೇದಾನೀಮುದೀರ್ಯತೇ |
ಭೂಮಿಚಂದ್ರಧರೈಕಾಕ್ಷಿವೇದಾಬ್ಧಿಯುಗಬಾಹುಭಿಃ || ೬೭ ||

ಪದಸಂಖ್ಯಾಮಿತಾವರ್ಣೈರ್ಸ್ತತೋ ಧ್ಯಾಯೇತ್ಸುರೇಶ್ವರೀಂ |
ಸ್ವರ್ಣಾಭಾಂಗಾಂ ತ್ರಿನಯನಾಂ ವಸ್ತ್ರಾಲಂಕಾರಶೋಭಿತಾಂ || ೬೮ ||

ಭೂರಮಾಸಂಯುತಾಂ ದೇವೀಂ ಸ್ವರ್ಣಾಮತ್ರಕರಾಂಬುಜಾಂ |
ಲಕ್ಷಂ ಜಪೋಽಯುತಂ ಹೋಮೋ ಘೃತಾಕ್ತಚರುಣಾ ತಥಾ || ೬೯ ||

ಜಯಾದಿನವಶಕ್ತ್ಯಾಢ್ಯೇ ಪೀಠೇ ಪೂಜಾ ಸಮೀರಿತಾ |
ತ್ರಿಕೋಣವೇದಪತ್ರಾಷ್ಟಪತ್ರ ಷೋಡಶಪತ್ರಕೇ || ೭೦ ||

ಭೂಪುರೇಣ ಯುತೇ ಯಂತ್ರೇ ಪ್ರದದ್ಯಾನ್ಮಾಯಯಾಽಽಸನಂ |
ಅಗ್ನ್ಯಾದಿಕೋಣತ್ರಿತಯೇ ಶಿವವಾರಾಹಮಾಧವಾನ್ || ೭೧ ||

---

ನಾಸಿಕ, ನೇತ್ರ, ಕಿವಿ, ಭುಜ, ಗುದ ಈ ಒಂಬತ್ತು ಸ್ಥಾನಗಳಲ್ಲಿ ನ್ಯಾಸಮಾಡ ಬೇಕು. ಆ ಒಂಬತ್ತು ಪದಗಳ ವರ್ಣಸಂಖ್ಯೆಯನ್ನು ಕ್ರಮವಾಗಿ 1, 1, 1, 1, 2, 4, 4, 4, 2 ಎಂಬುದಾಗಿ ತಿಳಿಯಬೇಕು.

೬೮-೬೯. ಧ್ಯಾನ :—ಬಂಗಾರದಂತೆ ಹೊಳೆಯುತ್ತಿರುವ ಅವಯವ ಗಳುಳ್ಳ, ಮೂರು ಕಣ್ಣುಗಳುಳ್ಳ, ವಸ್ತ್ರಾಭರಣಗಳಿಂದಲಂಕೃತಳಾದ, ಭೂದೇವಿ ಶ್ರೀದೇವಿ ಇವರಿಂದ ಸಹಿತಳಾದ, ಹಸ್ತಪದ್ಮದಲ್ಲಿ ಬಂಗಾರದ ಪಾತ್ರೆಯನ್ನು ಧರಿಸಿರುವ, ಸುರೇಶ್ವರಿಯಾದ ದೇವಿಯನ್ನು ಧ್ಯಾನಿಸಬೇಕು.

ಈ ಮಂತ್ರವನ್ನು ಒಂದು ಲಕ್ಷ ಜಪಿಸಬೇಕು. ಘೃತಮಿಶ್ರವಾದ ಅನ್ನ ದಿಂದ ಹತ್ತುಸಾವಿರ ಹೋಮ ಮಾಡಬೇಕು.

೭೦-೭೩. ಜಯಾ ಮುಂತಾದ ನವಶಕ್ತಿಸಹಿತವಾದ ಪೀಠದಲ್ಲಿ ಪೂಜೆಯು ವಿಹಿತವಾಗಿದೆ.

ಅರ್ಚಯೇತ್ಸ್ವಸ್ವಮಂತ್ರೈಸ್ತು ಪ್ರೋಚ್ಯಂತೇ ಮನವಸ್ತು ತೇ ।
ಪ್ರಣವೋ ಮನುಚಂದ್ರಾಢ್ಯಂ ಗಗನಂ ಹೃದಯಂ ಶಿವಾ ॥ ೭೨ ॥

ಮಾರುತಃ ಶಿವಮಂತ್ರೋಽಯಂ ಸಪ್ತಾರ್ಣಃ ಶಿವಪೂಜನೇ ।
ವಾರಾಹನಾರಾಯಣಯೋರ್ಮಂತ್ರೌ ಪೂರ್ವಮುದೀರಿತೌ ॥ ೭೩ ॥

ಷಡಂಗಾನಿ ತತೋಽಭ್ಯರ್ಚ್ಯ ವಾಮೇ ದಕ್ಷೇ ಧರಾಂ ರಮಾಂ ।
ಯಜೇತ್ಸ್ವಸ್ವಮನುಭ್ಯಾಂ ತು ತಾವುಚ್ಯೇತೇ ಮುನೀಶ್ವರ ॥ ೭೪ ॥

---

ಚತುರಸ್ರಮಂಡಲದೊಳಗೆ ಮಧ್ಯದಲ್ಲಿ ತ್ರಿಕೋಣ, ಅದರ ಸುತ್ತಲೂ ನಾಲ್ಕು ದಳಗಳು, ಅದರ ಸುತ್ತಲೂ ಎಂಟು ಪತ್ರಗಳು, ಅದರ ಸುತ್ತಲೂ ಹದಿನಾರು ದಳಗಳೂ ಉಳ್ಳ ಯಂತ್ರದಲ್ಲಿ 'ಹ್ರೀಂ' ಎಂಬ ಮಾಯಾ ಬೀಜಾಕ್ಷರದಿಂದ ಆಸನವನ್ನು ರಚಿಸಿ ಕೊಡಬೇಕು. ಆಗ್ನೇಯಾದಿ ಮೂರು ಕೋಣಗಳಲ್ಲಿ ಶಿವ, ವರಾಹ, ಮಾಧವರನ್ನು ಅವರವರ ಮಂತ್ರದಿಂದ ಪೂಜಿಸಬೇಕು. ಆ ಮಂತ್ರಗಳನ್ನು ಹೇಳುವೆನು ;—

## ಶಿವಮಂತ್ರ

(ಪ್ರಣವ= ಓಂ, ಮನುಚಂದ್ರಾಢ್ಯಂ ಗಗನಂ= ಹ್ರೌಂ, ಹೃದಯ= ನಮಃ, ಮಾರುತ= ಯ. ಉಳಿದುದು ಮಂತ್ರದಲ್ಲಿ ಸೇರುವ ಶಬ್ದಸ್ವರೂಪ.)

"ಓಂ ಹ್ರೌಂ ನಮಶ್ಶಿವಾಯ" ಎಂಬೀ ಏಳು ಅಕ್ಷರಗಳ ಶಿವಮಂತ್ರವನ್ನು ಶಿವಪೂಜೆಗೆ ವಿನಿಯೋಗಿಸಬೇಕು. ವರಾಹ ಮಾಧವ (ನಾರಾಯಣ) ಮಂತ್ರಗಳನ್ನು ಹಿಂದೆಯೇ ಹೇಳಿದೆ.

೭೪. ಅನಂತರ ಷಡಂಗಗಳನ್ನು ಪೂಜಿಸಿ, ಎಡ ಭಾಗದಲ್ಲಿ ಧರಾದೇವಿಯನ್ನೂ, ಬಲಭಾಗದಲ್ಲಿ ಶ್ರೀದೇವಿಯನ್ನೂ, ಅವರವರ ಮಂತ್ರದಿಂದ ಪೂಜಿಸಬೇಕು. ಆ ಮಂತ್ರಗಳನ್ನು ಹೇಳುವೆನು. ಮುನೀಶ್ವರನೇ! ಕೇಳು.

ಅನ್ನಂ ಮಹ್ಯನ್ನಮಿತ್ಯುಕ್ತ್ವಾ ಮೇ ದೇಹ್ಯನ್ನಾಧಿಪೋರ್ಣಕಾಃ ।
ತಯೇಮಮನ್ನಂ ಪ್ರಾಣಾಂತೇ ದಾಪಯಾನಲಸುಂದರೀ ॥ ೭೫ ॥

ದ್ವಾವಿಂಶತ್ಯಕ್ಷರೋ ಮಂತ್ರೋ ಭೂಮಿಾಷ್ಟ್ಯಾ ಭೂಮಿಸಂಪುಟಃ ।
ಲಕ್ಷ್ಮೀಷ್ವೌ ಶ್ರೀಪುಟೋ ವಿಪ್ರ ಸ್ಮೃತಿರ್ಲಮನುಚಂದ್ರಯುಕ್ ॥ ೭೬ ॥

ಭುವೋ ಬೀಜಮಿತಿ ಪ್ರೋಕ್ತಂ ಶ್ರೀಬೀಜಂ ಪ್ರಾಗುದಾಹೃತಂ ।
ಮಂತ್ರಾದಿಸ್ಥಚತುರ್ಬೀಜಪೂರ್ವಿಕಾಃ ಪರಿಪೂಜಯೇತ್ ॥ ೭೭ ॥

ಶಕ್ತೀಶ್ಚತಸ್ರೋ ವೇದಾಸ್ರೇ ಪರಾ ಚ ಭುವನೇಶ್ವರೀ ।
ಕಮಲಾ ಸುಭಗಾ ಚೇತಿ ಬ್ರಾಹ್ಮ್ಯಾದ್ಯಾ ಅಷ್ಟಪತ್ರಗಾಃ ॥ ೭೮ ॥

---

## ಧರಾಶ್ರೀಮಂತ್ರ

“ಅನ್ನಂ ಮಹ್ಯನ್ನಂ ಮೇ ದೇಹ್ಯನ್ನಾಧಿಪತಯೇ ಮಮಾನ್ನಂ ಪ್ರದಾಪಯ ಸ್ವಾಹಾ” ಎಂಬ ಇಪ್ಪತ್ತೆರಡು ಅಕ್ಷರಗಳ ಮಂತ್ರವನ್ನು ಭೂದೇವಿಯ ಪೂಜೆಗೆ ವಿನಿಯೋಗಿಸುವಾಗ “ಗ್ಲಾಂ” ಎಂಬ ಭೂ ಬೀಜಾಕ್ಷರವನ್ನು ಆದ್ಯಂತದಲ್ಲಿ ಸೇರಿಸಿ ಹೇಳಬೇಕು. ಶ್ರೀದೇವಿಯ ಪೂಜೆಗೆ ವಿನಿಯೋಗಿಸುವಾಗ “ಶ್ರೀಂ” ಎಂಬ ಶ್ರೀಬೀಜವನ್ನು ಆದ್ಯಂತಗಳಲ್ಲಿ ಸೇರಿಸಿ ಹೇಳಬೇಕು. “ಗ್ಲಾಂ” ಎಂಬುದು ಧರಾ ಬೀಜವೆಂದು ಉಕ್ತವಾಗಿದೆ. ‘ಶ್ರೀಂ’ ಎಂಬುದು ಶ್ರೀಬೀಜವೆಂದು ಹಿಂದೆಯೇ ಹೇಳಿದೆ.

ಚತುರಸ್ರಮಂಡಲವಲ್ಲಿ ಮಂತ್ರದ ಆದಿಭಾಗದಲ್ಲಿರುವ ‘ಓಂ ಹ್ರೀಂ ಶ್ರೀಂ ಕ್ಲೀಂ’ ಎಂಬ ನಾಲ್ಕು ಬೀಜಾಕ್ಷರಗಳಲ್ಲಿ ಕ್ರಮವಾಗಿ ಒಂದೊಂದನ್ನು ಆದಿಯಲ್ಲಿ ಹೇಳಿ ನಾಲ್ಕು ಶಕ್ತಿಗಳನ್ನು ಪೂಜಿಸಬೇಕು.

ಪರಾ ಭುವನೇಶ್ವರೀ ಕಮಲಾ ಮತ್ತು ಸುಭಗಾ ಎಂಬುವುಗಳೇ ನಾಲ್ಕು ಶಕ್ತಿಗಳು. ಪ್ರಯೋಗವನ್ನು ‘ಓಂ ಪರಾಯೈ ನಮಃ’ ಇತ್ಯಾದಿಯಾಗಿ ತಿಳಿಯಬೇಕು. ಬ್ರಾಹ್ಮೀ ಮುಂತಾದ ಶಕ್ತಿಗಳನ್ನು ಅಷ್ಟಪತ್ರಗಳಲ್ಲಿ ಪೂಜಿಸಬೇಕು.

ಷೋಡಶಾರೇsಮೃತಾ ಚೈವ ಮಾನದಾತುಷ್ಟಿಪುಷ್ಟಯಃ ।
ಪ್ರೀತೀ ರತಿರ್ಹ್ರೀಃ ಶ್ರೀಶ್ಚಾಪಿ ಸ್ವಧಾ ಸ್ವಾಹಾ ದಶಮ್ಯಥ ॥ ೭೯ ॥

ಜ್ಯೋತ್ಸ್ನಾ ಹೈಮವತೀ ಛಾಯಾ ಪೂರ್ಣಿಮಾ ಸಹ ನಿತ್ಯಯಾ ।
ಅಮಾವಾಸ್ಯೇತಿ ಸಂಪೂಜ್ಯಾ ಮಂತ್ರೇಶೇ ಷಾರ್ಣಪೂರ್ವಿಕಾಃ ॥ ೮೦ ॥

ಭೂಪುರೇ ಲೋಕಪಾಲಾಃ ಸ್ಯುಸ್ತದಸ್ತ್ರಾಣಿ ತದಗ್ರತಃ ।
ಇತ್ಥಂ ಜಪಾದಿಭಿಃ ಸಿದ್ಧೇ ಮಂತ್ರೇsಸ್ಮಿನ್‌ಧನಸಂಚಯೈಃ ॥ ೮೧ ॥

ಕುಬೇರಸದೃಶೋ ಮಂತ್ರೀ ಜಾಯತೇ ಜನವಂದಿತಃ ।
ಅಥ ಲಕ್ಷ್ಮ್ಯವತಾರೋsನ್ಯಃ ಕೀರ್ತ್ಯತೇ ಮುನಿಸತ್ತಮ ॥ ೮೨ ॥

---

೭೯-೮೦. ಹದಿನಾರು ದಳಗಳಲ್ಲಿ ನಾಲ್ಕು ಬೀಜಾಕ್ಷರಗಳನ್ನು ಬಿಟ್ಟು ಮಂತ್ರದಲ್ಲಿನ ಉಳಿದ ಹದಿನಾರು ವರ್ಣಗಳಲ್ಲಿ ಒಂದೊಂದನ್ನು ಆದಿಯಲ್ಲಿ ಅನುಸ್ವಾರ ಸಹಿತವಾಗಿ ಹೇಳುತ್ತಾ ಅಮೃತಾದಿ ಷೋಡಶ ಶಕ್ತಿಗಳನ್ನು ಪೂಜಿಸಬೇಕು.

ಅಮೃತಾ, ಮಾನದಾ, ತುಷ್ಟಿ, ಪುಷ್ಟಿ, ಪ್ರೀತಿ, ರತಿ, ಹ್ರೀ, ಶ್ರೀ, ಸ್ವಧಾ, ಸ್ವಾಹಾ, ದಶಮಿ, ಜ್ಯೋತ್ಸ್ನಾ, ಹೈಮವತೀ, ಛಾಯಾ, ಪೂರ್ಣಿಮಾ ಮತ್ತು ಅಮಾವಾಸ್ಯಾ ಎಂಬಿವು ಷೋಡಶ ಶಕ್ತಿಗಳು.

೮೧-೮೨. ಚತುಷ್ಕೋಣದಲ್ಲಿ ಲೋಕಪಾಲಕರನ್ನೂ, ಅವರ ಮುಂದೆ ಅವರವರ ಆಯುಧಗಳನ್ನೂ ಪೂಜಿಸಬೇಕು. ಈ ರೀತಿಯಾಗಿ ಜಪಾದಿಗಳನ್ನು ಮಾಡಿ ಮಂತ್ರಸಿದ್ಧಿಯನ್ನು ಪಡೆದವನು-ಐಶ್ವರ್ಯದಲ್ಲಿ ಕುಬೇರನಿಗೆ ಸಮಾನನಾಗಿ ಜನಗಳಲ್ಲಿ ಮಾನ್ಯನಾಗುವನು.

ಮುನಿವರ್ಯನೇ! ಇನ್ನೊಂದು ಲಕ್ಷ್ಮೀದೇವಿಯ ಅವತಾರದ ಮಂತ್ರಾದಿ ವಿಧಾನವು ಈಗ ಹೇಳಲ್ಪಡುತ್ತದೆ.

**ಪ್ರಣವಃ ಶಾಂತಿರರುಣಾಕ್ರಿಯಾಢ್ಯಾ ಚಂದ್ರಭೂಷಿತಾ ।**
**ಬಗಲಾಮುಖಿಸರ್ವಾಂತೇ ಇಂಧಿಕಾಹ್ಲಾದಿನೀಯುತಾ ॥ ೮೩ ॥**

**ಪೀತಾಜರಾಯುಕ್‌ಪ್ರತಿಷ್ಠಾ ಪುನರ್ದೀರ್ಘೋದಸಂಯುತಾ ।**
**ವಾಚಂ ಮುಖಂ ಪದಂ ಸ್ತಂಭಯಾಂತೇ ಜಿಹ್ವಾಪದಂ ವದೇತ್ ॥ ೮೪ ॥**

**ಕೀಲಯೇತಿ ಚ ಬುದ್ಧಿಂ ವಿನಾಶಯಾಂತೇ ಸ್ವಬೀಜಕಂ ।**
**ತಾರೋಗ್ನಿಸುಂದರೀ ಮಂತ್ರೋ ಬಗಲಾಯಾಃ ಪ್ರಕೀರ್ತಿತಃ ॥ ೮೫ ॥**

**ಮುನಿಸ್ತು ನಾರದಶ್ಛಂದೋ ಬೃಹತೀ ಬಗಲಾಮುಖೀ ।**
**ದೇವತಾ ನೇತ್ರಪಂಚೇಷುನವಪಂಚದಿಗರ್ಣಕೈಃ ॥ ೮೬ ॥**

---

## ಬಗಳಾಮುಖೀ ಮಂತ್ರ

೮೩-೮೫. (ಪ್ರಣವ = ಓಂ, ಶಾಂತಿರರುಣಕ್ರಿಯಾಢ್ಯಾಚಂದ್ರಭೂಷಿತಾ = ಹ್ಲೀಂ, ಇಂಧಿಕಾ ಹ್ಲಾದಿನೀಯುತಾ = ದು, ಜರಾಯುಕ್ ಪೀತಾಪ್ರತಿಷ್ಠಾ = ದುಷ್ಟಾ. ಪುನರ್ದೀರ್ಘೇಂದುಸಂಯುತಾ = ನಾಂ, ಸ್ವಬೀಜ = ಹ್ಲೀಂ, ತಾರ = ಓಂ, ಅಗ್ನಿಸುಂದರೀ = ಸ್ವಾಹಾ)

'ಓಂ ಹ್ಲೀಂ ಬಗಲಾಮುಖಿ ಸರ್ವದುಷ್ಟಾನಾಂ ವಾಚಂ ಮುಖಂ ಪದಂ ಸ್ತಂಭಯ ಜಿಹ್ವಾಂ ಕೀಲಯ ಬುದ್ಧಿಂ ವಿನಾಶಯ ಹ್ಲೀಂ ಓಂ ಸ್ವಾಹಾ' ಎಂಬುದು ಬಗಲಾಮುಖಿಯ ಮಂತ್ರವೆನಿಸುವುದು. ಇದು ಮೂವತ್ತಾರು ಅಕ್ಷರಗಳನ್ನೊಳಗೊಂಡಿದೆ.

೮೬-೮೯. ಈ ಮಂತ್ರಕ್ಕೆ ನಾರದನು ಋಷಿ. ಬೃಹತೀ ಛಂದಸ್ಸು. ಬಗಲಾಮುಖೀ ದೇವತೆಯು. ಈ ಮಂತ್ರದ ೨, ೫, ೫, ೯, ೫, ೧೦ ವರ್ಣಗಳಿಂದ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು.

ಧ್ಯಾನ :— ಸುವರ್ಣಾಸನದಲ್ಲಿ ಕುಳಿತಿರುವ, ಬಂಗಾರದಂತೆ ಕಾಂತಿಯುಳ್ಳ, ದರ್ಪಯುಕ್ತಳಾದ, ಚಂದ್ರಚೂಡಳಾದ, ಮುದ್ಗರ, ಪಾಶ, ವಜ್ರಾ

ಅಂಗಾನಿ ಕಲ್ಪಯಿತ್ವಾ ಚ ಧ್ಯಾಯೇತ್ಪೀತಾಂಬರೀಂ ತತಃ ।
ಸ್ವರ್ಣಾಸನಸ್ಥಾಂ ಹೇಮಾಭಾಂ ಸ್ತಂಭಿನೀಮಿಂದುಶೇಖರಾಂ ॥ ೮೭ ॥

ದಧತೀಂ ಮುದ್ಗರಂ ಪಾಶಂ ವಜ್ರಂ ಚ ರಸನಾಂ ಕರೈಃ ।
ಏವಂ ಧ್ಯಾತ್ವಾ ಜಪೇಲ್ಲಕ್ಷಮಯುತಂ ಚಂಪಕೋದ್ಭವೈಃ ॥ ೮೮ ॥

ಕುಸುಮೈರ್ಜುಹುಯಾತ್ಪೀಠೇ ಬಾಲಾಯಾಃ ಪೂಜಯೇದಿಮಾಂ ।
ಚಂದನಾಗರುಚಂದ್ರಾದ್ಯೈಃ ಪೂಜಾರ್ಥಂ ಯಂತ್ರಮಾಲಿಖೇತ್ ॥ ೮೯ ॥

ತ್ರಿಕೋಣಷಡ್ದಲಾಷ್ಟಾಸ್ರ ಷೋಡಶಾರೇ ಯಜೇದಿಮಾಂ ।
ಮಂಗಲಾ ಸ್ತಂಭಿನೀ ಚೈವ ಜೃಂಭಿಣೀ ಮೋಹಿನೀ ತಥಾ ॥ ೯೦ ॥

---

ಯುಧ, ನಾಲಿಗೆಗಳನ್ನು ಕೈಗಳಲ್ಲಿ ಧರಿಸಿರುವ, ಪೀತಾಂಬರವನ್ನು ಉಟ್ಟಿರುವ ದೇವಿಯನ್ನು ಧ್ಯಾನಿಸಬೇಕು.

ಈ ಪ್ರಕಾರವಾಗಿ ಧ್ಯಾನಿಸಿ ಈ ಮಂತ್ರವನ್ನು ಒಂದುಲಕ್ಷ ಜಪಮಾಡಬೇಕು. ಬಳಿಕ ಸಂಪಿಗೆ ಹೂವುಗಳಿಂದ ಹತ್ತುಸಾವಿರ ಹೋಮಮಾಡಬೇಕು. ಬಾಲಾದೇವಿಗೆ ವಿಹಿತ ಪೀಠದಲ್ಲಿ ಬಗಳಾಮುಖಿದೇವಿಯನ್ನು ಪೂಜಿಸಬೇಕು. ಪೂಜೆಮಾಡುವುದಕ್ಕಾಗಿ ಚಂದನ, ಅಗರು, ಚಂದ್ರ ಮುಂತಾದುವುಗಳಿಂದ ಯಂತ್ರವನ್ನು ಬರೆಯಬೇಕು.

೯೦-೯೩. ತ್ರಿಕೋಣವನ್ನೊಳಗೊಂಡಿರುವ ಷಟ್ಕೋಣ, ಅದರ ಸುತ್ತಲೂ ಅಷ್ಟದಳ ಪದ್ಮ, ಅದರ ಸುತ್ತಲೂ ಷೋಡಶದಳ (ಹದಿನಾರು) ಪದ್ಮ, ಇವನ್ನೊಳಗೊಂಡಿರುವ ಚತುರಸ್ರಮಂಡಲವನ್ನು ಬರೆದು ಅದರಲ್ಲಿ ಈ ದೇವಿಯನ್ನು ಪೂಜಿಸಬೇಕು.

ಅದರ ಷೋಡಶ ದಳಗಳಲ್ಲಿ ಮಂಗಳಾ, ಸ್ತಂಭಿನೀ, ಜೃಂಭಿಣೀ, ಮೋಹಿನೀ, ವಶ್ಯಾ, ಚಲಾ, ಬಲಾಕಾ, ಭೂಧರಾ, ಕಲ್ಮಷಾ, ಧಾತ್ರೀ, ಕಲನಾ, ಕಾಲ

ವಶ್ಯಾ ಚಲಾ ಬಲಾಕಾ ಚ ಭೂಧರಾ ಕಲ್ಮಷಾಭಿಧಾ ।
ಧಾತ್ರೀ ಚ ಕಲನಾ ಕಾಲಕರ್ಷಿಣೀ ಭ್ರಾಮಿಕಾಪಿ ಚ ॥ ೯೦ ॥

ಮಂದಗಾಪಿ ಚ ಭೋಗಸ್ಥಾ ಭಾವಿಕಾ ಷೋಡಶೀ ಸ್ಮೃತಾ ।
ಭೂಗೃಹಸ್ಯ ಚತುರ್ದಿಕ್ಷು ಪೂರ್ವಾದಿಷು ಯಜೇತ್ಕ್ರಮಾತ್ ॥ ೯೨ ॥

ಗಣೇಶಂ ಬಟುಕಂ ಚಾಪಿ ಯೋಗಿನೀಃ ಕ್ಷೇತ್ರಪಾಲಕಂ ।
ಇಂದ್ರಾದೀಂಶ್ಚ ತತೋ ಬಾಹ್ಯೇ ನಿಜಾಯುಧಸಮನ್ವಿತಾನ್ ॥ ೯೩ ॥

ಇತ್ಥಂ ಸಿದ್ಧೇ ಮನೌ ಮಂತ್ರೀ ಸ್ತಂಭಯೇದ್ದೈವತಾದಿಕಾನ್ ।
ಪೀತವಸ್ತ್ರಪದಾಸೀನಃ ಪೀತಮಾಲ್ಯಾನುಲೇಪನಃ ॥ ೯೪ ॥

---

ಕರ್ಷಿಣೀ, ಭ್ರಾಮಿಕಾ, ಮದಂಗಾ, ಭೋಗಸ್ಥಾ, ಭಾವಿಕೀ ಎಂಬ ಹದಿನಾರು ಶಕ್ತಿಗಳನ್ನು ಪೂಜಿಸಬೇಕು.

ಬಳಿಕ ಚತುಷ್ಕೋಣದ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಗಣೇಶ, ಬಟುಕ, ಯೋಗಿನೀ ಮತ್ತು ಕ್ಷೇತ್ರಪಾಲಕ ಇವರನ್ನು ಪೂಜಿಸಬೇಕು. ತರುವಾಯ ಹೊರಗೆ ಅವರವರ ಆಯುಧಗಳಿಂದ ಸಹಿತರಾದ ಇಂದ್ರಾದಿಗಳನ್ನು ಪೂಜಿಸಬೇಕು.

೯೪-೯೬. ಈ ರೀತಿ ಆಚರಿಸಿ ಮಂತ್ರಸಿದ್ಧಿಯನ್ನು ಪಡೆದ ಮಂತ್ರಿಯು ದೇವತೆ ಮುಂತಾದವರನ್ನೂ ಸಹ ಸ್ತಂಭನಮಾಡಬಹುದು.

ಹಳದಿವಸ್ತ್ರವನ್ನು ಧರಿಸಿ, ಹಳದಿಯ ಪೀಠದಲ್ಲಿ ಕುಳಿತು, ಹಳದಿಯ ಮಾಲಿಕೆ ಗಂಧಗಳನ್ನು ಧರಿಸಿ, ಹಳದೀಬಣ್ಣದ ಹೂವುಗಳಿಂದ ದೇವಿಯನ್ನು ಪೂಜಿಸಬೇಕು.

ಪೀತಪುಷ್ಪೈರ್ಯಜೇದ್ದೇವೀಂ ಹರಿದ್ರೋತ್ಥಸ್ರಜಾ ಜಪನ್ ।
ಪೀತಾಂ ಧ್ಯಾಯನ್ ಭಗವತೀಂ ಪಯೋಮಧ್ಯೇ ಯುತಂ ಜಪೇತ್ ॥೯೫॥

ತ್ರಿಮಧ್ವಾಜ್ಯತಿಲೈರ್ಹೋಮೋ ನೃಣಾಂ ವಶ್ಯಕರೋ ಮತಃ ।
ಮಧುರತ್ರಿತಯಾಕ್ತೈಃ ಸ್ಯಾದಾಕರ್ಷೋ ಲವಣೈರ್ಧ್ರುವಂ ॥ ೯೬ ॥

ತೈಲಾಭ್ಯಕ್ತೈರ್ನಿಂಬಪತ್ರೈರ್ಹೋಮೋ ವಿದ್ವೇಷಕಾರಕಃ ।
ತಾಲಲೋಣಹರಿದ್ರಾಭಿರ್ದ್ವಿಷಾಂ ಸಂಸ್ತಂಭನಂ ಭವೇತ್ ॥ ೯೭ ॥

ಅಂಗಾರಧೂಮಂ ರಾಜೀಶ್ಚ ಮಾಹಿಷಂ ಗುಗ್ಗುಲಂ ನಿಶಿ ।
ಶ್ಮಶಾನೇ ಪಾವಕೇ ಹುತ್ವಾ ನಾಶಯೇದಚಿರಾದರೀನ್ ॥ ೯೮ ॥

---

ಅನಂತರ ನೀರಿನ ಮಧ್ಯದಲ್ಲಿ ನಿಂತು ಐಶ್ವರ್ಯಯುಕ್ತಳಾದ, ಪೀತವರ್ಣದ ದೇವಿಯನ್ನು ಧ್ಯಾನಿಸಿ ಅರಿಸಿನದ ಮಾಲೆಯಿಂದ ಜಪಿಸುತ್ತಾ ಹತ್ತುಸಾವಿರ ಮಂತ್ರ ಜಪಮಾಡಬೇಕು.

ಸಕ್ಕರೆ ಮುಂತಾದ ಮಧುರತ್ರಯ, ಘೃತ ಎಳ್ಳುಗಳಿಂದ ಮಾಡುವ ಹೋಮವು ಮನುಷ್ಯ ವಶ್ಯಕರವು. ಸಕ್ಕರೆ ಮುಂತಾದ ಮೂರು ಮಧುರ ವಸ್ತುಗಳಿಂದ ಮಿಶ್ರವಾದ ಉಪ್ಪಿನಿಂದ ಹೋಮ ಮಾಡಿದರೆ ಆಕರ್ಷಣೆ ಯಾಗುವುದು.

೯೭. ಎಣ್ಣೆಯಲ್ಲಿ ನೆನೆಸಿದ ಬೇವಿನೆಲೆಗಳಿಂದ ಹೋಮಮಾಡಿದರೆ ದ್ವೇಷ ವುಂಟಾಗುವುದು. ಹರಿದಳ, ಲವಣ, ಅರಿಸಿನಗಳಿಂದ ಹೋಮಮಾಡಿದರೆ ಶತ್ರುಗಳ ಸ್ತಂಭನವಾಗುವುದು.

೯೮. ಅಂಗಾರಧೂಮ, ರಾಜೀ, ಮಾಹಿಷಾ, ಗುಗ್ಗುಲಗಳನ್ನು ಶ್ಮಶಾನ ದಲ್ಲಿ ಅಗ್ನಿಯಲ್ಲಿ ಹೋಮಮಾಡಿದರೆ ಬೇಗ ಶತ್ರುನಾಶವಾಗುವುದು.

ಗರುತೋ ಗೃಧ್ರಕಾಕಾನಾಂ ಕಟುತ್ತೈಲಂ ವಿಭೀತಕಂ ।
ಗೃಹಧೂಮಂ ಚಿತಾವಹ್ನೌ ಹುತ್ವಾ ಪ್ರೋಚ್ಚಾಟಯೇದ್ರಿಪೂನ್ ॥ ೯೯ ॥

ದೂರ್ವಾಗುಡೂಚೀಲಾಜಾನ್ಯೋ ಮಧುರತ್ರಿತಯಾನ್ವಿತಾನ್ ।
ಜುಹೋತಿ ಸೋಽಖಿಲಾನ್ ರೋಗಾನ್ ಶಮಯೇದ್ದರ್ಶನಾದಪಿ ॥ ೧೦೦ ॥

ಪರ್ವತಾಗ್ರೇ ಮಹಾರಣ್ಯೇ ನದೀಸಂಗೇ ಶಿವಾಲಯೇ ।
ಬ್ರಹ್ಮಚರ್ಯರತೋ ಲಕ್ಷಂ ಜಪೇದಖಿಲಸಿದ್ಧಯೇ ॥ ೧೦೧ ॥

ಏಕವರ್ಣಗವೀದುಗ್ಧಂ ಶರ್ಕರಾಮಧುಸಂಯುತಂ ।
ತ್ರಿಶತಂ ಮಂತ್ರಿತಂ ಪೀತಂ ಹನ್ಯಾದ್ವಿಷಪರಾಭವಂ ॥ ೧೦೨ ॥

---

೯೯. ಹದ್ದು ಕಾಗೆಗಳ ಪಕ್ಷ, ಕಟುತ್ತೈಲ, ತಾರೆಯ ಕಾಷ್ಠ, ಗೃಹಧೂಮ ಇವುಗಳನ್ನು ಚಿತೆಯ ಬೆಂಕಿಯಲ್ಲಿ ಹೋಮಮಾಡಿ ಶತ್ರುಗಳನ್ನು ಉಚ್ಚಾಟನೆ ಮಾಡಬೇಕು.

೧೦೦. ಗರಿಕೆಹುಲ್ಲು, ಅಮೃತಬಳ್ಳಿ, ಅರಳುಗಳನ್ನು ಸಕ್ಕರೆ ಮುಂತಾದ ಮಧುರತ್ರಯದೊಂದಿಗೆ ಹೋಮ ಮಾಡುವವನು ಸಕಲ ರೋಗಗಳನ್ನೂ ಪರಿಹರಿಸುವನು. ಅಂತಹವನನ್ನು ನೋಡುವುದರಿಂದಲೂ ಸಹ ಸಕಲ ರೋಗ ಪರಿಹಾರವಾಗುವುದು.

೧೦೧. ಬೆಟ್ಟದಮೇಲೆ, ದೊಡ್ಡಕಾಡು, ನದಿಯ ಸಂಗಮ ಮತ್ತು ಶಿವಾಲಯಗಳಲ್ಲಿ ಬ್ರಹ್ಮಚರ್ಯನಿಷ್ಠನಾಗಿ ಸಮಸ್ತ ಸಿದ್ಧಿಯನ್ನು ಪಡೆಯಲು ಈ ಮಂತ್ರವನ್ನು ಒಂದುಲಕ್ಷ ಜಪವಮಾಡಬೇಕು.

೧೦೨. ಸಕ್ಕರೆ ಮಧುಗಳಿಂದ ಮಿಶ್ರಮಾಡಿದ ಒಂದೇಬಣ್ಣದ ಹಸುವಿನ ಹಾಲನ್ನು ಮುನ್ನೂರಾವರ್ತಿ ಮಂತ್ರಜಪಮಾಡಿ ಅಭಿಮಂತ್ರಿಸಿ ಕುಡಿದರೆ ವಿಷದಿಂದ ಆಗುವ ಕೇಡು ಪರಿಹಾರವಾಗುವುದು.

ಶ್ವೇತಪಾಲಾಶಕಾಷ್ಠೇನ ರಚಿತೇ ರಮ್ಯಪಾದುಕೇ ।
ಅಲಕ್ತರಂಜಿತೇ ಲಕ್ಷಂ ಮಂತ್ರಯೇನ್ಮನುನಾಮುನಾ ॥ ೧೦೩ ॥

ತದಾರೂಢಃ ಪುಮಾನ್ ಗಚ್ಛೇತ್ ಕ್ಷಣೇನ ಶತಯೋಜನಂ ।
ಪಾರದಂ ಚ ಶಿಲಾಂ ತಾಲಂ ಪಿಷ್ಟಂ ಮಧುಸಮನ್ವಿತಂ ॥ ೧೦೪ ॥

ಮನುನಾ ಮಂತ್ರಯೇಲ್ಲಕ್ಷಂ ಲಿಂಪೇತ್ತೇನಾಖಿಲಾಂ ತನುಂ ।
ಅದೃಶ್ಯಃ ಸ್ಯಾನ್ಮನುಷ್ಯಾಣಾಮೇಷ ಆಶ್ಚರ್ಯಂ ದೃಶ್ಯತಾಮಿದಂ ॥ ೧೦೫ ॥

ಷಟ್ಕೋಣೇ ವಿಲಿಖೇದ್ಬೀಜಂ ಸಾಧ್ಯನಾಮಾನ್ವಿತಂ ಮನೋಃ ।
ಹರಿತಾಲನಿಶಾಚೂರ್ಣೈರುನ್ಮತ್ತರಸಸಂಯುತೈಃ ॥ ೧೦೬ ॥

---

೧೦೩-೧೦೫. ಬಿಳಿಯ ಮುತ್ತುಗದ ಕಟ್ಟಿಗೆಯಿಂದ ಮಾಡಿದ, ಅರಗಿನಿಂದ ಬಣ್ಣಹಾಕಿದ ದಿವ್ಯಪಾದುಕೆಗಳನ್ನು ಒಂದುಲಕ್ಷ ಮಂತ್ರ ಜಪದಿಂದ ಅಭಿಮಂತ್ರಿಸಿ, ಅದನ್ನು ಮೆಟ್ಟಿಕೊಂಡ ಮನುಷ್ಯನು ಕ್ಷಣಮಾತ್ರದಲ್ಲಿ ನೂರು ಯೋಜನ ದೂರ ಹೋಗುವನು.

ಪಾದರಸ, ಶಿಲಾ, ಹರಿದಳ, ಮಧುಸಹಿತವಾದ ಪಿಷ್ಟ ಇವುಗಳನ್ನು ಸೇರಿಸಿ ಈ ಮಂತ್ರದಿಂದ ಒಂದುಲಕ್ಷ ಸಾರಿ ಅಭಿಮಂತ್ರಿಸಿ ಅದನ್ನು ಮೈಗೆಲ್ಲಾ ಹಚ್ಚಿಕೊಂಡರೆ ಮನುಷ್ಯರಿಗೆ ಅದೃಶ್ಯನಾಗುವನು. ಇದು ನೋಡುವವರಿಗೆ ಆಶ್ಚರ್ಯಕರವಾದುದು.

## ಬಕುಳಾಮುಖಿಯ ಸ್ತಂಭನ ಯಂತ್ರ

೧೦೬-೧೦೭. ದತ್ತೂರಿಯ ರಸದಲ್ಲಿ ಕಲಸಿದ ಹರಿದಳ ಮತ್ತು ಅರಿಸಿನದ ಪುಡಿಯಿಂದ ಷಟ್ಕೋಣ ಮಂಡಲದಲ್ಲಿ ಸಾಧ್ಯನಾಮ ಸಹಿತವಾಗಿ ಈ ಮಂತ್ರದ 'ಹ್ಲೀಂ' ಎಂಬ ಬೀಜಾಕ್ಷರವನ್ನು ಬರೆಯಬೇಕು. ಷಟ್ಕೋಣದ ಸುತ್ತಲೂ

ಶೇಷಾಕ್ಷರೈಃ ಸಮಾನೀತಂ ಧರಾಗೇಹವಿರಾಜಿತಂ ।
ತದ್ಯಂತ್ರಂ ಸ್ಥಾಪಿತಪ್ರಾಣಂ ಪೀತಸೂತ್ರೇಣ ವೇಷ್ಟಯೇತ್ ॥ ೧೦೭ ॥

ಭ್ರಾಮ್ಯತ್ಕುಲಾಲಚಕ್ರಸ್ಥಾಂ ಗೃಹೀತ್ವಾ ಮೃತ್ತಿಕಾಂ ತಥಾ ।
ರಚಯೇದ್ವೃಷಭಂ ರಮ್ಯಂ ಯಂತ್ರಂ ತನ್ಮಧ್ಯತಃ ಕ್ಷಿಪೇತ್ ॥ ೧೦೮ ॥

ಹರಿತಾಲೇನ ಸಂಲಿಪ್ಯ ವೃಷಂ ಪ್ರತ್ಯಹಮರ್ಚಯೇತ್ ।
ಸ್ತಂಭಯೇದ್ವಿದ್ವಿಷಾಂ ವಾಚಂ ಗತಿಂ ಕಾರ್ಯಪರಾಂ ಪರಾಂ ॥ ೧೦೯ ॥

ಆದಾಯ ವಾಮಹಸ್ತೇನ ಪ್ರೇತಭೂಸ್ಥಿತಕರ್ಪರಂ ।
ಅಂಗಾರೇಣ ಚಿತಾಸ್ಥೇನ ತತ್ರ ಯಂತ್ರಂ ಸಮಾಲಿಖೇತ್ ॥ ೧೧೦ ॥

---

ಉಳಿದ ಮಂತ್ರವರ್ಣಗಳನ್ನು ಬರೆದು ಅದನ್ನು ಚತುಷ್ಕೋಣಮಂಡಲದಲ್ಲಿ ಅಡಗಿಸಬೇಕು. ಈ ರೀತಿ ಬರೆದ ಯಂತ್ರದಲ್ಲಿ ಪ್ರಾಣಪ್ರತಿಷ್ಠಾಪನೆ ಮಾಡಿ ಅದನ್ನು ಹಳದಿಯ ಬಟ್ಟೆಯಲ್ಲಿ ಸುತ್ತಬೇಕು.

೧೦೮. ತಿರುಗುತ್ತಿರುವ ಕುಂಬಾರನ ಚಕ್ರದಲ್ಲಿನ ಮಣ್ಣನ್ನು ತೆಗೆದುಕೊಂಡು, ಮನೋಹರವಾದ ಎತ್ತನ್ನು ರಚಿಸಿ, ಅದರ ಮಧ್ಯದಲ್ಲಿ ಆ ಯಂತ್ರವನ್ನು ಇಡಬೇಕು.

೧೦೯. ಆ ಎತ್ತನ್ನು ಹರಿದಳದಿಂದ ಲೇಪಿಸಿ ಪ್ರತಿದಿನವೂ ಪೂಜಿಸಬೇಕು. ಅದರಿಂದ ಶತ್ರುಗಳ ವಾಕ್ಸ್ತಂಭನವೂ, ಉತ್ತಮವಾದ ಕಾರ್ಯಪರಗತಿಯೂ ಉಂಟಾಗುವುದು.

೧೧೦. ಶ್ಮಶಾನದಲ್ಲಿ ಬಿದ್ದಿದ್ದ ಕಪಾಲವನ್ನು ಎಡಗೈಯಲ್ಲಿ ತೆಗೆದುಕೊಂಡು ಚಿತೆಯಲ್ಲಿದ್ದ ಅಂಗಾರದಿಂದ ಅದರಲ್ಲಿ ಯಂತ್ರವನ್ನು ಬರೆಯಬೇಕು.

ಮಂತ್ರಿತಂ ನಿಹಿತಂ ಭೂಮೌ ರಿಪೂಣಾಂ ಸ್ತಂಭಯೇದ್ಗತಿಂ ।
ಪ್ರೇತವಸ್ತ್ರೇ ಲಿಖೇದ್ಯಂತ್ರಂ ಅಂಗಾರೇಣೈವ ತತ್ಪುನಃ　　　॥ ೧೧೧ ॥

ಮಂಡೂಕವದನೇ ನ್ಯಸ್ಯೇತ್ಪೀತಸೂತ್ರೇಣ ವೇಷ್ಟಿತಂ ।
ಪೂಜಿತಂ ಪೀತಪುಷ್ಪೈಸ್ತದ್ವಾಚಂ ಸಂಸ್ತಂಭಯೇದ್ದ್ವಿಷಾಂ　　　॥ ೧೧೨ ॥

ಯದ್ಭೂಮೌ ಭವಿತಾ ದಿವ್ಯಂ ತತ್ರ ಯಂತ್ರಂ ಸಮಾಲಿಖೇತ್ ।
ಮಾರ್ಜಿತಂ ತದ್ವೃಷಾಪತ್ರೈರ್ದಿವ್ಯಸ್ತಂಭನಕೃದ್ಭವೇತ್　　　॥ ೧೧೩ ॥

ಇಂದ್ರವಾರುಣಿಕಾಮೂಲಂ ಸಪ್ತಶೋ ಮನುಮಂತ್ರಿತಂ ।
ಕ್ಷಿಪ್ತಂ ಜಲೇ ದಿವ್ಯಕೃತಂ ಜಲಸ್ತಂಭನಕಾರಕಂ　　　॥ ೧೧೪ ॥

---

೧೧೧-೧೧೨. ಆ ಯಂತ್ರವನ್ನು ಅಭಿಮಂತ್ರಿಸಿ ಭೂಮಿಯಲ್ಲಿ ಸ್ಥಾಪಿಸಿದರೆ ಶತ್ರುಗಳ ಸಂಚಾರವನ್ನು ತಡೆಯುವುದು. ಹೆಣದಮೇಲಿನ ಬಟ್ಟೆಯಲ್ಲಿ ಅದೇ ಇದ್ದಲಿನಿಂದ ಯಂತ್ರವನ್ನು ಬರೆದು ಕಪ್ಪೆಯ ಬಾಯಿಯಲ್ಲಿಟ್ಟು, ಹಳದೀ ಬಟ್ಟೆಯಿಂದ ಸುತ್ತಿ ಅದನ್ನು ಹಳದಿಯ ಪುಷ್ಪಗಳಿಂದ ಪೂಜಿಸಿದರೆ ಶತ್ರುಗಳ ವಾಕ್ಸ್ತಂಭನವಾಗುವುದು.

೧೧೩. ಸಿಡಿಲುಮಿಂಚು ಬಿದ್ದ ಭೂಮಿಯಲ್ಲಿ ಯಂತ್ರವನ್ನು ಬರೆದು ಆಡು ಮುಟ್ಟದ ಸೊಪ್ಪಿನಿಂದ ಮಾರ್ಜನಮಾಡಿದರೆ ದಿವ್ಯಸ್ತಂಭನವಾಗುವುದು.

೧೧೪. ಹಾವುಮೆಕ್ಕೇಗಿಡದ ಮೂಲಿಕೆಯನ್ನು ಏಳಾವರ್ತಿ ಈ ಮಂತ್ರದಿಂದಭಿಮಂತ್ರಿಸಿ ಜಲದಲ್ಲಿ ಹಾಕಿ ಆ ಜಲವನ್ನು ಮೇಲಕ್ಕೆಸೆದರೆ ಅದು ಅಲ್ಲಿಯೇ ನಿಲ್ಲುತ್ತದೆ.

**ಕಿಂ ಬಹೂಕ್ತ್ಯಾ ಸಾಧಕೇನ ಮಂತ್ರಃ ಸಮ್ಯಗುಪಾಸಿತಃ |**
**ಶತ್ರೂಣಾಂ ಗತಿಬುದ್ಧ್ಯಾದೇಃ ಸ್ತಂಭನೋ ನಾತ್ರ ಸಂಶಯಃ || ೧೧೫ ||**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಯಕ್ಷಿಣೀಮಂತ್ರಸಾಧನನಿರೂಪಣಂ ನಾಮ ಷಡಶೀತಿತಮೋಽಧ್ಯಾಯಃ**

---

೧೧೫. ಹೆಚ್ಚು ಸಾಧಕಗಳನ್ನು ಹೇಳಿದ್ದರಿಂದೇನು? ಸಾಂಗವಾಗಿ ಆರಾಧಿಸಲ್ಪಟ್ಟ ಈ ಮಂತ್ರವು ಶತ್ರುಗಳ ಸಂಚಾರ, ಬುದ್ಧಿ ಮುಂತಾದುವುಗಳಿಗೆ ಸ್ತಂಭನವುಂಟುಮಾಡುವುದು. ಸಂದೇಹವಿಲ್ಲ.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ತೃತೀಯ ಪಾದದಲ್ಲಿ ಯಕ್ಷಿಣೀ ಮಂತ್ರಸಾಧನ ನಿರೂಪಣೆಯೆಂಬ ಎಂಬತ್ತಾರನೆಯ ಅಧ್ಯಾಯವು ಮುಗಿದುದು.

## ವಿಷಯ ಸಂಗ್ರಹ

ಲಕ್ಷ್ಮ್ಯವತಾರಗಳನ್ನು ನಿರೂಪಿಸಲಾರಂಭಿಸಿ ಆದಿಯಲ್ಲಿ ತ್ರಿಪುರಬಾಲಾ ಮಂತ್ರ, ಜಪ, ಹೋಮ, ಯಂತ್ರ ನಾನಾವಿಧವಾದ ಕಾಮ್ಯಪ್ರಯೋಗ ಮುಂತಾದ ಪರಿಕರವನ್ನು ಹೇಳಿ ಬಳಿಕ ಬಗಲಾಮುಖಿಮಂತ್ರ, ಅನ್ನಪೂರ್ಣೇಶ್ವರೀಮಂತ್ರ ಮುಂತಾದುವನ್ನು ಸಪರಿಕರವಾಗಿ ಹೇಳಿದೆ.

# ಸಪ್ತಾಶೀತಿತಮೋಽಧ್ಯಾಯಃ

## ಸನತ್ಕುಮಾರ ಉವಾಚ

ಅವತಾರತ್ರಯಂ ಲಕ್ಷ್ಮ್ಯಾಃ ಕಥಿತಂ ತೇ ದ್ವಿಜೋತ್ತಮ ।
ದುರ್ಗಾಯಾಶ್ಚಾಭಿಧಾಸ್ಯಾಮಿ ಸರ್ವಲೋಕೋಪಕಾರಕಾನ್ ॥ ೧ ॥

ಪ್ರಣವಃ ಶ್ರೀಃ ಶಿವಾಯುಗ್ಮಂ ವಾಣೀ ವೈರೋಚಿನೀಪದಂ ।
ವಜ್ರಾದ್ಯಂ ಕ್ಷುದ್ಯುತಾ ಸೂಕ್ಷ್ಮಾಽಮೃತಾ ಖಾಗ್ನೀಂದುಸಂಯುತಾ ॥ ೨ ॥

ಪ್ರತಿಷ್ಠಾಪ್ಯ ಶಿವಾ ಫಟ್ ಚ ಸ್ವಾಹಾಂತೋತ್ಯಷ್ಟಿವರ್ಣವಾನ್ ।
ಭೈರವೋಽಸ್ಯ ಮುನಿಃ ಸಮ್ರಾಟ್ ಛಂದೋ ಮಂತ್ರಸ್ಯ ದೇವತಾ ॥ ೩ ॥

---

## ಎಂಬತ್ತೇಳನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು :— ದ್ವಿಜೋತ್ತಮಾ! ಲಕ್ಷ್ಮೀ ದೇವಿಯ ಮೂರು ಅವತಾರ ಮಂತ್ರಗಳನ್ನು ನಿನಗೋಸ್ಕರ ಹೇಳಿದೆನು. ಈಗ ಸರ್ವಲೋಕಕ್ಕೂ ಪ್ರಯೋಜನಕಾರಿಯಾದ ದುರ್ಗಾದೇವಿಯ ಅವತಾರಗಳ ಮಂತ್ರವನ್ನು ಹೇಳುವೆನು.

### ಛಿನ್ನಮಸ್ತಾದೇವಿಯ ಮಂತ್ರ

೨-೬. (ಪ್ರಣವ= ಓಂ, ಶ್ರೀ= ಶ್ರೀಂ, ಶಿವಾಯುಗ್ಮ= ಹ್ರೀಂ ಹ್ರೀಂ, ವಾಣೀ= ಐಂ, ವಜ್ರಾದ್ಯಂ ವೈರೋಚಿನೀಪದಂ= ವಜ್ರ ವೈರೋಚಿನೀ, ಕ್ಷುತ್= ಯ, ಅಮೃತಾ= ಏ, ಸೂಕ್ಷ್ಮಾ= ಈ, ಖ= ಹ, ಅಗ್ನಿ= ರ, ಇಂದು= ಂ. ಉಳಿದ ಪದಗಳು ಮಂತ್ರದಲ್ಲಿ ಹಾಗೆಯೇ ಸೇರತಕ್ಕವು.

ಛಿನ್ನಮಸ್ತಾ ರಮಾ ಬೀಜಂ ಸ್ವಾಹಾ ಶಕ್ತಿರುದೀರಿತಾ ।
ಆಂ ಖಡ್ಗಾಯ ಹೃದಾಖ್ಯಾತಮೀಂ ಖಡ್ಗಾಯ ಶಿರಃ ಸ್ಮೃತಂ ॥ ೪ ॥

ಊಂ ವಜ್ರಾಯ ಶಿಖಾ ಪ್ರೋಕ್ತಾ ಐಂ ಪಾಶಾಯ ತನುಚ್ಛದಂ ।
ಔಮಂಕುಶಾಯ ನೇತ್ರಂ ಸ್ಯಾದ್ವಿಸರ್ಗೋ ವಸು ರಕ್ಷಯುಕ್ ॥ ೫ ॥

ಮಾಯಾಯುಗ್ಮಂ ಚಾಸ್ತ್ರಮಂಗಂ ಮನವಃ ಪ್ರಣವಾದಿಕಾಃ ।
ಸ್ವಾಹಾಂತಾಶ್ಚೈವಮಂಗಾನಿ ಕೃತ್ವಾ ಧ್ಯಾಯೇದಥಾಂಬಿಕಾಂ ॥ ೬ ॥

ಭಾನುಮಂಡಲಸಂಸ್ಥಾನಾಂ ಪ್ರವಿಕೀರ್ಣಾಲಕಂ ಶಿರಃ ।
ಛಿನ್ನಂ ಸ್ವಕಂ ಸ್ಫಾರಮುಖಂ ಸ್ವರಕ್ತಂ ಪ್ರಪಿಬದ್ಗಲತ್ ॥ ೭ ॥

---

"ಓಂ ಶ್ರೀಂ ಹ್ರೀಂ ಹ್ರೀಂ ಐಂ ವಜ್ರವೈರೋಚಿನೀಯೇ ಹ್ರೀಂ ಹ್ರೀಂ ಫಟ್ ಸ್ವಾಹಾ'' ಎಂಬುದು ಹದಿನೇಳು ವರ್ಣಗಳ ಛಿನ್ನಮಸ್ತಾದೇವೀಮಂತ್ರವು.

ಈ ಮಂತ್ರಕ್ಕೆ ಭೈರವನು ಋಷಿ, ಸಮ್ರಾಟ್ ಛಂದಸ್ಸು, ಛಿನ್ನಮಸ್ತಾ ದೇವಿಯು ದೇವತೆ, "ಶ್ರೀಂ" ಎಂಬುದೇ ಬೀಜ, "ಸ್ವಾಹಾ" ಎಂಬುದೇ ಶಕ್ತಿಯು ಎಂದು ಹೇಳಿದೆ.

ಅಂಗಮಂತ್ರ :— "ಓಂ ಆಂ ಖಡ್ಗಾಯ ಸ್ವಾಹಾ" ಎಂದು ಹೃದಯ, 'ಓಂ ಈಂ ಖಡ್ಗಾಯ ಸ್ವಾಹಾ' ಎಂದು ಶಿರಸ್ಸು, 'ಓಂ ಊಂ ವಜ್ರಾಯ ಸ್ವಾಹಾ' ಎಂದು ಶಿಖೆ, "ಓಂ ಐಂ ಪಾಶಾಯ ಸ್ವಾಹಾ'' ಎಂದು ಕವಚ, "ಓಂ ಔಂ ಅಂಕುಶಾಯ ಸ್ವಾಹಾ'' ಎಂದು ನೇತ್ರ, "ಓಂ ಅಃ ವಸು ರಕ್ಷ ಹ್ರೀಂ ಹ್ರೀಂ ಫಟ್ ಸ್ವಾಹಾ" ಎಂದು ಅಸ್ತ್ರ ಈ ರೀತಿ ಪ್ರಣವಾದಿ ಸ್ವಾಹಾಂತವಾದ ಮಂತ್ರಗಳಿಂದ ಷಡಂಗಗಳನ್ನು ನ್ಯಾಸಮಾಡಿ ಅನಂತರ ಅಂಬಿಕಾದೇವಿಯನ್ನು ಧ್ಯಾನಿಸಬೇಕು.

೭-೯. ಧ್ಯಾನ.— ಸೂರ್ಯಮಂಡಲ ಮಧ್ಯದಲ್ಲಿರುವ, ಕೆದರಿದ ಕೂದಲುಳ್ಳ, ಕುತ್ತಿಗೆಯಿಂದ ಸುರಿಯುತ್ತಿರುವ ತನ್ನ ರಕ್ತವನ್ನು ಕುಡಿಯುತ್ತಿರುವ,

ಉಪರಿಸ್ಥಾಂ ರತಾಸಕ್ತರತಿಮನ್ಮಥಯೋರ್ನಿಜೇ |
ಡಾಕಿನೀ ವರ್ಣಿನೀ ಸಖ್ಯಾ ದೃಷ್ಟ್ವಾ ಮೋದಭರಾಕುಲಾಂ || ೮ ||

ಧ್ಯಾತ್ವೈವಂ ಪ್ರಜಪೇಲ್ಲಕ್ಷಚತುಷ್ಕಂ ತದ್ದಶಾಂಶತಃ |
ಪಾಲಾಶೈರ್ಬಿಲ್ವಜೈರ್ವಾಪಿ ಜುಹುಯಾತ್ಕುಸುಮೈಃ ಫಲೈಃ || ೯ ||

ಆಧಾರಶಕ್ತಿಮಾರಭ್ಯ ಪರತತ್ವಾಂತಪೂಜಿತೇ |
ಪೀಠೇ ಜಯಾಖ್ಯಾ ವಿಜಯಾ ಜಿತಾ ಚಾಪಿ ಪರಾಜಿತಾ || ೧೦ ||

ನಿತ್ಯಾ ವಿಲಾಸಿನೀ ಷಷ್ಠೀ ದೋಗ್ಧ್ರ್ಯಘೋರಾ ಚ ಮಂಗಲಾ |
ದಿಕ್ಷು ಮಧ್ಯೇ ಚ ಸಂಪೂಜ್ಯಾ ನವ ಪೀಠಸ್ಯ ಶಕ್ತಯಃ || ೧೧ ||

ಸರ್ವಬುದ್ಧಿಪ್ರದೇ ವರ್ಣನೀಯೇ ಸರ್ವಭೃಗುಃ ಸದೃಕ್ |
ಸಿದ್ಧಿಪ್ರದೇ ಡಾಕಿನೀ ಯೇ ಚ ತಾರೋ ವಜ್ರ ಸ ಭೌತಿಕಃ || ೧೨ ||

---

ವಿಶಾಲವಾದ ಬಾಯಿಯುಳ್ಳ, ಕತ್ತರಿಸಿದ ತನ್ನ ಶಿರಸ್ಸನ್ನು ಎಡಗೈಯಲ್ಲಿ ಹಿಡಿದುಕೊಂಡಿರುವ, ಸುರತಾಸಕ್ತರಾದ ರತಿ ಮನ್ಮಥರ ಮೇಲೆ ನಿಂತಿರುವ, ಡಾಕಿನೀ, ವರ್ಣಿನೀ ಎಂಬ ತನ್ನ ಸಖಿಯರನ್ನು ನೋಡಿ ಅತ್ಯಾನಂದಭರಿತಳಾದ ದೇವಿಯನ್ನು ಧ್ಯಾನಿಸಬೇಕು.

ಈ ಮಂತ್ರವನ್ನು ನಾಲ್ಕುಲಕ್ಷ ಜಪಿಸಬೇಕು ಬಳಿಕ ಮುತ್ತುಗ ಅಥವಾ ಬಿಲ್ವಪತ್ರಫಲಗಳಿಂದ ನಲವತ್ತುಸಾವಿರ ಹೋಮಮಾಡಬೇಕು.

೧೦-೧೧. ಆಧಾರಶಕ್ತಿಯಿಂದ ಪರತತ್ವಾಂತವಾಗಿ ಪೂಜಿಸಲ್ಪಟ್ಟ ಪೀಠದಲ್ಲಿ ದಿಕ್ಕುಗಳಲ್ಲಿಯೂ, ಮಧ್ಯದಲ್ಲಿಯೂ ಸಹ ಜಯಾ, ವಿಜಯಾ, ಜಿತಾ, ಪರಾಜಿತಾ, ನಿತ್ಯಾ, ವಿಲಾಸಿನೀ, ದೋಗ್ಧ್ರೀ, ಅಘೋರಾ ಮತ್ತು ಮಂಗಳಾ ಎಂಬ ಒಂಬತ್ತು ಪೀಠಶಕ್ತಿಗಳನ್ನು ಪೂಜಿಸಬೇಕು.

### ಛಿನ್ನಮಸ್ತಾಪೀಠ ಮಂತ್ರ

೧೨-೧೩. (ಭೃಗುಃ ಸದೃಕ್= ಸಿ, ತಾರ= ಓಂ, ಭಗ= ಏ,

**ಖಡ್ಗೀಶೋ ರೋಚನೀಯೇಂತೇ ಭಗಂ ಹ್ಯೇಹಿ ನವೋಂತಿಕಃ ।**
**ತಾರಾದಿಪೀಠಮಂತ್ರೋಯಂ ವೇದರಾಮಾಕ್ಷರೋ ಮತಃ ॥ ೧೩ ॥**

**ಸಮುಪ್ಯಾರ್ಸನಮೋತೇನ ತತ್ರ ಸಂಪೂಜಯೇಚ್ಛಿವಾಂ ।**
**ತ್ರಿಕೋಣಮಧ್ಯಷಟ್ಕೋಣಪದ್ಮಭೂಪುರಮಧ್ಯತಃ ॥ ೧೪ ॥**

**ಬಾಹ್ಯಾವರಣಮಾರಭ್ಯ ಪೂಜಯೇತ್ಪ್ರತಿಲೋಮತಃ ।**
**ಭೂಪುರಾದ್ಬಾಹ್ಯಭಾಗೇಷು ವಜ್ರಾದೀನಿ ಪ್ರಪೂಜಯೇತ್ ॥ ೧೫ ॥**

---

ಸಭೌತಿಕಖಡ್ಗೀಶ= ವೈ, ಉಳಿದ ಶಬ್ದಗಳು ಹಾಗೆಯೇ ಮಂತ್ರದಲ್ಲಿ ಸೇರತಕ್ಕುವು.)

"ಓಂ ಸರ್ವಬುದ್ಧಿಪ್ರದೇ ವರ್ಣನೀಯೇ ಸರ್ವಸಿದ್ಧಿಪ್ರದೇ ಡಾಕಿನೀಯೇ ಓಂ ವಜ್ರವೈರೋಚಿನೀಯೇ ಏಹ್ಯೇಹಿ ನಮಃ'' ಓಂಕಾರಾದಿಯಾದ ಮೂವತ್ತು ನಾಲ್ಕು ಅಕ್ಷರಗಳ ಈ ಮಂತ್ರವು ಪೀಠಮಂತ್ರ ಎಂದು ವಿಹಿತವಾಗಿದೆ.

೧೪-೧೫. ಈ ಮಂತ್ರದಿಂದ ಆಸನವನ್ನು ಸಮರ್ಪಿಸಿ, ಅದರಲ್ಲಿ ದೇವಿಯನ್ನು ಪೂಜಿಸಬೇಕು.

## ಛಿನ್ನಮಸ್ತಾದೇವಿಯ ಪೂಜಾಯಂತ್ರ

ಮಧ್ಯದಲ್ಲಿ ತ್ರಿಕೋಣವನ್ನೊಳಗೊಂಡ ಷಟ್ಕೋಣ, ಅದರ ಸುತ್ತಲೂ ಅಷ್ಟದಳ ಪದ್ಮ, ಅದನ್ನೊಳಗೊಂಡಿರುವ ಚತುರಸ್ರಮಂಡಲವೇ ಪೂಜಾಯಂತ್ರವು.

ಚತುರಸ್ರಮಂಡಲದ ಮಧ್ಯಭಾಗದಿಂದ ಬಾಹ್ಯಾವರಣದ ವರೆಗೆ ಪ್ರತಿಲೋಮರೀತಿಯಿಂದ ಪೂಜಿಸಬೇಕು. ಚತುಷ್ಕೋಣಮಂಡಲದ ಹೊರಭಾಗದಲ್ಲಿ ವಜ್ರ ಮುಂತಾದ ದಿಕ್ಪಾಲಕರ ಆಯುಧಗಳನ್ನು ಪೂಜಿಸಬೇಕು.

ತದಂತಃ ಸುರರಾಜಾದೀನ್ ಪೂಜಯೇದ್ಧರಿತಾಂ ಪತೀನ್ ।
ಭೂಪುರಸ್ಯ ಚತುರ್ದ್ವಾರ್ಷು ದ್ವಾರಪಾಲಾನ್ಯಜೇದಥ ॥ ೧೬ ॥

ಕರಾಲವಿಕರಾಲಾಖ್ಯಾವತಿಕಾಲಸ್ತೃತೀಯಕಃ ।
ಮಹಾಕಾಲಶ್ಚತುರ್ಥಃ ಸ್ಯಾದಥ ಪದ್ಮೇಽಷ್ಟಶಕ್ತಯಃ ॥ ೧೭ ॥

ಏಕಲಿಂಗಾ ಯೋಗಿನೀ ಚ ಡಾಕಿನೀ ಭೈರವೀ ತಥಾ ।
ಮಹಾಭೈರವಕೇಂದ್ರಾಕ್ಷೀ ತ್ವಸಿತಾಂಗೀ ತು ಸಪ್ತಮೀ ॥ ೧೮ ॥

ಸಂಹಾರಿಣ್ಯಷ್ಟಮೀ ಚೇತಿ ಷಟ್ಕೋಣೇಷ್ವಂಗಮೂರ್ತಯಃ ।
ತ್ರಿಕೋಣಗಾ ಛಿನ್ನಮಸ್ತಾ ಪಾರ್ಶ್ವಯೋಸ್ತು ಸಖೀದ್ವಯಂ ॥ ೧೯ ॥

---

೧೬-೨೪. ಅದರ ಒಳಭಾಗದಲ್ಲಿ ದೇವೇಂದ್ರನೇ ಮುಂತಾದ ದಿಕ್ಪಾಲಕರನ್ನು ಪೂಜಿಸಬೇಕು.

ಅನಂತರ ಚತುರಸ್ರಮಂಡಲದ ನಾಲ್ಕು ದ್ವಾರಗಳಲ್ಲಿ ಕರಾಳ, ವಿಕರಾಳ, ಅತಿಕಾಲ, ಮಹಾಕಾಲ ಎಂಬ ನಾಲ್ಕು ದ್ವಾರಪಾಲಕರನ್ನು ಪೂಜಿಸಬೇಕು.

ತರುವಾಯ ಅಷ್ಟದಳಪದ್ಮದಲ್ಲಿ ಏಕಲಿಂಗಾ, ಯೋಗಿನೀ, ಡಾಕಿನೀ, ಭೈರವೀ, ಮಹಾಭೈರವಕಾ, ಇಂದ್ರಾಕ್ಷೀ , ಅಸಿತಾಂಗೀ, ಎಂಟನೆಯವಳಾದ ಸಂಹಾರಿಣೀ ಎಂಬ ಎಂಟು ಶಕ್ತಿಗಳನ್ನು ಪೂಜಿಸಬೇಕು.

ಅಂಗಮೂರ್ತಿಗಳನ್ನು ಷಟ್ಕೋಣಗಳಲ್ಲಿಯೂ, ತ್ರಿಕೋಣದಲ್ಲಿ ಛಿನ್ನಮಸ್ತಾದೇವಿಯನ್ನೂ, ಪಾರ್ಶ್ವಗಳಲ್ಲಿ ಡಾಕಿನೀ, ವರ್ಣಿನೀನಾಮಕ ಸಖೀದ್ವಯರನ್ನೂ 'ಓಂ. ಐಂ' ಎಂಬ ಓಂಕಾರಾದಿಗಳಿಂದ 'ಓಂ ಐಂ ಡಾಕಿನ್ಯೈ ನಮಃ' ಇತ್ಯಾದಿ ರೀತಿಯಾಗಿ ಪೂಜಿಸಬೇಕು.

ಈ ರೀತಿಯಾದ ಪೂಜಾದಿಗಳಿಂದ ಮಂತ್ರಸಿದ್ಧಿಯನ್ನು ಹೊಂದಿದ ಮಂತ್ರಿಯು ಆ ದೇವಿಯ ಅನುಗ್ರಹದಿಂದ ಕೂಡಲೇ ದುರ್ಲಭವಾದ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

ಡಾಕಿನೀ ವರ್ಣಿನೀಸಂಜ್ಞಾಂ ತಾರಾವಾಗ್ಭ್ಯಾಂ ಪ್ರಪೂಜಯೇತ್ |
ಏವಂ ಪೂಜಾದಿಭಿಃ ಸಿದ್ಧೇ ಮಂತ್ರೇ ಮಂತ್ರೀ ಮನೋರಥಾನ್ || ೨೦ ||

ಪ್ರಾಪ್ನುಯಾನ್ನಿಖಿಲಾನ್ಸದ್ಯೋ ದುರ್ಲಭಾಂಸ್ತತ್ಪ್ರಸಾದತಃ |
ಶ್ರೀಪುಷ್ಪೈರ್ಲಭತೇ ಲಕ್ಷ್ಮೀಂ ತತ್ಫಲೈಶ್ಚ ಸಮೀಹಿತಂ || ೨೧ ||

ವಾಕ್‌ಸಿದ್ಧಿಂ ಮಾಲತೀಪುಷ್ಪೈಶ್ಚಂಪಕೈರ್ಹವನಾತ್ಸುಖಂ |
ಘೃತಾಕ್ತಂ ಛಾಗಮಾಂಸಂ ಯೋ ಜುಹುಯಾತ್ಪ್ರತ್ಯಹಂ ಶತಂ || ೨೨ ||

ಮಾಸಮೇಕಂ ತು ವಶಗಾಸ್ತಸ್ಯ ಸ್ಯುಃ ಸರ್ವಪಾರ್ಥಿವಾಃ |
ಕರವೀರಸುಮೈಃ ಶ್ವೇತೈರ್ಲಕ್ಷಸಂಖ್ಯಂ ಜುಹೋತಿ ಯಃ || ೨೩ ||

ರೋಗಜಾಲಂ ಪರಾಭೂಯ ಸುಖೀ ಜೀವೇಚ್ಛತಂ ಸಮಾಃ |
ರಕ್ತೈಸ್ತತ್ಸಂಖ್ಯಯಾ ಹುತ್ವಾ ವಶಯೇನ್ಮಂತ್ರಿಣೋ ನೃಪಾನ್ || ೨೪ ||

---

ಶ್ರೀಪುಷ್ಪಗಳಿಂದ ಹೋಮಮಾಡಿದರೆ ಸಂಪತ್ತೂ, ಅದರ ಫಲಗಳಿಂದ ಹೋಮಮಾಡಿದರೆ ಇಷ್ಟಾರ್ಥವೂ, ಮಾಲತೀಪುಷ್ಪಗಳಿಂದ ಹೋಮಮಾಡಿದರೆ ವಾಕ್ಸಿದ್ಧಿಯೂ, ಸಂಪಿಗೇ ಹೂವಿನಿಂದ ಹೋಮಮಾಡಿದರೆ ಸುಖವೂ ಲಭಿಸುವುದು.

ಆಡಿನ ಮಾಂಸವನ್ನು ತುಪ್ಪದಲ್ಲಿ ನೆನೆಸಿ ಪ್ರತಿದಿನವೂ ಒಂದು ನೂರರಂತೆ ಒಂದು ತಿಂಗಳು ಹೋಮಮಾಡಿದವನಿಗೆ ಸಮಸ್ತ ರಾಜರೂ ವಶರಾಗುವರು.

ಬಿಳಿಯ ಕರವೀರಪುಷ್ಪಗಳಿಂದ ಒಂದು ಲಕ್ಷ ಹೋಮಮಾಡುವವನು ರೋಗರಾಶಿಯನ್ನು ನಾಶಮಾಡಿಕೊಂಡು ಸುಖವಾಗಿ ನೂರು ವರ್ಷಗಳ ಕಾಲ ಬದುಕುವನು.

ಕೆಂಪು ಕರವೀರಪುಷ್ಪಗಳಿಂದ ಒಂದು ಲಕ್ಷ ಹೋಮಮಾಡಿದರೆ ದೊರೆ ಮಂತ್ರಿ ಇವರನ್ನು ವಶಪಡಿಸಿಕೊಳ್ಳಬಹುದು.

ಫಲೈರ್ಹುತ್ವಾಪ್ನುಯಾಲ್ಲಕ್ಷ್ಮೀಮುದುಂಬರಪಲಾಶಜೈಃ ।
ಗೋಮಾಯುಮಾಂಸೈಸ್ತ್ವಾಮೇವ ಕವಿತಾಂ ಪಾಯಸಾಂಧಸಾ ॥ ೨೫ ॥

ಬಂಧೂಕಕುಸುಮೈರ್ಭಾಗ್ಯಂ ಕರ್ಣಿಕಾರೈಸ್ಸಮಾಹಿತಂ ।
ತಿಲತಂಡುಲಹೋಮೇನ ವಶಯೇನ್ನಿಖಿಲಾನ್ ಜನಾನ್ ॥ ೨೬ ॥

ನಾರೀರಜೋಭಿರಾಕೃಷ್ಟಿರ್ಮೃಗಮಾಂಸೈಃ ಸಮಾಹಿತಂ ।
ಸ್ತಂಭನಂ ಮಹಿಷ್ಯೈರ್ಮಾಂಸೈಃ ಪಂಕಜೈಃ ಸಘೃತೈರಪಿ ॥ ೨೭ ॥

ಚಿತಾಗ್ನೌ ಪರಭೃತ್ಪಕ್ಷೈರ್ಜುಹುಯಾದರಿಮೃತ್ಯವೇ ।
ಉನ್ಮತ್ತಕಾಷ್ಠದೀಪ್ತಾಗ್ನೌ ತತ್ಫಲಂ ವಾಯಸಚ್ಛದೈಃ ॥ ೨೮ ॥

---

೨೫. ಅತ್ತಿ ಅಥವಾ ಮುತ್ತುಗದ ಹಣ್ಣುಗಳಿಂದ ಹೋಮಮಾಡಿದರೆ ಸಂಪತ್ತು ಲಭಿಸುವುದು. ನರಿಯ ಮಾಂಸಗಳಿಂದ ಹೋಮಮಾಡುವವನೂ ಸಹ ಸಂಪತ್ತನ್ನು ಪಡೆಯುವನು. ಪರಮಾನ್ನದಿಂದ ಹೋಮಮಾಡಿದರೆ ಕವಿತೆಯ ಸಾಮರ್ಥ್ಯವುಂಟಾಗುವುದು.

೨೬. ಬಂಧೂಕಪುಷ್ಪದಿಂದ ಹೋಮಮಾಡಿದರೆ ಐಶ್ವರ್ಯವೂ, ಕರ್ಣಿಕಾರಪುಷ್ಪದಿಂದ ಇಷ್ಟವೂ, ಎಳ್ಳು ಅಕ್ಕಿಗಳ ಹೋಮದಿಂದ ಸಕಲಜನವಶ್ಯತೆಯೂ ಉಂಟಾಗುತ್ತದೆ.

೨೭. ಋತುಕಾಲದಲ್ಲಿ ಸ್ರವಿಸಿದ ಸ್ತ್ರೀರಜಸ್ಸಿನ ಹೋಮದಿಂದ ಆಕರ್ಷಣವೂ, ಜಿಂಕೆಯ ಮಾಂಸದ ಹೋಮದಿಂದ ಇಷ್ಟಪ್ರಾಪ್ತಿಯೂ ಕೋಣಮಾಂಸದ ಹೋಮ ಅಥವಾ ಘೃತಮಿಶ್ರಪದ್ಮಗಳಿಂದ ಹೋಮಮಾಡಿದರೆ ಸ್ತಂಭನಶಕ್ತಿಯೂ ಲಭಿಸುವುದು.

೨೮. ಚಿತಾಗ್ನಿಯಲ್ಲಿ ಕೋಗಿಲೆಯ ರೆಕ್ಕೆಗಳಿಂದ ಶತ್ರುಮರಣಸಿದ್ಧಿಗಾಗಿ ಹೋಮಮಾಡಬೇಕು ದತ್ತೂರಿಯ ಕಟ್ಟಿಗೆಯಿಂದ ಪ್ರಜ್ವಲಿತವಾದ ಅಗ್ನಿಯಲ್ಲಿ ಕಾಗೆಯ ರೆಕ್ಕೆಯನ್ನು ಹೋಮಮಾಡಿದರೂ ಶತ್ರುಮರಣಸಿದ್ಧಿಯಾಗುವುದು.

ದ್ಯೂತೇ ವನೇ ನೃಪದ್ವಾರೇ ಸಮರೇ ವೈರಿಸಂಕಟೇ ।
ವಿಜಯಂ ಲಭತೇ ಮಂತ್ರೀ ಧ್ಯಾಯನ್ದೇವೀಂ ಜಪನ್ಮನುಂ ॥ ೨೯ ॥

ಭುಕ್ತ್ಯೈ ಮುಕ್ತ್ಯೈ ಸಿತಾಂ ಧ್ಯಾಯೇದುಚ್ಚಾಟೇ ನೀಲರೋಚಿಷಂ ।
ರಕ್ತಾಂ ವಶ್ಯೇ ಮೃತೌ ಧೂಮ್ರಾಂ ಸ್ತಂಭನೇ ಕನಕಪ್ರಭಾಂ ॥ ೩೦ ॥

ನಿಶಿ ದದ್ಯಾದ್ಬಲಿಂ ತಸ್ಯೈ ಸಿದ್ಧಯೇ ಮದಿರಾದಿನಾ ।
ಗೋಪನೀಯಃ ಪ್ರಯೋಗೋಽಯಂ ಪ್ರೋಚ್ಯತೇ ಸರ್ವಸಿದ್ಧಿದಃ ॥ ೩೧ ॥

ಭೂತಾಹೇ ಕೃಷ್ಣಪಕ್ಷಸ್ಯ ಮಧ್ಯರಾತ್ರೇ ತನೋಘನೇ ।
ಸ್ನಾತ್ವಾ ರಕ್ತಾಂಬರಧರೋ ರಕ್ತಮಾಲ್ಯಾನುಲೇಪನಃ ॥ ೩೨ ॥

---

೨೯. ಜೂಜು, ಅರಣ್ಯ, ನೃಪದ್ವಾರ, ಯುದ್ಧ, ಶತ್ರುವಿನಿಂದ ಸಂಕಟ, ಇವುಗಳಲ್ಲಿ ಸಿಲುಕಿದಾಗ ಈ ಮಂತ್ರವನ್ನು ಜಪಿಸುತ್ತಾ ದೇವಿಯನ್ನು ಧ್ಯಾನಿಸಿದರೆ ವಿಜಯವು ಲಭಿಸುವುದು.

೩೦. ಭೋಗ ಮೋಕ್ಷಗಳಿಗಾಗಿ ಶುಕ್ಲವರ್ಣೋಪೇತಳಾದ ದೇವಿಯನ್ನೂ, ಶತ್ರುಗಳ ಉಚ್ಚಾಟನೆಗಾಗಿ ನೀಲಕಾಂತಿಯುಕ್ತಳಾದ ದೇವಿಯನ್ನೂ, ವಶೀಕರಣಕ್ಕಾಗಿ ರಕ್ತದೇವಿಯನ್ನೂ, ವೈರಿಯ ಮರಣಕ್ಕಾಗಿ ಧೂಮ್ರವರ್ಣ ದೇವಿಯನ್ನೂ, ಸ್ತಂಭನಕ್ಕಾಗಿ ಸುವರ್ಣದಂತೆ ಕಾಂತಿಯುಳ್ಳ ದೇವಿಯನ್ನೂ ಧ್ಯಾನಿಸಬೇಕು.

೩೧. ಸರ್ವಸಿದ್ಧಿಗಾಗಿ ಮದ್ಯ ಮುಂತಾದುವುಗಳಿಂದ ರಾತ್ರಿಕಾಲದಲ್ಲಿ ದೇವಿಗೆ ಬಲಿಯನ್ನು ಅರ್ಪಿಸಬೇಕು. ಸಕಲಸಿದ್ಧಿಪ್ರದವಾದ ಈ ಪ್ರಯೋಗವನ್ನು ಹೇಳುವೆನು. ಇದನ್ನು ರಹಸ್ಯವಾಗಿ ಇಟ್ಟಿರಬೇಕು.

೩೨-೩೪. ಕೃಷ್ಣಪಕ್ಷದ ಚತುರ್ದಶಿಯ ದಿನ ಗಾಢಾಂಧಕಾರ (ಕಗ್ಗತ್ತಲೆ) ವುಳ್ಳ ಮಧ್ಯರಾತ್ರಿಯಲ್ಲಿ ಸ್ನಾನಮಾಡಿ ಕೆಂಪುಬಟ್ಟೆಯನ್ನು ಉಟ್ಟು ರಕ್ತ

ಆನೀಯ ಪೂಜಯೇನ್ನಾರೀಂ ಛಿನ್ನಮಸ್ತಾಸ್ವರೂಪಿಣೀಂ ।
ಸುಂದರೀಂ ಯೌವನಾಕ್ರಾಂತಾಂ ನರಪಂಚಕಗಾಮಿನೀಂ ॥ ೩೩ ॥

ಸುಸ್ಮಿತಾಂ ಮುಕ್ತಕಬರೀಂ ಭೂಷಾದಾನಪ್ರತೋಷಿತಾಂ ।
ವಿವಸ್ತ್ರಾಂ ಪೂಜಯಿತ್ವೈನಾಮಯುತಂ ಪ್ರಜಪೇನ್ಮನುಂ ॥ ೩೪ ॥

ಬಲಿಂ ದತ್ವಾ ನಿಶಾಂ ನೀತ್ವಾ ಸಂಪ್ರೇಷ್ಯ ಧನತೋಷಿತಾಂ ।
ಭೋಜಯೇದ್ವಿವಿಧೈರನ್ನೈರ್ಬ್ರಾಹ್ಮಣಾನ್ ದೇವತಾ ಧಿಯಾ ॥ ೩೫ ॥

ಅನೇನ ವಿಧಿನಾ ಲಕ್ಷ್ಮೀಂ ಪುತ್ರಾನ್ ಪೌತ್ರಾನ್ ಧನಂ ಯಶಃ ।
ನಾರೀಮಾಯುಃ ಸುಖಂ ಧರ್ಮಮಿಷ್ಟಂ ಚ ಸಮವಾಪ್ನುಯಾತ್ ॥ ೩೬ ॥

---

ಪುಷ್ಪಮಾಲಿಕೆ ಮತ್ತು ಅಂತಹ ಗಂಧಗಳನ್ನು ಧರಿಸಿ, ಛಿನ್ನಮಸ್ತಾಸ್ವರೂಪಿಣಿಯಾದ, ಸೌಂದರ್ಯ ಯೌವನಗಳುಳ್ಳ, ಐದು ಪುರುಷರ ಸಂಗಮನಮಾಡಿರುವ, ಮಂದಹಾಸಯುಕ್ತಳಾದ, ಕೂದಲನ್ನು ಕೆದರಿಕೊಂಡಿರುವ, ಆಭರಣಗಳನ್ನು ಕೊಟ್ಟು ಸಂತೋಷಪಡಿಸಲ್ಪಟ್ಟ ಸ್ತ್ರೀಯನ್ನು ಕರೆತಂದು ಬಟ್ಟೆಯನ್ನು ಉಡದೆ ನಿರ್ವಾಣಳಾದ ಆಕೆಯನ್ನು ಪೂಜೆಮಾಡಿ ಈ ಮಂತ್ರವನ್ನು ಹತ್ತುಸಾವಿರ ಜಪಿಸಬೇಕು

೩೫. ಅನಂತರ ಬಲಿಪ್ರದಾನಮಾಡಿ, ರಾತ್ರಿಯನ್ನು ಕಳೆದು, ಯಥೇಷ್ಟದ್ರವ್ಯದಾನದಿಂದ ಸಂತೋಷಿತಳಾದ ಆಕೆಯನ್ನು ಕಳುಹಿಸಿ ನಾನಾ ವಿಧವಾದ ಅನ್ನಾದಿಗಳನ್ನು ಮಾಡಿ, ಬ್ರಾಹ್ಮಣರಿಗೆ ದೇವತಾಭಾವನೆಯಿಂದ ಭೋಜನಮಾಡಿಸಬೇಕು.

೩೬. ಈ ವಿಧಾನವನ್ನು ಆಚರಿಸುವುದರಿಂದ ಸಂಪತ್ತು, ಮಕ್ಕಳು ಮೊಮ್ಮಕ್ಕಳು, ಹಣ, ಕೀರ್ತಿ, ನಾರೀ, ಆಯುಸ್ಸು, ಸುಖ, ಧರ್ಮ ಮುಂತಾದ ಸಕಲ ಇಷ್ಟಾರ್ಥಗಳನ್ನೂ ಹೊಂದುವನು.

ತಸ್ಯಾಂ ರಾತ್ರೌ ವ್ರತಂ ಕಾರ್ಯಂ ವಿದ್ಯಾಕಾಮೇನ ಮಂತ್ರಿಣಾ |
ಮನೋರಥೇಷು ಚಾನ್ಯೇಷು ಗಚ್ಛೇತ್ತಾಂ ಪ್ರಜಪನ್ಮನುಂ || ೩೭ ||

ಉಷಸ್ಯುತ್ಥಾಯ ಶಯ್ಯಾಯಾಮುಪವಿಷ್ಟೋ ಜಪೇಚ್ಛತಂ |
ಷಣ್ಮಾಸಾಭ್ಯಂತರೇ ಮಂತ್ರೀ ಕವಿತ್ವೇನ ಜಯೇತ್ಕವಿಂ || ೩೮ ||

ಶಿವೇನ ಕೀಲಿತಾ ಚೇಯಂ ತದುತ್ಕೀಲನಮುಚ್ಯತೇ |
ಮಾಯಾಂ ತಾರಪುಟಾಂ ಮಂತ್ರೀ ಜಪೇದಷ್ಟೋತ್ತರಂ ಶತಂ || ೩೯ ||

ಮಂತ್ರಸ್ಯಾದೌ ತಥೈವಾಂತೇ ಭವೇತ್ಸಿದ್ಧಿಪ್ರದಾ ತು ಸಾ |
ಉದಿತಾ ಛಿನ್ನಮಸ್ತೇಯಂ ಕಲೌ ಶೀಘ್ರಮಭೀಷ್ಟದಾ || ೪೦ ||

---

೩೭. ವಿದ್ಯೆಯನ್ನು ಬಯಸುವ ಮಂತ್ರಿಯು ಆ ರಾತ್ರಿಯಲ್ಲಿ ವ್ರತವನ್ನು ಮಾಡಬೇಕು. ಇತರ ಇಷ್ಟಾರ್ಥಗಳನ್ನು ಬಯಸುವವನು ಮಂತ್ರಜಪ ಮಾಡುತ್ತಾ ಆ ನಾರಿಯ ಸಂಗ ಮಾಡಬೇಕು.

೩೮. ಉಷಃಕಾಲದಲ್ಲಿ ಎದ್ದು ಹಾಸಿಗೆಯ ಮೇಲೆ ಕುಳಿತು ದಿನವೂ ನೂರರಂತೆ ಈ ಮಂತ್ರವನ್ನು ಜಪಿಸುವ ಮಂತ್ರಿಯು ಆರು ತಿಂಗಳೊಳಗೆ ಕವಿಯಾಗಿ ಅದರಿಂದ ಶುಕ್ರಾಚಾರ್ಯರನ್ನು ಜಯಿಸುವನು.

೩೯. ಈ ವಿದ್ಯೆಯು ಶಿವನಿಂದ ಕೀಲಿತವಾಗಿದೆ. ಇದರ ಉತ್ಕೀಲನ ಕ್ರಮವನ್ನು ಹೇಳುವೆನು :—ಮಂತ್ರಿಯು "ಓಂ ಹ್ರೀಂ ಓಂ" ಎಂಬುದಾಗಿ ನೂರೆಂಟಾವರ್ತಿ ಜಪಮಾಡಬೇಕು.

೪೦. ಮಂತ್ರದ ಆದ್ಯಂತಗಳಲ್ಲಿ ಹೀಗೆ ಜಪಿಸಿದರೆ ಆ ದೇವಿಯು ಸಿದ್ಧಿದಾಯಕಳಾಗುವಳು. ಈ ರೀತಿ ಉತ್ಕೀಲಿತಳಾದ ಆ ಛಿನ್ನಮಸ್ತಾದೇವಿಯು ಕಲಿಯುಗದಲ್ಲಿ ಬಹುಬೇಗ ಇಷ್ಟಾರ್ಥಗಳನ್ನು ಕೊಡುವಳು.

**ಅವತಾರಾಂತರಂ ದೇವ್ಯಾ ವಚ್ಮಿ ತೇ ಮುನಿಸತ್ತಮ |**
**ಜ್ಞಾನಾಮೃತಾರುಣಾ ಶ್ವೇತಾ ಕ್ರೋಧಿನೀಂದುಸಮನ್ವಿತಾ || ೪೧ ||**

**ಶಾಂತಿಸ್ತಥಾವಿಧಾ ಚಾಪಿ ನೀಚಸರ್ಗಾನ್ವಿತಾಸ್ತಥಾ |**
**ವಾಗ್ಭವಂ ಕಾಮಬೀಜಾಖ್ಯಂ ಕಾಮರಾಜಾಹ್ವಯಂ ತಥಾ || ೪೨ ||**

---

೪೧-೪೫. ಮುನಿವರ್ಯ! ದೇವಿಯ ಇನ್ನೊಂದು ಅವತಾರ ಮಂತ್ರಾದಿಗಳನ್ನು ನಿನಗೆ ಹೇಳುವೆನು :—

§

ತ್ರಿಪುರಾಭೈರವೀಮಂತ್ರ ;—

---

§ ಈ ತ್ರಿಪುರಾಭೈರವೀಮಂತ್ರವು ಶಾರದಾತಿಲಕಗ್ರಂಥದ ಹನ್ನೆರಡನೆಯ ಪಟಲದಲ್ಲಿ ಈ ರೀತಿಯಾಗಿ ಉದ್ಧರಿಸಲ್ಪಟ್ಟಿದೆ.

ವಿಯದ್ಭೃಗುಹುತಾಶಸ್ಥೋ ಭೌತಿಕೋ ಬಿಂದುಶೇಖರಃ |
ವಿಯತ್ತದಾದಿಕೇಂದ್ರಾಗ್ನಿಸ್ಥಿತಂ ವಾಮಾಕ್ಷಿಬಿಂದುಮತ್ ||
ಆಕಾಶಭೃಗುವಹ್ನಿಸ್ಥೋ ಮನುಃ ಸರ್ಗೇಂದುಖಂಡವಾನ್ || ೩ ||

(ವಿಯತ್= ಹ, ಭೃಗು= ಸ, ಹುತಾಶ= ರ, ಭೌತಿಕ= ಐ, ಬಿಂದು= ಂ= ಹ್ಸ್ರೈಂ ಇದು ಮೊದಲನೆಯ ಬೀಜ, ವಿಯತ್= ಹ, ತದಾದಿಃ= ಸಃ, ಕಃ= ಸ್ವರೂಪ (ಕ) ಇಂದ್ರ= ಲ, ಅಗ್ನಿ= ರ, ವಾಮಾಕ್ಷಿ= ಈ, ಬಿಂದು= ಂ= ಹ್ ಸ್ಕ್ಲ್ರೀಂ ಇದು ಎರಡನೆಯ ಬೀಜ, ಆಕಾಶ= ಹ, ಭೃಗು= ಸ, ವಹ್ನಿ= ರ, ಮನು= ಔ, ಸರ್ಗ= ಃ, ಇಂದುಖಂಡ= ಂ= ಹ್ ಸ್ರೌಂಃ ಇದು ಮೂರನೆಯ ಬೀಜ ;

ಎಂಬುದಾಗಿ ಉಕ್ತವಾಗಿದೆ. ಆದರೆ ಈ ಪುರಾಣದಲ್ಲಿ

ಜ್ಞಾನಾಮೃತಾರುಣಾ ಶ್ವೇತಾ ಕ್ರೋಧಿನೀಂದುಸಮನ್ವಿತಾ || ೪೧ ||
ಶಾಂತಿಸ್ತಥಾವಿಧಾ ಚಾಪಿ ನೀಚಸರ್ಗಾನ್ವಿತಾಸ್ತಥಾ |

ಎಂಬುದಾಗಿ ಹೇಳಿದೆ. ಇದರ ಪ್ರಕಾರ ಮೊದಲನೆಯ ಬೀಜವು ಆದರಂತೆಯೇ "ಹ್ಸ್ರೈಂ" ಎಂಬುದಾಗಿ ಸಿದ್ಧಿಸುತ್ತದೆ, ಎರಡು ಮೂರನೆಯ ಬೀಜಗಳನ್ನು

**ತ್ರಿಭಿರ್ಬೀಜೈಃ ಪಂಚಕೂಟಾತ್ಮಿಕಾ ತ್ರಿಪುರಭೈರವೀ ।**
**ಋಷಿಃ ಸ್ಯಾದ್ದಕ್ಷಿಣಾಮೂರ್ತಿಶ್ಛಂದಃ ಪಂಕ್ತಿರುದಾಹೃತಾ ॥ ೪೩ ॥**

**ದೇವತಾ ದೇಶಿಕೈರುಕ್ತಾ ದೇವೀ ತ್ರಿಪುರಭೈರವೀ ।**
**ನಾಭೇರಾಚರಣಂ ನ್ಯಸ್ಯ ವಾಗ್ಭವಂ ಮಂತ್ರವಿತ್ಸುನಃ ॥ ೪೪ ॥**

---

(ಜ್ಞಾನಾಮೃತಾ= ಐ, ಅರುಣ= ಹ, ಶ್ವೇತ= ಸ, ಕ್ರೋಧಿನೀ= ರ, ಇಂದು= ೦, ಶಾಂತಿ= ಕ, ಸರ್ಗ= ಃ)

" ಹ್ ಸ್ರೈಂ ಹ್ ಸ್ಕ್ಲ್ರೀಂ ಹ್ ಸ್ರೌಂಃ " ಎಂಬುದು ಮೂರು ಬೀಜಾಕ್ಷರಯುಕ್ತವಾದ ಪಂಚಕೂಟಾತ್ಮಕ ಮಂತ್ರವು. ಇದಕ್ಕೆ ತ್ರಿಪುರಭೈರವೀ ಮಂತ್ರವೆಂದು ಹೆಸರು.

ಇದು " ಹಸ ಕಲರ " ಎಂಬ ಐದು ವ್ಯಂಜನಾಕ್ಷರಗಳನ್ನೊಳಗೊಂಡು ಇರುವುದರಿಂದ ಪಂಚಕೂಟಾತ್ಮಕವಿದ್ಯೆಯೆಂದು ಕರೆಯಲ್ಪಟ್ಟಿದೆ.

ಈ ಮಂತ್ರದಲ್ಲಿ ಮೊದಲನೆಯದು ವಾಗ್ಭವ ಬೀಜ, ಎರಡನೆಯದು ಕಾಮಬೀಜ, ಮೂರನೆಯದು ಕಾಮರಾಜನಾಮಕವು ಈ ರೀತಿ ಮೂರು ಬೀಜಗಳಿಂದ ಯುಕ್ತವಾದ ಈ ಮಂತ್ರವು ಪಂಚಕೂಟಾತ್ಮಕ ತ್ರಿಪುರಭೈರವೀ ಮಂತ್ರವೆನಿಸಿದೆ.

---

ಇದು ಸ್ಪಷ್ಟವಾಗಿ ಬೋಧಿಸುವುದಿಲ್ಲ. ಮೇಲೆ ಹೇಳಿರುವ ಎರಡು ಮೂರನೆಯ ಬೀಜಗಳಿಗೆ ಬೋಧಕವಾಗುವಂತೆ ಶ್ಲೋಕವನ್ನು ಮಾರ್ಪಡಿಸಬೇಕೆಂದು ತೋರುತ್ತದೆ. ಈ ಪುರಾಣವನ್ನು ಅಚ್ಚುಹಾಕುವಾಗ ಈ ರೀತಿ ಕೆಲವು ಭಾಗವು ಲೋಪವಾಗಿ ವ್ಯತ್ಯಾಸವಾಗಿಂಬಹುದೆಂದು ತೋರುತ್ತದೆ. ಶಾರದಾತಿಲಕ, ಮಂತ್ರರತ್ನಮಂಜೂಷಾ ಮುಂತಾದ ಗ್ರಂಥಾಂತರಗಳ ಸಂವಾದವನ್ನು ಅನುಸರಿಸಿ ಇಲ್ಲಿ ಮಂತ್ರವನ್ನು ಉದ್ಧರಿಸಿದೆಯೆಂದು ತಿಳಿಯಬೇಕು.

ಹೃದಯಾನ್ನಾಭಿಪರ್ಯಂತಂ ಕಾಮಬೀಜಂ ಪ್ರವಿನ್ಯಸೇತ್ ।
ಶಿರಸೋ ಹೃತ್ಪ್ರದೇಶಾಂತಂ ತಾರ್ತೀಯಂ ವಿನ್ಯಸೇತ್ತತಃ ॥ ೪೫ ॥

ಆದ್ಯಂ ದ್ವಿತೀಯಂ ಕರಯೋಸ್ತಾರ್ತೀಯಮುಭಯೋರ್ನ್ಯಸೇತ್ ।
ಮೂರ್ಧ್ನ್ಯಾಧಾರೇ ಹೃದಿ ನ್ಯಸ್ಯ ಭೂಯೋ ಬೀಜತ್ರಯಂ ಕ್ರಮಾತ್ ॥

ನವಯೋನ್ಯಾತ್ಮಕಂ ನ್ಯಾಸಂ ಕುರ್ಯಾದ್ಬೀಜೈಸ್ತ್ರಿಭಿಃ ಪುನಃ ।
ಬಾಲೋದಿತಪ್ರಕಾರೇಣ ಮೂರ್ತಿನ್ಯಾಸಮಥಾಚರೇತ್ ॥ ೪೭ ॥

ಸ್ವಸ್ವಬೀಜಾದಿಕಂ ಪೂರ್ವಂ ಮೂರ್ಧ್ನೀಶಾನಮನೋಭವಂ ।
ನ್ಯಸೇದ್ವಕ್ತ್ರೇ ತತ್ಪುರುಷಂ ಮಕರಧ್ವಜಮಾತ್ಮವಿತ್ ॥ ೪೮ ॥

---

ಇದಕ್ಕೆ ದಕ್ಷಿಣಾಮೂರ್ತಿಯೇ ಋಷಿ, ಪಂಕ್ತಿ ಛಂದಸ್ಸು, ಆಚಾರ್ಯರಿಂದ ಉಕ್ತವಾದ ತ್ರಿಪುರಭೈರವಿಯೇ ದೇವತೆಯು.

ಮಂತ್ರಜ್ಞನು ನಾಭಿಯಿಂದ ಪಾದದವರೆಗೆ ಮೊದಲನೆಯದಾದ ವಾಗ್ಭವ ಬೀಜವನ್ನು ನ್ಯಾಸಮಾಡಿ, ಬಳಿಕ ಹೃದಯದಿಂದ ನಾಭಿಪರ್ಯಂತವಾಗಿ ಕಾಮ ಬೀಜವನ್ನು ನ್ಯಾಸಮಾಡಬೇಕು. ತರುವಾಯ ತಲೆಯಿಂದ ಹೃದಯದವರೆಗೆ ಮೂರನೆಯ ಬೀಜಾಕ್ಷರವನ್ನು ನ್ಯಾಸಮಾಡಬೇಕು.

೪೬. ಅನಂತರ ಪ್ರಥಮ ದ್ವಿತೀಯ ಬೀಜಗಳನ್ನು ಒಂದೊಂದು ಹಸ್ತ ಗಳಲ್ಲಿಯೂ, ಮೂರನೆಯದನ್ನು ಎರಡು ಹಸ್ತಗಳಲ್ಲಿಯೂ ನ್ಯಾಸಮಾಡಿ ಪುನಃ ಮೂರು ಬೀಜಗಳನ್ನೂ ಕ್ರಮವಾಗಿ ಶಿರಸ್ಸು, ಮೂಲಾಧಾರ, ಹೃದಯಪ್ರದೇಶ ಗಳಲ್ಲಿ ನ್ಯಾಸಮಾಡಬೇಕು.

೪೭. ಪುನಃ ಮೂರು ಬೀಜಗಳಿಂದ ನವಯೋನ್ಯಾತ್ಮಕ ನ್ಯಾಸವನ್ನು ಮಾಡಬೇಕು. ಅನಂತರ ತ್ರಿಪುರಾಬಾಲಾಮಂತ್ರಕ್ಕೆ ವಿಹಿತವಾಗಿರುವ ರೀತಿ ಯಲ್ಲಿ ಮೂರ್ತಿನ್ಯಾಸವನ್ನು ಆಚರಿಸಬೇಕು.

೪೮-೫೦. ತರುವಾಯ ಮೊದಲು ಅವರವರ ಬೀಜಾಕ್ಷರಾದಿಯಾಗಿ ಶಿರಸ್ಸಿನಲ್ಲಿ ಈಶಾನ, ಮನೋಭವರನ್ನು ನ್ಯಾಸಮಾಡಬೇಕು. ("ಹ್ಸ್ರಾಂ

**ಹೃದ್ಯಘೋರಕುಮಾರಾದಿ ಕಂದರ್ಪಂ ತದನಂತರಂ ।**
**ಗುಹ್ಯದೇಶೇ ಪ್ರವಿನ್ಯಸ್ಯೇದ್ವಾಮದೇವಾದಿಮನ್ಮಥಂ ॥ ೪೯ ॥**

**ಸದ್ಯೋಜಾತಂ ಕಾಮದೇವಂ ಪಾದಯೋರ್ವಿನ್ಯಸೇತ್ತತಃ ।**
**ಊರ್ಧ್ವಂ ಪ್ರಾಗ್ದಕ್ಷಿಣೋದೀಚ್ಯ ಪಶ್ಚಿಮೇಷು ಮುಖೇಷು ತಾನ್ ॥**

**ಪ್ರವಿನ್ಯಸೇದ್ಯಥಾಪೂರ್ವಂ ಭೃಗುವ್ಯೋಮಾಗ್ನಿಸಂಸ್ಥಿತಃ ।**
**ಸದ್ಯಾದಿಪಂಚಹ್ರಸ್ವಾದ್ಯಾ ಬೀಜಮೇಷಾಂ ಪ್ರಕೀರ್ತಿತಂ ॥ ೫೧ ॥**

**ಷಡ್ದೀರ್ಘಯುಕ್ತೇನಾದ್ಯೇನ ಬೀಜೇನಾಂಗಕ್ರಿಯಾ ಮತಾ ।**
**ಪಂಚಬಾಣಾಂಸ್ತತೋ ನ್ಯಸ್ಯೇನ್ಮಂತ್ರೀ ತ್ರೈಲೋಕ್ಯಮೋಹನಾನ್ ॥ ೫೨ ॥**

---

ಈಶಾನಾಯ ನಮಃ, ಸ್ರೀಂ ಮನೋಭವಾಯ ನಮಃ'' ಇತ್ಯಾದಿರೀತಿಯಾಗಿ ಪ್ರಯೋಗವನ್ನು ತಿಳಿಯಬೇಕು.

ಹಾಗೆಯೇ ಆತ್ಮಜ್ಞಾನಿಯು ಮುಖದಲ್ಲಿ ತತ್ಪುರುಷ ಮಕರಧ್ವಜರನ್ನೂ, ಹೃದಯದಲ್ಲಿ ಅಘೋರಕುಮಾರ ಕಂದರ್ಪರನ್ನೂ, ತರುವಾಯ ಗುಹ್ಯದೇಶದಲ್ಲಿ ವಾಮದೇವ, ಮನ್ಮಥರನ್ನೂ, ಪಾದಗಳಲ್ಲಿ ಸದ್ಯೋಜಾತ, ಕಾಮದೇವರನ್ನೂ ನ್ಯಾಸಮಾಡಬೇಕು. ಅನಂತರ ಊರ್ಧ್ವ ಪೂರ್ವ ದಕ್ಷಿಣ ಉತ್ತರ ಪಶ್ಚಿಮ ದಿಙ್ಮುಖಗಳಲ್ಲಿ ಅವರನ್ನು ಕ್ರಮವಾಗಿ ನ್ಯಾಸಮಾಡಬೇಕು.

೫೧. ಭೃಗು= ಸ, ವ್ಯೋಮ= ಹ, ಅಗ್ನಿ= ರ, ಹ್ಸ್ರ ಎಂಬುದು ವಿಲೋಮಕ್ರಮದಿಂದ 'ಓ, ಎ, ಉ, ಇ, ಅ' ಎಂಬ ಐದು ಹ್ರಸ್ವಾಕ್ಷರಗಳೊಡನೆ ಹಿಂದೆ ಹೇಳಿರುವ ಈಶಾನಾದಿ ಐದು ದೇವತೆಗಳ ಬೀಜಾಕ್ಷರಗಳಾಗುವುದೆಂದು ಉಕ್ತವಾಗಿದೆ. (ಹ್ಸ್ರೊಂ, ಹ್ಸ್ರೆಂ ಇತ್ಯಾದಿ)

೫೨. "ಆ, ಈ" ಮುಂತಾದ ಆರು ದೀರ್ಘ ಸ್ವರಾಕ್ಷರಗಳಿಂದ ಸಹಿತವಾದ ಮೊದಲನೆಯ ಬೀಜಾಕ್ಷರದಿಂದ ಷಡಂಗಗಳನ್ನು ವಿನ್ಯಾಸಮಾಡಬೇಕು.

ದ್ರಾಮಾದ್ಯಾಂ ದ್ರಾವಿಣೀಂ ಮೂರ್ಧ್ನಿ ದ್ರೀಮಾದ್ಯಾಂ ಕ್ಷೋಭಣೀ ಪದೇ ।
ಕ್ಲೀಂ ವಶೀಕರಣೀಂ ವಕ್ತ್ರೇ ಗುಹ್ಯೇ ಬ್ಲೂಂ ಬೀಜಪೂರ್ವಿಕಾಂ ॥ ೫೩ ॥

ಆಕರ್ಷಣೀಂ ಹೃದಿ ಪುನಃ ಸರ್ಗಾಂತಭೃಗುಸಂಸ್ಥಿತಾಂ ।
ಸಂಮೋಹನೀಂ ಕ್ರಮಾದೇವಂ ಬಾಣನ್ಯಾಸೋಯಮೀರಿತಃ ॥ ೫೪ ॥

ಭಾಲಭ್ರೂಮಧ್ಯವದನೇ ಘಂಟಿಕಾಕಂಠಹೃತ್ಸು ಚ ।
ನಾಭ್ಯಧಿಷ್ಠಾನಯೋಃ ಪಂಚ ತಾರಾದ್ಯಾಃ ಸುಭಗಾದಿಕಾಃ ॥ ೫೫ ॥

ನ್ಯಸ್ತವ್ಯಾ ವಿಧಿನಾ ದೇವ್ಯಾ ಮಂತ್ರಿಣಾ ಸುಭಗಾ ಭಗಾ ।
ಭಗಸರ್ಪಿಣ್ಯಥ ಪರಾ ಭಗಮಾಲಿನ್ಯನಂತರಂ ॥ ೫೬ ॥

ಅನಂಗಾನಂಗಕುಸುಮಾ ಭೂಯಶ್ಚಾನಂಗಮೇಖಲಾ ।
ಅನಂಗಮದನಾ ಸರ್ವಾ ಮದವಿಭ್ರಮಮಂಥರಾ ॥ ೫೭ ॥

---

೫೩-೫೪. ಶಿರಸ್ಸಿನಲ್ಲಿ 'ದ್ರಾಂ' ಎಂಬ ಬೀಜಾಕ್ಷರಾದಿಯಾಗಿ ದ್ರಾವಿಣೀ ಶಕ್ತಿಯನ್ನೂ, ಪಾದದಲ್ಲಿ 'ದ್ರೀಂ' ಎಂಬ ಬೀಜಾದಿಯಾಗಿ ಕ್ಷೋಭಿಣಿಯನ್ನೂ, ಮುಖದಲ್ಲಿ 'ಕ್ಲೀಂ' ಎಂಬ ಬೀಜಾದಿಯಾಗಿ ವಶೀಕರಣಿಯನ್ನೂ, ಗುಹ್ಯದಲ್ಲಿ 'ಬ್ಲೂಂ' ಎಂಬ ಬೀಜಪೂರ್ವಕವಾಗಿ ಆಕರ್ಷಣಿಯನ್ನೂ, ಹೃದಯದಲ್ಲಿ 'ಸಃ' ಎಂಬ ಅಕ್ಷರಾದಿಯಾಗಿ ಸಂಮೋಹಿನಿಯನ್ನೂ ಕ್ರಮವಾಗಿ ನ್ಯಾಸಮಾಡಬೇಕು. ಈ ರೀತಿಯಾಗಿ ಮಾಡುವ ನ್ಯಾಸವು ಬಾಣನ್ಯಾಸವೆಂದು ಉಕ್ತವಾಗಿದೆ.

೫೫-೫೭. ಹಣೆ, ಹುಬ್ಬುಗಳ ಮಧ್ಯ, ಮುಖ, ಮುಖಮಧ್ಯಸ್ಥಾನ, ಕುತ್ತಿಗೆ, ಹೃದಯ, ನಾಭಿ, ಅಧಿಷ್ಠಾನ ಈ ಸ್ಥಾನಗಳಲ್ಲಿ ಪಂಚತಾರಾದಿಗಳಾದ ಸುಭಗಾ ಮುಂತಾದವರನ್ನು ಎಂದರೆ :— ಸುಭಗಾ, ಭಗಾ, ಭಗಸರ್ಪಿಣೀ, ಭಗಮಾಲಿನೀ, ಅನಂಗಾ, ಅನಂಗಕುಸುಮಾ, ಅನಂಗಮೇಖಲಾ ಮತ್ತು ಅನಂಗಮದನಾ ಎಂಬೀ ಎಂಟು ದೇವಿಯರನ್ನು ನ್ಯಾಸಮಾಡಬೇಕು. ಇವರೆಲ್ಲರೂ ಮದವಿಭ್ರಮಗಳಿಂದ ಮಂದಗಾಮಿನಿಯರು, ಪ್ರಧಾನದೇವತೆ

ಪ್ರಧಾನದೇವತಾ ವರ್ಣಭೂಷಣಾದ್ಯೈರಲಂಕೃತಾಃ ।
ಅಕ್ಷಸ್ರಕ್ ಪುಸ್ತಕಾಭೀತಿವರದಾಢ್ಯಕರಾಂಬುಜಾಃ ॥ ೫೮ ॥

ವಾಕ್ಕಾಮಬ್ಲೂಂ ಸ್ತ್ರೀಂ ಸರಾಂತೇ ತಾರಾಃ ಪಂಚ ಪ್ರಕೀರ್ತಿತಾಃ ।
ತತಃ ಕುರ್ಯಾದ್ಭೂಷಣಾಖ್ಯಂ ನ್ಯಾಸಮುಕ್ತದಿಶಾ ಮುನೇ ॥ ೫೯ ॥

ಏವಂ ನ್ಯಸ್ತಶರೀರೋಽಸೌ ಧ್ಯಾಯೇತ್ತ್ರಿಪುರಭೈರವೀಂ ।
ಸಹಸ್ರಭಾನುಸಂಕಾಶಾಮರುಣಕ್ಷೌಮವಾಸಸೀಂ ॥ ೬೦ ॥

ಶಿರೋಮಾಲಾಮಸೃಗ್‌ಲಿಪ್ತಸ್ತನೀಂ ಜಪವಟೀಂ ಕರೈಃ ।
ವಿದ್ಯಾಮಭೀತಿಂ ಚ ವರಂ ದಧತೀಂ ತ್ರೀಕ್ಷಣಾನನಾಂ ॥ ೬೧ ॥

---

ಗಳು, ವರ್ಣಭೂಷಣಾದಿಗಳಿಂದಲಂಕೃತರು ಮತ್ತು ಅಕ್ಷಮಾಲೆ, ಪುಸ್ತಕ, ಅಭಯವರಮುದ್ರೆಗಳನ್ನು ಕರಕಮಲದಲ್ಲಿ ಧರಿಸಿರುವವರು ಎಂಬುದಾಗಿ ಭಾವಿಸಬೇಕು.

೫೯. "ಐಂ, ಕ್ಲೀಂ, ಬ್ಲೂಂ, ಸ್ತ್ರೀಂ, ಸಃ' ಎಂಬಿವು ಪಂಚ ತಾರಗಳೆಂದು ಉಕ್ತವಾಗಿವೆ. ಅನಂತರ ಹಿಂದೆ ಹೇಳಿರುವ ರೀತಿಯಿಂದ ಭೂಷಣನಾಮಕವಾದ ನ್ಯಾಸವನ್ನು ಆಚರಿಸಬೇಕು.

೬೦-೬೧. ಈ ಪ್ರಕಾರ ತನ್ನ ಶರೀರದಲ್ಲಿ ನ್ಯಾಸಮಾಡಿಕೊಂಡು ಬಳಿಕ ಮಂತ್ರಿಯು ಹೀಗೆ ಧ್ಯಾನಿಸಬೇಕು:—

ಸಾವಿರಾರು ಸೂರ್ಯರಂತೆ ಹೊಳೆಯುತ್ತಿರುವ, ಕೆಂಪು ಪಟ್ಟೆವಸ್ತ್ರವನ್ನು ಧರಿಸಿರುವ, ಶಿರಸ್ಸಿನ ಹಾರವನ್ನು ಹಾಕಿಕೊಂಡಿರುವ, ರಕ್ತದಿಂದ ಲೇಪಿಸಲ್ಪಟ್ಟ ಸ್ತನವುಳ್ಳ, ಜಪಸರ, ವಿದ್ಯೆ, ಅಭಯ, ವರಮುದ್ರೆಗಳನ್ನು ಕೈಗಳಲ್ಲಿ ಹಿಡಿದುಕೊಂಡಿರುವ, ಮೂರು ಕಣ್ಣುಗಳುಳ್ಳ ಮುಖವುಳ್ಳ ತ್ರಿಪುರ ಭೈರವೀದೇವಿಯನ್ನು ಧ್ಯಾನಿಸಬೇಕು.

ದೀಕ್ಷಾಂ ಪ್ರಾಪ್ಯ ಜಪೇನ್ಮಂತ್ರಂ ತತ್ವಲಕ್ಷಂ ಜಿತೇಂದ್ರಿಯಃ ।
ಪುಷ್ಪೈರ್ಭಾನುಸಹಸ್ರಾಣಿ ಜುಹುಯಾದ್ಬ್ರಹ್ಮವೃಕ್ಷಜೈಃ ॥ ೬೨ ॥

ತ್ರಿಮಧ್ವಕ್ತೈಃ ಪ್ರಸೂನೈರ್ವಾ ಕರವೀರಸಮುದ್ಭವೈಃ ।
ಪದ್ಮಂ ವಸುದಲೋಪೇತಂ ನವಯೋನ್ಯಾಢ್ಯಕರ್ಣಿಕಂ ॥ ೬೩ ॥

ಇಚ್ಛಾದಿಶಕ್ತಿಭಿರ್ಯುಕ್ತಂ ಭೈರವ್ಯಾಃ ಪೀಠಮರ್ಚಯೇತ್ ।
ಇಚ್ಛಾ ಜ್ಞಾನಾ ಕ್ರಿಯಾ ಪಶ್ಚಾತ್ಕಾಮಿನೀ ಕಾಮದಾಯಿನೀ ॥ ೬೪ ॥

ರತೀ ರತಿಪ್ರಿಯಾ ನಂದಾ ನವಮೀ ಸ್ಯಾನ್ಮನೋನ್ಮನೀ ।
ವರದಾಭಯಧಾರಿಣ್ಯಃ ಸಂಪ್ರೋಕ್ತಾ ನವ ಶಕ್ತಯಃ ॥ ೬೫ ॥

---

೬೨. ಮಂತ್ರಿಯು ಜಿತೇಂದ್ರಿಯನಾಗಿ ಶಕ್ತಿದೀಕ್ಷೆಯನ್ನು ಪಡೆದು, ಈ ಮಂತ್ರವನ್ನು ಮೂವತ್ತಾರು ಲಕ್ಷ ಜಪಿಸಬೇಕು. ಬ್ರಹ್ಮವೃಕ್ಷದ ಕುಸುಮಗಳಿಂದ ಮೂವತ್ತಾರು ಸಾವಿರ ಹೋಮಮಾಡಬೇಕು.

೬೩-೬೫. ಅಥವಾ ಸಕ್ಕರೆ ಮುಂತಾದ ಮಧುಪದಾರ್ಥತ್ರಯ ಮಿಶ್ರವಾದ ಕರವೀರಪುಷ್ಪಗಳಿಂದಲಾದರೂ ಹೋಮಮಾಡಬೇಕು.

ಭೈರವೀದೇವಿಗೆ ನವಯೋನಿಯುಕ್ತಕೋಶ, ಎಂಟುದಳ, ಇಚ್ಛಾ ಮುಂತಾದ ಒಂಬತ್ತು ಶಕ್ತಿಗಳು ಇವುಗಳುಳ್ಳ ಪದ್ಮಪೀಠವನ್ನು ರಚಿಸಿ ಪೂಜಿಸಬೇಕು.

ಇಚ್ಛಾ, ಜ್ಞಾನ, ಕ್ರಿಯಾ, ಕಾಮಿನೀ, ಕಾಮದಾಯಿನೀ, ರತಿ, ರತಿಪ್ರಿಯಾ, ನಂದಾ ಮತ್ತು ಒಂಬತ್ತನೆಯವಳಾದ ಮನೋನ್ಮನೀ ಎಂಬ ವರದಾಭಯಮುದ್ರಾಹಸ್ತರಾದ ಒಂಬತ್ತು ದೇವಿಯರು ನವಶಕ್ತಿಗಳೆಂದು ಉಕ್ತರಾಗಿರುವರು.

ವಾಗ್ಭವಂ ಲೋಹಿತೋ ರಾಯ್ಯೈ ಶ್ರೀಕಂಠೋ ಲೋಹಿತೋऽನಲಃ ।
ದೀರ್ಘವಾನ್ಯೈ ಪರಾ ಪಶ್ಚಾದಪರಾಯೌ ಹಸೌಯುತಃ ॥ ೬೬ ॥

ಸದಾಶಿವಮಹಾಪ್ರೇತ ಙೇಂತಂ ಪದ್ಮಾಸನಂ ನಮಃ ।
ಅನೇನ ಮನುನಾ ದದ್ಯಾದಾಸನಂ ಶ್ರೀಗುರುಕ್ರಮಂ ॥ ೬೭ ॥

ಪ್ರಾಙ್ಮಧ್ಯಯೋನ್ಯಂತರಾಲೇ ಪೂಜಯೇತ್ಕಲ್ಪಯೇತ್ತತಃ ।
ಪಂಚಭಿಃ ಪ್ರಣವೈರ್ಮೂರ್ತಿಂ ತಸ್ಯಾಮಾವಾಹ್ಯ ದೇವತಾಂ ॥ ೬೮ ॥

ಪೂಜಯೇದಾಗಮೋಕ್ತೇನ ವಿಧಾನೇನ ಸಮಾಹಿತಃ ।
ತಾರಾವಾಕ್ಛಕ್ತಿಕಮಲಾ ಹಸಖಫ್ರೇಂ ಹಸೌಃ ಸ್ಮೃತಾಃ ॥ ೬೯ ॥

## ಪೀಠಮಂತ್ರ

೬೬-೬೯. (ವಾಗ್ಭವಂ= ಐಂ, ಲೋಹಿತ= ಪ, ಶ್ರೀಕಂಠ= ಅ, ಶ್ರೀಕಂಠೋ= ಅ, ಅನಲ= ರ, ಙೇಂತ ಪದ್ಮಾಸನಂ= ಪದ್ಮಾಸನಾಯ, ಉಳಿದುದು ಮಂತ್ರದಲ್ಲಿ ಸೇರಿಸಬೇಕಾದ ಶಬ್ದಸ್ವರೂಪ).

'ಐಂ ಪರಾಯೈ ಅಪರಾಯೈ ಪರಾಪರಾಯೈ ಹ್ ಸೌಃ ಸದಾಶಿವ ಮಹಾಪ್ರೇತ ಪದ್ಮಾಸನಾಯ ನಮಃ' ಈ ಮಂತ್ರದಿಂದ ಆಸನಕೊಡಬೇಕು.

ಮಧ್ಯಯೋನಿಯ ಮಧ್ಯಭಾಗದಲ್ಲಿ ಹಿಂದೆ ಹೇಳಿರುವ ದಿವ್ಯೌಘಾದಿ ಗುರುಪರಂಪರೆಯನ್ನು ಮೊದಲು ಪೂಜಿಸಬೇಕು. ಅನಂತರ ಪಂಚ ಪ್ರಣವ ಗಳಿಂದ ಮೂರ್ತಿಯನ್ನು ಕಲ್ಪಿಸಿ, ಅದರಲ್ಲಿ ದೇವತೆಯನ್ನು ಆವಾಹನೆಮಾಡಿ, ಸಮಾಧಾನಚಿತ್ತನಾಗಿ ಆಗಮೋಕ್ತವಿಧಾನದಿಂದ ಪೂಜಿಸಬೇಕು.

(ವಾಕ್= ಐಂ. ಶಕ್ತಿ= ಹ್ರೀಂ, ಕಮಲಾ= ಶ್ರೀಂ) 'ಐಂ, ಹ್ರೀಂ, ಶ್ರೀಂ, ಹಸ ಖ್ಫ್ರೇಂ, ಹಸೌಃ' ಎಂಬೀ ಐದು ತಾರಾಪ್ರಣವಗಳೆಂದು ವಿಹಿತ ವಾಗಿವೆ.

ವಾಮಕೋಣೇ ಯಜೇದ್ದೇವ್ಯಾ ರತಿಮಿಂದುಸಮಪ್ರಭಾಂ ।
ಸೃಣಿಪಾಶಧರಾಂ ಸೌಮ್ಯಾಂ ಮದವಿಭ್ರಮವಿಹ್ವಲಾಂ　　॥ ೭೦ ॥

ಪ್ರೀತಿಂ ದಕ್ಷಿಣಕೋಣಸ್ಥಾಂ ತಪ್ತಕಾಂಚನಸಂನ್ನಿಭಾಂ ।
ಅಂಕುಶಂ ಪ್ರಣತಂ ದೋರ್ಭ್ಯಾಂ ಧಾರಯಂತೀಂ ಸಮರ್ಚಯೇತ್॥೭೧॥

ಅಗ್ರೇ ಮನೋಭವಾಂ ರಕ್ತಾಂ ರಕ್ತಪುಷ್ಪಾದ್ಯಲಂಕೃತಾಂ ।
ಇಕ್ಷುಕಾರ್ಮುಕಪುಷ್ಪೇಷು ಧಾರಿಣೀಂ ಸಸ್ಮಿತಾನನಾಂ　　॥ ೭೨ ॥

ಅಂಗಾನ್ಯಭ್ಯರ್ಚಯೇತ್ಪಶ್ಚಾದ್ಯಥಾಪೂರ್ವಂ ವಿಧಾನವಿತ್ ।
ದಿಕ್ಷ್ವಗ್ರೇ ಚ ನಿಜೈರ್ಮಂತ್ರೈಃ ಪೂಜಯೇದ್ಬಾಣದೇವತಾಃ　　॥ ೭೩ ॥

---

೭೦. ದೇವಿಯ ಎಡಭಾಗದ ಕೋಣದಲ್ಲಿ ಚಂದ್ರನಿಗೆ ಸಮಾನವಾದ ಕಾಂತಿಯುಳ್ಳ, ಸೃಣಿ ಪಾಶಗಳನ್ನು ಧರಿಸಿರುವ, ಶಾಂತಳಾದ, ಮದವಿಲಾಸದಿಂದ ವಿವಶಳಾದ ರತಿಯನ್ನು ಪೂಜಿಸಬೇಕು.

೭೧. ಬಲಕೋಣದಲ್ಲಿ ಕಾಯಿಸಿದ ಬಂಗಾರದಂತೆ ಹೊಳೆಯುತ್ತಿರುವ, ಒಂದು ಕೈಯಲ್ಲಿ ಅಂಕುಶವನ್ನು ಧರಿಸಿ, ಇನ್ನೊಂದು ಕೈಯಿಂದ ನಮಸ್ಕಾರ ಮಾಡುತ್ತಿರುವ ಪ್ರೀತಿಯನ್ನು ಪೂಜಿಸಬೇಕು.

೭೨. ಅಗ್ರಭಾಗದಲ್ಲಿ ಕೆಂಪಗಿರುವ, ಕೆಂಪು ಹೂವು ಮುಂತಾದುವುಗಳಿಂದಲಂಕೃತಳಾದ, ಕೈಗಳಲ್ಲಿ ಇಕ್ಷುಧನುಸ್ಸು ಮತ್ತು ಪುಷ್ಪಬಾಣಗಳನ್ನು ಧರಿಸಿರುವ, ಮಂದಹಾಸಯುಕ್ತವಾದ ಮುಖವುಳ್ಳ, ಮನೋಭವೆಯನ್ನು ಪೂಜಿಸಬೇಕು

೭೩-೭೪. ತರುವಾಯ ವಿಧಾನಜ್ಞನು ಹಿಂದಿನಂತೆ ಅಂಗಗಳನ್ನು ಪೂಜಿಸಬೇಕು. ದಿಕ್ಕುಗಳು ಮತ್ತು ಅಗ್ರಭಾಗಗಳಲ್ಲಿ ಅವರವರ ಮಂತ್ರಗಳಿಂದ ಪುಷ್ಪಬಾಣಗಳಿಂದ ಯುಕ್ತವಾದ ಕರಕಮಲಗಳಿಂದ ನಮಸ್ಕರಿಸುತ್ತಿರುವ

ಹಸ್ತಾಬ್ಜೈರ್ಧೃತಪುಷ್ಪೇಷು ಪ್ರಣಾಮಾಭೂತಸಪ್ರಭಾಃ ।
ಅಷ್ಟಯೋನಿಷ್ವಷ್ಟಶಕ್ತೀಃ ಪೂಜಯೇತ್ಸುಭಗಾದಿಕಾಃ ॥ ೭೪ ॥

ಮಾತರೋ ಭೈರವಾಂಕಸ್ಥಾ ಮದವಿಭ್ರಮವಿಹ್ವಲಾಃ ।
ಅಷ್ಟಪತ್ರೇಷು ಸಂಪೂಜ್ಯಾ ಯಥಾವತ್ಕುಸುಮಾದಿಭಿಃ ॥ ೭೫ ॥

ಲೋಕಪಾಲಾಂಸ್ತತೋ ದಿಕ್ಷು ತೇಷಾಮಸ್ತ್ರಾಣಿ ತದ್ಬಹಿಃ ।
ಪೂರ್ವಜನ್ಮಕೃತೈಃ ಪುಣ್ಯೈರ್ಜ್ಞಾತ್ವೈನಾಂ ಪರದೇವತಾಂ ॥ ೭೬ ॥

ಯೋ ಭಜೇದುಕ್ತಮಾರ್ಗೇಣ ಸ ಭವೇತ್ಸಂಪದಾಂ ಪದಂ ।
ಏವಂ ಸಿದ್ಧಮನುರ್ಮಂತ್ರೀ ಸಾಧಯೇದಿಷ್ಟಮಾತ್ಮನಃ ॥ ೭೭ ॥

---

ಪೃಥಿವ್ಯಾದಿ ಭೂತವರ್ಣಸಮವರ್ಣವುಳ್ಳ ಬಾಣದೇವತೆಗಳನ್ನು ಪೂಜಿಸಬೇಕು. ಅಷ್ಟಯೋನಿಗಳಲ್ಲಿ ಸುಭಗಾ ಮುಂತಾದ ಅಷ್ಟಶಕ್ತಿಗಳನ್ನು ಪೂಜಿಸಬೇಕು.

೭೫. ಭೈರವನ ತೊಡೆಯಮೇಲೆ ಕುಳಿತಿರುವ ಮದವಿಭ್ರಮಗಳಿಂದ ವಿವಶರಾದ ಮಾತೃಗಳನ್ನು ಅಷ್ಟದಳಗಳಲ್ಲಿ ವಿಹಿತಪುಷ್ಪಗಳಿಂದ ಪೂಜಿಸಬೇಕು.

೭೬-೭೭. ಅನಂತರ ಪೂರ್ವಾದಿ ದಿಕ್ಕುಗಳಲ್ಲಿ ಇಂದ್ರಾದಿಲೋಕಪಾಲಕರನ್ನೂ, ಅದರ ಹೊರಗೆ ಅವರವರ ಅಸ್ತ್ರಗಳನ್ನೂ ಪೂಜಿಸಬೇಕು.

ಪೂರ್ವಜನ್ಮಗಳಲ್ಲಿ ಮಾಡಿದ ಪುಣ್ಯಪ್ರಭಾವದಿಂದ ಈ ಪರದೇವತೆಯ ಮಹಿಮೆಯನ್ನು ತಿಳಿದು ವಿಧ್ಯುಕ್ತಪ್ರಕಾರವಾಗಿ ಭಜಿಸುವವನು ಐಶ್ವರ್ಯಗಳಿಗೆ ನಿಧಿಯಾಗುವನು.

ಈ ರೀತಿ ಆಚರಿಸಿ ಸಿದ್ಧಿಯನ್ನು ಪಡೆದ ಮಂತ್ರಿಯು ತನ್ನ ಇಷ್ಟಸಿದ್ಧಿಗಾಗಿ ಪ್ರಯೋಗಗಳನ್ನು ಆಚರಿಸಬೇಕು

ಜುಹುಯಾದರುಣಾಂಭೋಜೈರದೋಷೈರ್ಮಧುರಾಪ್ಲುತೈಃ ।
ಲಕ್ಷಸಂಖ್ಯಂ ತದರ್ಧಂ ವಾ ಪ್ರತ್ಯಹಂ ಭೋಜಯೇದ್ದ್ವಿಜಾನ್ ॥ ೭೮ ॥

ವನಿತಾ ಯುವತೀ ರಮ್ಯಾಃ ಪ್ರೀಣಯೇದ್ದೇವತಾಧಿಯಾ ।
ಹೋಮಾಂತೇ ಧನಧಾನ್ಯಾದ್ಯೈಸ್ತೋಷಯೇದ್ಗುರುಮಾತ್ಮನಃ ॥ ೭೯ ॥

ಏವಂ ಕೃತೇ ಜಗದ್ವಶ್ಯೋ ರಮಾಯಾ ಭವನಂ ಭವೇತ್ ।
ರಕ್ತೋತ್ಪಲೈಸ್ತ್ರಿಮಧ್ವಕ್ತೈರರುಣೈರ್ವಾ ಹಯಾರಿಜೈಃ ॥ ೮೦ ॥

ಪುಷ್ಪೈಃ ಪಯೋನ್ನೈಃ ಸಘೃತೈರ್ಹೋಮಾದ್ವಿಶ್ವಂ ವಶಂ ನಯೇತ್ ।
ವಾಕ್‌ಸಿದ್ಧಿಂ ಲಭತೇ ಮಂತ್ರೀ ಪಲಾಶಕುಸುಮೈರ್ಹುತೈಃ ॥ ೮೧ ॥

---

೭೮. ನಿರ್ದೋಷವಾದ, ಸಕ್ಕರೆ ಮುಂತಾದ ಮಧುರವಸ್ತು ಮಿಶ್ರಿತ ವಾದ ಕೆಂಪು ಕಮಲ ಪುಷ್ಪಗಳಿಂದ ಒಂದುಲಕ್ಷ ಅಥವಾ ಐವತ್ತುಸಾವಿರ ಹೋಮಮಾಡಬೇಕು. ಆಗ ಪ್ರತಿದಿನವೂ ಬ್ರಾಹ್ಮಣಭೋಜನ ಮಾಡಿಸಬೇಕು.

೭೯. ಸುಂದರಿಯರಾದ, ಯೌವನವುಳ್ಳ ಸ್ತ್ರೀಯರನ್ನುದೇವತಾಭಾವನೆ ಯಿಂದ ಸಂತೋಷಪಡಿಸಬೇಕು. ಹೋಮಮಾಡಿದಮೇಲೆ ತನ್ನ ಗುರುಗಳನ್ನು ಧನಧಾನ್ಯಗಳಿಂದ ಸಂತೋಷಪಡಿಸಬೇಕು.

೮೦-೮೧. ಈ ರೀತಿ ಆಚರಿಸಿದವನು ಪ್ರಪಂಚವನ್ನೇ ವಶಪಡಿಸಿ ಕೊಂಡು ರಮಾಮಂದಿರ ಎಂದರೆ ಐಶ್ವರ್ಯನಿಧಿಯಾಗುವನು.

ಸಕ್ಕರೆ, ತುಪ್ಪ, ಜೇನುತುಪ್ಪಗಳಲ್ಲಿ ನೆನೆಸಿದ ಕೆಂಪು ನೈದಿಲೆಹೂ, ಅಥವಾ ಕೆಂಪುಕಣಿಗಲು ಪುಷ್ಪ, ಘೃತಮಿಶ್ರಕ್ಷೀರಾನ್ನ ಇವುಗಳಿಂದ ಹೋಮಮಾಡಿದರೆ ಜಗತ್ತೇ ವಶವಾಗುವುದು.

ಮುತ್ತುಗದ ಹೂವುಗಳಿಂದ ಹೋಮಮಾಡುವ ಮಂತ್ರಿಯು ವಾಕ್ಸಿದ್ಧಿ ಯನ್ನುಪಡೆಯುತ್ತಾನೆ.

ಕರ್ಪೂರಾಗರುಸಂಯುಕ್ತಂ ಗುಗ್ಗುಲಂ ಜುಹುಯಾತ್ಸುಧೀಃ |
ಜ್ಞಾನಂ ದಿವ್ಯಮವಾಪ್ನೋತಿ ತೇನೈವ ಸ ಭವೇತ್ಕವಿಃ || ೮೨ ||

ಕ್ಷೀರಾಕ್ತೈರಮೃತಾಖಂಡೈರ್ಹೋಮಃ ಸರ್ವಾಪಮೃತ್ಯುಜಿತ್ |
ದೂರ್ವಾಭಿರಾಯುಷೇ ಹೋಮಃ ಕ್ಷೀರಾಕ್ತಾಭಿರ್ದಿನತ್ರಯಂ || ೮೩ ||

ಗಿರಿಕರ್ಣೀಭವೈಃ ಪುಷ್ಪೈರ್ಬ್ರಾಹ್ಮಣಾನ್ವಶಯೇದ್ಧುತೈಃ |
ಕಲ್ಹಾರೈಃ ಪಾರ್ಥಿವಾನ್ಪುಷ್ಪೈಸ್ತದ್ವಧೂಃ ಕರ್ಣಿಕಾರಜೈಃ || ೮೪ ||

ಮಲ್ಲಿಕಾಕುಸುಮೈರ್ಹುತ್ವಾ ರಾಜಪುತ್ರಾನ್ವಶಂ ನಯೇತ್ |
ಕೋರಂಟಕುಸುಮೈರ್ವೇಶ್ಯಾನ್ವೃಷಲಾನ್ಪಾಟಲೋದ್ಭವೈಃ || ೮೫ |

---

೮೨. ವಿವೇಚಕನು ಕರ್ಪೂರ, ಅಗರುಗಳಿಂದ ಸಹಿತವಾದ ಗುಗ್ಗುಲ ವನ್ನು ಹೋಮಮಾಡಬೇಕು. ಅದರಿಂದ ಅವನು ದಿವ್ಯಜ್ಞಾನವನ್ನು ಪಡೆದು ಕವಿಯಾಗುವನು.

೮೩. ಹಾಲಿನಲ್ಲಿ ತೋಯಿಸಿದ ಅಮೃತಬಳ್ಳಿಯ ತುಂಡುಗಳಿಂದ ಮಾಡಿದ ಹೋಮವು ಅಪಮೃತ್ಯುವನ್ನು ಪರಿಹರಿಸುವುದು. ಕ್ಷೀರಾಕ್ತವಾದ ಗರಿಕೇಹುಲ್ಲುಗಳಿಂದ ಮೂರದಿವಸ ಹೋಮಮಾಡಿದರೆ ಆಯುಸ್ಸು ಅಭಿವೃದ್ಧಿ ಯಾಗುವುದು.

೮೪. ವಿಷ್ಣುಕ್ರಾಂತಿ ಪುಷ್ಪಗಳಿಂದ ಹೋಮಮಾಡಿದರೆ ಬ್ರಾಹ್ಮಣನ್ನು ವಶಪಡಿಸಿಕೊಳ್ಳಬಹುದು. ಕಲ್ಹಾರಪುಷ್ಪಗಳಿಂದ ಹೋಮಮಾಡಿದರೆ ರಾಜ ರನ್ನೂ. ಕರ್ಣಿಕೆಯ ರಜಸ್ಸುಗಳಿಂದ ಹೋಮಮಾಡಿದರೆ ರಾಜಸ್ತ್ರೀಯನ್ನೂ ವಶಪಡಿಸಿಕೊಳ್ಳಬಹುದು.

೮೫- ಮಲ್ಲಿಗೇ ಹೂವುಗಳಿಂದ ಹೋಮಮಾಡಿದರೆ ರಾಜಪುತ್ರರನ್ನು ವಶಪಡಿಸಿಕೊಳ್ಳಬಹುದು. ಗೋರಂಟಿಹೂವುಗಳಿಂದ ಹೋಮಮಾಡಿದರೆ ಸೂಳೆ ಯರನ್ನೂ, ಪಾದ್ರೀಹೂವುಗಳ ಹೋಮದಿಂದ ವೃಷಲರನ್ನೂ ವಶಪಡಿಕೊಳ್ಳ ಬಹುದು.

ಅನುಲೋಮವಿಲೋಮಾಂತಸ್ಥಿತಸಾಧ್ಯಾಹ್ವಯಾನ್ವಿತಂ ।
ಮಂತ್ರಮುಚ್ಚಾರ್ಯ ಜುಹುಯಾನ್ಮಂತ್ರೀ ಮಧುರಲೋಲಿತೈಃ ॥ ೮೬ ॥

ಸರ್ಷಪೈಃ ಪಟುಸಂಮಿಶ್ರೈರ್ವಶಯೇತ್ಪಾರ್ಥಿವಾನ್ ಕ್ಷಣಾತ್ ।
ಅನೇನೈವ ವಿಧಾನೇನ ತತ್ಪತ್ನೀಸ್ತತ್ಸುತಾನಪಿ ॥ ೮೭ ॥

ಜಾತಿಬಿಲ್ವಭವೈಃ ಪುಷ್ಪೈರ್ಮಧುರತ್ರಯಸಂಯುತೈಃ ।
ನರನಾರೀನರಪತೀನ್ ಹೋಮೇನ ವಶಯೇತ್ಕ್ರಮಾತ್ ॥ ೮೮ ॥

ಮಾಲತೀಬಕುಲೋದ್ಭೂತೈಃ ಪುಷ್ಪೈಶ್ಚಂದನಲೋಲಿತೈಃ ।
ಜುಹುಯಾತ್ ಕವಿತಾಂ ಮಂತ್ರೀ ಲಭತೇ ವತ್ಸರಾಂತರೇ ॥ ೮೯ ॥

---

೮೬-೮೭. ಮಧ್ಯದಲ್ಲಿ ಸಾಧ್ಯನಾಮಧೇಯವನ್ನೊಳಗೊಂಡ, ಅನುಲೋಮ ವಿಲೋಮರೀತಿಯಿಂದ ಕೂಡಿದ ಮಂತ್ರವನ್ನು ಹೇಳಿ ಮಂತ್ರಿಯು ಆಜ್ಯಾದಿ ಮಧುರಪದಾರ್ಥಗಳಲ್ಲಿ ನೆನಸಿದ, ಲವಣಮಿಶ್ರವಾದ ಸಾಸಿವೆಗಳಿಂದ ಹೋಮಮಾಡಿದರೆ ತಕ್ಷಣದಲ್ಲಿಯೇ ರಾಜರನ್ನು ವಶಪಡಿಸಿಕೊಳ್ಳಬಹುದು. ಅವರ ಭಾರ್ಯಾಪುತ್ರರನ್ನೂ ಸಹ ಇದೇ ವಿಧಾನದಿಂದ ಸ್ವಾಧಿನಮಾಡಿಕೊಳ್ಳಬಹುದು.

೮೮. ಸಕ್ಕರೆ, ಮಧು, ಘೃತಸಹಿತವಾದ ಜಾಜೀಹೂವುಗಳಿಂದ ಹೋಮಮಾಡಿದರೆ ನರನಾರಿಯರನ್ನೂ, ಅಂತಹ ಬಿಲ್ವಪುಷ್ಪಗಳಿಂದ ಹೋಮಮಾಡಿದರೆ ನರಪಾಲರನ್ನೂ ವಶಪಡಿಸಿಕೊಳ್ಳಬಹುದು.

೮೯. ಮಂತ್ರಿಯು ಗಂಧಮಿಶ್ರಿತವಾದ ಮಾಲತೀಪುಷ್ಪ ಬಕುಳಪುಷ್ಪಗಳಿಂದ ಹೋಮಮಾಡಿದರೆ ಒಂದು ವರ್ಷದೊಳಗಾಗಿ ಕವಿತ್ವಶಕ್ತಿಯನ್ನು ಪಡೆಯುವನು.

ಮಧುರತ್ರಯಸಂಯುಕ್ತೈಃ ಫಲೈರ್ಬಿಲ್ವಸಮುದ್ಭವೈಃ ।
ಜುಹುಯಾದ್ವಶಯೇಲ್ಲೋಕಂ ಶ್ರಿಯಂ ಪ್ರಾಪ್ನೋತಿ ವಾಂಛಿತಾಂ॥ ೯೦ ॥

ಸಾಜ್ಯಮನ್ನಂ ಪ್ರಜುಹುಯಾದ್ಭವೇದನ್ನಸಮೃದ್ಧಿಮಾನ್ ।
ಕಸ್ತೂರೀಕುಂಕುಮೋಪೇತಂ ಕರ್ಪೂರಂ ಜುಹುಯಾದ್ವಶೀ ॥ ೯೧ ॥

ಕಂದರ್ಪಾದಧಿಕಂ ಸದ್ಯಃ ಸೌಂದರ್ಯಮಧಿಗಚ್ಛತಿ ।
ಲಾಜಾನ್ಪ್ರಜುಹುಯಾನ್ಮಂತ್ರೀ ದಧಿಕ್ಷೀರಮಧುಪ್ಲುತಾನ್ ॥ ೯೨ ॥

ವಿಜಿತ್ಯ ರೋಗಾನಖಿಲಾನ್ಸ ಜೀವೇಚ್ಛರದಾಂ ಶತಂ ।
ಪಾದದ್ವಯಂ ಮಲಯಜಂ ಪಾದಂ ಕುಂಕುಮಕೇಸರಂ ॥ ೯೩ ॥

ಪಾದಂ ಗೋರೋಚನಾಂ ತಾನಿ ತ್ರೀಣಿ ಪಿಷ್ಟ್ವಾ ಹಿಮಾಂಭಸಾ ।
ವಿದಧ್ಯಾತ್ತಿಲಕಂ ಭಾಲೇ ಯಾನ್ಪಶ್ಯೇದ್ವೈರ್ವಿಲೋಕ್ಯತೇ ॥ ೯೪ ॥

---

೯೦. ಮಧುರತ್ರಯ ಸಹಿತವಾದ ಬಿಲ್ವಫಲಗಳಿಂದ ಹೋಮಮಾಡಿದರೆ ಲೋಕವೆಲ್ಲವೂ ವಶವಾಗುವುದು ಮತ್ತು ಇಷ್ಟಸಂಪತ್ತೂ ಲಭಿಸುವುದು.

೯೧-೯೯. ಘೃತಸಹಿತಾನ್ನ ಹೋಮಮಾಡುವವನು ಅನ್ನಸಮೃದ್ಧಿಯನ್ನು ಹೊಂದುವನು.

ಕಸ್ತೂರೀಕುಂಕುಮಸಹಿತ ಕರ್ಪೂರಹೋಮಮಾಡಿದ ಸಿದ್ಧಮಂತ್ರಿಯು ತಕ್ಷಣದಲ್ಲಿ ಮನ್ಮಥನಿಗಿಂತಲೂ ಹೆಚ್ಚು ಸೌಂದರ್ಯವನ್ನು ಹೊಂದುವನು.

ಮೊಸರು, ಹಾಲು, ಜೇನುತುಪ್ಪಗಳಲ್ಲಿ ನೆನೆಸಿದ ಅರಳನ್ನು ಹೋಮಮಾಡುವ ಮಂತ್ರಿಯು ಸಕಲ ರೋಗಗಳನ್ನೂ ಜಯಿಸಿಕೊಂಡು ನೂರುವರ್ಷ ಬದುಕುವನು.

ಎರಡುಭಾಗ ಮಲಯಗಂಧ, ಒಂದುಭಾಗ ಕುಂಕುಮಕೇಸರ, ಒಂದು ಭಾಗ ಗೋರೋಚನಾ ಈ ಮೂರನ್ನೂ ಚೂರ್ಣಮಾಡಿ ಹಿಮದ ನೀರಿನಿಂದ ಕಲೆಸಿ ಹಣೆಯಲ್ಲಿ ತಿಲಕವನ್ನು ಹಚ್ಚಿಕೊಂಡ ಮಂತ್ರಿಯು ಯಾರನ್ನು ನೋಡು

ಯೋನ್ಸ್ಪೃಶೇತ್ಸ್ಪೃಶ್ಯತೇ ಯೈರ್ವಾ ವಶ್ಯಾಃ ಸ್ಯುಸ್ತಸ್ಯ ತೇಽಚಿರಾತ್ ।
ಕರ್ಪೂರಕಪಿಚೋರಾಣಿ ಸಮಭಾಗಾನಿ ಕಲ್ಪಯೇತ್ ॥ ೯೫ ॥

ಚತುರ್ಭಾಗಾ ಜಟಾಮಾಂಸೀ ತಾವತೀ ರೋಚನಾ ಮತಾ ।
ಕುಂಕುಮಂ ಸಪ್ತಭಾಗಂ ಸ್ಯಾದ್ದಿಗ್ಭಾಗಂ ಚಂದನಂ ಮತಂ ॥ ೯೬ ॥

ಅಗರುರ್ನವಭಾಗಂ ಸ್ಯಾದಿತಿ ಭಾಗಕ್ರಮೇಣ ಚ ।
ಹಿಮಾದ್ಭಿಃ ಕನ್ಯಯಾ ಪಿಷ್ಟಮೇತತ್ಸರ್ವಂ ಸುಸಾಧಿತಂ ॥ ೯೭ ॥

ಆದಾಯ ತಿಲಕಂ ಭಾಲೇ ಕುರ್ಯಾದ್ಭೂಮಿಪತೀನ್ನರಾನ್ ।
ವನಿತಾ ಮದಗರ್ವಾಢ್ಯಾ ಮದೋನ್ಮತ್ತಾನ್ಮತಂಗಜಾನ್ ॥ ೯೮ ॥

ಸಿಂಹವ್ಯಾಘ್ರಾನ್ಮಹಾಸರ್ಪಾನ್ಭೂತವೇತಾಲರಾಕ್ಷಸಾನ್ ।
ದರ್ಶನಾದೇವ ವಶಯೇತ್ತಿಲಕಂ ಧಾರಯನ್ನರಃ ॥ ೯೯ ॥

---

ವನೋ, ಇವನನ್ನು ಯಾರು ನೋಡುತ್ತಾರೆಯೋ, ಅವರಿಬ್ಬರೂ ಮತ್ತು ಅವನು ಯಾರನ್ನು ಮುಟ್ಟುತ್ತಾನೆಯೋ, ಯಾರಿಂದ ಮುಟ್ಟಿಸಿಕೊಳ್ಳುತ್ತಾನೆಯೋ ಅವರಿಬ್ಬರೂ ಸಹ ಅವನಿಗೆ ಬೇಗ ವಶರಾಗುವರು.

ಸಮಭಾಗವಾಗಿ ಕರ್ಪೂರ, ರಕ್ತಚಂದನ, ಕಚೋರಗಳು, ನಾಲ್ಕುಭಾಗ ಜಟಾಮಾಂಸಿಯು, ಅಷ್ಟೇಗೋರೋಚನ, ಏಳುಭಾಗ ಕುಂಕುಮ, ಹತ್ತುಭಾಗ ಗಂಧ, ಒಂಬತ್ತುಭಾಗ ಅಗರು ಈ ರೀತಿ ಸುಗಂಧದ್ರವ್ಯಗಳನ್ನು ಸೇರಿಸಿ ಕನ್ಯೆಯಿಂದ ಚೂರ್ಣಮಾಡಿಸಿ ಅದನ್ನು ಹಿಮಜಲದಲ್ಲಿ ಕಲಸಿ, ಅದರಿಂದ ಹಣೆಯ ಮೇಲೆ ತಿಲಕವನ್ನು ಹಚ್ಚಿಕೊಳ್ಳಬೇಕು.

ಈ ರೀತಿ ತಿಲಕವನ್ನು ಧರಿಸಿಕೊಂಡ ಮನುಷ್ಯನು ನೋಡುವಮಾತ್ರದಿಂದ ಮದಗರ್ವಯುಕ್ತರಾದ ಸ್ತ್ರೀಯರು, ಮದೋನ್ಮತ್ತವಾದ ಆನೆಗಳು, ಸಿಂಹ, ವ್ಯಾಘ್ರ, ಮಹಾಸರ್ಪ, ಭೂತ, ಬೇತಾಳ ಮತ್ತು ರಾಕ್ಷಸರು ಇವರನ್ನು ಸ್ವಾಧೀನಪಡಿಸಿಕೊಳ್ಳುವನು.

**ಇತ್ಯೇಷಾ ಭೈರವೀ ಪ್ರೋಕ್ತಾ ಹ್ಯವತಾರಾಂತರಂ ಶೃಣು ।**
**ವಾಙ್ಮಾಯಾ ಕಮಲಾ ತಾರೋ ನಮೋಂತೇ ಭಗವತ್ಯಥ ॥ ೧೦೦ ॥**

**ಶ್ರೀಮಾತಂಗೀಶ್ವರಿ ವದೇತ್ಸರ್ವಜನಮನೋಹರಿ ।**
**ಸರ್ವಾದಿಸುಖರಾಜ್ಯಂತೇ ಸರ್ವಾದಿಮುಖರಂಜಿನಿ ॥ ೧೦೧ ॥**

**ಸರ್ವರಾಜವಶಂ ಪಶ್ಚಾತ್ಕರಿಸರ್ವಪದಂ ವದೇತ್ ।**
**ಸ್ತ್ರೀಪುರುಷವಶಂ ಸೃಷ್ಟಿವಿದ್ಯಾಕ್ರೋಧಿನಿಕಾನ್ವಿತಾ ॥ ೧೦೨ ॥**

**ಸರ್ವದುಷ್ಟಮೃಗವಶಂ ಕರಿಸರ್ವಪದಂ ತತಃ ।**
**ಭೃಗುಸ್ತ್ವವಶಂಕರಿ ಸ್ಯಾತ್ಸರ್ವಲೋಕಂ ತತಃ ಪರಂ ॥ ೧೦೩ ॥**

**ಅಮುಕಂ ಮೇ ವಶಂ ಪಶ್ಚಾದಾನಯಾನಲಸುಂದರೀ ।**
**ಅಷ್ಟಾಶೀತ್ಯಕ್ಷರೋ ಮಂತ್ರೋ ಮುನ್ಯಾದ್ಯಾ ಭೈರವೀಗತಾಃ ॥ ೧೦೪ ॥**

---

## ರಾಜಮಾತಂಗಿನೀಮಂತ್ರ

೧೦೦-೧೦೪. ಈರೀತಿ ಭೈರವಿಮಂತ್ರಾದಿಗಳು ಉಕ್ತವಾದುವು. ಇನ್ನೊಂದವತಾರದ ಮಂತ್ರಾದಿಗಳನ್ನು ಹೇಳುವೆನು ಕೇಳು. (ವಾಕ್ = ಐಂ, ಮಾಯಾ= ಹ್ರೀಂ, ಕಮಲಾ = ಶ್ರೀಂ, ತಾರಾ = ಓಂ, ಸೃಷ್ಟಿ= ಕ, ವಿದ್ಯಾ= ಇ, ಕ್ರೋಧ= ರ= ಕರಿ, ಭೃಗು= ಸ, ಅನಲಸುಂದರಿ= ಸ್ವಾಹಾ. ಉಳಿದುದು ಮಂತ್ರದಲ್ಲಿ ಸೇರುವ ಶಬ್ದಸ್ವರೂಪವು.)

"ಐಂ ಹ್ರೀಂ ಶ್ರೀಂ ಓಂ ನಮೋ ಭಗವತಿ ಶ್ರೀಮಾತಂಗೀಶ್ವರಿ ಸರ್ವಜನ ಮನೋಹರಿ ಸರ್ವಸುಖರಾಜಿ ಸರ್ವಮುಖರಂಜಿನಿ ಸರ್ವರಾಜವಶಂಕರಿ ಸರ್ವಸ್ತ್ರೀ ಪುರುಷ ವಶಂಕರಿ ಸರ್ವದುಷ್ಟಮೃಗವಶಂಕರಿ ಸರ್ವ ಸತ್ವವಶಂಕರಿ ಸರ್ವಲೋಕ ಮಮುಕಂ ಮೇ ವಶಮಾನಯ ಸ್ವಾಹಾ" ಎಂಬುದು ಎಂಬತ್ತೆಂಟಕ್ಷರಗಳ ರಾಜಮಾತಂಗೀಶ್ವರಿ ಮಂತ್ರವು. ಇದಕ್ಕೆ ಋಷಿಮುಂತಾದುವನ್ನು ಭೈರವೀ ಮಂತ್ರಕ್ಕೆ ಹೇಳಿರುವ ರೀತಿಯಾಗಿ ತಿಳಿಯಬೇಕು.

ನ್ಯಾಸಾನ್ಮಂತ್ರೀ ತನೌ ಕುರ್ಯಾದ್ವಕ್ಷ್ಯಮಾಣಾನ್ಯಥಾಕ್ರಮಂ ।
ಶಿರೋಲಲಾಟಭ್ರೂಮಧ್ಯೇ ತಾಲುಕಂಠಗಲೋರಸಿ ॥ ೧೦೫ ॥

ಅನಾಹತೇ ಭುಜದ್ವಂದ್ವೇ ಜಠರೇ ನಾಭಿಮಂಡಲೇ ।
ಸ್ವಾಧಿಷ್ಠಾನೇ ಗುಪ್ತದೇಶೇ ಪಾದಯೋರ್ದಕ್ಷವಾಮಯೋಃ ॥ ೧೦೬ ॥

ಮೂಲಾಧಾರೇ ಗುದೇ ನ್ಯಸ್ಯೇತ್ಪದಾನ್ಯಷ್ಟಾದಶ ಕ್ರಮಾತ್ ।
ಗುಣೈಕದ್ವಿಚತುಃಷಡ್ಭಿರ್ವಸುಷಟ್ಪರ್ವತಾಷ್ಟಭಿಃ ॥ ೧೦೭ ॥

ದಶಸಂಖ್ಯೈಷ್ಟವೇದಾಗ್ನಿಚಂದ್ರಯುಗ್ಮಗುಣಾಕ್ಷಿಭಿಃ ।
ಪದಕ್ಲೃಪ್ತಿರಿಯಂ ಪ್ರೋಕ್ತಾ ಮಂತ್ರವರ್ಣೈರ್ಯಥಾಕ್ರಮಂ ॥ ೧೦೮ ॥

ರತ್ಯಾದ್ಯಾ ಮೂಲಹೃದಯಭ್ರೂಮಧ್ಯೇಷು ವಿಚಕ್ಷಣಃ ।
ವಾಕ್‌ಶಕ್ತಿಲಕ್ಷ್ಮೀಬೀಜಾದ್ಯಾ ಮಾತೆಂಗ್ಯಂತಾಃ ಪ್ರವಿನ್ಯಸೇತ್ ॥ ೧೦೯ ॥

---

೧೦೫-೧೦೮. ಮಂತ್ರಿಯು ಮುಂದೆ ಹೇಳುವ ನ್ಯಾಸಗಳನ್ನು ಕ್ರಮವಾಗಿ ಶರೀರದಲ್ಲಿ ಮಾಡಬೇಕು ;—

ಮಂತ್ರದಲ್ಲಿನ ಹದಿನೆಂಟು ಪದಗಳನ್ನು ಕ್ರಮವಾಗಿ ಶಿರಸ್ಸು, ಹಣೆ, ಹುಬ್ಬುಗಳ ಮಧ್ಯೆ, ದವಡೆ, ಕಂಠ, ಗಲ (ಕಂಠದ ಅಧೋಭಾಗ), ಎದೆ, ಹೃದಯ, ಎರಡು ಭುಜಗಳು, ಉದರ, ನಾಭಿಮಂಡಲ, ಸ್ವಾಧಿಷ್ಠಾನ, ಶಿಶ್ನ, ಬಲ ಎಡ ಪಾದಗಳು, ಮೂಲಾಧಾರ ಮತ್ತು ಗುದ ಈ ಸ್ಥಾನಗಳಲ್ಲಿ ನ್ಯಾಸ ಮಾಡಬೇಕು.

ಈ ಮಂತ್ರದಲ್ಲಿ ಕ್ರಮವಾಗಿ 3, 1, 2, 4, 6, 8, 6, 7, 8, 10, 10, 8, 4, 3, 1, 2. 3, 2 ಅಕ್ಷರಗಳನ್ನೊಳಗೊಂಡ ಹದಿನೆಂಟು ಪದಗಳು ಕ್ಲೃಪ್ತವಾಗಿವೆ ಎಂದು ಉಕ್ತವಾಗಿದೆ.

೧೦೯. ವಿವೇಚನಶೀಲನು ರತಿ, ಪ್ರೀತಿ, ಮನೋಭವೆಗಳನ್ನು ಕ್ರಮವಾಗಿ ಮೂಲಾಧಾರ, ಹೃದಯ, ಭ್ರೂಮಧ್ಯಗಳಲ್ಲಿ “ ಐಂ ಹ್ರೀಂ ಶ್ರೀಂ ರತ್ಯೈ

ಶಿರೋವದನಹೃದ್ಗುಹ್ಯಪಾದೇಷು ವಿಧಿನಾ ನ್ಯಸೇತ್ ।
ಹೃಲ್ಲೇಖಾಂ ಗಗನಾಂ ರಕ್ತಾಂ ಭೂಯೋ ಮಂತ್ರೀ ಕರಾಲಿಕಾಂ ॥ ೧೧೦ ॥

ಮಹೋಚ್ಛುಷ್ಮಾಂ ಸ್ವನಾಮಾದಿವರ್ಣಬೀಜಪುರಃಸರಾಃ ।
ಮಾತಂಗ್ಯಂತಾಃ ಷಡಂಗಾನಿ ತತಃ ಕುರ್ವೀತ ಸಾಧಕಃ ॥ ೧೧೧ ॥

ವರ್ಣೈಶ್ಚತುರ್ವಿಂಶತಿಭಿರ್ಹೃತ್ತ್ರಯೋದಶಭಿಃ ಶಿರಃ ।
ಶಿಖಾಷ್ಟಾದಶಭಿಃ ಪ್ರೋಕ್ತಾ ವರ್ಮ ತಾವದ್ಭಿರಕ್ಷರೈಃ ॥ ೧೧೨ ॥

ಸ್ಯಾತ್ತ್ರಯೋದಶಭಿರ್ನೇತ್ರಂ ದ್ವಾಭ್ಯಾಮಸ್ತ್ರಂ ಪ್ರಕೀರ್ತಿತಂ ।
ಬಾಣನ್ಯಾಸಂ ತತಃ ಕುರ್ಯಾದ್ಭೈರವೀಪ್ರೋಕ್ತವರ್ತ್ಮನಾ ॥ ೧೧೩ ॥

---

ಮಾತಂಗ್ಯೈ ನಮಃ, "ಐಂ ಹ್ರೀಂ ಶ್ರೀಂ ಪ್ರೀತ್ಯೈ ಮಾತಂಗ್ಯೈ ನಮಃ" "ಐಂ ಹ್ರೀಂ ಶ್ರೀಂ ಮನೋಭವಾಯೈ ನಮಃ" ಎಂಬುದಾಗಿ ಹೇಳುತ್ತಾ ನ್ಯಾಸ ಮಾಡಬೇಕು.

೧೧೦-೧೧೩. ಪುನಃ ಮಂತ್ರಿಯು ಹೃಲ್ಲೇಖಾ, ಗಗನಾ, ರಕ್ತಾ, ಕರಾಲಿಕಾ, ಮಹೋಚ್ಛುಷ್ಮಾ ಇವರನ್ನು ತಮ್ಮ ಹೆಸರಿನ ಆದಿವರ್ಣರೂಪವಾದ ಬೀಜಾಕ್ಷರಪೂರ್ವಕವಾಗಿ ಶಿರಸ್ಸು, ಮುಖ, ಹೃದಯ, ಶಿಶ್ನ, ಪಾದಗಳಲ್ಲಿ ವಿಧಾನೋಕ್ತಪ್ರಕಾರ ನ್ಯಾಸಮಾಡಬೇಕು.

ತರುವಾಯ ಸಾಧಕನು ಮಾತಂಗ್ಯಂತಗಳಾದ, ಈ ಮಂತ್ರದ ಇಪ್ಪತ್ತು ನಾಲ್ಕು ವರ್ಣಗಳಿಂದ ಹೃದಯ, ಹದಿಮೂರು ವರ್ಣಗಳಿಂದ ಶಿರಸ್ಸು, ಹದಿನೆಂಟು ವರ್ಣಗಳಿಂದ ಶಿಖೆ, ಹದಿನೆಂಟು ವರ್ಣಗಳಿಂದ ಕವಚ, ಹದಿಮೂರು ವರ್ಣಗಳಿಂದ ನೇತ್ರ, ಎರಡು ಅಕ್ಷರಗಳಿಂದ ಅಸ್ತ್ರ ಈರೀತಿಯಾಗಿ ಷಡಂಗಗಳನ್ನು ನ್ಯಾಸಮಾಡಬೇಕು. ಅನಂತರ ಭೈರವೀಮಂತ್ರಕ್ಕೆ ವಿಹಿತವಾಗಿರುವ ರೀತಿಯಾಗಿ ಬಾಣನ್ಯಾಸವನ್ನು ಆಚರಿಸಬೇಕು.

ಮಾತಂಗ್ಯಂತಾಸ್ತತೋನ್ಯಸ್ಯೇನ್ಮನ್ಮಥಾನ್ವದನಾಂಸಯೋಃ ।
ಪಾರ್ಶ್ವಕಟ್ಯೋರ್ನಾಭಿದೇಶೇ ಕಟಿಪಾರ್ಶ್ವಾಂಸಕೇ ಪುನಃ ॥ ೧೧೪ ॥

ಬೀಜತ್ರಯಾದಿಕಾನ್ಮಂತ್ರೀ ಮನ್ಮಥಂ ಮಕರಧ್ವಜಂ ।
ಮದನಂ ಪುಷ್ಪಧನ್ವಾನಂ ಪಂಚಮಂ ಕುಸುಮಾಯುಧಂ ॥ ೧೧೫ ॥

ಷಷ್ಠಂ ಕಂದರ್ಪನಾಮಾನಂ ಮನೋಭವರತಿಪ್ರಿಯೌ ।
ಮಾತಂಗ್ಯಂತಾಸ್ತತೋನ್ಯಸ್ಯೇತ್ ಸ್ಥಾನೇಷ್ವೇತೇಷು ಮಂತ್ರವಿತ್ ॥ ೧೧೬ ॥

ಕುಸುಮಾ ಮೇಖಲಾ ಚೈವ ಮದನಾ ಮದನಾತುರಾ ।
ಮದನವೇಗಾ ಸಂಭವಾ ಚ ಭುವನಪಾಲೇಂದುರೇಖಿಕಾ ॥ ೧೧೭ ॥

---

೧೧೪-೧೧೬. ಅನಂತರ ಮಂತ್ರಿಯು ಮನ್ಮಥ, ಮಕರಧ್ವಜ, ಮದನ, ಪುಷ್ಪಧನ್ವಾ, ಕುಸುಮಾಯುಧ, ಕಂದರ್ಪ, ಮನೋಭವ, ರತಿಪ್ರಿಯ ಎಂಬೀ ಮನ್ಮಥರನ್ನು ಆದಿಯಲ್ಲಿ " ಐಂ ಹ್ರೀಂ ಶ್ರೀಂ " ಎಂಬ ಬೀಜತ್ರಯ, ಕೊನೆಯಲ್ಲಿ ಮಾತಂಗೀ ಇವುಗಳೊಂದಿಗೆ ಕ್ರಮವಾಗಿ ಮುಖ, ಎರಡು ಭುಜಗಳು, ಉಭಯ ಕಟಿಪಾರ್ಶ್ವಗಳು, ನಾಭಿಪ್ರದೇಶ, ಕಟಿಪಾರ್ಶ್ವದ ಭುಜಭಾಗಗಳು ಇವುಗಳಲ್ಲಿ ನ್ಯಾಸಮಾಡಬೇಕು.

೧೧೭-೧೨೦. ಅನಂತರ ಮಂತ್ರಿಯು ಮೂಲಾಧಾರ, ಅಧಿಷ್ಠಾನ (ಲಿಂಗಮೂಲ), ಮಣಿಪೂರಕ= ನಾಭಿ, ಹೃದಯ, ಕಂಠ, ಮುಖ, ಭ್ರೂಮಧ್ಯ ಮತ್ತು ಶಿರಸ್ಸು ಈ ಸ್ಥಾನಗಳಲ್ಲಿ ಅನಂಗಕುಸುಮಾ, ಅನಂಗಮೇಖಲಾ, ಅನಂಗ ಮದನಾ, ಅನಂಗಮದನಾತುರಾ, ಅನಂಗಮದನವೇಗಾ, ಅನಂಗಸಂಭವಾ, ಅನಂಗಭುವನಪಾಲಿನೀ, ಅನಂಗಶಶಿರೇಖಾ ಎಂಬೀ ಎಂಟು ಶಕ್ತಿಗಳನ್ನು ಕೊನೆಯಲ್ಲಿ ಮಾತಂಗಿಯನ್ನು ಸಂಯೋಜನೆ ಮಾಡಿ ನ್ಯಾಸಮಾಡಬೇಕು.

**ಅನಂಗಪದಪೂರ್ವಾಶ್ಚ ಮಾತಂಗ್ಯಂತಾಃ ಸಮೀರಿತಾಃ ।**
**ವಿನ್ಯಸ್ತವ್ಯಾಸ್ತತೋ ಮೂಲೇಽಧಿಷ್ಠಾನೇ ಮಣಿಪೂರಕೇ ॥ ೧೧೮ ॥**

**ಹೃತ್ಕಂಠಾಸ್ಯೇ ಭ್ರುವೋರ್ಮಧ್ಯೇ ಮಸ್ತಕೇ ಚಾಪಿ ಮಂತ್ರಿಣಾ ।**
**ಆದ್ಯೇ ಲಕ್ಷ್ಮೀಸರಸ್ವತ್ಯೌ ರತಿಃ ಪ್ರೀತಿಶ್ಚ ಕೃತ್ತಿಕಾ ॥ ೧೧೯ ॥**

**ಶಾಂತಿಃ ಪುಷ್ಟಿಃ ಪುನಸ್ತುಷ್ಟಿರ್ಮಾತಂಗೀ ಪದಶೇಖರಾ ।**
**ಮೂಲಮಂತ್ರಂ ಪೃಥಙ್ನ್ಯಸ್ಯೇನ್ನಿಜಮೂರ್ಧನಿ ಮಂತ್ರವಿತ್ ॥ ೧೨೦ ॥**

**ಆಧಾರದೇಶೇಽಧಿಷ್ಠಾನೇ ನಾಭೌ ಪಶ್ಚಾದನಾಹತೇ ।**
**ಕಂಠದೇಶೇ ಭ್ರುವೋರ್ಮಧ್ಯೇ ಬಿಂದೌ ಭೂಯಃ ಕಲಾಪದೇ ॥ ೧೨೧ ॥**

**ನಿರೋಧಿಕಾಯಾ ಮರ್ಧೇಂದು ನಾದನಾದಾಂತಯೋಃ ಪುನಃ ।**
**ಉನ್ಮನ್ಯಾಂ ವಿಷ್ಣುವಕ್ತ್ರೇ ಚ ಧ್ರುವಮಂಡಲಕೇ ಶಿವೇ ॥ ೧೨೨ ॥**

**ಮಾತಂಗ್ಯಂತಾಃ ಪ್ರವಿನ್ಯಸ್ಯೇದ್ವಾಮಾಂ ಜ್ಯೇಷ್ಠಾಮತಃ ಪರಂ ।**
**ರೌದ್ರೀಂ ಪ್ರಶಾಂತಾಂ ಶ್ರದ್ಧಾಖ್ಯಾಂ ಪುನರ್ಮಾಹೇಶ್ವರೀಮಥ ॥ ೧೨೩ ॥**

---

ಮೊದಲನೆಯವರಲ್ಲಿ ಲಕ್ಷ್ಮೀ, ಸರಸ್ವತೀ, ರತಿ, ಪ್ರೀತಿ, ಕೃತ್ತಿಕಾ, ಶಾಂತಿ, ಪುಷ್ಟಿ, ತುಷ್ಟಿ ಇವರನ್ನು ಮಾತಂಗೀಪದಾಂತವಾಗಿ ನ್ಯಾಸ ಮಾಡಬೇಕು.

ಮಂತ್ರಜ್ಞನು ತನ್ನ ಶಿರಸ್ಸಿನಲ್ಲಿ ಮೂಲಮಂತ್ರವನ್ನು ಪೃಥಕ್ಕಾಗಿ ನ್ಯಾಸಮಾಡಬೇಕು.

೧೨೧-೧೨೭. ಮೂಲಾಧಾರ, ಲಿಂಗಮೂಲ, ನಾಭಿ, ಹೃದಯ, ಕಂಠ ದೇಶ, ಭ್ರೂಮಧ್ಯ, ಬಿಂದು, ಕಲಾಪದ, ನಿರೋಧಿಕಾ, ಅರ್ಧೇಂದು, ನಾದ, ನಾದಾಂತ, ಉನ್ಮನೀ, ವಿಷ್ಣುವಕ್ತ್ರ, ಧ್ರುವಮಂಡಲ, ಶಿವ ಈ ಹದಿನಾರು ಸ್ಥಾನ ಗಳಲ್ಲಿ ಕ್ರಮವಾಗಿ ವಾಮಾ, ಜ್ಯೇಷ್ಠಾ, ರೌದ್ರೀ, ಪ್ರಶಾಂತಾ, ಶ್ರದ್ಧಾಖ್ಯಾ, ಮಾಹೇಶ್ವರೀ, ಕ್ರಿಯಾಶಕ್ತಿ, ಸುಲಕ್ಷ್ಮೀ, ಸೃಷ್ಟಿಸಂಜ್ಞಾ, ಮೋಹಿನೀ, ಪ್ರಮಥಾ, ಶ್ವಾಸಿನೀ, ವಿದ್ಯುಲ್ಲತಾ, ಚಿಚ್ಛಕ್ತಿ, ಸುಂದರಾನಂದಾ ಮತ್ತು ನಂದ ಬುದ್ಧಿ ಈ ಶಕ್ತಿಗಳನ್ನು ಮಾತಂಗ್ಯಂತವಾಗಿ ನ್ಯಾಸಮಾಡಬೇಕು.

ಕ್ರಿಯಾಶಕ್ತಿಂ ಸುಲಕ್ಷ್ಮೀಂ ಚ ಸೃಷ್ಟಿಸಂಜ್ಞಾಂ ಚ ಮೋಹಿನೀಂ |
ಪ್ರಮಥಾಂ ಶ್ವಾಸಿನೀಂ ವಿದ್ಯುಲ್ಲತಾಂ ಚಿಚ್ಛಕ್ತಿಮಪ್ಯಥ　　|| ೧೨೪ ||

ತತಶ್ಚ ಸುಂದರಾನಂದಾಂ ನಂದಬುದ್ಧಿಮಿಮಾಃ ಕ್ರಮಾತ್ |
ಶಿರೋಭಾಲಹೃದಾಧಾರೇಷ್ವೇತಾ ಬೀಜತ್ರಯಾದಿಕಾಃ　　|| ೧೨೫ ||

ಮಾತಂಗ್ಯಾದ್ಯಾಃ ಪ್ರವಿನ್ಯಸ್ಯೇದ್ಯಥಾವದ್ದೇಶಿಕೋತ್ತಮಃ |
ಮಾತಂಗೀಂ ಮಹದಾದ್ಯಾಂ ತಾಂ ಮಹಾಲಕ್ಷ್ಮೀಪದಾದಿಕಾಂ　　|| ೧೨೬ ||

ಸಿದ್ಧಲಕ್ಷ್ಮೀಪದಾದ್ಯಾಂ ಚ ಮೂಲಮಾಧಾರಮಂಡಲೇ |
ನ್ಯಸೇತ್ತೇನೈವ ಕುರ್ವೀತ ವ್ಯಾಪಕಂ ದೇಶಿಕೋತ್ತಮಃ　　|| ೧೨೭ ||

---

ದೇಶಿಕವರ್ಯನು ಶಿರಸ್ಸು, ಹಣೆ, ಹೃದಯ, ಆಧಾರ ಈ ಸ್ಥಾನಗಳಲ್ಲಿ ಬೀಜತ್ರಯಾದಿಯಾಗಿ ಮಾತಂಗ್ಯಾದಿಗಳನ್ನು ವಿಧಾನೋಕ್ತಪ್ರಕಾರ ನ್ಯಾಸಮಾಡಬೇಕು.

ಮಾತಂಗೀ, ಮಹಾಮಾತಂಗೀ, ಮಹಾಲಕ್ಷ್ಮೀಮಾತಂಗೀ, ಸಿದ್ಧಲಕ್ಷ್ಮೀಮಾತಂಗೀ ಇವರನ್ನು ಮೂಲಮಂತ್ರದಿಂದ ಆಧಾರಮಂಡಲದಲ್ಲಿ ನ್ಯಾಸಮಾಡಬೇಕು.

ಆ ಮೂಲಮಂತ್ರದಿಂದಲೇ ದೇಶಿಕನು ಸರ್ವಾಂಗನ್ಯಾಸವನ್ನು ಮಾಡಬೇಕು.

೧೨೮-೧೩೨. ಈ ರೀತಿಯಾಗಿ ಶರೀರದಲ್ಲಿ ನ್ಯಾಸಮಾಡಿಕೊಂಡು ಬಳಿಕ ಮಂತ್ರಿಯು ಹೀಗೆ ಧ್ಯಾನಿಸಬೇಕು ;—

ಶ್ಯಾಮವರ್ಣವುಳ್ಳ, ಗಿಳಿಯ ಮಾತನ್ನು ಕೇಳುತ್ತಿರುವ, ಕಮಲದ ಮೇಲೆ ಒಂದು ಪಾದವನ್ನಿಟ್ಟಿರುವ, ಅರ್ಧಚಂದ್ರನನ್ನು ಧರಿಸಿರುವ, ವೀಣೆಯನ್ನು ಬಾರಿಸುತ್ತಿರುವ, ಮಧುಪಾನದಿಂದ ಮತ್ತಳಾದ, ಕೆಂಪುವಸ್ತ್ರವನ್ನು

ಏವಂ ನ್ಯಸ್ತಶರೀರೋಸೌ ಚಿಂತಯೇನ್ಮಂತ್ರದೇವತಾಂ ।
ಶ್ಯಾಮಾಂ ಶುಕೋಕ್ತಿಂ ಶೃಣ್ವಂತೀಂ ನ್ಯಸ್ತೈಕಾಂಘ್ರಿಶಿರೋರುಹೇ ॥೧೨೮॥

ಶಶಿಖಂಡಧರಾಂ ವೀಣಾಂ ವಾದಯಂತೀಂ ಮಧೂನ್ಮದಾಂ ।
ರಕ್ತಾಂಶುಕಾಂ ಚ ಕಲ್ಹಾರಮಾಲಾಶೋಭಿತಚೂಲಿಕಾಂ ॥ ೧೨೯ ॥

ಶಂಖಪತ್ರಾಂ ತು ಮಾತಂಗೀಂ ಚಿತ್ರಕೋದ್ಭಾಸಿಮಸ್ತಕಾಂ ।
ಅಯುತಂ ಪ್ರಜಪೇನ್ಮಂತ್ರಂ ತದ್ದಶಾಂಶಂ ಮಧೂಕಜೈಃ ॥ ೧೩೦ ॥

ಪುಷ್ಪೈಸ್ತ್ರಿಮಧುರೋಪೇತೈರ್ಜುಹುಯಾನ್ಮಂತ್ರಸಿದ್ಧಯೇ ।
ತ್ರಿಕೋಣಕರ್ಣಿಕಂ ಪದ್ಮಮಷ್ಟಪತ್ರಂ ಪ್ರಕಲ್ಪಯೇತ್ ॥ ೧೩೧ ॥

ಅಷ್ಟಪತ್ರಾವೃತಂ ಬಾಹ್ಯೇ ವೃತ್ತಂ ಷೋಡಶಭಿರ್ದಲೈಃ ।
ಚತುರಸ್ರೀಕೃತಂ ಬಾಹ್ಯೇ ಕಾಂತ್ಯಾ ದೃಷ್ಟಿಮನೋಹರಂ ॥ ೧೩೨ ॥

---

ಉಟ್ಟಿರುವ, ಕಲ್ಹಾರಪುಷ್ಪದಿಂದಲಂಕೃತವಾದ ಜಡೆಯುಳ್ಳ, ಶಂಖತಾಟಂಕವನ್ನು ಧರಿಸಿರುವ, ತಿಲಕದಿಂದ ವಿರಾಜಮಾನವಾದ ಶಿರಸ್ಸುಳ್ಳ, ಮಂತ್ರದೇವತೆಯಾದ ಮಾತಂಗಿಯನ್ನು ಧ್ಯಾನಿಸಬೇಕು.

ಈ ಮಂತ್ರವನ್ನು ಹತ್ತುಸಾವಿರ ಜಪಿಸಿ ಮಂತ್ರಸಿದ್ಧಿಯನ್ನು ಪಡೆಯಲು ಸಕ್ಕರೆ, ಘೃತ, ಮಧುಗಳಿಂದ ಮಿಶ್ರಿತವಾದ ಹಿಪ್ಪೇಪುಷ್ಪಗಳಿಂದ ಹೋಮ ಮಾಡಬೇಕು.

ತ್ರಿಕೋಣಕೋಶವುಳ್ಳ ಅಷ್ಟದಳಪದ್ಮವನ್ನು ರಚಿಸಿ ಅದರ ಸುತ್ತಲೂ ಹದಿನಾರು ದಳಗಳಿಂದ ಸಹಿತವಾದ ವೃತ್ತರೇಖೆಯನ್ನು ಗುರ್ತಿಸಿ, ಅದನ್ನು ಚತುರಸ್ರಗೃಹದಲ್ಲಿ ಅಡಗಿಸಿ ನೋಡುವುದಕ್ಕೆ ಮನೋಹರವಾಗಿರುವಂತೆ ಕಾಂತಿಯುಕ್ತವಾದ ಮಂಡಲವನ್ನು ರಚಿಸಬೇಕು.

ಏತಸ್ಮಿನ್ಪೂಜಯೇತ್ಪೀಠೇ ನವಶಕ್ತೀಃ ಕ್ರಮಾದಿಮಾಃ ।
ವಿಭೂತಿಪೂರ್ವಾಃ ಪೂರ್ವೋಕ್ತಾ ಮಾತಂಗೀಪದಪಶ್ಚಿಮಾಃ ॥ ೧೩೩ ॥

ಸರ್ವಾಂತೇ ಶಕ್ತಿಕಮಲಾಸನಾಯ ನಮ ಇತ್ಯಥ ।
ವಾಕ್‌ಶಕ್ತಿಲಕ್ಷ್ಮೀಬೀಜಾದ್ಯ ಉಕ್ತಃ ಪೀಠಾರ್ಚನೇ ಮನುಃ ॥ ೧೩೪ ॥

ಮೂಲೇನ ಮೂರ್ತಿಂ ಸಂಕಲ್ಪ್ಯ ತಸ್ಯಾಮಾವಾಹ್ಯ ದೇವತಾಂ ।
ಅರ್ಚಯೇದ್ವಿಧಿನಾನೇನ ವಕ್ಷ್ಯಮಾಣೇನ ಮಂತ್ರವಿತ್ ॥ ೧೩೫ ॥

ರತ್ಯಾದ್ಯಾಸ್ತ್ರಿಷು ಕೋಣೇಷು ಪೂಜಯೇತ್ಪೂರ್ವವತ್ಸುಧೀಃ ।
ಹೃಲ್ಲೇಖಾದ್ಯಾಃ ಪಂಚಪೂಜ್ಯಾ ಮಧ್ಯೇ ದಿಕ್ಷು ಚ ಮಂತ್ರಿಣಾ ॥ ೧೩೬ ॥

---

೧೩೩. ಈ ಪೀಠದಲ್ಲಿ ಪೂರ್ವೋಕ್ತ ನವಶಕ್ತಿಗಳನ್ನು ಆದಿಯಲ್ಲಿ ವಿಭೂತಿ, ಅಂತ್ಯದಲ್ಲಿ ಮಾತಂಗಿ ಪದಗಳೊಡನೆ ಕ್ರಮವಾಗಿ ಪೂಜಿಸಬೇಕು.

೧೩೪. ಎಲ್ಲವೂ ಆದಮೇಲೆ "ಶಕ್ತಿಕಮಲಾಸನಾಯ ನಮಃ" ಎಂಬುದಾಗಿ ಪೂಜಿಸಬೇಕು. "ಐಂ ಹ್ರೀಂ ಶ್ರೀಂ" ಎಂಬ ಬೀಜಾದಿಯಾದ ಪೂರ್ವೋಕ್ತಮಂತ್ರವನ್ನೇ ಪೀಠಾರ್ಚನೆಗೆ ಉಪಯೋಗಿಸಿಕೊಳ್ಳಬೇಕು.

೧೩೫. ಅಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ದೇವತೆಯನ್ನು ಆವಾಹನೆಮಾಡಿ ಮಂತ್ರಜ್ಞನು ಮುಂದೆ ಹೇಳುವ ವಿಧಾನದಿಂದ ಪೂಜಿಸಬೇಕು.

೧೩೬-೧೩೭. ಜ್ಞಾನಿಯು ಪೂರ್ವದಂತೆ ಮೂರು ಕೋಣಗಳಲ್ಲಿ ರತಿ, ಪ್ರೀತಿ, ಮನೋಭವಾ ಇವರನ್ನು ಪೂಜಿಸಬೇಕು ಬಳಿಕ ಮಂತ್ರಿಯು ಕೈಗಳಲ್ಲಿ ಪಾಶ, ಅಂಕುಶ, ಅಭಯ, ಅಭೀಷ್ಟಗಳನ್ನು ಧರಿಸಿರುವ ಪೃಥಿವ್ಯಾದಿಗಳಂತೆ ವಿರಾಜಮಾನರಾದ, ಹೃಲ್ಲೇಖಾ ಮುಂತಾದ ಐದು ಶಕ್ತಿಗಳನ್ನು

ಪಾಶಾಂಕುಶಾಭಯಾಭೀಷ್ಟಧಾರಿಣ್ಯೋ ಭೂತಸಪ್ರಭಾಃ ।
ಅಂಗಾನಿ ಪೂಜಯೇತ್ಪಶ್ಚಾದ್ಯಥಾಪೂರ್ವಂ ವಿಧಾನವಿತ್ ॥ ೧೩೭ ॥

ಬಾಣಾನಭ್ಯರ್ಚಯೇದ್ದಿಕ್ಷು ಪಂಚಮಂ ಪುರತೋ ಯಜೇತ್ ।
ದಲಮಧ್ಯೇಥ ಸಂಪೂಜ್ಯಾ ಅನಂಗಕುಸುಮಾದಿಕಾಃ ॥ ೧೩೮ ॥

ಪಾಶಾಂಕುಶಾಭಯಾಭೀಷ್ಟಧಾರಿಣ್ಯೋಽರುಣವಿಗ್ರಹಾಃ ।
ಪತ್ರಾಗ್ರೇಷು ಪುನಃ ಪೂಜ್ಯಾ ಲಕ್ಷ್ಮ್ಯಾದ್ಯಾ ವಲ್ಲಕೀಕರಾಃ ॥ ೧೩೯ ॥

ಬಹಿರಷ್ಟದಲೇಷ್ವರ್ಚ್ಯಾ ಮನ್ಮಥಾದ್ಯಾ ಮದೋದ್ಧತಾಃ ।
ಅಪರಾಂಗನಿಷಂಗಾಢ್ಯಾಃ ಪುಷ್ಪಾಸ್ತ್ರೇಕ್ಷುಧನುರ್ಧರಾಃ ॥ ೧೪೦ ॥

ಪತ್ರಸ್ಥಾ ಮಾತರಃ ಪೂಜ್ಯಾ ಬ್ರಾಹ್ಮ್ಯಾದ್ಯಾಃ ಪ್ರೋಕ್ತಲಕ್ಷಣಾಃ ।
ತದಗ್ರೇಷ್ವರ್ಚಯೇದ್ವಿದ್ವಾನಸಿತಾಂಗಾದಿಭೈರವಾನ್ ॥ ೧೪೧ ॥

---

ಪೂರ್ವಾದಿ ನಾಲ್ಕುದಿಕ್ಕುಗಳು ಮತ್ತು ಮಧ್ಯಭಾಗಗಳಲ್ಲಿ ಪೂಜಿಸಬೇಕು. ಅನಂತರ ವಿಧಾನಜ್ಞನು ಪೂರ್ವದಂತೆ ಅಂಗಗಳನ್ನು ಪೂಜಿಸಬೇಕು.

೧೩೮-೧೩೯. ಬಾಣಗಳನ್ನು ನಾಲ್ಕು ದಿಕ್ಕುಗಳಲ್ಲಿಯೂ, ಐದನೆಯದನ್ನು ಮುಂಭಾಗದಲ್ಲಿಯೂ ಪೂಜಿಸಬೇಕು. ದಳಮಧ್ಯಭಾಗದಲ್ಲಿ ಪಾಶ, ಅಂಕುಶ, ಅಭಯ, ಅಭೀಷ್ಟಧಾರಿಗಳಾದ, ರಕ್ತಶರೀರಗಳುಳ್ಳ ಅನಂಗಕುಸುಮಾದಿಗಳನ್ನು ಪೂಜಿಸಬೇಕು. ಪುನಃ ಪತ್ರಗಳ ಅಗ್ರಭಾಗಗಳಲ್ಲಿ ವೀಣಾಪಾಣಿಗಳಾದ ಲಕ್ಷ್ಮೀ ಮುಂತಾದವರನ್ನು ಪೂಜಿಸಬೇಕು.

೧೪೦. ಅಷ್ಟದಳ ಮೂಲಭಾಗಗಳಲ್ಲಿ ಮದೋನ್ಮತ್ತರು, ಹಿಂಭಾಗದಲ್ಲಿ ಬತ್ತಳಿಕೆಗಳಿಂದ ಕೂಡಿದ ಪುಷ್ಪಬಾಣ, ಇಕ್ಷುಧನುಸ್ಸುಗಳನ್ನು ಧರಿಸಿರುವ ಮನ್ಮಥಾದಿಗಳನ್ನು ಪೂಜಿಸಬೇಕು.

೧೪೧. ಹಿಂದೆ ಹೇಳಿದ ಗುಣಯುಕ್ತರಾದ ಬ್ರಾಹ್ಮೀ ಮುಂತಾದ ಮಾತೃಗಳನ್ನು ಪತ್ರಸ್ಥಿತರನ್ನಾಗಿ ಭಾವಿಸಿ ಪೂಜಿಸಬೇಕು. ಬಳಿಕ ಜ್ಞಾನಿಯು ಆ ಪತ್ರಾಗ್ರಗಳಲ್ಲಿ ಅಸಿತಾಂಗ ಮುಂತಾದ ಭೈರವರನ್ನು ಪೂಜಿಸಬೇಕು.

ಪುನಃ ಷೋಡಶಪತ್ರೇಷು ಪೂಜ್ಯಾಃ ಷೋಡಶಶಕ್ತಯಃ ।
ವಾಮಾದ್ಯಾಃ ಕಲವೀಣಾಭಿರ್ಗಾಯಂತ್ಯಃ ಶ್ಯಾಮವಿಗ್ರಹಾಃ ॥ ೧೪೨ ॥

ಚತುರಸ್ರೇ ಚತುರ್ದಿಕ್ಷು ಚತಸ್ರಃ ಪೂಜಯೇತ್ಪ್ರಸಃ ।
ಮಾತಂಗ್ಯಾದ್ಯಾ ಮದೋನ್ಮತ್ತಾ ವೀಣೋಲ್ಲಸಿತಪಾಣಯಃ ॥ ೧೪೩ ॥

ಆಗ್ನೇಯಕೋಣೇ ವಿಘ್ನೇಶಂ ದುರ್ಗಾಂ ನೈಶಾಚರೇ ಯಜೇತ್ ।
ವಾಯವ್ಯೇ ಬಟುಕಾನ್ ಪಶ್ಚಾದೀಶಾನೇ ಕ್ಷೇತ್ರಪಂ ಯಜೇತ್ ॥ ೧೪೪ ॥

ಲೋಕಪಾಲಾ ಬಹಿಃಪೂಜ್ಯಾ ವಜ್ರಾದ್ಯೈರಾಯುಧೈಃ ಸಹ ।
ಮಂತ್ರೇಽಸ್ಮಿನ್ಸಾಧಿತೇ ಮಂತ್ರೀ ಸಾಧಯೇದಿಷ್ಟಮಾತ್ಮನಃ ॥ ೧೪೫ ॥

---

೧೪೨. ಪುನಃ ಷೋಡಶಪತ್ರಗಳಲ್ಲಿ ಕಲವೀಣೆ ಮುಂತಾದುವುಗಳಿಂದ ಗಾನಮಾಡುತ್ತಿರುವ, ಶ್ಯಾಮಬಣ್ಣದ ಶರೀರವುಳ್ಳ, ವಾಮಾದಿ ಷೋಡಶಶಕ್ತಿಗಳನ್ನು ಪೂಜಿಸಬೇಕು.

೧೪೩. ಚತುರಸ್ರಮಂಡಲದಲ್ಲಿ ನಾಲ್ಕು ದಿಕ್ಕುಗಳಲ್ಲಿ ಮದೋನ್ಮತ್ತರೂ ವೀಣೆಗಳಿಂದ ವಿರಾಜಮಾನರಾದ ಹಸ್ತಗಳುಳ್ಳವರೂ ಆದ ಮಾತಂಗ್ಯಾದಿ ನಾಲ್ಕು ದೇವತೆಗಳನ್ನು ಪೂಜಿಸಬೇಕು.

೧೪೪. ಆಗ್ನೇಯ ಮೂಲೆಯಲ್ಲಿ ವಿಘ್ನೇಶನನ್ನೂ, ನೈಋತ್ಯಕೋಣದಲ್ಲಿ ದುರ್ಗಾದೇವಿಯನ್ನೂ, ವಾಯವ್ಯದಲ್ಲಿ ಬಟುಕರನ್ನೂ, ಈಶಾನ್ಯದಲ್ಲಿ ಕ್ಷೇತ್ರಪಾಲನನ್ನೂ ಪೂಜಿಸಬೇಕು.

೧೪೫. ಹೊರಗೆ ವಜ್ರಾಯುಧ ಮುಂತಾದ ಅವರವರ ಆಯುಧಗಳ ಸಹಿತವಾಗಿ ಇಂದ್ರಾದಿ ಲೋಕಪಾಲಕರನ್ನು ಪೂಜಿಸಬೇಕು. ಈರೀತಿಯಾಗಿ ಆರಾಧಿಸಿ ಸಿದ್ಧಿಯನ್ನು ಪಡೆದ ಮಂತ್ರಿಯು ನಾನಾವಿಧಪ್ರಯೋಗಗಳನ್ನಾಚರಿಸಿ ತನ್ನ ಇಷ್ಟಾರ್ಥವನ್ನು ಸಾಧಿಸಿಕೊಳ್ಳಬಹುದು.

ಮಲ್ಲಿಕಾಜಾತಿಪುನ್ನಾಗೈರ್ಹೋಮಾದ್ಭಾಗ್ಯಾಲಯೋ ಭವೇತ್ ।
ಫಲೈರ್ಬಿಲ್ವಸಮುದ್ಭೂತೈಸ್ತತ್ಪತ್ರೈರ್ವಾ ಹುತಾದ್ಭವೇತ್ ॥ ೧೪೬ ॥

ರಾಜಪುತ್ರಸ್ಯ ರಾಜ್ಯಾಪ್ತಿಃ ಪಂಕಜೈಃ ಶ್ರಿಯಮಾಪ್ನುಯಾತ್ ।
ಉತ್ಪಲೈರ್ವಶಯೇದ್ವಿಶ್ವಂ ಕ್ಷಾರೈರ್ಮಧ್ವಾಶ್ರಿತೈಃ ಸ್ತ್ರಿಯಂ ॥ ೧೪೭ ॥

ವಂಜುಲಸ್ಯ ಸಮಿದ್ಧೋಮೋ ವೃಷ್ಟಿಂ ವಿತನುತೇಽಚಿರಾತ್ ।
ಕ್ಷೀರಾಕ್ತೈರಮೃತಾಖಂಡೈರ್ಹೋಮಾನ್ನಾಶಯತಿ ಜ್ವರಂ ॥ ೧೪೮ ॥

ದೂರ್ವಾಭಿರಾಯುರಾಪ್ನೋತಿ ತಂದುಲೈರ್ಧನವಾನ್ಭವೇತ್ ।
ಕದಂಬೈರ್ವಶ್ಯಮಾಪ್ನೋತಿ ಸರ್ವಂ ತ್ರಿಮಧುರಪ್ಲುತಂ ॥ ೧೪೯ ॥

---

೧೪೬-೧೪೭. ಮಲ್ಲಿಗೆ, ಜಾಜಿ, ಪುನ್ನಾಗಪುಷ್ಪಗಳ ಹೋಮಮಾಡುವುದರಿಂದ ಮಂತ್ರಿಯು ಭಾಗ್ಯನಿಧಿಯಾಗುವನು.

ಬಿಲ್ವಫಲ ಅಥವಾ ಪತ್ರಗಳಿಂದ ಹೋಮಮಾಡಿದರೆ ರಾಜಪುತ್ರನಿಗೆ ರಾಜ್ಯಪ್ರಾಪ್ತಿಯಾಗುವುದು.

ಪದ್ಮಹೋಮದಿಂದ ಸಂಪತ್ಪ್ರಾಪ್ತಿಯಾಗುವುದು.

ಕನ್ನೈದಿಲೆಹೂವಿನ ಹೋಮದಿಂದ ಜಗತ್ತನ್ನೂ, ಮಧುಮಿಶ್ರಲವಣಗಳ ಹೋಮದಿಂದ ಸ್ತ್ರೀಯರನ್ನೂ ವಶಪಡಿಸಿಕೊಳ್ಳಬಹುದು.

೧೪೮. ಅಶೋಕಸಮಿತ್ತುಗಳಿಂದ ಹೋಮಮಾಡಿದರೆ ಮಳೆಯು ಬರುತ್ತದೆ.

ಹಾಲಿನಲ್ಲಿ ನೆನೆಸಿದ ಅಮೃತಬಳ್ಳಿಯ ತುಂಡುಗಳಿಂದ ಹೋಮಮಾಡಿದರೆ ಜ್ವರವು ವಾಸಿಯಾಗುತ್ತದೆ.

೧೪೯. ದೂರ್ವಾಹೋಮದಿಂದ ಆಯುಸ್ಸನ್ನೂ, ತಂಡುಲಹೋಮದಿಂದ ಹಣವನ್ನೂ, ಕದಂಬಪುಷ್ಪಹೋಮದಿಂದ ವಶೀಕರಣಶಕ್ತಿಯನ್ನೂ ಪಡೆಯುವನು. ದೂರ್ವಾ, ತಂಡುಲ, ಕದಂಬಗಳನ್ನು ಸಕ್ಕರೆ ಘೃತ ಮಧುಗಳಲ್ಲಿ ನೆನೆಸಿ ಹೋಮಕ್ಕೆ ಉಪಯೋಗಿಸಬೇಕು.

ಸಂದ್ಯಾವರ್ತಭವೈಃ ಪುಷ್ಪೈರ್ಹೋಮೋ ವಾಕ್‌ಸಿದ್ಧಿದಾಯಕಃ ।
ನಿಂಬಪ್ರಸೂನೈರ್ಜುಹುಯಾದೀಪ್ಸಿತಶ್ರೀಸಮೃದ್ಧಯೇ ॥ ೧೫೦ ॥

ಪಲಾಶಕುಸುಮೈರ್ಹೋಮಾತ್ತೇಜಸ್ವೀ ಜಾಯತೇ ನರಃ ।
ಚಂದನಾಗರುಕಸ್ತೂರೀಚಂದ್ರಕುಂಕುಮರೋಚನಾಃ ॥ ೧೫೧ ॥

ವಶ್ಯಾಯ ಚ ಪ್ರಿಯತ್ವಾಯ ಹುತಾಶ್ಚ ತಿಲಕೀಕೃತಾಃ ।
ನಿರ್ಗುಂಡೀಮೂಲಹೋಮೇನ ನಿಗಡಾನ್ಮುಚ್ಯತೇ ನರಃ ॥ ೧೫೨ ॥

ನಿಂಬತೈಲಾನ್ವಿತೈರ್ಲೋಣೈರ್ಹೋಮಃ ಶತ್ರುವಿನಾಶನಃ ।
ಹರಿದ್ರಾಚೂರ್ಣಸಂಮಿಶ್ರೈರ್ಲವಣೈಸ್ತಂಭಯೇಜ್ಜಗತ್ ॥ ೧೫೩ ॥

---

೧೫೦. ನಂದೀವರ್ಧನ ಪುಷ್ಪಗಳ ಹೋಮವು ವಾಕ್ಸಿದ್ಧಿಯನ್ನು ಕೊಡುತ್ತವೆ ಬಯಸಿದ ಸಂಪತ್ತನ್ನು ಹೊಂದಲು ಬೇವಿನ ಹೂವುಗಳಿಂದ ಹೋಮಮಾಡಬೇಕು.

೧೫೧-೧೫೨. ಮುತ್ತುಗಪುಷ್ಪಹೋಮದಿಂದ ಮನುಷ್ಯನು ತೇಜಸ್ವಿಯಾಗುವನು.

ಚಂದನ, ಅಗರು, ಕಸ್ತೂರಿ, ಚಂದ್ರ, ಕುಂಕುಮ, ಗೋರೋಚನಗಳನ್ನು ಹೋಮಮಾಡಿದರೆ ವಶ್ಯತೆಯೂ, ಅವುಗಳನ್ನು ಪೂರ್ವೋಕ್ತರೀತಿಯಿಂದ ಚೂರ್ಣಮಾಡಿ ಅದರಿಂದ ತಿಲಕವನ್ನು ಧರಿಸಿದರೆ ಪ್ರಿಯತ್ವವೂ ಉಂಟಾಗುವುದು.

ಕರೀಲಕ್ಕಿಲೀ ಅಥವಾ ವಾವಿಲೀಬೇರಿನ ಹೋಮದಿಂದ ಮನುಷ್ಯನು ಸೆರೆಯಿಂದ ಬಿಡುಗಡೆಯನ್ನು ಹೊಂದುವನು

೧೫೩. ಬೇವಿನೆಣ್ಣೆಯಿಂದ ಮಿಶ್ರವಾದ ಲವಣಗಳ ಹೋಮವು ಶತ್ರುವಿನಾಶಕವು. ಅರಿಶಿನಪುಡಿಮಿಶ್ರವಾದ ಉಪ್ಪುಗಳಿಂದ ಹೋಮಮಾಡುವವನು ಜಗತ್ತನ್ನೇ ವಶಪಡಿಸಿಕೊಳ್ಳಬಹುದು.

**ಮಾತಂಗೀ ಸಿದ್ಧವಿದ್ಯೈಷಾ ಪ್ರೋಕ್ತಾ ತೇ ದ್ವಿಜಸತ್ತಮ ।**
**ಅವತಾರಾಂತರಂ ಭೂಯೋ ವರ್ಣಯಾಮಿ ನಿಶಾಮಯ || ೧೫೪ ||**

**ದೀಪಿಕಾಪ್ರೀತಿಚಂದ್ರಾಢ್ಯಾ ದ್ವಿಧಾ ಚಂದ್ರೋಜ್ಝಿತಾ ಚ ಮಾ ।**
**ವತಿವಹ್ನಿಪ್ರಿಯಾಮಂತ್ರೋ ಧೂಮಾವತ್ಯಾ ಗಜಾಕ್ಷರಃ || ೧೫೫ ||**

**ಪಿಪ್ಪಲಾದೋ ಮುನಿಶ್ಛಂದೋ ನಿವೃದ್ಧೂಮಾವತೀಶ್ವರೀ ।**
**ಬೀಜೇನ ಷಡ್ದೀರ್ಘಜಾತಿಯುಕ್ತೇನ ಪರಿಕಲ್ಪಯೇತ್ || ೧೫೬ ||**

**ತತೋ ಧೂಮಾವತೀಂ ಧ್ಯಾಯೇಚ್ಛತ್ರುನಿಗ್ರಹಕಾರಿಣೀಂ ।**
**ವಿವರ್ಣಾಂ ಚಂಚಲಾಂ ದುಷ್ಟಾಂ ದೀರ್ಘಾಂ ಚ ಮಲಿನಾಂಬರಾಂ ||೧೫೭||**

---

೧೫೪. ದ್ವಿಜೋತ್ತಮಾ ! ನಿನಗಾಗಿ ಮಾತಂಗೀ ಎಂಬ ಈ ಸಿದ್ಧ ವಿದ್ಯೆಯನ್ನು ನಿರೂಪಿಸಿರುವೆನು. ಈಗ ಪುನಃ ಇನ್ನೊಂದವತಾರದ ಮಂತ್ರಾದಿ ಗಳನ್ನು ಹೇಳುವೆನು ; ಕೇಳು.

### ಧೂಮಾವತೀಮಂತ್ರ

೧೫೫. (ದೀಪಿಕಾ = ಊ + ಪ್ರೀತಿ = ಧ + ಚಂದ್ರಾಢ್ಯಾ= ಧೂಂ, ವಹ್ನಿಪ್ರಿಯಾ= ಸ್ವಾಹಾ, ಉಳಿದುದು ಮಂತ್ರದಲ್ಲಿ ಸೇರಿಸಬೇಕಾದ ಶಬ್ದ ಸ್ವರೂಪ)

"ಧೂಂ ಧೂಂ ಧೂಮಾವತಿ ಸ್ವಾಹಾ" ಎಂಬುದು ಎಂಟಕ್ಷರದ ಧೂಮಾವತೀಮಂತ್ರವು.

೧೫೬. ಈ ಮಂತ್ರಕ್ಕೆ ಪಿಪ್ಪಲಾದನು ಋಷಿ, ನಿವೃತ್ ಛಂದಸ್ಸು, ಧೂಮಾವತಿಯೇ ದೇವತೆಯು, ಷಡ್ದೀರ್ಘಜಾತಿಯುಕ್ತ ಬೀಜಾಕ್ಷರಗಳಿಂದ ಅಂಗಗಳನ್ನು ಕಲ್ಪಿಸಬೇಕು.

೧೫೭-೧೬೫. ಧ್ಯಾನ :—ಶತ್ರುನಿಗ್ರಹಮಾಡುವವಳು, ವಿವರ್ಣಳು, ಚಂಚಲಳು, ದುಷ್ಟಳು, ಉದ್ದವಾಗಿರುವವಳು, ಕಶ್ಮಲವಸ್ತ್ರಧಾರಿಣಿಯು, ಕೂದ

ವಿಮುಕ್ತಕುಂತಲಾಂ ಸೂಕ್ಷ್ಮಾಂ ವಿಧವಾಂ ವಿರಲದ್ವಿಜಾಂ ।
ಕಂಕಧ್ವಜರಥಾರೂಢಾಂ ಪ್ರಲಂಬಿತಪಯೋಧರಾಂ ॥ ೧೫೮ ॥

ಸೂರ್ಯಹಸ್ತಾಂ ನಿರುಕ್ಷಾಂಕಧೃತಹಸ್ತಾಂಬರಾನ್ವಿತಾಂ ।
ಪ್ರವೃದ್ಧಲೋಮಾಂ ತು ಭೃಶಂ ಕುಟಿಲಾಕುಟಿಲೇಕ್ಷಣಾಂ ॥ ೧೫೯ ॥

ಕ್ಷುತ್ಪಿಪಾಸಾರ್ದಿತಾಂ ನಿತ್ಯಂ ಭಯದಾಂ ಕಲಹಪ್ರಿಯಾಂ ।
ಏವಂ ವಿಧಾಂ ತು ಸಂಚಿಂತ್ಯ ನಮಃ ಸ್ವಾಹಾ ಫಡಂತಕಂ ॥ ೧೬೦ ॥

ಬೀಜಂ ಸಾಧ್ಯೋಪರಿ ನ್ಯಸ್ಯ ತಸ್ಮಿನ್ ಸ್ಥಾಪ್ಯ ಶವಂ ಜಪೇತ್ ।
ಅವಷ್ಟಭ್ಯ ಶವಂ ಶತ್ರುನಾಮ್ನಾಥ ಪ್ರಜಪೇನ್ಮನುಂ ॥ ೧೬೧ ॥

---

ಲನ್ನು ಕೆದರಿಕೊಂಡಿರುವವಳು, ಸೂಕ್ಷ್ಮಳು, ವಿಧವೆಯು, ವಿರಳದಂತಳು, ಕಂಕಧ್ವಜರಥದಲ್ಲಿ ಕುಳಿತಿರುವವಳು, ಜೋಲುಬಿದ್ದಿರುವ ಸ್ತನಗಳುಳ್ಳವಳು, ಸೂರ್ಯಹಸ್ತಳು, ಕೈವಸ್ತ್ರವನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡಿರುವವಳು, ಮೈಮೇಲೆ ಕೂದಲುಳ್ಳವಳು, ಅತಿಶಯವಾಗಿ ಕುಟಿಲಾಕುಟಿಲನಯನಳು, ಹಸಿವು ಬಾಯಾರಿಕೆ ಇವುಗಳಿಂದ ಪೀಡಿತಳು, ಯಾವಾಗಲೂ ಭಯಂಕರಳು ಮತ್ತು ಕಲಹಪ್ರಿಯಳೂ ಆಗಿರುವ ಧೂಮಾವತೀದೇವಿಯನ್ನು ಧ್ಯಾನಿಸಬೇಕು.

ಈರೀತಿಯಾದ ದೇವಿಯನ್ನು ಧ್ಯಾನಿಸಿ, ಕೊನೆಯಲ್ಲಿ "ನಮಃ ಸ್ವಾಹಾ ಫಟ್" ಎಂಬುದನ್ನು ಸೇರಿಸಿ ಬೀಜಾಕ್ಷರವನ್ನು ಸಾಧ್ಯನಾಮದ ಮೇಲೆ ನ್ಯಾಸ ಮಾಡಿ. ಅಲ್ಲಿ ಹಣವನ್ನಿಟ್ಟು, ಶತ್ರುನಾಮದಿಂದ ಅದನ್ನು ಮುಚ್ಚಿ ಮಂತ್ರ ವನ್ನು ಜಪಿಸಬೇಕು.

ಜ್ಞಾನಿಯು ಅಂಗಿ ರುಮಾಲುಗಳನ್ನು ಧರಿಸಿಕೊಂಡು ಕೃಷ್ಣಪಕ್ಷದ ಚತುರ್ದಶಿಯ ದಿವಸ ಉಪವಾಸದಿಂದ ಹಗಲು ರಾತ್ರಿಗಳಲ್ಲಿ ಕಾಡು, ಅಥವಾ ಸ್ಮಶಾನ ಇಲ್ಲವೇ ಜನವಿಲ್ಲದ ಮನೆ ಇವುಗಳಲ್ಲಿ ಮಂತ್ರಸಿದ್ಧ್ಯರ್ಥವಾಗಿ ವಾಙ್ನಿಯಮ

ಸೋಷ್ಣೀಷಕಂಚುಕೋ ವಿದ್ವಾನ್ ಕೃಷ್ಣೇ ಭೂತೇ ದಿವಾನಿಶಂ ।
ಉಪವಾಸೀ ಶ್ಮಶಾನೇ ವಾ ವಿಪಿನೇ ಶೂನ್ಯಮಂದಿರೇ ॥ ೧೬೨ ॥

ಮಂತ್ರಸ್ಯ ಸಿದ್ಧ್ಯೈ ಯತವಾಕ್ ಧ್ಯಾಯನ್ ದೇವೀಂ ನಿರಂತರಂ ।
ಸಹಸ್ರಾದೂರ್ಧ್ವತಃ ಶತ್ರುರ್ಜ್ವರೇಣ ಪರಿಗೃಹ್ಯತೇ ॥ ೧೬೩ ॥

ಪಂಚಗವ್ಯೇನ ಶಾಂತಿಃ ಸ್ಯಾಜ್ಜ್ವರಸ್ಯ ಪಯಸಾಪಿ ವಾ ।
ಮಂತ್ರಾದ್ಯಾಕ್ಷರಮಾಲಿಖ್ಯ ಶತ್ರುನಾಮ ತತಃ ಪರಂ ॥ ೧೬೪ ॥

ದ್ವಿತೀಯಂ ಮನುವರ್ಣಂ ಚ ಶತ್ರುನಾಮ್ನೈವಮಾಲಿಖೇತ್ ।
ಸರ್ವಂ ಮನುದಿಕ್‌ಸಹಸ್ರಜಪಾಚ್ಛತ್ರುರ್ಮ್ರಿಯತಿರ್ಭವೇತ್ ॥ ೧೬೫ ॥

ದಗ್ಧ್ವಾ ಕಂಕಂ ಶ್ಮಶಾನಾಗ್ನೌ ತದ್ಭಸ್ಮಾದಾಯ ಮಂತ್ರವಿತ್ ।
ವಿರೋಧಿನಾಮ್ನಾಷ್ಟಶತಂ ಜಪ್ತ್ವಮುಚ್ಚಾಟನಂ ರಿಪೋಃ ॥ ೧೬೬ ॥

---

ದಿಂದ ದೇವಿಯನ್ನು ನಿರಂತರ ಧ್ಯಾನಮಾಡಿದರೆ ಸಾವಿರಾರು ಶತ್ರುಗಳು ಜ್ವರದಿಂದ ನರಳುವರು.

ಪಂಚಗವ್ಯ ಅಥವಾ ಕ್ಷೀರದಿಂದ ಜ್ವರಕ್ಕೆ ಶಾಂತಿಯಾಗುವುದು.

ಮಂತ್ರದ ಮೊದಲನೆಯ ಅಕ್ಷರ ಮತ್ತು ಶತ್ರುನಾಮಧೇಯವನ್ನೂ ಬರೆದು ಆಮೇಲೆ ಎರಡನೆಯ ಮಂತ್ರವರ್ಣ, ಶತ್ರುವಿನ ಹೆಸರುಗಳನ್ನು ಬರೆದು ಹೀಗೆ ಮಂತ್ರವರ್ಣವನ್ನೆಲ್ಲಾ ಬರೆದು ಮಂತ್ರವನ್ನು ಹತ್ತುಸಾವಿರ ಜಪಿಸಿದರೆ ಶತ್ರುವು ಸಾಯುವನು.

೧೬೬. ಶ್ಮಶಾನಾಗ್ನಿಯಲ್ಲಿ ಕಂಕಪಕ್ಷಿಯನ್ನು ಸುಟ್ಟು, ಮಂತ್ರಜ್ಞನು ಅದರ ಭಸ್ಮವನ್ನು ತೆಗೆದುಕೊಂಡು, ಶತ್ರುವಿನ ಹೆಸರಿನಿಂದ ಎಂಟುನೂರಾವರ್ತಿ ಮಂತ್ರಜಪಮಾಡಿದರೆ ಶತ್ರುವಿಗೆ ಉಚ್ಚಾಟನೆಯಾಗುವುದು.

ಶ್ಮಶಾನಭಸ್ಮನಾ ಕೃತ್ವಾ ಶವಂ ತಸ್ಯೋಪರಿ ನ್ಯಸೇತ್ ।
ವಿರೋಧಿನಾಮಸಂರುದ್ಧಂ ಕೃಷ್ಣೇ ಪಕ್ಷೇ ಸಮುಚ್ಚರೇತ್ ॥ ೧೬೭ ॥

ಮಹಿಷೀಕ್ಷೀರಧೂಪಂ ಚ ದದ್ಯಾಚ್ಛತ್ರುವಿಪತ್ಕರಂ ।
ಏವಂ ಸಂಕ್ಷೇಪತಃ ಪ್ರೋಕ್ತಂ ಅವತಾರಚತುಷ್ಟಯಂ ॥ ೧೬೮ ॥
ದುರ್ಗಾಯಾ ಜಗದಂಬಾಯಾಃ ಕಿಂ ಪುನಃ ಪ್ರಷ್ಟುಮಿಚ್ಛಸಿ ॥ ೧೬೯ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ದುರ್ಗಾಮಂತ್ರಚತುಷ್ಟಯವರ್ಣನಂ ನಾಮ
ಸಪ್ತಾಶೀತಿತಮೋಽಧ್ಯಾಯಃ

---

೧೬೭-೧೬೯. ಸ್ಮಶಾನದಲ್ಲಿ ಭಸ್ಮದಿಂದ ಶವವನ್ನು ಮಾಡಿ ಅದರ ಮೇಲೆ ಶತ್ರುನಾಮವನ್ನು ಉಲ್ಲೇಖಿಸಿ ಕೃಷ್ಣಪಕ್ಷದಲ್ಲಿ ಅದನ್ನು ಉಚ್ಚರಿಸಬೇಕು. ಶತ್ರುಗಳಿಗೆ ವಿಪತ್ಕಾರಕವಾದ ಮಹಿಷೀಕ್ಷೀರಧೂಪವನ್ನು ಅರ್ಪಿಸಬೇಕು.

ಈರೀತಿಯಾಗಿ ಸಂಕ್ಷೇಪವಾಗಿ ಜಗನ್ಮಾತೆಯಾದ ದುರ್ಗಾದೇವಿಯ ನಾಲ್ಕು ಅವತಾರಮಂತ್ರಗಳು ಉಕ್ತವಾದುವು. ಪುನಃ ಇನ್ನೇನನ್ನು ಕೇಳಲು ಅಪೇಕ್ಷಿಸುವೆ ?

ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಮೂರನೆಯ ಪಾದದಲ್ಲಿ ದುರ್ಗಾಮಂತ್ರಚತುಷ್ಟಯವರ್ಣನೆ
ಯೆಂಬ ಎಂಬತ್ತೇಳನೆಯ ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ

ದುರ್ಗಾದೇವಿಯ ಅವತಾರಗಳಾದ ಛಿನ್ನಮಸ್ತಾ, ತ್ರಿಪುರಭೈರವೀ, ಮಾತಂಗೀಶ್ವರೀ, ಧೂಮಾವತೀ ಎಂಬ ನಾಲ್ಕು ದೇವತೆಗಳ ಮಂತ್ರಗಳು ಸಪರಿಕರವಾಗಿ ನಿರೂಪಿಸಲ್ಪಟ್ಟಿವೆ.

# ಅಷ್ಟಾಶೀತಿತಮೋಽಧ್ಯಾಯಃ

ಸೂತ ಉವಾಚ

ಶ್ರುತ್ವೇತ್ಥಂ ಯಜನಂ ವಿಪ್ರಾ ಮಂತ್ರಧ್ಯಾನಪುರಸ್ಸರಂ ।
ಸರ್ವಾಸಾಮವತಾರಾಣಾಂ ನಾರದೋ ದೇವದರ್ಶನಃ ॥ ೧ ॥

ಸರ್ವಾದ್ಯಾಯಾ ಜಗನ್ಮಾತುಃ ಶ್ರೀರಾಧಾಯಾಃ ಸಮರ್ಚನಂ ।
ಅವತಾರಕಲಾನಾಂ ಹಿ ಪಪ್ರಚ್ಛ ವಿನಯಾನ್ವಿತಃ ॥ ೨ ॥

ನಾರದ ಉವಾಚ

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಜಾತೋಽಹಂ ತ್ವತ್ಪ್ರಸಾದತಃ ।
ಯಜ್ಜಗನ್ಮಾತೃಮಂತ್ರಾಣಾಂ ವೈಭವಂ ಶ್ರುತವಾನ್ಮುನೇ ॥ ೩ ॥

---

## ಎಂಬತ್ತೆಂಟನೆಯ ಅಧ್ಯಾಯವು.

೧-೨. ಸೂತನು ಹೇಳಿದನು :—ಬ್ರಾಹ್ಮಣರೇ! ದೇವರ ಪ್ರತ್ಯಕ್ಷವನ್ನು ಪಡೆದಿರುವ ನಾರದನು ಈ ಪ್ರಕಾರವಾಗಿ ಹೇಳಿದ, ಸಕಲಾವತಾರಗಳ ಮಂತ್ರ ಧ್ಯಾನಪೂರ್ವಕವಾದ ದೇವೀಪೂಜೆಯ ವಿಧಾನವನ್ನು ಕೇಳಿ ಸರ್ವಕ್ಕೂ ಆದಿ ಕಾರಣಳು, ಜಗನ್ಮಾತೆಯೂ ಆದ ಶ್ರೀರಾಧಾದೇವಿಯ ಅವತಾರ ಕಲೆಗಳ ಪೂಜಾವಿಧಾನವನ್ನು ವಿನಯದಿಂದ ಪ್ರಶ್ನಿಸಿದನು.

೩-೪. ನಾರದನು ಹೇಳಿದನು :—ಮುನಿಯೇ! ನಿನ್ನ ಅನುಗ್ರಹದಿಂದ ನಾನು ಜಗನ್ಮಾತೆಯ ಮಂತ್ರವೈಭವವನ್ನು ಕೇಳಿ ಧನ್ಯನು, ಕೃತಕೃತ್ಯನೂ ಆಗಿರುವೆನು. ಲಕ್ಷ್ಮೀದೇವಿಯೇ ಮುಂತಾದವರ ಅವತಾರಗಳ ವೈಭವವು

ಯಥಾ ಲಕ್ಷ್ಮ್ಯಾದಿಮುಖಾನಾಂ ತು ಅವತಾರಾಃ ಪ್ರಕೀರ್ತಿತಾಃ ।
ತಥಾ ರಾಧಾವತಾರಾಣಾಂ ಶ್ರೋತುಮಿಚ್ಛಾಮಿ ವೈಭವಂ ॥ ೪ ॥

ಯತ್ಸಂಖ್ಯಾಕಾಶ್ಚ ಯದ್ರೂಪಾ ಯತ್ಪ್ರಭಾವಾ ವಿದಾಂ ವರ ।
ರಾಧಾವತಾರಾಸ್ತಾನ್ಸರ್ವಾಂ ಕೀರ್ತಯಾಶೇಷಸಿದ್ಧಿದಾನ್ ॥ ೫ ॥

ಏತಚ್ಛ್ರುತ್ವಾ ವಚಸ್ತಸ್ಯ ನಾರದಸ್ಯ ವಿಧೇಃ ಸುತಃ ।
ಸನತ್ಕುಮಾರಃ ಪ್ರೋವಾಚ ಧ್ಯಾತ್ವಾ ರಾಧಾಪದಾಂಬುಜಂ ॥ ೬ ॥

ಸನತ್ಕುಮಾರ ಉವಾಚ

ಶೃಣು ವಿಪ್ರ ಪ್ರವಕ್ಷ್ಯಾಮಿ ರಹಸ್ಯಾತಿರಹಸ್ಯಕಂ ।
ರಾಧಾವತಾರಚರಿತಂ ಭಜತಾಮಿಷ್ಟಸಿದ್ಧಿದಂ ॥ ೭ ॥

---

ನಿನ್ನಿಂದ ಹೇಳಲ್ಪಟ್ಟಿತು. ಅದರಂತೆಯೇ ರಾಧಾದೇವಿಯ ಅವತಾರವೈಭವವನ್ನು ಕೇಳಬಯಸುವೆನು.

೫. ಜ್ಞಾನಿಶ್ರೇಷ್ಠನೇ! ರಾಧಾದೇವಿಯ ಅವತಾರಗಳೆಷ್ಟು? ಅವು ಎಂತಹವುಗಳು? ಅವುಗಳ ಸಾಮರ್ಥ್ಯವಾದರೂ ಎಂತಹುದು? ಸಕಲಸಿದ್ಧಿದಾಯಕಗಳಾದ ಅವುಗಳನ್ನು ಯಥಾವತ್ತಾಗಿ ಹೇಳು.

೬. ನಾರದನ ಈ ಮಾತನ್ನು ಕೇಳಿ ಬ್ರಹ್ಮಪುತ್ರನಾದ ಸನತ್ಕುಮಾರನು ರಾಧಾದೇವಿಯ ಚರಣಕಮಲಕ್ಕೆರಗಿ ಹೇಳತೊಡಗಿದನು.

೭. ಸನತ್ಕುಮಾರನು ಹೇಳಿದನು:—ಬ್ರಾಹ್ಮಣನಾದ ನಾರದನೇ! ರಹಸ್ಯಗಳಲ್ಲೆಲ್ಲಾ ಅತ್ಯಂತ ರಹಸ್ಯವಾದ, ಭಜಿಸುವವರಿಗೆ ಇಷ್ಟಾರ್ಥಪ್ರದವಾದ ರಾಧಾದೇವಿಯ ಅವತಾರಚರಿತ್ರೆಯನ್ನು ಹೇಳುವೆನು, ಕೇಳು.

ಚಂದ್ರಾವಲೀ ಚ ಲಲಿತಾ ದ್ವೇ ಸಖ್ಯೌ ಸುಪ್ರಿಯೇ ಸದಾ ।
ಮಾಲಾವತೀಮುಖಾಷ್ಟಾನಾಂ ಚಂದ್ರಾವಲ್ಯಧಿಪಾ ಸ್ಮೃತಾ ॥ ೮ ॥

ಕಲಾವತೀಮುಖಾಷ್ಟಾನಾಮೀಶ್ವರೀ ಲಲಿತಾ ಮತಾ ।
ರಾಧಾಚರಣಪೂಜಾಯಾಮುಕ್ತಾ ಮಾಲಾವತೀಮುಖಾಃ ॥ ೯ ॥

ಲಲಿತಾಧೀಶ್ವರೀಣಾಂ ತು ನಾಮಾನಿ ಶೃಣು ಸಾಂಪ್ರತಂ ।
ಕಲಾವತೀ ಮಧುಮತೀ ವಿಶಾಖಾ ಶ್ಯಾಮಲಾಭಿಧಾ ॥ ೧೦ ॥

ಶೈಬ್ಯಾ ವೃಂದಾ ಶ್ರೀಧರಾಖ್ಯಾ ಸರ್ವಾಸ್ತತ್ತುಲ್ಯವಿಗ್ರಹಾಃ ।
ಸುಶೀಲಾಪ್ರಮುಖಾಶ್ಚಾನ್ಯಾಃ ಸಖ್ಯೋ ದ್ವಾತ್ರಿಂಶದೀರಿತಾಃ ॥ ೧೧ ॥

---

೮. ಚಂದ್ರಾವಳಿ, ಲಲಿತೆ ಎಂಬೀರ್ವರು ಯಾವಾಗಲೂ ರಾಧಾದೇವಿಗೆ ಅತ್ಯಂತ ಪ್ರಿಯಸಖಿಯರು. ಮಾಲಾವತೀ ಮುಂತಾದ ಎಂಟು ಜನ ಸಖಿಯರಿಗೂ ಚಂದ್ರಾವಳಿಯೇ ಒಡೆಯಳು.

೯. ಕಲಾವತೀ ಮುಂತಾದ ಎಂಟು ಜನರಿಗೆ ಲಲಿತೆಯೇ ಈಶ್ವರಿಯು. ರಾಧಾಚರಣಪೂಜೆಯ ಸಂದರ್ಭದಲ್ಲಿ ಮಾಲತೀ ಮುಂತಾದವರೂ ಪೂಜ್ಯರೆಂದು ವಿಹಿತರಾಗಿರುವರು.

೧೦-೧೫. ಈಗ ಲಲಿತಾ ಮುಂತಾದ ಈಶ್ವರಿಯರ ಹೆಸರನ್ನು ಹೇಳುವೆನು ಕೇಳು :—

ಕಲಾವತೀ, ಮಧುಮತೀ, ವಿಶಾಖಾ, ಶ್ಯಾಮಲಾಭಿಧಾ, ಶೈಬ್ಯಾ, ವೃಂದಾ ಮತ್ತು ಶ್ರೀಧರಾ ಇವರೇ ಲಲಿತಾದಿ ಈಶ್ವರಿಯರು. ಇವರೆಲ್ಲರೂ ಆ ದೇವಿಗೆ ಸಮಾನವಾದ ಶರೀರವುಳ್ಳವರು. ಸುಶೀಲಾ ಮುಂತಾದ ಇತರ ಸಖಿಯರು ಮೂವತ್ತೆರಡು ಜನರೆಂದು ಉಕ್ತರಾಗಿರುವರು.

ಶಾಃ ಶೃಣುಷ್ವ ಮಹಾಭಾಗ ನಾಮತಃ ಪ್ರವದಾಮಿ ತೇ |
ಸುಶೀಲಾ ಶಶಿಲೇಖಾ ಚ ಯಮುನಾ ಮಾಧವೀ ರತಿಃ || ೧೨ ||

ಕದಂಬಮಾಲಾ ಕುಂತೀ ಚ ಜಾಹ್ನವೀ ಚ ಸ್ವಯಂಪ್ರಭಾ |
ಚಂದ್ರಾನನಾ ಪದ್ಮಮುಖೀ ಸಾವಿತ್ರೀ ಚ ಸುಧಾಮುಖೀ || ೧೩ ||

ಶುಭಾ ಪದ್ಮಾ ಪಾರಿಜಾತಾ ಗೌರಿಣೀ ಸರ್ವಮಂಗಲಾ |
ಕಾಲಿಕಾ ಕಮಲಾ ದುರ್ಗಾ ವಿರಜಾ ಭಾರತೀ ಸುರಾ || ೧೪ ||

ಗಂಗಾ ಮಧುಮತೀ ಚೈವ ಸುಂದರೀ ಚಂದನಾ ಸತೀ |
ಅಪರ್ಣಾ ಮನಸಾ ನಂದಾ ದ್ವಾತ್ರಿಂಶದ್ರಾಧಿಕಾಪ್ರಿಯಾಃ || ೧೫ ||

ಕದಾಚಿಲ್ಲಲಿತಾ ದೇವೀ ಪುಂರೂಪಾ ಕೃಷ್ಣವಿಗ್ರಹಾ |
ಸಸರ್ಜ ಷೋಡಶಕಲಾಸ್ತಾಃ ಸರ್ವಾಸ್ತತ್ಸಮಪ್ರಭಾಃ || ೧೬ ||

---

ಮಹಾಶಯನೇ! ಆ ಮೂವತ್ತೆರಡು ಸಖಿಯರ ಹೆಸರನ್ನು ನಿನಗೆ ಹೇಳುವೆನು ಕೇಳು :—

ಸುಶೀಲಾ, ಶಶಿಲೇಖಾ, ಯಮುನಾ, ಮಾಧವೀ, ರತಿಕ, ಕದಂಬ ಮಾಲಾ, ಕುಂತೀ, ಜಾಹ್ನವೀ, ಸ್ವಯಂಪ್ರಭಾ, ಚಂದ್ರಾನನಾ, ಪದ್ಮಮುಖೀ, ಸಾವಿತ್ರೀ, ಸುಧಾಮುಖೀ, ಶುಭಾ, ಪದ್ಮಾ, ಪಾರಿಜಾತಾ, ಗೌರಿಣೀ, ಸರ್ವ ಮಂಗಳಾ, ಕಾಲಿಕಾ, ಕಮಲಾ, ದುರ್ಗಾ, ವಿರಜಾ, ಭಾರತೀ, ಸುರಾ, ಗಂಗಾ, ಮಧುಮತೀ, ಸುಂದರೀ, ಚಂದನಾ, ಸತೀ, ಅಪರ್ಣಾ, ಮನಸಾ, ನಂದಾ ಎಂಬೀ ಮೂವತ್ತೆರಡು ಮಂದಿಯು ರಾಧಾದೇವಿಯ ಪ್ರಿಯಸಖಿಯರು.

೧೬. ಒಂದಾನೊಂದುಕಾಲದಲ್ಲಿ ಲಲಿತಾದೇವಿಯು ಕೃಷ್ಣನಂತೆ ಪುರುಷ ಶರೀರವನ್ನು ಧರಿಸಿ ಷೋಡಶಕಲೆಗಳನ್ನು ಸೃಷ್ಟಿಸಿದಳು. ಅವೆಲ್ಲವೂ, ಆ ದೇವಿಗೆ ಸಮಾನವಾದ ಕಾಂತಿಯುಳ್ಳವುಗಳಾಗಿದ್ದುವು

**ತಾಸಾಂ ಮಂತ್ರಂ ತಥಾ ಧ್ಯಾನಂ ಯಂತ್ರಾರ್ಚಾದಿಕ್ರಮಂ ತಥಾ ।**
**ವರ್ಣಯೇ ಸರ್ವತಂತ್ರೇಷು ರಹಸ್ಯಂ ಮುನಿಸತ್ತಮ ॥ ೧೭ ॥**

**ವಾತೋ ಮರುಚ್ಚಾಗ್ನಿವಹ್ನೀ ಧರಾಕ್ಷ್ಮೇ ಜಲಚಾರಿಣೇ ।**
**ವಿಭು ಖಂ ಚರಶುಚಿಭೂವನಸ್ಸ್ವಶಕ್ತಯಃ ಸ್ವರಾಃ ॥ ೧೮ ॥**

---

೧೭. ಮುನಿಶ್ರೇಷ್ಠನೇ! ತಂತ್ರಗಳಲ್ಲೆಲ್ಲಾ ಗೋಪ್ಯವಾಗಿರುವ ಆ ಕಲೆಗಳ ಮಂತ್ರ, ಧ್ಯಾನ, ಯಂತ್ರ, ಪೂಜಾವಿಧಾನ ಮುಂತಾದುವನ್ನು ಹೇಳುವೆನು.

೧೮-೨೧. ಆದಿಯಲ್ಲಿ ವಾಙ್ಮಯದಲ್ಲಡಗಿರುವ ಐವತ್ತು ಅಕ್ಷರಗಳ ಸಂಕೇತವು ಉಕ್ತವಾಗಿದೆ. ಪಂಚಭೂತಗಳಲ್ಲಿ ಒಂದೊಂದು ಭೂತವಾಚಕ ಶಬ್ದವೂ ಹತ್ತು ಹತ್ತು ವರ್ಣಗಳಿಗೆ ಸಂಕೇತವಾಗುವುದು.*

ಹೇಗೆಂದರೆ :—ವಾಯು, ಅಗ್ನಿ, ಪೃಥಿವೀ, ಜಲ, ಆಕಾಶ ಎಂಬ ಪಂಚಭೂತಗಳಲ್ಲಿ ಒಂದೊಂದಕ್ಕೂ ಬೋಧಕವಾದ ಹತ್ತು ಪರ್ಯಾಯ ಶಬ್ದಗಳಿವೆ. ಐದಕ್ಕೆ ಐವತ್ತು ಪರ್ಯಾಯ ಶಬ್ದಗಳಾದುವು. ಅವುಗಳಲ್ಲಿ ಒಂದೊಂದು ಶಬ್ದವು ಒಂದೊಂದು ವರ್ಣಕ್ಕೆ ಸಂಕೇತವಾಗಿ ಒಟ್ಟಿನಲ್ಲಿ ಐವತ್ತು ವರ್ಣಗಳಿಗೆ ಪಂಚಭೂತಶಬ್ದಗಳು ಸಂಜ್ಞೆಗಳಾಗುವುವು ಎಂಬುದು ಈ ಶ್ಲೋಕಗಳಿಂದ ವಿವರಿಸಲ್ಪಡುತ್ತದೆ. (ಭೂತ ಮಾತೃಕೆಗಳನ್ನು ತಂತ್ರರಾಜದ 35 ನೇ ಪಟಲದಲ್ಲಿಯೂ ವಿವರಿಸಿರುವರು.)

---

***ಪಂಚಭೂತವರ್ಣಕೋಷ್ಟಕ**

| | | | | | | | | | | |
|---|---|---|---|---|---|---|---|---|---|---|
| ವಾಯು | ಅ. | ಆ, | ಏ, | ಕ, | ಚ, | ಟ, | ತ, | ಪ. | ಯ, | ಷ. |
| ಅಗ್ನಿ | ಇ, | ಈ, | ಐ, | ಖ. | ಛ, | ಠ, | ಥ, | ಫ, | ರ, | ಕ್ಷ. |
| ಪೃಥಿವೀ | ಉ, | ಊ, | ಓ, | ಗ, | ಜ, | ಡ, | ದ, | ಬ, | ಲ, | ಳ. |
| ಜಲ | ಋ, | ೠ, | ಔ, | ಘ, | ಝ, | ಢ, | ಧ, | ಭ, | ವ, | ಸ. |
| ಆಕಾಶ | ಌ, | ೡ, | ಅಂ, | ಙ, | ಞ, | ಣ, | ನ, | ಮ, | ಶ, | ಹ, |

**ವಿಸರ್ಗವು ಪಂಚಭೂತಾತ್ಮಕವು**

ಪ್ರಾಣಸ್ತೇಜಃ ಸ್ಥಿರಾ ವಾಯುರ್ವಾಯುಶ್ಚಾಪಿ ಪ್ರಭಾ ತಥಾ ।
ಜ್ಯಾಕುಮಭ್ರಂ ತಥಾ ನಾದೋ ದಾವಕಃ ಪಾಥ ಇತ್ಯಥ ॥ ೧೯ ॥

ವ್ಯೋಮ ರಯಃ ಶಿಖೀ ಗೋತ್ರಾ ತೋಯಂ ಶೂನ್ಯಜವೀ ದ್ಯುತಿಃ ।
ಭೂಮಿರಾ ರಸೋ ನಭೋ ವ್ಯಾಪ್ತಂ ದಾಹಶ್ಚಾಪಿ ರಸಾಂಬು ಚ ॥ ೨೦ ॥

ವಿಯತ್ಸ್ಪರ್ಶಶ್ಚ ಹೃದ್ಧಂಸ ಇಲಾ ಗ್ರಾಸೋ ಹಲಾತ್ಮಿಕಾಃ ।
ಚಂದ್ರಾವಲೀ ಚ ಲಲಿತಾ ಹಂಸೇಲಾ ನಾಯಕೇ ಮತೇ ॥ ೨೧ ॥

---

ವಾತ, ಮರುತ್, ಚರ, ಪ್ರಾಣ, ವಾಯು, ನಾದ, ರಯ, ಜವೀ, ವ್ಯಾಪ್ತ ಮತ್ತು ಸ್ಪರ್ಶಗಳೆಂಬ ಹತ್ತು ವಾಯುನಾಮಗಳು ಕ್ರಮವಾಗಿ ವಾಯು ವಿನ ಹತ್ತು ವರ್ಣಗಳಿಗೆ ಸಂಕೇತಗಳು.

ಅಗ್ನಿ, ವಹ್ನಿ, ಶುಚಿ, ತೇಜಸ್ಸು, ಪ್ರಭಾ, ದಾವ, ಶಿಖಿ, ದ್ಯುತಿ, ದಾಹ ಮತ್ತು ಗ್ರಾಸ ಎಂಬೀ ಹತ್ತು ತೇಜಸ್ಸಿನ ನಾಮಗಳು ಕ್ರಮವಾಗಿ ತೇಜೋವರ್ಣಗಳಿಗೆ ಸಂಜ್ಞೆಗಳಾಗುವುವು.

ಧರಾ, ಕ್ಷ್ಮಾ, ಭೂ, ಸ್ಥಿರಾ, ಜ್ಯಾ, ಕು, ಗೋತ್ರಾ, ಭೂಮಿ, ರಸಾ ಮತ್ತು ಇಲಾ ಎಂಬೀ ಹತ್ತು ಪೃಥಿವೀ ನಾಮಗಳು ಕ್ರಮವಾಗಿ ಪಾರ್ಥಿವ ವರ್ಣಗಳಿಗೆ ಸಂಕೇತಗಳು.

ಜಲ, ವಾರಿ, ವನ. ವಾಃ, ಕಂ, ಪಾಥಸ್ಸು, ತೋಯ, ರಸ, ಅಂಬು ಮತ್ತು ಹೃತ್ ಈ ಹತ್ತು ಜಲನಾಮಗಳು ಹತ್ತು ಜಲೀಯ ವರ್ಣಗಳಿಗೆ ಸಂಕೇತಗಳು.

ವಿಭು, ಖಂ, ಖ, ದ್ಯು, ಅಭ್ರ, ವ್ಯೋಮ, ಶೂನ್ಯ, ನಭಸ್ಸು, ವಿಯತ್ ಮತ್ತು ಹಂಸ ಎಂಬೀ ಹತ್ತು ಆಕಾಶ ನಾಮಗಳು ಹತ್ತು ಆಕಾಶ ವರ್ಣಗಳಿಗೆ ಸಂಕೇತಗಳು. ಚಂದ್ರಾವಳೀ ಮತ್ತು ಲಲಿತೆಯರು ಹಂಸ, ಇಳೆ ಗಳಿಗೆ ನಾಯಿಕೆಯರು.

ಗ್ರಾಸಸ್ಥಿತಾ ಸ್ವಯಂ ರಾಧಾ ಸ್ವಯಂ ಶಕ್ತಿಸ್ವರೂಪಿಣೀ ।
ಶೇಷಾಸ್ತು ಷೋಡಶಕಲಾ ದ್ವಾತ್ರಿಂಶತ್ತತ್ಕಲಾ ಸ್ಮೃತಾಃ ॥ ೨೨ ॥

ವಾಙ್ಮಯಂ ನಿಖಿಲಂ ವ್ಯಾಪ್ತಮಾಭಿರೇವ ಮುನೀಶ್ವರ ।
ಲಲಿತಾಪ್ರಮುಖಾಣಾಂ ತು ಷೋಡಶೀತ್ವಮುಪಾಗತಾ ॥ ೨೩ ॥

ಶ್ರೀರಾಧಾ ಸುಂದರೀ ದೇವೀ ತಾಂತ್ರಿಕೈಃ ಪರಿಕೀರ್ತ್ಯತೇ ।
ಕುರುಕುಲ್ಲಾ ಚ ವಾರಾಹೀ ಚಂದ್ರಾಲಿಲಲಿತೇ ಉಭೇ ॥ ೨೪ ॥

ಸಂಭೂತಂ ಮಂತ್ರವರ್ಗಂ ತೇಽಭಿಧಾಸ್ಯೇಽಹಂ ಯಥಾತಥಂ ।
ಹೃತ್ಪ್ರಾಣೇಲಾಹಂಸದಾಹವಹ್ನಿಸ್ವೈರ್ಲಲಿತೇರಿತಾ ॥ ೨೫ ॥

---

೨೨. ಸಾಕ್ಷಾಚ್ಛಕ್ತಿಸ್ವರೂಪಿಣಿಯಾದ ರಾಧಾದೇವಿಯು ಸ್ವತಃ ಗ್ರಾಸ (ಕ್ಷಕಾರ)ದಲ್ಲಿರುವಳು. ಉಳಿದ ಹದಿನಾರು ಕಲೆಗಳು ಮತ್ತು ಅವುಗಳ ಮೂವತ್ತೆರಡು ಕಲೆಗಳು ಉಕ್ತವಾಗಿವೆ.

೨೩. ಈ ಕಲೆಗಳಿಂದಲೇ ಸಕಲ ವಾಙ್ಮಯವೂ ವ್ಯಾಪ್ತವಾಗಿದೆ. ಮುನೀಶ್ವರನೇ! ಲಲಿತಾ ಮುಂತಾದವರು ಹದಿನಾರು ಶಕ್ತಿಗಳಿರುವರು.

೨೪. ಶ್ರೀ ರಾಧೆಯು ಸುಂದರೀ, ದೇವೀ, ಕುರುಕುಲ್ಲಾ, ವಾರಾಹೀ, ಚಂದ್ರಾಳೀ ಮತ್ತು ಲಲಿತಾ ಎಂಬುದಾಗಿ ತಾಂತ್ರಿಕರಿಂದ ಉಕ್ತಳಾಗಿರುವಳು.

೨೫. ಮುನೀಶ್ವರನೇ! ಭೂತಮಂತ್ರ ಸಹಿತವಾಗಿ ಲಲಿತಾದಿ ಷೋಡಶ ದೇವಿಯರ ಮಂತ್ರಗಳನ್ನು ನಿನಗೆ ಯಥಾವತ್ತಾಗಿ ಹೇಳುವೆನು.

## ಲಲಿತಾವಿದ್ಯೆ

ಹೃತ್= ಸ, ಪ್ರಾಣ= ಕ, ಇಲಾ= ಲ, ಹಂಸ= ಹ+ದಾಹ= ರ+ ವಹ್ನಿ= ಈ+ಸ್ವಂ= ಂ= ಹ್ರೀಂ) "ಸಕಲ ಹ್ರೀಂ" ಎಂಬುದು ಲಲಿತಾ ವಿದ್ಯೆಯೆನಿಸುವುದು.

ತ್ರಿವಿಧಾ ಹಂಸಭೇದೇನ ಶೃಣು ತಾಂ ಚ ಯಥಾಕ್ರಮಂ |
ಹಂಸಾದ್ಯಯಾದ್ಯಾ ಮಧ್ಯಾ ಸ್ಯಾದಾದಿಮಧ್ಯಸ್ಥಹಂಸಯಾ || ೨೬ ||

ತೃತೀಯಾ ಪ್ರಕೃತಿಃ ಸೈವ ತುರ್ಯಾ ತೈರಂತ್ಯಮಾಯಯಾ |
ಆಸು ತುರ್ಯಾ ಭವೇನ್ಮುಕ್ತ್ಯೈ ತಿಸ್ರೋಽನ್ಯಾಃ ಸ್ಯುಶ್ಚ ಸಂಪದೇ || ೨೭ ||

ಇತಿ ತ್ರಿಪುರಸುಂದರ್ಯಾ ವಿದ್ಯಾ ಸಮ್ಯಕ್ಸಮೀರಿತಾ |
ಪ್ರಾಣಭೂಮೀ ರಸಾಕ್ಷ್ಮಾಸ್ತ್ರೈರ್ವಶಿನೀಬೀಜಮೀರಿತಂ || ೨೮ ||

---

೨೬-೨೭. ಆ ವಿದ್ಯೆಯು ಹ ಎಂಬ ವರ್ಣಸಂಯೋಜನೆಯ ವ್ಯತ್ಯಾಸದಿಂದ ಮೂರು ವಿಧವಾಗುವುದು.

ಹೇಗೆಂದರೆ :—ಲಲಿತಾ ವಿದ್ಯೆಗೆ ಆದಿಯಲ್ಲಿ ಹಕಾರವನ್ನು ಸೇರಿಸುವುದರಿಂದ "ಹಸಕಲ ಹ್ರೀಂ" ಎಂದಾಗುವುದು. ಅದು ಮೊದಲನೆಯದು.

ಆದಿ ಮಧ್ಯಗಳಲ್ಲಿ ಹಕಾರವನ್ನು ಸೇರಿಸುವುದು ಎರಡನೆಯದು. "ಹಸಕಹಲ ಹ್ರೀಂ"

"ಸಕಲಹ್ರೀಂ" ಎಂಬ ಮೂಲವಿದ್ಯೆಯೇ ಮೂರನೆಯದು.

ಇವಲ್ಲದೆ ಪ್ರಥಮ ದ್ವಿತೀಯ ಮಂತ್ರಗಳಲ್ಲಿನ 'ಹ್ರೀಂ' ಎಂಬುದನ್ನು ಬಿಟ್ಟು ಮೂರು ಮಂತ್ರಗಳೂ ಸೇರಿ "ಹಸಕಲಹಸಕಹಲಸಕಲಹ್ರೀಂ" ಎಂಬುದು ನಾಲ್ಕನೆಯ ಲಲಿತಾ ವಿದ್ಯೆಯೆನಿಸುವುದು.

ಇವುಗಳಲ್ಲಿ ನಾಲ್ಕನೆಯದು ಮೋಕ್ಷದಾಯಕವು. ಉಳಿದ ಮೂರು ಸಂಪತ್ಪ್ರದಗಳು ಎಂದು ತಿಳಿಯಬೇಕು.

೨೮. ಈ ರೀತಿಯಾಗಿ ತ್ರಿಪುರಸುಂದರೀ ವಿದ್ಯೆಯು ಸಪರಿಕರವಾಗಿ ಉಕ್ತವಾಯಿತು.

ಪ್ರಾಣ ಭೂಮೀರಸಾಕ್ಷ್ಮಾಸ್ತ್ರೈಃ= ರೇಫ (ರ) ವಕಾರ ಲಕಾರ ಊಕಾರ ಬಿಂದುಗಳನ್ನೊಳಗೊಂಡಿರುವ "ವ್ಲ್ರೂಂ" ಎಂಬುದು ವಶಿನೀ ಬೀಜಾಕ್ಷರವು.

ಪ್ರಾಣೋ ರಸಾಶಕ್ತಿಯುತಃ ಕಾಮೇಶ್ವರ್ಯಕ್ಷರಂ ಮಹತ್ ।
ಶೂನ್ಯಮಂಬುರಸಾವನ್ಹಿ ಸ್ವಯೋಗಾನ್ಮೋಹಿನೀ ಮನುಃ ॥ ೨೯ ॥

ವ್ಯಾಪ್ತಂ ರಸಾಕ್ಷ್ಮಾ ಸ್ವಯುತಂ ವಿಮಲಾಬೀಜಮೀರಿತಂ ।
ಜ್ಞಾನಭೋದಾಹವನ್ಹಿಸ್ವಯೋಗೈಃ ಸ್ಯಾದರುಣಾಮನುಃ ॥ ೩೦ ॥

ಹಂಸಃ ಸಹೃದ್ರಸಾಂಬುಃ ಸ್ಯಾದ್ವ್ಯಾಪ್ತಕ್ಷ್ಮಾಸ್ವೈರ್ಯುತೋ ಮನುಃ ।
ಜಯಿನ್ಯಾಸ್ತು ಸಮುದ್ದಿಷ್ಟಃ ಸರ್ವತ್ರ ಜಯದಾಯಕಃ ।
ಕಂ ನಭೋದಾಹಸಹಿತಂ ವ್ಯಾಪ್ತಕ್ಷ್ಮಾಸ್ವಯುತಂ ಮನುಃ ॥ ೩೧ ॥

---

೨೯. ಪ್ರಾಣ= ಕ, ರಸಾ= ಲ, ಶಕ್ತಿ= ಹ್ರೀಂ ಇವನ್ನೊಳಗೊಂಡ "ಕ್ಲ್ಹ್ರೀಂ" ಎಂಬುದು ಕಾಮೇಶ್ವರೀ ಬೀಜಾಕ್ಷರವು.

ಶೂನ್ಯ= ನ್, ಅಂಬುರಸಾವನ್ಹಿಸ್ವಯೋಗಾತ= ವ, ಲ, ಈ ಮತ್ತು ಬಿಂದುಗಳ ಸಹಿತವಾಗಿ "ನ್ವ್ಲೀಂ" ಎಂಬುದು ಮೋಹಿನೀ ಕೂಟಾಕ್ಷರ ವಿದ್ಯೆಯೆನಿಸುವುದು.

೩೦. ವ್ಯಾಪ್ತ= ಯ್, ರಸಾಕ್ಷ್ಮಾಸ್ವಯುತಂ = ಲಕಾರ ಉಕಾರ ಬಿಂದುಸಹಿತವಾಗಿ "ಯ್ಲೂಂ" ಎಂಬುದು ವಿಮಲಾಬೀಜವೆನಿಸುವುದು.

ಜ್ಞಾನಭೋದಾಹವನ್ಹಿಸ್ವಯೋಗೈಃ= ಜ, ಮ, ರೇಫ, ಈ ಮತ್ತು ಂ ಇವು ಸೇರಿ ಆಗುವ "ಜ್ಮ್ರೀಂ" ಎಂಬುದು ಅರುಣಾಕೂಟಾಕ್ಷರೀ ವಿದ್ಯೆಯು.

೩೧-೩೨. ಹಂಸ= ಹ್, ಸಹೃದ್ರಸಾಂಬು= ಸಕಾರ ಲಕಾರ ವಕಾರ ಸಹಿತವಾಗಿ ಮತ್ತು ವ್ಯಾಪ್ತಕ್ಷ್ಮಾಸ್ವೈರ್ಯುತ= ಯಕಾರ ಊಕಾರ ಬಿಂದುಗಳಿಂದಲೂ ಸಹಿತವಾಗಿ "ಹ್ಸ್ವ್ಲೂಂ" ಎಂಬುದು ಜಯಿನೀಕೂಟಾಕ್ಷರವಿದ್ಯೆಯು. ಅದು ಎಲ್ಲಾ ಕಾರ್ಯಗಳಲ್ಲಿಯೂ ಜಯದಾಯಕವೆಂದು ಉಕ್ತವಾಗಿದೆ.

**ಸರ್ವೇಶ್ವರ್ಯೋಃ ಸಮಾಖ್ಯಾತಃ ಸರ್ವಸಿದ್ಧಿಕರಃ ಪರಃ ।**
**ಗ್ರಾಸೋ ನಭೋದಾಹವಹ್ನಿಸ್ವೈರ್ಯುಕ್ತಃ ಕಾಲಿನೀ ಮನುಃ　॥ ೩೨ ॥**

**ಏತೈರ್ಮನುಭಿರಷ್ಟಾಭಿಃ ಶಕ್ತಿಭಿರ್ವರ್ಗಸಂಯುತೈಃ ।**
**ವಾಗ್ದೇವತಾಂತೈರ್ನ್ಯಾಸಃ ಸ್ಯಾದ್ಯೇನ ದೇವ್ಯಾತ್ಮಕೋ ಭವೇತ್　॥ ೩೩ ॥**

**ರಂಧ್ರೇ ಭಾಲೇ ತಥಾಜ್ಞಾಯಾಂ ಗಲೇ ಹೃದಿ ತಥಾ ನ್ಯಸೇತ್ ।**
**ನಾಭಾವಾಧಾರಕೇ ಪಾದದ್ವಯೋ ಮೂಲಾಗ್ರಕಾವಧಿ　॥ ೩೪ ॥**

---

ಈ= ಲವರ್ಣವು, ನಭೋದಾಹಸಹಿತಂ= ಮ, ರಸಹಿತವಾಗಿ ಮತ್ತು ವ್ಯಾಪ್ತಕ್ಷ್ಮಾ ಸ್ವಯುತಂ= ಯಕಾರ ಊಕಾರ ಬಿಂದುಗಳಿಂದಲೂ ಕೂಡಿ "ಲ್ಮ್ರ್ಯೂಂ" ಎಂಬುದು ಸಕಲ ಸಿದ್ಧಿದಾಯಕವಾದ ಸರ್ವೇಶ್ವರೀ ವಿದ್ಯೆಯು ಎಂಬುದಾಗಿ ಉಕ್ತವಾಗಿದೆ.

ಗ್ರಾಸ= ಕ್ಷಕಾರವು, ನಭೋದಾಹ ವಹ್ನಿ ಸ್ವೈರ್ಯುಕ್ತಃ= ಮ, ರ, ಈ, ಬಿಂದುಗಳಿಂದ ಸಹಿತವಾಗಿ "ಕ್ಷ್ಮ್ರೀಂ" ಎಂಬುದು ಕಾಲಿನೀ ಕೂಟಾಕ್ಷರ ವಿದ್ಯೆಯೆನಿಸಿರುವುದು.

೩೩. ಅ ಕ ಚ ಟ ತ ಪ ಯ ಕ್ಷ ಎಂಬ ಎಂಟು ವರ್ಗಗಳ ಅಕ್ಷರ ಗಳಲ್ಲಿ ಕ್ರಮವಾಗಿ ಒಂದೊಂದು ವರ್ಗದ ಅಕ್ಷರಗಳು, ಉಕ್ತವಾದ ಎಂಟು ವಿದ್ಯೆ ಗಳಲ್ಲಿ ಕ್ರಮವಾಗಿ ಒಂದೊಂದು ವಿದ್ಯೆಯು, ವಶಿನ್ಯಾದಿ ಎಂಟು ಶಕ್ತಿಗಳಲ್ಲಿ ಕ್ರಮವಾಗಿ ಒಂದೊಂದು ಶಕ್ತಿನಾಮಧೇಯ, ಕೊನೆಯಲ್ಲಿ ವಾಗ್ದೇವತಾ ಇವು ಗಳನ್ನು ಹೇಳಿ ನ್ಯಾಸಮಾಡಬೇಕು. ಈ ನ್ಯಾಸಮಾಡಿದರೆ ದೇವ್ಯಾತ್ಮಕ ಎಂದರೆ ದೇವಿಯ ಅನುಗ್ರಹಕ್ಕೆ ಪಾತ್ರನಾಗಿ ಸಾಯುಜ್ಯವನ್ನು ಪಡೆಯುವನು. (ಅ ಮುಂತಾದ ವರ್ಗೀಯಾಕ್ಷರಗಳನ್ನು ಅನುಸ್ವಾರ ಸಹಿತವಾಗಿ ಮೊದಲು ಹೇಳಿ ತರುವಾಯ ವಶಿನ್ಯಾದಿ ಕೂಟಾಕ್ಷರಗಳನ್ನೂ, ಅನಂತರ ವಶಿನೀ ವಾಗ್ದೇ ವತಾಯೈ ನಮಃ ಮುಂತಾಗಿ ಹೇಳುತ್ತಾ ನ್ಯಾಸಮಾಡಬೇಕೆಂದು ತಾತ್ಪರ್ಯ)

೩೪. ಬ್ರಹ್ಮರಂಧ್ರ, ಲಲಾಟ, ಭ್ರೂಮಧ್ಯ, ಕಂಠ, ಹೃದಯ, ನಾಭಿಮೂಲಾಧಾರ ಮತ್ತು ಕೆಳಗಿನಿಂದ ಮೇಲಿನವರೆಗೂ ಪಾದಗಳು ಎಂಬೀ

ಷಡ್ದೀರ್ಘಾಢ್ಯೇನ ಬೀಜೇನ ಕುರ್ಯಾಚ್ಚೈವ ಷಡಂಗಕಂ ।
ಲೋಹಿತಾಂ ಲಲಿತಾಂ ಬಾಣಚಾಪಪಾಶಸೃಣೀಃ ಕರೈಃ ॥ ೩೫ ॥

ದಧಾನಾಂ ಕಾಮರಾಜಾಂಕೇ ಯಂತ್ರಿತಾಂ ಮುದಿತಾಂ ಸ್ಮರೇತ್ ।
ಮಧ್ಯಸ್ಥದೇವೀ ತ್ವೇಕೈವ ಷೋಡಶಾಕಾರತಃ ಸ್ಥಿತಾ ॥ ೩೬ ॥

ತತಸ್ತಸ್ಯಾತ್ತನೌ ತಸ್ಯಾಸ್ತ್ವನ್ಯಾಃ ಪಂಚದಶಾರ್ಚಯೇತ್ ।
ಋಷಿಃ ಶಿವಶ್ಛಂದ ಉಕ್ತಾ ದೇವತಾ ಲಲಿತಾದಿಕಾಃ ॥ ೩೭ ॥

ಸರ್ವಾಸಾಮಪಿ ನಿತ್ಯಾನಾಮಾವೃತಿರ್ನಾಮಸಂಚಯೇ ।
ಪಟಲೇ ತು ಪ್ರಯೋಗಾಂಶ್ಚ ವಕ್ಷ್ಯಾಮ್ಯಗ್ರೇ ಸವಿಸ್ತರಂ ॥ ೩೮ ॥

---

ಎಂಟು ಸ್ಥಾನಗಳಲ್ಲಿ ಕ್ರಮವಾಗಿ ಹಿಂದೆ ಹೇಳಿರುವ ಮಂತ್ರವನ್ನು ಹೇಳುತ್ತಾ ನ್ಯಾಸಮಾಡಬೇಕು.

೩೫-೩೬. ಆರು ದೀರ್ಘಾಕ್ಷರಯುಕ್ತವಾದ ಬೀಜಾಕ್ಷರದಿಂದ ಷಡಂಗ ನ್ಯಾಸಮಾಡಬೇಕು.

ಧ್ಯಾನ :—ಕೆಂಪಗಿರುವವಳು, ಬಾಣ, ಧನುಸ್ಸು, ಪಾಶ ಮತ್ತು ಅಂಕುಶ ಗಳನ್ನು ಕರಗಳಲ್ಲಿ ಧರಿಸಿರುವವಳು, ಕಾಮರಾಜಾಂಕ ಯಂತ್ರದಲ್ಲಿ ವಿರಾಜಿಸುವ ವಳು, ಪ್ರಸನ್ನಮುಖಳೂ ಆಗಿರುವ ಲಲಿತಾ ದೇವಿಯನ್ನು ಧ್ಯಾನಿಸಬೇಕು.

೩೭. ಮಧ್ಯದಲ್ಲಿರುವ ದೇವಿಯೊಬ್ಬಳೇ ಹದಿನಾರು ಆಕಾರಗಳಿಂದ ಕೂಡಿರುವಳು. ಆದಕಾರಣ ಆ ಲಲಿತಾದೇವಿಯ ವಿಗ್ರಹದಲ್ಲಿಯೇ ಇತರ ಹದಿನೈದು ದೇವತೆಗಳನ್ನೂ ಪೂಜಿಸಬೇಕು.

ಈ ಮಂತ್ರಕ್ಕೆ ಶಿವನು ಋಷಿ, ಉಕ್ತಾ ಛಂದಸ್ಸು, ಲಲಿತಾದಿಗಳೇ ದೇವತೆಗಳು.

೩೮. ಈ ಷೋಡಶ ನಿತ್ಯೆಗಳ ಆವರಣ, ನಾಮ ಸಂಚಯಗಳನ್ನೂ ಪ್ರಯೋಗಗಳನ್ನೂ ಮುಂದೆ ವಿಸ್ತಾರವಾಗಿ ಪಟಲದಲ್ಲಿ ಹೇಳುವೆನು.

**ಅಥ ಷೋಡಶನಿತ್ಯಾಸು ದ್ವಿತೀಯಾ ಯಾ ಸಮೀರಿತಾ |**
**ಕಾಮೇಶ್ವರೀತಿ ತಾಂ ಸರ್ವಕಾಮದಾಂ ಶೃಣು ನಾರದ || ೩೯ ||**

**ಶುಚಿಃ ಸ್ವೇನಯುತಸ್ತಾಭ್ಯದ್ಯೋ ಲಲಿತಾ ಸ್ಯಾದ್ದ್ವಿತೀಯಕಃ |**
**ಶೂನ್ಯಮಗ್ನಿಯುತಂ ಪಶ್ಚಾದ್ರಯೋ ವ್ಯಾಪ್ತೇನ ಸಂಯುತಃ || ೪೦ ||**

**ಪ್ರಾಣೋ ರಸಾಗ್ನಿಸಹಿತಃ ಶೂನ್ಯಯುಗ್ಮಂ ಚರಾನ್ವಿತಂ |**
**ನಭೋ ಗೋತ್ರಾ ಪುನಶ್ಚೈಷಾ ದಾಹೇನ ಸಮಯೋಜಿತಾ || ೪೧ ||**

**ಅಂಬುಸ್ಯಾಚ್ಚರಸಂಯುಕ್ತಂ ವನಶಕ್ತಿಯುತಂ ಚ ಹೃತ್ |**
**ಏಷಾ ಕಾಮೇಶ್ವರೀ ನಿತ್ಯಾ ಕಾಮದೈಕಾದಶಾಕ್ಷರೀ || ೪೨ ||**

---

೩೯. ನಾರದನೇ! ಈಗ ಷೋಡಶ ನಿತ್ಯೆಗಳಲ್ಲಿ ಸಕಲೇಷ್ಟಾರ್ಥಪ್ರದಳಾದ ಎರಡನೆಯ ಕಾಮೇಶ್ವರೀ ದೇವಿಯ ಮಂತ್ರಾದಿಗಳನ್ನು ಹೇಳುವೆನು; ಕೇಳು.

## ಕಾಮೇಶ್ವರೀನಿತ್ಯಾಮಂತ್ರ

೪೦-೪೨. (ಸ್ವೇನಯುತಃ ಶುಚಿಃ= ಐಂ, ಲಲಿತಾ= ಸಕಲ ಹ್ರೀಂ, ಅಗ್ನಿಯುತಂ ಶೂನ್ಯಂ= ನಿ, ವ್ಯಾಪ್ತೇನ ಸಂಯುತಃ ರಯಃ= ತ್ಯ, ರಸಾಗ್ನಿ ಸಹಿತಃ ಪ್ರಾಣಃ= ಕ್ಲಿ, ಚರಾಚರಾನ್ವಿತಂ ಶೂನ್ಯಯುಗ್ಮಂ= ನ್ನೇ, ನಭಃ = ಮ, ಗೋತ್ರಾ= ದ, ಪುನಃ ದಾಹೇನ ಸಮಯೋಜಿತಾ ಏಷಾ= ದ್ರ, ಚರ ಸಂಯುಕ್ತಮಂಬು= ವೇ, ವನಶಕ್ತಿಯುತಂ ಹೃತ್= ಸೌಃ)

"ಐಂ ಸಕಲಹ್ರೀಂ ನಿತ್ಯಕ್ಲಿನ್ನೇ ಮದದ್ರವೇ ಸೌಃ" ಎಂಬುದು ಹನ್ನೊಂದಕ್ಷರಗಳನ್ನೊಳಗೊಂಡ ಇಷ್ಟಾರ್ಥಪ್ರದವಾದ ಕಾಮೇಶ್ವರೀ ನಿತ್ಯಾಮಂತ್ರವು. (ಇಲ್ಲಿ 'ಸಕಲಹ್ರೀಂ' ಎಂಬ ಲಲಿತಾವಿದ್ಯೆಯನ್ನು ಎರಡನೆಯ ಅಕ್ಷರವೆಂದು ಪರಿಗಣಿಸಿ ಹನ್ನೊಂದು ಅಕ್ಷರಗಳುಳ್ಳದೆಂದು ಹೇಳಿದೆ.)

ಷಡ್ದೀರ್ಘಾಢ್ಯೇನ ಬೀಜೇನ ಕುರ್ಯಾಚ್ಚೈವ ಷಡಂಗಕಂ ।
ಲೋಹಿತಾಂ ಲಲಿತಾಂ ಬಾಣಚಾಪಪಾಶಸೃಣೀಃ ಕರೈಃ ॥ ೩೫ ॥

ದಧಾನಾಂ ಕಾಮರಾಜಾಂಕೇ ಯಂತ್ರಿತಾಂ ಮುದಿತಾಂ ಸ್ಮರೇತ್ ।
ಮಧ್ಯಸ್ಥದೇವೀ ತ್ವೇಕೈವ ಷೋಡಶಾಕಾರತಃ ಸ್ಥಿತಾ ॥ ೩೬ ॥

ತತಸ್ತಸ್ಯಾಸ್ತನೌ ತಸ್ಯಾಸ್ತ್ವನ್ಯಾಃ ಪಂಚದಶಾರ್ಚಯೇತ್ ।
ಋಷಿಃ ಶಿವಶ್ಛಂದ ಉಕ್ತಾ ದೇವತಾ ಲಲಿತಾದಿಕಾಃ ॥ ೩೭ ॥

ಸರ್ವಾಸಾಮಪಿ ನಿತ್ಯಾನಾಮಾವೃತಿರ್ನಾಮಸಂಚಯೇ ।
ಪಟಲೇ ತು ಪ್ರಯೋಗಾಂಶ್ಚ ವಕ್ಷ್ಯಾಮ್ಯಗ್ರೇ ಸವಿಸ್ತರಂ ॥ ೩೮ ॥

---

ಎಂಟು ಸ್ಥಾನಗಳಲ್ಲಿ ಕ್ರಮವಾಗಿ ಹಿಂದೆ ಹೇಳಿರುವ ಮಂತ್ರವನ್ನು ಹೇಳುತ್ತಾ ನ್ಯಾಸಮಾಡಬೇಕು.

೩೫-೩೬. ಆರು ದೀರ್ಘಾಕ್ಷರಯುಕ್ತವಾದ ಬೀಜಾಕ್ಷರದಿಂದ ಷಡಂಗ ನ್ಯಾಸಮಾಡಬೇಕು.

ಧ್ಯಾನ :—ಕೆಂಪಗಿರುವವಳು, ಬಾಣ, ಧನುಸ್ಸು, ಪಾಶ ಮತ್ತು ಅಂಕುಶಗಳನ್ನು ಕರಗಳಲ್ಲಿ ಧರಿಸಿರುವವಳು, ಕಾಮರಾಜಾಂಕ ಯಂತ್ರದಲ್ಲಿ ವಿರಾಜಿಸುವವಳು, ಪ್ರಸನ್ನಮುಖಳೂ ಆಗಿರುವ ಲಲಿತಾ ದೇವಿಯನ್ನು ಧ್ಯಾನಿಸಬೇಕು.

೩೭. ಮಧ್ಯದಲ್ಲಿರುವ ದೇವಿಯೊಬ್ಬಳೇ ಹದಿನಾರು ಆಕಾರಗಳಿಂದ ಕೂಡಿರುವಳು. ಆದಕಾರಣ ಆ ಲಲಿತಾದೇವಿಯ ವಿಗ್ರಹದಲ್ಲಿಯೇ ಇತರ ಹದಿನೈದು ದೇವತೆಗಳನ್ನೂ ಪೂಜಿಸಬೇಕು.

ಈ ಮಂತ್ರಕ್ಕೆ ಶಿವನು ಋಷಿ, ಉಕ್ತಾ ಛಂದಸ್ಸು, ಲಲಿತಾದಿಗಳೇ ದೇವತೆಗಳು.

೩೮. ಈ ಷೋಡಶ ನಿತ್ಯೆಗಳ ಆವರಣ, ನಾಮ ಸಂಚಯಗಳನ್ನೂ ಪ್ರಯೋಗಗಳನ್ನೂ ಮುಂದೆ ವಿಸ್ತಾರವಾಗಿ ಪಟಲದಲ್ಲಿ ಹೇಳುವೆನು.

ಅಥ ಷೋಡಶನಿತ್ಯಾಸು ದ್ವಿತೀಯಾ ಯಾ ಸಮೀರಿತಾ |
ಕಾಮೇಶ್ವರೀತಿ ತಾಂ ಸರ್ವಕಾಮದಾಂ ಶೃಣು ನಾರದ　　|| ೩೯ ||

ಶುಚಿಃ ಸ್ವೇನಯುತಸ್ತಾಭ್ಯದ್ಯೋ ಲಲಿತಾ ಸ್ಯಾದ್ದ್ವಿತೀಯಕಃ |
ಶೂನ್ಯಮಗ್ನಿಯುತಂ ಪಶ್ಚಾದ್ರಯೋ ವ್ಯಾಪ್ತೇನ ಸಂಯುತಃ　　|| ೪೦ ||

ಪ್ರಾಣೋ ರಸಾಗ್ನಿಸಹಿತಃ ಶೂನ್ಯಯುಗ್ಮಂ ಚರಾನ್ವಿತಂ |
ನಭೋ ಗೋತ್ರಾ ಪುನಶ್ಚೈಷಾ ದಾಹೇನ ಸಮಯೋಜಿತಾ　　|| ೪೧ ||

ಅಂಬುಸ್ಯಾಚ್ಚರಸಂಯುಕ್ತಂ ವನಶಕ್ತಿಯುತಂ ಚ ಹೃತ್ |
ಏಷಾ ಕಾಮೇಶ್ವರೀ ನಿತ್ಯಾ ಕಾಮದೈಕಾದಶಾಕ್ಷರೀ　　|| ೪೨ ||

---

೩೯. ನಾರದನೇ! ಈಗ ಷೋಡಶ ನಿತ್ಯೆಗಳಲ್ಲಿ ಸಕಲೇಷ್ಟಾರ್ಥಪ್ರದಳಾದ ಎರಡನೆಯ ಕಾಮೇಶ್ವರೀ ದೇವಿಯ ಮಂತ್ರಾದಿಗಳನ್ನು ಹೇಳುವೆನು; ಕೇಳು.

## ಕಾಮೇಶ್ವರೀನಿತ್ಯಾಮಂತ್ರ

೪೦-೪೨. (ಸ್ವೇನಯುತಃ ಶುಚಿಃ= ಐಂ, ಲಲಿತಾ= ಸಕಲ ಹ್ರೀಂ, ಅಗ್ನಿಯುತಂ ಶೂನ್ಯಂ= ನಿ, ವ್ಯಾಪ್ತೇನ ಸಂಯುತಃ ರಯಃ= ತ್ಯ, ರಸಾಗ್ನಿ ಸಹಿತಃ ಪ್ರಾಣಃ= ಕ್ಲಿ, ಚರಾಚರಾನ್ವಿತಂ ಶೂನ್ಯಯುಗ್ಮಂ= ನ್ನೇ, ನಭಃ = ಮ, ಗೋತ್ರಾ= ದ, ಪುನಃ ದಾಹೇನ ಸಮಯೋಜಿತಾ ಏಷಾ= ದ್ರ, ಚರ ಸಂಯುಕ್ತಮಂಬು= ವೇ, ವನಶಕ್ತಿಯುತಂ ಹೃತ್= ಸೌಃ)

"ಐಂ ಸಕಲಹ್ರೀಂ ನಿತ್ಯಕ್ಲಿನ್ನೇ ಮದದ್ರವೇ ಸೌಃ" ಎಂಬುದು ಹನ್ನೊಂದಕ್ಷರಗಳನ್ನೊಳಗೊಂಡ ಇಷ್ಟಾರ್ಥಪ್ರದವಾದ ಕಾಮೇಶ್ವರೀ ನಿತ್ಯಾಮಂತ್ರವು. (ಇಲ್ಲಿ 'ಸಕಲಹ್ರೀಂ' ಎಂಬ ಲಲಿತಾವಿದ್ಯೆಯನ್ನು ಎರಡನೆಯ ಅಕ್ಷರವೆಂದು ಪರಿಗಣಿಸಿ ಹನ್ನೊಂದು ಅಕ್ಷರಗಳುಳ್ಳದೆಂದು ಹೇಳಿದೆ.)

ಮೂಲವಿದ್ಯಾಕ್ಷರೈರೇವ ಕುರ್ಯಾದಂಗಾನಿ ಷಟ್ಕ್ರಮಾತ್ ।
ಏಕೇನ ಹೃದಯಂ ಶೀರ್ಷಂ ತಾವತಾಥೋ ದ್ವಯಂ ದ್ವಯಾತ್ ॥ ೪೩ ॥

ಚತುರ್ಭಿರ್ನಯನಂ ತದ್ವದಸ್ತ್ರಮೇಕೇನ ಕೀರ್ತಿತಂ ।
ದೃಕ್‌ಶ್ರೋತ್ರನಾಸಾದ್ವಿತಯೇ ಜಿಹ್ವಾಹೃನ್ನಾಭಿಗುಹ್ಯಕೇ ॥ ೪೪ ॥

ವ್ಯಾಪಕತ್ವೇನ ಸರ್ವಾಂಗೇ ಮೂರ್ಧಾದಿಪ್ರಪದಾವಧಿ ।
ನ್ಯಸೇದ್ವಿದ್ಯಾಕ್ಷರಾಣ್ಯೇಷು ಸ್ಥಾನೇಷು ತದನಂತರಂ ॥ ೪೫ ॥

ಸಮಸ್ತೇನ ವ್ಯಾಪಕಂ ತು ಕುರ್ಯಾದುಕ್ತಕ್ರಮೇಣ ತು ।
ಅಥ ಧ್ಯಾನಂ ಪ್ರವಕ್ಷ್ಯಾಮಿ ನಿತ್ಯಾಪೂಜಾಸು ಚೋದಿತಂ ॥ ೪೬ ॥

ಯೇನ ದೇವೀ ಸುಪ್ರಸನ್ನಾ ದದಾತೀಷ್ಟಮಯತ್ನತಃ ।
ಬಾಲಾರ್ಕಕೋಟಿಸಂಕಾಶಾಂ ಮಾಣಿಕ್ಯಮುಕುಟೋಜ್ಜ್ವಲಾಂ ॥ ೪೭ ॥

೪೩-೪೬. ಈ ಮಂತ್ರದ ಅಕ್ಷರಗಳಲ್ಲಿ ಕ್ರಮವಾಗಿ ೧, ೧, ೩, ೩, ೪, ೧ ವರ್ಣಗಳಿಂದ ಹೃದಯಾದಿ ಷಡಂಗನ್ಯಾಸ ಮಾಡಬೇಕು. ಈ ಮಂತ್ರದ ವರ್ಣಗಳಲ್ಲೊಂದನ್ನು ಕ್ರಮವಾಗಿ ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ನಾಸಿಕಾ ರಂಧ್ರಗಳು, ಜಿಹ್ವೆ, ಹೃದಯ, ನಾಭಿ, ಗುಹ್ಯಾವಯವ, ಶಿರಸ್ಸಿನಿಂದ ಪಾದದವರೆಗಿನ ಸರ್ವಾಂಗಗಳು ಈ ಹನ್ನೊಂದು ಸ್ಥಾನಗಳಲ್ಲಿ ನ್ಯಾಸಮಾಡಬೇಕು. ಅನಂತರ ಸಂಪೂರ್ಣ ಮಂತ್ರದಿಂದ ಉಕ್ತರೀತಿಯಲ್ಲಿ ಸರ್ವಾಂಗನ್ಯಾಸ ಮಾಡಬೇಕು.

೪೭-೫೧ ಈಗ ನಿತ್ಯಾಪೂಜೆಗಳಲ್ಲಿ ವಿಹಿತವಾದ ಧ್ಯಾನಕ್ರಮವನ್ನು ಹೇಳುವೆನು. ಈ ಧ್ಯಾನದಿಂದ ದೇವಿಯು ಪ್ರಸನ್ನಳಾಗಿ ಆಯಾಸವಿಲ್ಲದೆ ಇಷ್ಟಾರ್ಥವನ್ನು ಕೊಡುವಳು

ಧ್ಯಾನ :—ಕೋಟ್ಯಂತರ ಬಾಲಸೂರ್ಯರಂತೆ ಹೊಳೆಯುತ್ತಿರುವ, ಮಾಣಿಕ್ಯದ ಕಿರೀಟದಿಂದ ಪ್ರಕಾಶಿಸುತ್ತಿರುವ, ಹಾರ-ಅಡ್ಡಿಕೆ-ಡಾಬು-ಉಂಗುರ ರುಳಿ ಮುಂತಾದುವುಗಳಿಂದ ಅಲಂಕರಿಸಲ್ಪಟ್ಟ, ಕೆಂಪುವಸ್ತ್ರವನ್ನುಟ್ಟಿರುವ, ರತ್ನ ಖಚಿತಾಭರಣಗಳನ್ನಿಟ್ಟುಕೊಂಡಿರುವ, ಆರು ಭುಜಗಳು ಮತ್ತು ಮೂರು ಕಣ್ಣು

ಹಾರಗ್ರೈವೇಯಕಾಂಚೀಭಿರೂರ್ಮಿಕಾನೂಪುರಾದಿಭಿಃ ।
ಮಂಡಿತಾಂ ರಕ್ತವಸನಾಂ ರತ್ನಾಭರಣಶೋಭಿತಾಂ　　॥ ೪೮ ॥

ಷಡ್ಭುಜಾಂ ತ್ರೀಕ್ಷಣಾಮಿಂದುಕಲಾಕಲಿತಮೌಲಿಕಾಂ ।
ಪಂಚಾಷ್ಟಷೋಡಶದ್ವಂದ್ವಷಟ್ಕೋಣಚತುರಸ್ರಗಾಂ　　॥ ೪೯ ॥

ಮಂದಸ್ಮಿತಲಸದ್ವಕ್ತ್ರಾಂ ದಯಾಮಂಥರವೀಕ್ಷಣಾಂ ।
ಪಾಶಾಂಕುಶೌ ಚ ಪುಂಡ್ರೇಕ್ಷುಚಾಪಂ ಪುಷ್ಪಶಿಲೀಮುಖಂ　　॥ ೫೦ ॥

ರತ್ನಪಾತ್ರಂ ಸೀಧುಪೂರ್ಣಂ ವರದಂ ಬಿಭ್ರತೀಂ ಕರೈಃ ।
ತತಃ ಪ್ರಯೋಗಾನ್ಕುರ್ವೀತ ಸಿದ್ಧೇ ಮಂತ್ರೇ ತು ಸಾಧಕಃ　　॥ ೫೧ ॥

ತೃತೀಯಾಮಥ ವಕ್ಷ್ಯಾಮಿ ನಾಮ್ನಾ ತು ಭಗಮಾಲಿನೀ ।
ಕಾಮೇಶ್ವರ್ಯಾದಿರಾದಿ ಸ್ಯಾದ್ರಸಶ್ಚಾಥಸ್ಥಿರಾರಸಃ　　॥ ೫೨ ॥

---

ಗಳುಳ್ಳ, ಚಂದ್ರಕಳೆಯಿಂದ ಆವರಿಸಲ್ಪಟ್ಟ ಶಿರಸ್ಸುಳ್ಳ, ೫, ೮, ೧೬, ೨, ೬ ಕೋಣಗಳನ್ನೊಳಗೊಂಡಿರುವ ಚತುರಸ್ರಮಂಡಲಸ್ಥಿತಳಾದ, ಮಂದಹಾಸದಿಂದ ವಿರಾಜಿಸುತ್ತಿರುವ ಮುಖವುಳ್ಳ, ದಯಾಭೂಯಿಷ್ಠದೃಷ್ಟಿಯುಳ್ಳ, ಪಾಶ ಅಂಕುಶ ಪುಂಡ್ರ ಧನುರ್ಬಾಣ ಪುಷ್ಪಬಾಣ ಮದ್ಯಪೂರ್ಣವಾದ ರತ್ನಪಾತ್ರೆ ವರದಾನ ಮುದ್ರೆ ಇವುಗಳನ್ನು ಕೈಗಳಲ್ಲಿ ಧರಿಸಿರುವ ದೇವಿಯನ್ನು ಧ್ಯಾನಿಸಬೇಕು.

ಮಂತ್ರಸಿದ್ಧಿಯನ್ನು ಹೊಂದಿದ ಬಳಿಕ ಸಾಧಕನು ಪ್ರಯೋಗಗಳನ್ನಾಚರಿಸಬೇಕು.

೫೨-೬೩. ಈಗ ಮೂರನೆಯದಾದ ಭಗಮಾಲಿನೀ ಎಂಬ ನಿತ್ಯಾದೇವಿಯ ಮಂತ್ರವನ್ನು ಹೇಳುವೆನು ;—(೫೨ನೆಯ ಶ್ಲೋಕದ ಉತ್ತರಾರ್ಧದಿಂದ ೬೩ನೆಯ

ಧರಾಯುಕ್ಸಚರಾ ಪಶ್ಚಾತ್ಸ್ಥಿರಾ ಪಶ್ಚಾದ್ರಸಃ ಸ್ಮೃತಃ ।
ಸ್ಥಿರಾ ಶೂನ್ಯೇಗ್ನಿಸಂಯುಕ್ತೇ ರಸಃ ಸ್ಯಾತ್ತದನಂತರಂ ॥ ೫೩ ॥

ಸ್ಥಿರಾ ಭೂಸಂಹಿತಾ ಗೋತ್ರಾ ಸದಾಹೋಗ್ನಿರಸಃ ಸ್ಥಿರಾ ।
ನಭಶ್ಚ ಮರುತಾ ಯುಕ್ತಂ ರಸಾಚರಸಮನ್ವಿತಾ ॥ ೫೪ ॥

ತತೋ ರಸಃ ಸ್ಥಿರಾ ಪಶ್ಚಾನ್ಮರುತಾ ಸಹ ಯೋಜಿತಾ ।
ಅಂಬುಹಂಸಶ್ಚ ಸಚರೋ ರಸೋಥ ಸ್ಯಾತ್ ಸ್ಥಿರಾ ಪುನಃ ॥ ೫೫ ॥

ಸ್ಥಿರಾ ಧರಾನ್ವಿತಾ ಹಂಸೋ ವ್ಯಾಪ್ತೇನ ಚ ಚರೇಣ ಚ ।
ರಸಃ ಸ್ಥಿರಾ ತತೋ ವ್ಯಾಪ್ತಂ ಭೂಯುತಂ ಶೂನ್ಯಮಗ್ನಿಯುಕ್ ॥ ೫೬ ॥

ರಸಃ ಸ್ಥಿರಾ ತತಃ ಸಾಗ್ನಿಶೂನ್ಯಂ ಜವಿಯುತೋ ಮರುತ್ ।
ರಯಃ ಶೂನ್ಯಂ ಚಾಗ್ನಿಯುತಂ ಹೃದ್ದಾಹರಸಾಂಬ್ವತಃ ಪರಂ ॥ ೫೭ ॥

ರಸಃಸ್ಥಿರಾಂಬು ಚ ವಿಯತ್ಸ್ವಯುತಂ ಪ್ರಾಣ ಏವ ಚ ।
ದಾಹೋಗ್ನಿಯುಗ್ರಸಸ್ತಸ್ಮಾತ್ಸ್ಥಿರಾಕ್ಷ್ಮಾ ದಾಹಸಂಯುತಾ ।
ಸಚರಃ ಸ್ಯಾಜ್ಜವೀ ಪೂರ್ವವಿದ್ಯಾ ಶಾರ್ಙೀಯುತಃ ಕ್ರಮಾತ್ ॥ ೫೮ ॥

ಚತುಷ್ಟಯಮಥಾರ್ಣಾನಾಂ ರಸಸ್ತದನು ಚ ಸ್ಥಿರಾ ।
ಹೃದಂಬುಯುಕ್ಷ್ಮಯಾ ದಾಹಃ ಸಚರಃ ಸ್ಯಾಜ್ಜವೀ ಚ ಹೃತ್ ॥೫೯॥

ಶ್ಲೋಕಪೂರ್ತಿಯಾಗಿ ಇಪ್ಪತ್ತೊಂದೂವರೆ ಶ್ಲೋಕಗಳಿಂದ ಭಗವಾಲಿನೀ ನಿತ್ಯಾ ಮಂತ್ರವು ಹೇಳಲ್ಪಟ್ಟಿದೆ. ಆದರಿಂದ ನಿಷ್ಪನ್ನವಾಗುವ ಮಂತ್ರವು ಈರೀತಿ ಯಾಗಿದೆ.)

ದಾಹೋಂಬುಮರುತಾ ಯುಕ್ತೋ ವ್ಯೋಮ್ನಿ ಸಾಗ್ನಿರಸಸ್ತತಃ ।
ಸ್ಥಿರಾ ತು ಮರುತಾ ಯುಕ್ತಾ ಶೂನ್ಯಂ ಸಾಗ್ನಿನಭಶ್ಚರೌ ॥ ೬೦ ॥

ಹಂಸೋ ವ್ಯಾಪ್ತಮರುದ್ಯುಕ್ತಃ ಶೂನ್ಯಂ ವ್ಯಾಪ್ತಮತೋಂಬು ಚ ।
ದಾಹೋ ಗೋತ್ರಾ ಚರಯುತಾ ತಥಾ ದಾಹಸ್ತಥಾ ರಯಃ ॥ ೬೧ ॥

ಹೃದ್ಧರಾಸಹಿತಂ ದಾಹರಯೌ ಚರಸಮನ್ವಿತಾ ।
ರಸಃ ಸ್ಥಿರಾ ತತಃ ಪ್ರಾಣೋ ರಸಾಗ್ನಿಸಹಿತೋ ಭವೇತ್ ॥ ೬೨ ॥

ಶೂನ್ಯಯುಗ್ಮಂ ಚರಯುತಂ ತತಃ ಪೂರ್ವಮತಃಪರಂ ।
ಶೂನ್ಯಯುಗ್ಮಂ ಚ ಗೋತ್ರಾ ಸ್ಯಾದ್ದಾಹಯುಕ್ತಾಂಬುನಾ ಚರಃ ॥ ೬೩ ॥

ಪ್ರಾಣೋ ರಸಾಚರಯುತೋ ಗೋತ್ರವ್ಯಾಪ್ತಮತಃ ಪರಂ ।
ಗೋತ್ರಾ ದಾಹಮರುದ್ಯುಕ್ತಾ ತ್ವಂಬುವ್ಯಾಪ್ತಮತೋ ಭವೇತ್ ॥ ೬೪ ॥

ವಾತೋ ನಭಶ್ಚ ಭೂಯುಕ್ತಂ ವಾಶ್ಚರೇಣ ಸಮನ್ವಿತಂ ।
ಗ್ರಾಸೋ ಧರಾಯುತಃ ಪಶ್ಚಾದ್ರಸಃ ಶಕ್ತ್ಯಾ ಸಮನ್ವಿತಃ ॥ ೬೫ ॥

ಗ್ರಾಸೋ ಭೂಸಹಿತೋ ವಿಪ್ರ ರಸೋ ವ್ಯಾಪ್ತಂ ತತಶ್ಚ ಹೃತ್ ।
ದಾಹೋ ನಾಂಬು ಚ ಹೃತ್ಪಶ್ಚಾದ್ರಯೋಂಬುಮರುದನ್ವಿತಃ ॥ ೬೬ ॥

---

## ಭಗಮಾಲಿನೀನಿತ್ಯಾಮಂತ್ರ

"ಐಂ ಭಗಭುಗೇ ಭಗಿನಿ ಭಗೋದರಿ ಭಗಮಾಲೇ ಭಗಾವಹೇ ಭಗ ಗುಹ್ಯೇ ಭಗಯೋನೇ ಭಗನಿಪಾತಿನಿ ಸರ್ವಭಗವಶಂಕರಿ ಭಗರೂಪೇ ನಿತ್ಯಕ್ಲಿನ್ನೇ ಭಗಸ್ವರೂಪೇ ಸರ್ವಾಣಿ ಭಗಾನಿ ಮೇ ಹ್ಯಾನಯ ವರದೇ ರೇತೇ ಸುರೇತೇ ಭಗಕ್ಲಿನ್ನೇ ಕ್ಲಿನ್ನದ್ರವೇ ಕ್ಲೇದಯ ದ್ರಾವಯ ಅಮೋಘೇ ಭಗವಿಚ್ಚೇಕ್ಷುಭ

ಶೂನ್ಯಂ ಚ ಕೇವಲಂ ಚೈವ ರಸಶ್ಚ ಸಚರಸ್ಥಿರಾ ।
ವಿಯದಂಬುಯುತಂ ದಾಹಸ್ತ್ವಗ್ನಿಯುತ್ಸಯುತಃ ಶುಚಿಃ ॥ ೬೭ ॥

ಭೂಮೀ ರಸಾ ಕ್ಷ್ಮಾಸ್ಸ್ವಯುತಾ ಪಂಚೈಕಾಂತರಿತಾಃ ಸ್ಥಿತಾಃ ।
ತದಂತರಿತಬೀಜಾನಿ ಸ್ವಸಂಯುಕ್ತಾನಿ ಪಂಚ ವೈ ॥ ೬೮ ॥

ತಾನಿ ಕ್ರಮಾಜ್ಜ್ಯಸಚರೋ ರಸೋ ಭೂಶ್ಚ ನಭೋಯುತಾ ।
ಹಂಸಶ್ಚರಯುತೋ ದ್ವಿಃ ಸ್ಯಾತ್ತತಃ ಪ್ರಾಣೋರಸಾಗ್ನಿಯುಕ್ ॥ ೬೯ ॥

ಶೂನ್ಯಯುಗ್ಮಂ ಚರಯುತಂ ಹೃದ್ದಾಹೋಂಬುಮರುದ್ಯುತಃ ।
ವ್ಯೋಮಾಗ್ನಿಸಹಿತಂ ಪಶ್ಚಾದ್ರಸಶ್ಚ ಮರುತಾ ಸ್ಥಿರಾ ॥ ೭೦ ॥

ಶೂನ್ಯಂ ಸಾಗ್ನಿ ನಭಶ್ಚೈವ ಚರೇಣ ಸಹಿತಂ ತಥಾ ।
ಅಂಬು ಪಶ್ಚಾದ್ವಿಯತ್ತಸ್ಮಾನ್ನಭಶ್ಚ ಮರುದನ್ವಿತಂ ॥ ೭೧ ॥

ಶೂನ್ಯಂ ವ್ಯಾಪ್ತಂ ಚ ಹೃದ್ಯುಕ್ತಂ ರಯದಾಹಸ್ವವಹ್ನಿಭಿಃ ।
ಹಂಸಃ ಸದಾಹೋಂಬುರಸಾ ಚರಸ್ವೈಃ ಸಂಯುತೋ ಭವೇತ್ ॥ ೭೨ ॥

ಹಂಸಃ ಸ್ಯಾದ್ದಾಹವಹ್ನಿಸ್ವೈರ್ಯುಕ್ತಮಂತ್ಯಮುದೀರಿತಂ ।
ಸಪ್ತತ್ರಿಂಶಚ್ಛತಾರ್ಣೈಃ ಸ್ಯಾನ್ನಿತ್ಯಾಸಾ ಭಗಮಾಲಿನೀ ॥ ೭೩ ॥

---

ಕ್ಷೋಭಯ ಸರ್ವಸತ್ವಾನ್ ಭಗೇಶ್ವರಿ ಐಂ ಬ್ಲೂಂ ಜಂ ಬ್ಲೂಂ ಭೇಂ ಬ್ಲೂಂ ಮೋಂ ಬ್ಲೂಂ ಹೇಂ ಬ್ಲೂಂ ಹೇಂ ಕ್ಲಿನ್ನೇ ಸರ್ವಾಣಿ ಭಗಾನಿ ಮೇ ವಶಮಾನಯ ಸ್ತ್ರೀಂ ಹರ ಬ್ಲೇಂ ಹ್ರೀಂ ಎಂಬುದು ಒಂದುನೂರು ಮೂವತ್ತೇಳು ವರ್ಣಗಳುಳ್ಳ ಭಗಮಾಲಿನೀನಿತ್ಯಾಮಂತ್ರವು.

ಅಂಗಾನಿ ಮಂತ್ರವರ್ಣೈಃ ಸ್ಯುರಾದ್ಯೇನ ಹೃದುದೀರಿತಂ ।
ತತಶ್ಚತುರ್ಭಿಃ ಶೀರ್ಷಂ ಸ್ಯಾಚ್ಛಿಖಾ ತ್ರಿಭಿರುದೀರಿತಾ || ೭೪ ||

ಗುಣವೇದಾಕ್ಷರೈಃ ಶೇಷಾಣ್ಯಂಗಾನಿ ಷಡಿತಿ ಕ್ರಮಾತ್ ।
ಅರುಣಾಮರುಣಾಕಲ್ಪಾಂ ಸುಂದರೀಂ ಸುಸ್ಮಿತಾನನಾಂ || ೭೫ ||

ತ್ರಿನೇತ್ರಾಂ ಬಾಹುಭಿಃ ಷಡ್ಭಿರುಪೇತಾಂ ಕಮಲಾಸನಾಂ ।
ಕಲ್ಹಾರಪಾಶಪುಂಡ್ರೇಕ್ಷುಕೋದಂಡಾನ್ವಾಮಬಾಹುಭಿಃ || ೭೬ ||

ದಧಾನಾಂ ದಕ್ಷಿಣೈಃ ಪದ್ಮಮಂಕುಶಂ ಪುಷ್ಪಸಾಯಕಂ ।
ತಥಾವಿಧಾಭಿಃ ಪರಿತೋ ಯುತಾಂ ಶಕ್ತಿಗಣೈಃ ಸ್ತುತೈಃ || ೭೭ ||

---

೭೪-೭೮. ಮಂತ್ರವರ್ಣಗಳಿಂದಲೇ ಷಡಂಗಗಳನ್ನು ನ್ಯಾಸಮಾಡಬೇಕು. ಹೇಗೆಂದರೆ :—ಈ ಮಂತ್ರದ ಮೊದಲನೆಯ ವರ್ಣದಿಂದ ಹೃದಯ, ಅನಂತರ ನಾಲ್ಕುವರ್ಣಗಳಿಂದ ಶಿರಸ್ಸು, ಬಳಿಕ ಮೂರು ವರ್ಣಗಳಿಂದ ಶಿಖೆ, ಅನಂತರ ನಾಲ್ಕು ವರ್ಣಗಳುಳ್ಳ ಮೂರು ಕೂಟಗಳಿಂದ ಕ್ರಮವಾಗಿ ಕವಚ ನೇತ್ರ ಮತ್ತು ಅಸ್ತ್ರಗಳನ್ನು ನ್ಯಾಸಮಾಡಬೇಕು.

ಧ್ಯಾನ :—ಅರುಣೆಯಂತೆ ಕೆಂಪಗಿರುವಳು, ಸುಂದರಳು, ಮಂದಹಾಸಯುಕ್ತವಾದ ಮುಖವುಳ್ಳವಳು, ಮೂರು ನೇತ್ರಗಳು ಮತ್ತು ಆರು ಬಾಹುಗಳೂ ಉಳ್ಳವಳು, ಪದ್ಮಾಸನಸ್ಥಿತಳು, ಕಲ್ಹಾರಪುಷ್ಪ ಪಾಶ ಪುಂಡ್ರ ಇಕ್ಷು ಧನುಸ್ಸುಗಳನ್ನು ಎಡಬಾಹುಗಳಿಂದಲೂ, ಪದ್ಮ ಅಂಕುಶ ಪುಷ್ಪಬಾಣಗಳನ್ನು ಬಲಗೈಗಳಿಂದಲೂ ಧರಿಸಿರುವವಳು, ಅಂತಹ ಮದನ ಮುಂತಾದ ಅಕ್ಷರಶಕ್ತಿಗಳು ಮತ್ತು ಕಾಮವಿಕಾರದಿಂದ ಮತ್ತರಾದ ಇತರ ಶಕ್ತಿಗಳು ಇವರಿಂದ ಸುತ್ತುಗಟ್ಟಲ್ಪಟ್ಟಿರುವ ಭಗಮಾಲಿನೀ ನಿತ್ಯಾದೇವಿಯನ್ನು ಧ್ಯಾನಿಸಬೇಕು.

**ಅಕ್ಷರೋಕ್ತಾಭಿರನ್ಯಾಭಿಃ ಸ್ಮರೋನ್ಮಾದಮದಾತ್ಮಭಿಃ ।**
**ಏಷಾ ತೃತೀಯಾ ಕಥಿತಾ ವನಿತಾಜನಮೋಹಿನೀ ॥ ೭೮ ॥**

**ಚತುರ್ಥೀಂ ಶೃಣು ವಿಪ್ರೇಂದ್ರ ನಿತ್ಯಕ್ಲಿನ್ನಾಸಮಾಹ್ವಯಾಂ ।**
**ಹಂಸಸ್ತು ದಾಹವಹ್ನಿಸ್ವೈರ್ಯುಕ್ತಃ ಪ್ರಥಮಮುಚ್ಯತೇ ॥ ೭೯ ॥**

**ಕಾಮೇಶ್ವರ್ಯಾಸ್ತೃತೀಯಾದಿವರ್ಣಾನಾಮಷ್ಟಕಂ ಭವೇತ್ ।**
**ಹೃದಂಬುಮರುತಾ ಯುಕ್ತಃ ಸ ಏವೈಕಾದಶಾಕ್ಷರಃ ॥ ೮೦ ॥**

**ಏಕಾದಶಾಕ್ಷರೀ ಚೇಯಂ ವಿದ್ಯಾರ್ಣೈರಂಗಕಲ್ಪನಂ ।**
**ಆದ್ಯೇನ ಮಂತ್ರವರ್ಣೇನ ಹೃದಯಂ ಸಮುದೀರಿತಂ ॥ ೮೧ ॥**

**ದ್ವಾಭ್ಯಾಂ ದ್ವಾಭ್ಯಾಂ ತು ಶೇಷಾಣಿ ಅಂಗಾನಿ ಪರಿಕಲ್ಪಯೇತ್ ।**
**ನ್ಯಸೇದಂಗುಷ್ಠಮೂಲಾದಿಕನಿಷ್ಠಾಗ್ರಾಂತಮೂರ್ಧ್ವಗಂ ॥ ೮೨ ॥**

---

ಈ ರೀತಿಯಾಗಿ ಸ್ತ್ರೀಜನಮೋಹಕವಾದ ಮೂರನೆಯ ನಿತ್ಯಾ ಮಂತ್ರವು ಉಕ್ತವಾಯಿತು.

೭೯-೮೦. ಬ್ರಾಹ್ಮಣಶ್ರೇಷ್ಠನೇ! ನಾಲ್ಕನೆಯದಾದ ನಿತ್ಯಕ್ಲಿನ್ನಾ ಎಂಬ ನಿತ್ಯಾದೇವಿಯ ಮಂತ್ರಾದಿಗಳನ್ನು ಹೇಳುವೆನು ಕೇಳು :—

## ಕ್ಲಿನ್ನಾಮಂತ್ರ

''ಹ್ರೀಂ ನಿತ್ಯಕ್ಲಿನ್ನೇ ಮದದ್ರವೇ ಸ್ವಾಹಾ" ಎಂಬೀ ಹನ್ನೊಂದು ಅಕ್ಷರಗಳನ್ನೊಳಗೊಂಡ ಮಂತ್ರವು ನಿತ್ಯಕ್ಲಿನ್ನಾ ಮಂತ್ರವೆನಿಸುವುದು.

೮೧-೮೨. ಈ ಏಕಾದಶಾಕ್ಷರೀ ವಿದ್ಯೆಯ ವರ್ಣಗಳಿಂದಲೇ ಷಡಂಗಗಳನ್ನು ರಚಿಸಬೇಕು. ಹೇಗೆಂದರೆ :—

ಈ ಮಂತ್ರದ ಮೊದಲನೆಯ ಅಕ್ಷರದಿಂದ ಹೃದಯ. ಉಳಿದ ಹತ್ತು ಅಕ್ಷರಗಳಲ್ಲಿ ಕ್ರಮವಾಗಿ ಎರಡೆರಡಕ್ಷರಗಳಿಂದ ಶಿರಸ್ಸು ಮುಂತಾದ ಐದು ಅಂಗಗಳು ಈರೀತಿಯಾಗಿ ಷಡಂಗಗಳ ನ್ಯಾಸಮಾಡಬೇಕು.

ಶೇಷಂ ತಲದ್ವಯೇ ನ್ಯಸ್ಯ ಹೃದ್ದೃಕ್ಶ್ರೋತ್ರೇ ನಸೋರ್ದ್ವಯೋಃ ।
ತ್ವಚಿ ಧ್ವಜೇ ಚ ಪಾಯೌ ಚ ಪಾದಯೋರರ್ಣಕಾನ್ನ್ಯಸೇತ್ || ೮೩ ||

ಅರುಣಾಮರುಣಾಕಲ್ಪಾಮರುಣಾಂಶುಕಧಾರಿಣೀಂ ।
ಅರುಣಸ್ರಗ್ವಿಲೇಪಾಂ ತಾಂ ಚಾರುಸ್ಮೇರಮುಖಾಂಬುಜಾಂ || ೮೪ ||

ನೇತ್ರತ್ರಯೋಲ್ಲಸದ್ವಕ್ತ್ರಾಂ ಭಾಲೇ ಘರ್ಮಾಂಬುಮೌಕ್ತಿಕೈಃ ।
ವಿರಾಜಮಾನಾಂ ಮುಕುಟಲಸದರ್ಧೇಂದುಶೇಖರಾಂ || ೮೫ ||

ಚತುರ್ಭಿರ್ಬಾಹುಭಿಃ ಪಾಶಮಂಕುಶಂ ಪಾನಪಾತ್ರಕಂ ।
ಅಭಯಂ ಬಿಭ್ರತೀಂ ಪದ್ಮಮಧ್ಯಾಸೀನಾಂ ಮದಾಲಸಾಂ || ೮೬ ||

---

ಬಳಿಕ ಹೆಬ್ಬೆಟ್ಟಿನ ಮೂಲದಿಂದ ಕಿಬ್ಬೆಟ್ಟಿನ ಕೊನೆಯವರೆಗೆ ಬೆಟ್ಟುಗಳಲ್ಲಿ ಕೆಳಗಿನಿಂದ ಮೇಲಕ್ಕೆ ಮಂತ್ರಾಕ್ಷರಗಳನ್ನು ನ್ಯಾಸಮಾಡಿ ಉಳಿದವರ್ಣಗಳನ್ನು ಎರಡು ಅಂಗೈಗಳಲ್ಲಿ ನ್ಯಾಸಮಾಡಬೇಕು. ಅನಂತರ ಈ ಮಂತ್ರದ ಒಂದೊಂದು ವರ್ಣವನ್ನು ಕ್ರಮವಾಗಿ ಹೃದಯ, ಎರಡು ಕಣ್ಣು ಕಿವಿ ಮೂಗುಗಳು, ಸರ್ವಾಂಗ ಶಿಶ್ನ, ಗುದ ಮತ್ತು ಪಾದ ಇವುಗಳಲ್ಲಿ ನ್ಯಾಸಮಾಡಬೇಕು.

೮೪-೮೬. ಧ್ಯಾನ :— ಅರುಣೆಯಂತೆ ಕೆಂಪಗಿರುವ, ಕೆಂಪುಗಿಳಿಯನ್ನು ಹಿಡಿದುಕೊಂಡಿರುವ, ಕೆಂಪುಮಾಲಿಕೆ ಮತ್ತು ಕೆಂಪುಗಂಧವನ್ನು ಲೇಪಿಸಿ ಕೊಂಡಿರುವ, ಮನೋಹರವಾದ ಮಂದಹಾಸಯುಕ್ತ ಮುಖಕಮಲವುಳ್ಳ ಮೂರು ಕಣ್ಣುಗಳಿಂದ ಪ್ರಕಾಶಮಾನವಾದ ಮುಖವುಳ್ಳ, ಹಣೆಯಮೇಲೆ ಬೆವರಿನ ತುಂತುರುಗಳೆಂಬ ಮುತ್ತುಗಳಿಂದ ಶೋಭಿಯುತ್ತಿರುವ, ಅರ್ಧಚಂದ್ರಯುಕ್ತ ಕಿರೀಟವನ್ನು ಶಿರಸ್ಸಿನಮೇಲೆ ಧರಿಸಿಕೊಂಡಿರುವ, ನಾಲ್ಕು ಕೈಗಳಿಂದ ಪಾಶ ಅಂಕುಶ ಪಾನಪಾತ್ರೆ ಅಭಯಮುದ್ರೆಗಳನ್ನು ಧರಿಸಿಕೊಂಡಿರುವ, ಮದದಿಂದ ಅಲಸಳಾದ, ಪದ್ಮಮಧ್ಯದಲ್ಲಿ ಕುಳಿತಿರುವ ನಿತ್ಯಕ್ಲಿನ್ನಾನಿತ್ಯಾದೇವಿಯನ್ನು ಧ್ಯಾನಿಸಿ ಶಕ್ತಿಗಳಸಹಿತವಾಗಿ ಪೂಜಿಸಬೇಕು.

ಧ್ಯಾತ್ವೈವಂ ಪೂಜಯೇನ್ನಿತ್ಯಕ್ಲಿನ್ನಾಂ ನಿತ್ಯಾಂ ಸ್ವಶಕ್ತಿಭಿಃ ।
ಪುಣ್ಯಾ ಚತುರ್ಥೀ ಗದಿತಾ ನಿತ್ಯಾಕ್ಲಿನ್ನಾಹ್ವಯಾ ಮುನೇ ॥ ೮೭ ॥

ವನಿತಾ ನವನೀತಸ್ಯ ದಾವಕೋಽಗ್ನಿರ್ಜಪಾದಿನಾ ।
ಭೂಃ ಸ್ವೇನ ಯುಕ್ತಾ ಪ್ರಥಮಂ ಪ್ರಾಣೋ ದಾಹೇನ ತದ್ಯುತಃ ॥ ೮೮ ॥

ರಸೋ ದಾಹೇನ ತದ್ಯುಕ್ತಂ ಪ್ರಭಾ ದಾಹೇನ ತದ್ಯುತಾ ।
ಜ್ಯಾ ಚ ದಾಹೇನ ತದ್ಯುಕ್ತಾ ನಿತ್ಯಕ್ಲಿನ್ನಾಂತಗದ್ವಯಂ ॥ ೮೯ ॥

ಏಷಾ ನವಾಕ್ಷರೀ ನಿತ್ಯಾ ಭೇರುಂಡಾ ಸರ್ವಸಿದ್ಧಿದಾ ।
ಪ್ರಣವಂ ಠದ್ವಯಂ ತ್ಯಕ್ತ್ವಾ ಮಧ್ಯಸ್ಥೈಃ ಷಡ್ಭಿರಕ್ಷರೈಃ ॥ ೯೦ ॥

ಷಡಂಗಾನಿ ಪ್ರಕುರ್ವೀತ ವರ್ಣನ್ಯಾಸಂ ತತಃ ಪರಂ ।
ರಂಧ್ರಾಜ್ಞಾಮುಖಕಂಠೇಷು ಹೃನ್ನಾಭ್ಯಾಧಾರಪದ್ದ್ವಯೇ ॥ ೯೧ ॥

---

ನಾರದ ಮುನಿಯೇ! ಈ ರೀತಿಯಾಗಿ ಪುಣ್ಯಕರವಾದ ನಿತ್ಯಕ್ಲಿನ್ನೆ ಎಂಬ ನಾಲ್ಕನೆಯ ನಿತ್ಯಾದೇವಿಯ ಮಂತ್ರಾದಿ ವಿಧಾನವು ಹೇಳಲ್ಪಟ್ಟಿತು.

೮೮-೮೯. ಭೇರುಂಡಾನಿತ್ಯಾಮಂತ್ರವನ್ನು ಜಪಿಸಿ ಸಿದ್ಧಿಯನ್ನು ಪಡೆದವನು ಮನ್ಮಥನಗಿಂತಲೂ ಸುಂದರನಾಗಿ ಸ್ತ್ರೀಯರೆಂಬ ಬೆಣ್ಣೆಯನ್ನು ಕರಗಿಸುವಂತಹ ಅಗ್ನಿಯಂತಾಗುವನು. ಎಂದರೆ ಈ ಮಂತ್ರಸಿದ್ಧನನ್ನು ನೋಡುವ ಮಾತ್ರದಿಂದ ಸ್ತ್ರೀಯರು ಅವನ ಸೌಂದರ್ಯಕ್ಕೆ ಮೋಹಿತರಾಗಿ ಅವನ ವಶರಾಗುವರೆಂದು ಭಾವ.

ಎಂಬತ್ತೆಂಟನೆಯ ಶ್ಲೋಕದ ಉತ್ತರಾರ್ಧ ಮತ್ತು ಎಂಬತ್ತೊಂಬತನೆಯ ಶ್ಲೋಕಗಳಿಂದ ಭೇರುಂಡಾನಿತ್ಯಾಮಂತ್ರವನ್ನು ಹೇಳಿದ್ದಾರೆ;—

## ಭೇರುಂಡಾನಿತ್ಯಾಮಂತ್ರ

" ಓಂ ಕ್ರೋಂ ಭ್ರೋಂ ಕ್ರೋಂ ಭೋಂ ಘ್ರೋಂ ಜ್ರೋಂ ಸ್ವಾಹಾ "

೯೦-೯೨. ಇದು ಸಕಲ ಸಿದ್ಧಿದಾಯಕವಾದ ಒಂಬತ್ತಕ್ಷರವನ್ನೊಳ

ನ್ಯಸೇನ್ಮಂತ್ರಾರ್ಣನವಕಂ ಮಾತೃಕಾನ್ಯಾಸಪೂರ್ವಕಂ ।
ಅಥ ಧ್ಯಾನಂ ಪ್ರವಕ್ಷ್ಯಾಮಿ ದೇವ್ಯಾಃ ಸರ್ವಾರ್ಥಸಿದ್ಧಿದಂ　　|| ೯೨ ||

ತಪ್ತಕಾಂಚನಸಂಕಾಶದೇಹಾಂ ನೇತ್ರತ್ರಯಾನ್ವಿತಾಂ ।
ಚಾರುಸ್ಮಿತಾಂ ಚಿತಮುಖೀಂ ದಿವ್ಯಾಲಂಕಾರಭೂಷಿತಾಂ　　|| ೯೩ ||

ತಾಟಂಕಹಾರಕೇಯೂರರತ್ನಸ್ತಬಕಮಂಡಿತಾಂ ।
ರಸನಾನೂಪುರೋರ್ಮ್ಯಾದಿಭೂಷಣೈರತಿಸುಂದರೀಂ　　|| ೯೪ ||

ಪಾಶಾಂಕುಶೌ ಚರ್ಮಖಡ್ಗೌ ಗದಾವಜ್ರಧನುಃಶರಾನ್ ।
ಕರೈರ್ದಧಾನಾಮಾಸೀನಾಂ ಪುಜಾಯಾಂ ಮತ್ಸರಸ್ಥಿತಾಂ　　|| ೯೫ ||

---

ಗೊಂಡಿರುವ ಭೇರುಂಡಾನಿತ್ಯಾ ಮಂತ್ರವು. ಈ ಮಂತ್ರದಲ್ಲಿನ "ಓಂ ಸ್ವಾಹಾ" ಎಂಬುದನ್ನು ಬಿಟ್ಟು ಉಳಿದ ಮಧ್ಯದಲ್ಲಿನ ಆರು ಅಕ್ಷರಗಳಿಂದ ಷಡಂಗನ್ಯಾಸ ಮಾಡಬೇಕು.

ಅನಂತರ ಬ್ರಹ್ಮರಂಧ್ರ, ಭ್ರೂಮಧ್ಯ, ಮುಖ, ಕಂಠ, ಹೃದಯ, ನಾಭಿ, ಮೂಲಾಧಾರ, ಎರಡು ಪಾದಗಳು ಈ ಒಂಬತ್ತು ಸ್ಥಾನಗಳಲ್ಲಿ ಮಂತ್ರದ ಒಂಬತ್ತು ಅಕ್ಷರಗಳನ್ನು ಒಂದೊಂದರಂತೆ ಮಾತೃಕಾನ್ಯಾಸ ಪೂರ್ವಕವಾಗಿ ನ್ಯಾಸಮಾಡಬೇಕು. ಈಗ ಸಕಲೇಷ್ಟಾರ್ಥಪ್ರದವಾದ ದೇವಿಯ ಧ್ಯಾನವನ್ನು ಹೇಳುವೆನು.

೯೩-೯೬. ಕಾಯಿಸಿದ ಬಂಗಾರದಂತೆ ಹೊಳೆಯುತ್ತಿರುವ ದೇಹವುಳ್ಳ, ಮೂರು ಕಣ್ಣುಗಳಿಂದ ಯುಕ್ತಳಾದ, ದಿವ್ಯಮಂದಹಾಸಯುಕ್ತ ಮುಖವುಳ್ಳ, ಕರ್ಣಾಭರಣ, ಹಾರ, ನಾಗಮುರಿಗೆ, ರತ್ನಗಳಕುಚ್ಚು ಇವೇ ಮುಂತಾದ ಮನೋಹರಾಭರಣಗಳಿಂದ ಶೋಭಿಸುತ್ತಿರುವ, ಡಾಬು ರುಳಿ ಉಂಗುರಮುಂತಾದ ಆಭರಣಗಳಿಂದ ಸೌಂದರ್ಯಶಾಲಿನಿಯಾಗಿರುವ, ಪಾಶ ಅಂಕುಶ ಚರ್ಮ ಕತ್ತಿ

**ಶಕ್ತೀಶ್ಚ ತತ್ಸಮಾಕಾರತೇಜೋಹೇತಿಭಿರನ್ವಿತಾಃ ।**
**ಪೂಜಯೇತ್ ತದ್ವದಭಿತಃ ಸ್ಮಿತಾಸ್ಯಾ ವಿಜಯಾದಿಕಾಃ ॥ ೯೬ ॥**

**ಪಂಚಮೀಯಂ ಸಮಾಖ್ಯಾತಾ ಭೇರುಂಡಾಖ್ಯಾ ಮುನೀಶ್ವರ ।**
**ಯಸ್ಯಾಃ ಸ್ಮರಣತೋ ನಶ್ಯೇದ್ಗರಲಂ ತ್ರಿವಿಧಂ ಕ್ಷಣಾತ್ ॥ ೯೭ ॥**

**ಯಾ ತು ಷಷ್ಠೀ ದ್ವಿಜಶ್ರೇಷ್ಠ ಸಾ ನಿತ್ಯಾ ವಹ್ನಿವಾಸಿನೀ ।**
**ತದ್ವಿಧಾನಂ ಶೃಣುಷ್ವಾದ್ಯ ಸಾಧಕಾನಾಂ ಸುಸಿದ್ಧಿದಂ ॥ ೯೮ ॥**

---

ಗದೆ ವಜ್ರಧನುಸ್ಸು ಬಾಣ ಇವನ್ನು ಕೈಗಳಲ್ಲಿ ಧರಿಸಿರುವ, ಪೂಜಾಪೀಠದಲ್ಲಿ ಕುಳಿತಿರುವ ಭೇರುಂಡಾದೇವಿಯನ್ನು ಧ್ಯಾನಿಸಬೇಕು.

ಆ ದೇವಿಯ ಸುತ್ತಲೂ ಆ ದೇವಿಗೆ ಸಮಾನಾಕಾರ, ತೇಜಸ್ಸು ಆಯುಧಗಳುಳ್ಳ ಮಂದಹಾಸಯುಕ್ತ ಮುಖದಿಂದ ಕೂಡಿದ ವಿಜಯಾದಿ ಶಕ್ತಿಗಳನ್ನೂ ಸಹ ಪೂಜಿಸಬೇಕು.

೯೭. ಮುನೀಶ್ವರನೇ! ಈ ರೀತಿಯಾಗಿ ಐದನೆಯದಾದ ಭೇರುಂಡಾ ಎಂಬ ನಿತ್ಯಾದೇವಿಯ ಮಂತ್ರಾದಿ ವಿಧಾನವು ಉಕ್ತವಾಗಿದೆ. ಈ ಮಂತ್ರವನ್ನು ಸ್ಮರಣೆಮಾಡುವ ಮಾತ್ರದಿಂದ ತ್ರಿವಿಧವಿಷವು ಪರಿಹಾರವಾಗುವುದು.

(ವಿಷವು ಸ್ಥಾವರ, ಜಂಗಮ, ಕೃತ್ರಿಮ ಎಂಬುದಾಗಿ ಮೂರುವಿಧ.
—ತಂತ್ರರಾಜವ್ಯಾಖ್ಯಾ)

೯೮. ದ್ವಿಜವರ್ಯನೇ! ಆರಾಧಕರಿಗೆ ಶೀಘ್ರಸಿದ್ಧಿದಾಯಕವಾದ, ವಹ್ನಿವಾಸಿನೀ ಎಂಬ ಆರನೆಯ ನಿತ್ಯಾದೇವಿಯ ಮಂತ್ರಾದಿವಿಧಾನವನ್ನು ಹೇಳುವೆನು ಕೇಳು.

## ವಹ್ನಿವಾಸಿನೀನಿತ್ಯಾಮಂತ್ರ

೯೯-೧೦೦. "ಓಂ ಹ್ರೀಂ ವಹ್ನಿವಾಸಿನ್ಯೈ ನಮಃ" ಎಂಬ ಒಂಬತ್ತಕ್ಷರಗಳ ಮಂತ್ರವು ವಹ್ನಿವಾಸಿನೀನಿತ್ಯಾಮಂತ್ರವೆಂದು ಉಕ್ತವಾಗಿದೆ.

ಭೇರುಂಡಾದ್ಯಮಿಹಾದ್ಯಂ ಸ್ಯಾನ್ನಿತ್ಯೆಕ್ಲಿನ್ನಾದ್ಯನಂತರಂ ।
ತತೋಂಬುಶೂನ್ಯೇ ಹಂಸಾಗ್ನಿಹ್ಯುತ್ತಮಂಬುಮರುದ್ಯುತಂ ॥ ೯೯ ॥

ಹೃದಗ್ನಿನಾ ಯುತಂ ಶೂನ್ಯಂ ವ್ಯಾಪ್ತೇನ ಶುಚಿನಾ ಚ ಯುಕ್ ।
ಶೂನ್ಯಂ ನಭಃ ಶಕ್ತಿಯುತಂ ನವಾರ್ಣೇಯಮುದಾಹೃತಾ ॥ ೧೦೦ ॥

ವಿದ್ಯಾದ್ವಿತೀಯಬೀಜೇನ ಸ್ವರಾನ್ದೀರ್ಘಾನ್ನಿಯೋಜಯೇತ್ ।
ಮಾಯಾಂ ತಾನ್ಷಡ್ಭಿರೇವಾಂಗಾನ್ಯಾಚರೇತ್ಸಕರಾಂಗಯೋಃ ॥ ೧೦೧ ॥

ನವಾಕ್ಷರಾಣಿ ವಿದ್ಯಾಯಾ ನವರಂಧ್ರೇಷು ವಿನ್ಯಸೇತ್ ।
ವ್ಯಾಪಕಂ ಚ ಸಮಸ್ತೇನ ಕುರ್ಯಾದೇವಾತ್ಮಸಿದ್ಧಯೇ ॥ ೧೦೨ ॥

ಸರ್ವಾಸ್ವಪಿ ಚ ವಿದ್ಯಾಸು ವ್ಯಾಪಕನ್ಯಾಸಮಾಚರೇತ್ ।
ತಪ್ತಕಾಂಚನಸಂಕಾಶಾಂ ನವಯೌವನಸುಂದರೀಂ ॥ ೧೦೩ ॥

---

೧೦೧. ಈ ವಿದ್ಯೆಯ ಎರಡನೆಯ ಬೀಜಾಕ್ಷರವಾದ ಹ್ರೀಂ ಎಂಬುದಕ್ಕೆ "ಆ. ಈ" ಮುಂತಾದ ಆರು ದೀರ್ಘಸ್ವರಗಳನ್ನು ಸೇರಿಸಿ "ಹ್ರಾಂ, ಹ್ರೀಂ" ಮುಂತಾಗಿ ಕರಾಂಗಗಳಲ್ಲಿ ಷಡಂಗನ್ಯಾಸ ಮಾಡಬೇಕು.

೧೦೨. ಈ ವಿದ್ಯೆಯ ಒಂಬತ್ತಕ್ಷರಗಳನ್ನು ಕ್ರಮವಾಗಿ ಒಂದೊಂದಕ್ಷರದಂತೆ ನವರಂಧ್ರಗಳು ಎಂದರೆ ನೇತ್ರದ್ವಯ, ಶ್ರೋತ್ರದ್ವಯ, ನಾಸಿಕಾದ್ವಯ, ಬಾಯಿ, ಶಿಶ್ನ, ಗುದ ಎಂಬ ಒಂಬತ್ತು ಸ್ಥಾನಗಳಲ್ಲಿ ನ್ಯಾಸಮಾಡಬೇಕು. ಸಂಪೂರ್ಣಮಂತ್ರದಿಂದ ಆತ್ಮಸಿದ್ಧಿಗಾಗಿ ಸರ್ವಾಂಗನ್ಯಾಸಮಾಡಬೇಕು.

೧೦೩-೧೦೮. ಧ್ಯಾನವಿಧಾನ :— ಕಾಯಿಸಿದ ಬಂಗಾರಕ್ಕೆ ಸಮಾನವಾದ ಕಾಂತಿಯುಳ್ಳ, ನವಯೌವನದಿಂದ ಸೌಂದರ್ಯಯುಕ್ತಳಾದ, ಮನೋಹರ ಮುಗುಳ್ನಗೆಯಿಂದ ಯುಕ್ತವಾದ ಮುಖಕಮಲವುಳ್ಳ, ಪ್ರಕಾಶಮಾನವಾದ ಮೂರು ಕಣ್ಣುಗಳುಳ್ಳ, ಎಂಟುಬಾಹುಗಳುಳ್ಳ, ಮಾಣಿಕ್ಯಾಭರಣಗಳಿಂದ ಪ್ರಕಾಶ

ಚಾರುಸ್ಮೇರಮುಖಾಂಭೋಜಾಂ ವಿಲಸನ್ನಯನತ್ರಯಾಂ |
ಅಷ್ಟಭಿರ್ಬಾಹುಭಿರ್ಯುಕ್ತಾಂ ಮಾಣಿಕ್ಯಾಭರಣೋಜ್ಜ್ವಲಾಂ || ೧೦೪ ||

ಪದ್ಮರಾಗಕಿರೀಟಾಂಶುಸಂಭೇದಾರುಣಿತಾಂಬರಾಂ |
ಪೀತಕೌಶೇಯವಸನಾಂ ರತ್ನಮಂಜೀರಮೇಖಲಾಂ || ೧೦೫ ||

ರಕ್ತಮೌಕ್ತಿಕಸಂಭಿನ್ನಸ್ತಬಕಾಭರಣೋಜ್ಜ್ವಲಾಂ |
ರಕ್ತಾಬ್ಜಕಂಬುಪುಂಡ್ರೇಕ್ಷುಚಾಪಪೂರ್ಣೇಂದುಮಂಡಲಂ || ೧೦೬ ||

ದಧಾನಾಂ ಬಾಹುಭಿರ್ವಾಮೈಃ ಕಲ್ಹಾರಂ ಹೇಮಶೃಂಗಕಂ |
ಪುಷ್ಪೇಷುಂ ಮಾತುಲಿಂಗಂ ಚ ದಧಾನಾಂ ದಕ್ಷಿಣೈಃ ಕರೈಃ || ೧೦೭ ||

ಸ್ವಸ್ವನಾಮಾಭಿರಭಿತಃ ಶಕ್ತಿಭಿಃ ಪರಿವಾರಿತಾಂ |
ಏವಂ ಧ್ಯಾತ್ವಾರ್ಚಯೇದ್ವಹ್ನಿವಾಸಿನೀಂ ವಹ್ನಿವಿಗ್ರಹಾಂ || ೧೦೮ ||

---

ಮಾನಳಾದ, ಪದ್ಮರಾಗಮಯವಾದ ಕಿರೀಟದ ಕಿರಣಗಳ ಪ್ರಸಾರದಿಂದ ಕೆಂಪಾಗಿ ಮಾಡಲ್ಪಟ್ಟ ಆಕಾಶವುಳ್ಳ, ಹಳದಿಯ ಕೌಶೇಯವಸ್ತ್ರವನ್ನುಟ್ಟಿರುವ, ರತ್ನಖಚಿತ ಮನೋಹರ ಡಾಬನ್ನು ಧರಿಸಿರುವ, ಕೆಂಪು ಮುತ್ತುಗಳಿಂದ ಯುಕ್ತವಾದ ಕುಚ್ಚುಗಳುಳ್ಳ ಆಭರಣಗಳಿಂದ ಹೊಳೆಯುತ್ತಿರುವ, ರಕ್ತಕಮಲ, ಶಂಖ, ಪುಂಡ್ರ, ಇಕ್ಷುಚಾಪ, ಪೂರ್ಣಚಂದ್ರಮಂಡಲ ಇವುಗಳನ್ನು ಎಡ ಬಾಹುಗಳಿಂದಲೂ, ಕಲ್ಹಾರಪುಷ್ಪ! ಸುವರ್ಣಶೃಂಗ ಪುಷ್ಪಬಾಣ ಮಾತುಲಿಂಗಗಳನ್ನು ಬಲಬಾಹುಗಳಿಂದಲೂ ಧರಿಸಿರುವ, ಆವರವರ ನಾಮಧೇಯಸಹಿತವಾದ ಶಕ್ತಿಗಳಿಂದ ಪರಿವಾರಿತಳಾದ, ವಹ್ನಿಶರೀರಳಾದ ವಹ್ನಿವಾಸಿನೀದೇವಿಯನ್ನು ಧ್ಯಾನಿಸಿ ಪೂಜಿಸಬೇಕು.

ಈ ದೇವತೆಯ ಸ್ಮರಣೆ ಮಾಡುವ ಮಾತ್ರದಿಂದ ಮೂರು ಲೋಕಗಳೂ ವಶವಾಗುವುವು.

ಯಸ್ಯಾಃ ಸ್ಮರಣತೋ ವಶ್ಯಂ ಜಾಯತೇ ಭುವನತ್ರಯಂ ।
ಅಥ ಯಾ ಸಪ್ತಮೀ ನಿತ್ಯಾ ಮಹಾವಜ್ರೇಶ್ವರೀ ಮುನೇ　　॥ ೧೦೯ ॥

ತಸ್ಯಾ ವಿದ್ಯಾಂ ಪ್ರವಕ್ಷ್ಯಾಮಿ ಸಾಧಕಾನಾಂ ಸುಸಿದ್ಧಿದಾಂ ।
ದ್ವಿತೀಯಂ ವಹ್ನಿವಾಸಿನ್ಯಾ ನಿತ್ಯಕ್ಲಿನ್ನಾ ಚತುರ್ಥಕಂ　　॥ ೧೧೦ ॥

ಪಂಚಮಂ ಭಗಮಾಲಾದ್ಯಂ ಭೇರುಂಡಾಯಾ ದ್ವಿತೀಯಕಂ ।
ನಿತ್ಯಕ್ಲಿನ್ನಾದ್ವಿತೀಯಂ ಚ ತೃತೀಯಂ ಷಷ್ಠಸಪ್ತಮೌ　　॥ ೧೧೧ ॥

ಅಷ್ಟಮಂ ನವಮಂ ಚಾಪಿ ಪೂರ್ವಂ ಸ್ಯಾದಂತಿಮಂ ಪುನಃ ।
ದ್ವಯಮೇಕೈಕಮಥ ಚ ದ್ವಯದ್ವಯಮಥ ದ್ವಯಂ　　॥ ೧೧೨ ॥

---

೧೦೯-೧೧೧. ಮುನಿಯೇ! ಆರಾಧಕರಿಗೆ ಒಳ್ಳೆಯ ಸಿದ್ಧಿಗಳನ್ನು ಕೊಡುವ ಮಹಾವಜ್ರೇಶ್ವರೀ ಎಂಬ ಏಳನೆಯ ನಿತ್ಯಾದೇವಿಯ ಮಂತ್ರವನು ಹೇಳುವೆನು :—

ವಹ್ನಿವಾಸಿನೀ ಮಂತ್ರದ ಎರಡನೆಯ ಅಕ್ಷರವಾದ "ಹ್ರೀಂ" ಎಂಬುದು, ನಿತ್ಯಕ್ಲಿನ್ನಾಮಂತ್ರದ ನಾಲ್ಕು ಐದನೆಯ ವರ್ಣಗಳಾದ 'ಕ್ಲಿನ್ನೆ' ಎಂಬಿವು, ಭಗಮಾಲಾಮಂತ್ರದ ಆದಿವರ್ಣ 'ಐಂ' ಎಂಬುದು, ಭೇರುಂಡಾ ಮಂತ್ರದ್ನ ಎರಡನೆಯ ವರ್ಣ 'ಕ್ರೋಂ' ಎಂಬುದು, ನಿತ್ಯಕ್ಲಿನ್ನಾಮಂತ್ರದ 2, 3, 6, 7, 8, 9 ನೆಯ ವರ್ಣಗಳಾದ 'ನಿತ್ಯಮದದ್ರವೇ' ಎಂಬುದು, ಮೊದಲನೆಯದಾದ 'ಹ್ರೀಂ' ಎಂಬುದೂ ಸೇರಿ ಈ ಮಂತ್ರವು ನಿಷ್ಪನ್ನವಾಗುವುದು.

## ಮಹಾವಜ್ರೇಶ್ವರೀಮಂತ್ರ

"ಹ್ರೀಂ ಕ್ಲಿನ್ನೇ ಐಂ ಕ್ರೋಂ ನಿತ್ಯಮದದ್ರವೇ ಹ್ರೀಂ"

೧೧೨-೧೧೯. ಈ ಮಂತ್ರದ ಆದ್ಯಂತಾಕ್ಷರಗಳನ್ನು ಆದ್ಯಂತಗಳಲ್ಲಿ ಸೇರಿಸಿ ಉಳಿದ ಅಕ್ಷರಗಳಲ್ಲಿ ಕ್ರಮವಾಗಿ 2, 1, 1, 2, 2, 2 ಅಕ್ಷರಗಳನ್ನು

ಮಾಯಯಾ ಪುಟಿತಂ ಕೃತ್ವಾ ಕುರ್ಯಾದಂಗಾನಿ ಷಟ್ಕ್ರಮಾತ್ |
ಪ್ರತ್ಯೇಕಂ ಶಕ್ತಿಪುಟಿತೈರ್ಮಂತ್ರಾರ್ಣೈರ್ದಶಭಿರ್ನ್ಯಸೇತ್ || ೧೧೩ ||

ದೃಕ್ಶ್ರೋತ್ರನಾಸಾವಾಗ್ವಕ್ಷೋನಾಭಿಗುಹ್ಯೇಷು ಚ ಕ್ರಮಾತ್ |
ರಕ್ತಾಂ ರಕ್ತಾಂಬರಾಂ ರಕ್ತಗಂಧಮಾಲಾವಿಭೂಷಣಾಂ || ೧೧೪ ||

ಚತುರ್ಭುಜಾಂ ತ್ರಿನಯನಾಂ ಮಾಣಿಕ್ಯಮುಕುಟೋಜ್ಜ್ವಲಾಂ |
ಪಾಶಾಂಕುಶಾಮಿಕ್ಷುಚಾಪಂ ದಾಡಿಮೀಸಾಯಕಂ ತಥಾ || ೧೧೫ ||

ದಧಾನಾಂ ಬಾಹುಭಿರ್ನೇತ್ರೈರ್ದಯಾಸುಪ್ರೀತಿಶೀತಲೈಃ |
ಪಶ್ಯಂತೀಂ ಸಾಧಕಂ ಅಸ್ರಷಟ್ಕೋಣಾಬ್ಜಮಹೀಪುರೇ || ೧೧೬ ||

---

ಮಧ್ಯವಲ್ಲಿ ಸೇರಿಸಿ "ಹ್ರೀಂ ಕ್ಲಿನ್ನೇ ಹ್ರೀಂ ಹೃದಯಂ" ಇತ್ಯಾದಿಯಾಗಿ ಷಡಂಗಗಳನ್ನು ನ್ಯಾಸಮಾಡಬೇಕು.

ಹೀಗೆಯೇ "ಹ್ರೀಂ ಎಂಬುದನ್ನು ಆದ್ಯಂತಗಳಲ್ಲಿ ಸಂಯೋಜನೆಮಾಡಿ ಉಳಿದ ಹತ್ತು ಮಂತ್ರ ವರ್ಣಗಳಲ್ಲಿ ಕ್ರಮವಾಗಿ ಒಂದೊಂದು ವರ್ಣದಂತೆ ನೇತ್ರದ್ವಯ, ಶ್ರೋತ್ರದ್ವಯ, ನಾಸಿಕಾದ್ವಯ, ವಾಗಿಂದ್ರಿಯ, ವಕ್ಷಃಸ್ಥಲ, ನಾಭಿ, ಶಿಶ್ನ ಈ ಹತ್ತು ಅವಯವಗಳಲ್ಲಿ ನ್ಯಾಸಮಾಡಬೇಕು.

ಧ್ಯಾನವಿಧಾನ :—ಕೆಂಪಗಿರುವ, ರಕ್ತವಸ್ತ್ರಧಾರಿಯಾದ, ರಕ್ತಗಂಧ ಮಾಲಿಕೆಗಳಿಂದ ಅಲಂಕೃತಳಾದ, ನಾಲ್ಕು ಭುಜಗಳು ಮತ್ತು ಮೂರು ಕಣ್ಣು ಗಳುಳ್ಳ, ಮಾಣಿಕ್ಯಮಯವಾದ ಕಿರೀಟದಿಂದ ಪ್ರಕಾಶಿಸುತ್ತಿರುವ, ಪಾಶ ಅಂಕುಶ ಧನುಸ್ಸು ದಾಡಿಮೀ ಬಾಣಗಳನ್ನು ಬಾಹುಗಳಲ್ಲಿ ಧರಿಸಿರುವ, ದಯೆ ಮತ್ತು ಸಮೀಚೀನ ಪ್ರೀತಿಗಳಿಂದ ಶೀತಲಗಳಾದ ನೇತ್ರಗಳಿಂದ ಆರಾಧಕನನ್ನು ನೋಡುತ್ತಿರುವ, ಅಸ್ರ ಷಟ್ಕೋಣ ಯುಕ್ತ ಪದ್ಮಗರ್ಭಿತ ಚತುರಸ್ರಮಂಡಲದಲ್ಲಿ ಚಕ್ರಮಧ್ಯದಲ್ಲಿನ ಸುಖಾಸನದಲ್ಲಿ ಕುಳಿತಿರುವ, ಕಮಲದಂತಿರುವ ಮಂದಹಾಸ ಯುಕ್ತ ಮುಖವುಳ್ಳ, ಸ್ವಸ್ವರೂಪಶಕ್ತಿ ಪರಿವಾರಯುಕ್ತಳಾದ, ಪೋತಮಧ್ಯ

ಚಕ್ರಮಧ್ಯೇ ಸುಖಾಸೀನಾಂ ಸ್ಮೇರವಕ್ತ್ರಸರೋರುಹಾಂ ।
ಶಕ್ತಿಭಿಃ ಸ್ವಸ್ವರೂಪಾಭಿರಾವೃತಾಂ ಪ್ರೋತಮಧ್ಯಗೇ ॥ ೧೧೭ ॥

ಸಿಂಹಾಸನೋಽಭಿತಃ ಪ್ರೇಂಖತ್ಪ್ರೋತಸ್ಥಾಭಿಶ್ಚ ಶಕ್ತಿಭಿಃ ।
ವೃತಾಂ ತಾಭಿರ್ವಿನೋದಾನಿ ಯಾತಾಯಾತಾದಿಭಿಃ ಸದಾ ॥ ೧೧೮ ॥

ಕುರ್ವಾಣಾಮರುಣಾಂಭೋಧೌ ಚಿಂತಯೇನ್ಮಂತ್ರನಾಯಕಾಂ ।
ಏಷಾ ತು ಸಪ್ತಮೀ ಪ್ರೋಕ್ತಾ ದೂತೀಂ ಚಾಪ್ಯಷ್ಟಮೀಂ ಶೃಣು ॥೧೧೯॥

ವಜ್ರೇಶ್ವರ್ಯಾದ್ಯಮಾದ್ಯಂ ಸ್ಯಾದ್ದ್ವಿಯದಗ್ನಿಯುತಂ ತತಃ ।
ಅಂಬು ಸ್ಯಾನ್ಮರುತಾ ಯುಕ್ತಂ ಗೋತ್ರಾ ಕ್ಷ್ಮಾಸಂಯುತಾ ತತಃ ॥ ೧೨೦ ॥

ರಯೋ ವ್ಯಾಸೇನ ಶುಚಿನಾ ಯುತಃ ಸ್ಯಾತ್ತದನಂತರಂ ।
ಅಂತ್ಯಾರ್ಣೌ ವಹ್ನಿವಾಸಿನ್ಯಾ ದೂತೀ ನಿತ್ಯಾ ಸಮೀರಿತಾ ॥ ೧೨೧ ॥

---

ದಲ್ಲಿರುವ ಸಿಂಹಾಸನದಲ್ಲಿ ಸುತ್ತಲೂ ವಾಹನಸ್ಥಿತ ಶಕ್ತಿಗಳಿಂದ ಪರಿವೃತಳಾದ, ಅವರೊಡನೆ ಶೋಣಸಮುದ್ರದಲ್ಲಿ ಯಾತಾಯಾತಗಳಿಂದ ವಿನೋದಗಳನ್ನು ಮಾಡುತ್ತಿರುವ ಮಂತ್ರದೇವತೆಯನ್ನು ಧ್ಯಾನಿಸಬೇಕು.

ಈರೀತಿ ಏಳನೆಯ ನಿತ್ಯಾದೇವತೆಯ ವಿಧಾನವು ಉಕ್ತವಾಯಿತು.

ದೂತೀ ಎಂಬ ಎಂಟನೆಯ ದೇವತೆಯ ವಿಧಾನವನ್ನು ಹೇಳ್ವೆನು ; ಕೇಳು.

## ದೂತೀನಿತ್ಯಾಮಂತ್ರ

೧೨೦-೧೨೧. " ಹ್ರೀಂ ಶಿವಾದೂತ್ಯೈ ನಮಃ " ಎಂಬುದು ದೂತೀ ನಿತ್ಯಾಮಂತ್ರವೆಂದು ಉಕ್ತವಾಗಿದೆ.

ಷಡ್ದೀರ್ಘಸ್ವರಯುಕ್ತೇನ ವಿದ್ಯಾದ್ಯೇನ ಷಡಂಗಕಂ ।
ತೇನೈವ ಪುಟಿತೈರರ್ಣೈರ್ನ್ಯಸೇಚ್ಛ್ರೋತ್ರಾದಿಪಂಚಸು ॥ ೧೨೨ ॥

ಷಷ್ಠಕಂ ನಸಿ ವಿನ್ಯಸ್ಯ ವ್ಯಾಪಕಂ ವಿದ್ಯಯಾ ನ್ಯಸೇತ್ ।
ನಿದಾಘಕಾಲಮಧ್ಯಾಹ್ನದಿವಾಕರಸಮಪ್ರಭಾಂ ॥ ೧೨೩ ॥

ನವರತ್ನಕಿರೀಟಾಂ ಚ ತ್ರೀಕ್ಷಣಾಮರುಣಾಂಬರಾಂ ।
ನಾನಾಭರಣಸಂಭಿನ್ನದೇಹಕಾಂತಿವಿರಾಜಿತಾಂ ॥ ೧೨೪ ॥

ಶುಚಿಸ್ಮಿತಾಮಷ್ಟಭುಜಾಂ ಸ್ತೂಯಮಾನಾಂ ಮಹರ್ಷಿಭಿಃ ।
ಪಾಶಂ ಖೇಟಂ ಗದಾಂ ರತ್ನಚಷಕಂ ವಾಮಬಾಹುಭಿಃ ॥ ೧೨೫ ॥

ದಕ್ಷಿಣೈರಂಕುಶಂ ಖಡ್ಗಂ ಕಟ್ಟಾರಂ ಕಮಲಂ ತಥಾ ।
ದಧಾನಾಂ ಸಾಧಕಾಭೀಷ್ಟದಾನೋದ್ಯಮಸಮನ್ವಿತಾಂ ॥ ೧೨೬ ॥

---

೧೨೨-೧೨೭. 'ಆ, ಈ' ಮುಂತಾದ ಆರು ದೀರ್ಘಸ್ವರಯುಕ್ತವಾದ ಈ ವಿದ್ಯೆಯ ಆದ್ಯಾಕ್ಷರದಿಂದ ಹೃದಯಾದಿ ಷಡಂಗನ್ಯಾಸಮಾಡಬೇಕು.

ಆದ್ಯಾಕ್ಷರವನ್ನು ಪೂರ್ವೋತ್ತರಗಳಲ್ಲಿ ಸೇರಿಸಿ ಉಳಿದ ಮಂತ್ರವರ್ಣಗಳಲ್ಲೊಂದೊಂದನ್ನು ಶ್ರೋತ್ರಾದಿ ಪಂಚೇಂದ್ರಿಯ, ಆರನೆಯದನ್ನು ಘ್ರಾಣ ಇವುಗಳಲ್ಲಿ ನ್ಯಾಸಮಾಡಿ, ಸಂಪೂರ್ಣ ಮಂತ್ರದಿಂದ ಸರ್ವಾಂಗನ್ಯಾಸಮಾಡಬೇಕು.

ಧ್ಯಾನವಿಧಾನ :—ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಂತೆ ಪ್ರಕಾಶಮಾನಳಾದ, ನವರತ್ನಖಚಿತ ಕಿರೀಟವನ್ನು ಧರಿಸಿರುವ, ಮೂರು ಕಣ್ಣುಗಳುಳ್ಳ ರಕ್ತವಸ್ತ್ರಧಾರಿಯಾದ, ನಾನಾವಿಧಾಭರಣ ಯುಕ್ತ ದೇಹಕಾಂತಿಯಿಂದ ವಿರಾಜಿಸುತ್ತಿರುವ ಮಂದಹಾಸಯುಕ್ತಳಾದ, ಎಂಟು ಭುಜಗಳುಳ್ಳ, ಮಹರ್ಷಿಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಿರುವ, ಪಾಶ ಖಡ್ಗ ಗದೆ ರತ್ನಪಾತ್ರೆಗಳನ್ನು ಎಡಬಾಹುಗಳಿಂದಲೂ, ಬಲಬಾಹುಗಳಿಂದ ಅಂಕುಶ ಕತ್ತಿ ಕಟ್ಟಾರ ಕಮಲಗಳನ್ನೂ

ಧ್ಯಾತ್ವೈವಂ ಪೂಜಯೇದ್ದೇವೀಂ ದೂತೀಂ ದುರ್ನೀತಿನಾಶಿನೀಂ ।
ಇತ್ಯೇಷಾ ಕಥಿತಾ ತುಭ್ಯಂ ಸಮಸ್ತಾಪನ್ನಿವಾರಿಣೀ ॥ ೧೨೭ ॥

ಶ್ರೀಕರೀ ಶಿವತಾವಾಸಕಾರಿಣೀ ಸರ್ವಸಿದ್ಧಿದಾ ।
ಅಥ ತೇ ನವಮೀಂ ನಿತ್ಯಾಂ ತ್ವರಿತಾಂ ನಾಮ ನಾರದ ॥ ೧೨೮ ॥

ಪ್ರವಕ್ಷ್ಯಾಮಿ ಯಶೋವಿದ್ಯಾಧನಾರೋಗ್ಯಸುಖಪ್ರದಾಂ ।
ಆದ್ಯಂ ತು ವಹ್ನಿವಾಸಿನ್ಯಾ ದೂತ್ಯಾದಿಸ್ತದನಂತರಂ ॥ ೧೨೯ ॥

ಹಂಸೋ ಧರಾ ಸ್ವಸಂಯುಕ್ತಸ್ತೇಜಶ್ಚರಸಮನ್ವಿತಂ ।
ವಾಯುಃ ಪ್ರಭಾ ಚರಯುತಾ ಗ್ರಾಸಃ ಶಕ್ತಿಸಮನ್ವಿತಃ ॥ ೧೩೦ ॥

ಹೃದಾ ರಯೇಣ ದಾಹೇನ ವಹ್ನಿಸ್ಯಾದಷ್ಟಮಂ ತಥಾ ।
ಹಂಸಃ ಕ್ಷ್ಮಾಸ್ವಯುತೋ ಗ್ರಾಸಶ್ಚರಯುಕ್ತೋ ದ್ವಿತೀಯಕಃ ॥ ೧೩೧ ॥

---

ಧರಿಸಿರುವ, ಆರಾಧಕರಿಗೆ ಇಷ್ಟಾರ್ಥ ದಾನದಲ್ಲಿಯೇ ಉದ್ಯುಕ್ತಳಾದ, ದುರ್ನೀತಿ ನಾಶಕಳಾದ ದೂತೀದೇವಿಯನ್ನು ಧ್ಯಾನಿಸಿ ಪೂಜಿಸಬೇಕು.

ಈರೀತಿ ಸಕಲ ಕಷ್ಟಗಳನ್ನೂ ಪರಿಹರಿಸುವ, ಸಂಪತ್ಕರವಾದ, ಮಂಗಳ ವನ್ನುಂಟುಮಾಡುವ, ಸಕಲಸಿದ್ಧಿಪ್ರದವಾದ ದೂತೀಮಂತ್ರವು ನಿನಗೆ ಹೇಳಲ್ಪಟ್ಟಿತು.

೧೨೮-೧೩೨. ನಾರದನೇ! ಈಗ ಕೀರ್ತಿ, ವಿದ್ಯೆ, ಧನ, ಆರೋಗ್ಯ, ಸುಖಗಳನ್ನು ಕೊಡುವ, ಒಂಬತ್ತನೆಯದಾದ ತ್ವರಿತಾನಿತ್ಯಾದೇವಿಯ ಮಂತ್ರಾದಿ ವಿಧಾನವನ್ನು ಹೇಳುವೆನು.

ದ್ಯುತಿರ್ನಾದಯುತಾ ನಿತ್ಯಾ ತ್ವರಿತಾ ದ್ವಾದಶಾಕ್ಷರೀ ।
ವಿದ್ಯಾ ಚತುರ್ಥವರ್ಣಾದಿ ಸಪ್ತಭಿಸ್ತ್ರ್ಯಕ್ಷರೈಸ್ತಥಾ ॥ ೧೩೨ ॥

ಕುರ್ಯಾದಂಗಾನಿ ಯುಗ್ಮಾರ್ಣೈಃ ಷಟ್ಕ್ರಮೇಣ ಕರಾಂಗಯೋಃ ।
ಶಿರೋಲಲಾಟಕಂಠೇಷು ಹೃನ್ನಾಭ್ಯಾಧಾರಕೇ ತಥಾ ॥ ೧೩೩ ॥

ಊರುಯುಗ್ಮೇ ತಥಾ ಜಾನುದ್ವಯೇ ಜಂಘಾದ್ವಯೇ ತಥಾ ।
ಪಾದಯುಗ್ಮೇ ತಥಾ ವರ್ಣಾನ್ಮಂತ್ರಜಾನ್ದಶ ವಿನ್ಯಸೇತ್ ॥ ೧೩೪ ॥

ದ್ವಿತೀಯೋಪಾಂತ್ಯಮಧ್ಯಸ್ತೈರ್ಮಂತ್ರಾರ್ಣೈರಿತರೈರಪಿ ।
ತಾರಾದ್ಯೈಃ ಶೃಣು ತದ್ಧ್ಯಾನಂ ಸರ್ವಸಿದ್ಧಿವಿಧಾಯಕಂ ॥ ೧೩೫ ॥

---

## ತ್ವರಿತಾನಿತ್ಯಾಮಂತ್ರವು

" ಓಂ ಹ್ರೀಂ ಹುಂ ಖೇ ಚ ಛೇ ಕ್ಷಃ ಸ್ತ್ರೀ ಹೂಂ ಕ್ಷೇ ಹ್ರೀಂ ಫಟ್ ಎಂಬುದು ಹನ್ನೆರಡಕ್ಷರಗಳ ತ್ವರಿತಾನಿತ್ಯಾಮಂತ್ರವು.

## ಕರಷಡಂಗನ್ಯಾಸ

೧೩೩-೧೩೫. 'ಓಂ ಖೇ ಚ ಹೃದಯಾಯನಮಃ' ಎಂಬುದಾಗಿ ಹೃದಯ, 'ಚ ಛೇ ಶಿರಸೇ ಸ್ವಾಹಾ' ಎಂದು ಶಿರಸ್ಸು, 'ಛೇ ಕ್ಷಃ ಶಿಖಾಯೈ ವಷಟ್' ಎಂದು ಶಿಖೆ, 'ಕ್ಷಃ ಸ್ತ್ರೀ ಕವಚಾಯ ಹುಂ' ಎಂಬುದಾಗಿ ಕವಚ, 'ಸ್ತ್ರೀಂ ಹೂಂ ನೇತ್ರತ್ರಯಾಯ ವೌಷಟ್' ಎಂದು ನೇತ್ರಗಳು, 'ಹೂಂ ಕ್ಷೇ ಅಸ್ತ್ರಾಯ ಫಟ್' ಎಂದು ಅಸ್ತ್ರ ಈರೀತಿಯಾಗಿ ಮಂತ್ರಾಕ್ಷರಗಳಿಂದ ಷಡಂಗನ್ಯಾಸಮಾಡಬೇಕು.

ಈ ಮಂತ್ರದ 2 ಮತ್ತು 11 ನೆಯ ವರ್ಣಗಳನ್ನೂ ಆದ್ಯಂತಗಳಲ್ಲಿ ಸಂಯೋಜನೆಮಾಡಿ ಓಂ ಎಂಬ ವರ್ಣಾದಿಯಾಗಿ ಉಳಿದ ಹತ್ತು ವರ್ಣಗಳನ್ನೂ ಕ್ರಮವಾಗಿ 'ಹ್ರೀಂ ಓಂ ಹ್ರೀಂ ನಮಃ' ಇತ್ಯಾದಿ ರೀತಿಯಿಂದ ಶಿರಸ್ಸು, ಹಣೆ, ಕಂಠ, ಹೃದಯ, ನಾಭಿ, ಮೂಲಾಧಾರ, ಎರಡು ತೊಡೆಗಳು, ಮೊಣಕಾಲು,

**ಶ್ಯಾಮವರ್ಣಶುಭಾಕಾರಾಂ ನವಯೌವನಶೋಭಿತಾಂ ।**
**ದ್ವಿದ್ವಿಕ್ರಮಾದಷ್ಟನಾಗೈಃ ಕಲ್ಪಿತಾಭರಣೋಜ್ವಲೈಃ ॥ ೧೩೬ ॥**

**ತಾಟಂಕಮಂಗದಂ ತದ್ವದ್ರಸನಾ ನೂಪುರಂ ಚ ತೈಃ ।**
**ವಿಪ್ರಕ್ಷತ್ರಿಯವಿಟ್‌ಶೂದ್ರಜಾತಿಭಿರ್ಭೀಮವಿಗ್ರಹೈಃ ॥ ೧೩೭ ॥**

**ಪಲ್ಲವಾಂಶುಕಸಂವೀತಾಂ ಶಿಖಿಪಿಚ್ಛಕೃತೈಃ ಶುಭೈಃ ।**
**ವಲಯೈರ್ಭೂಷಿತಭುಜಾಂ ಮಾಣಿಕ್ಯಮುಕುಟೋಜ್ವಲಾಂ ॥ ೧೩೮ ॥**

**ಬರ್ಹಿರ್ಬರ್ಹಕೃತಾಪೀಡಾಂ ತಚ್ಛತ್ರಾಂ ತತ್ಪತಾಕಿನೀಂ ।**
**ಗುಂಜಾಗುಣಲಸದ್ವಕ್ಷಃ ಕುಚಕುಂಕುಮಮಂಡಲಾಂ ॥ ೧೩೯ ॥**

**ತ್ರಿನೇತ್ರಾಂ ಚಾರುವದನಾಂ ಮಂದಸ್ಮಿತಮುಖಾಂಬುಜಾಂ ।**
**ಪಾಶಾಂಕುಶವರಾಭೀತಿಲಸದ್ಭುಜಚತುಷ್ಟಯಾಂ ॥ ೧೪೦ ॥**

---

ಜಂಘೆ, ಪಾದಯುಗಲ ಎಂಬೀ ಹತ್ತುಸ್ಥಾನಗಳಲ್ಲಿ ನ್ಯಾಸಮಾಡಬೇಕು. ಸಕಲ ಸಿದ್ಧಿಪ್ರದವಾದ ಆ ತ್ವರಿತಾದೇವಿಯ ಧ್ಯಾನವಿಧಾನವನ್ನು ಹೇಳುವೆನು ಕೇಳು.

೧೩೬-೧೪೧. ಧ್ಯಾನವಿಧಾನ :—ಶ್ಯಾಮಬಣ್ಣದ ಶೋಭನಾಕಾರವುಳ್ಳ, ನೂತನ ಯೌವ್ವನ ಯುಕ್ತಳಾದ, ಭಯಂಕರಸ್ವರೂಪವುಳ್ಳ, ಬ್ರಾಹ್ಮಣಜಾತಿಗೆ ಸೇರಿದ ಅನಂತ, ಕುಲಿಕ ಎಂಬ ಎರಡು ಸರ್ಪಗಳನ್ನು ಕರ್ಣಾಭರಣಗಳನ್ನಾಗಿಯೂ, ಕ್ಷತ್ರಿಯಜಾತಿಗೆ ಸೇರಿದ ವಾಸುಕಿ, ಶಂಖಪಾಲ ಎಂಬ ಎರಡು ಸರ್ಪಗಳನ್ನು ಬಾಹ್ವಾಭರಣಗಳನ್ನಾಗಿಯೂ, ವೈಶ್ಯಜಾತಿಗೆ ಸೇರಿದ ತಕ್ಷಕ, ಮಹಾಪದ್ಮ ಎಂಬ ಎರಡು ಸರ್ಪಗಳನ್ನು ಡಾಬನ್ನಾಗಿಯೂ, ಶೂದ್ರಜಾತಿಗೆ ಸೇರಿದ ಪದ್ಮ, ಕರ್ಕೋಟಕ ಸರ್ಪಗಳನ್ನು ರುಳಿಯನ್ನಾಗಿಯೂ ಮಾಡಿಕೊಂಡು ಒಟ್ಟು ಎಂಟು ಸರ್ಪಗಳನ್ನು ಆಯಾಯಾಸ್ಥಾನಗಳಲ್ಲಿ ಆಭರಣಗಳನ್ನಾಗಿ ಧರಿಸಿರುವ, ಕಿಸಲಯ ವಸ್ತ್ರವನ್ನುಟ್ಟಿರುವ, ನವಿಲುಗರಿಯಿಂದ ಮಾಡಲ್ಪಟ್ಟ ಒಳ್ಳೆಯ ಕಡಗಗಳನ್ನು ಕೈಗಳಲ್ಲಿ ತೊಟ್ಟುಕೊಂಡಿರುವ, ಮಾಣಿಕ್ಯ

ಧ್ಯಾತ್ವೈವಂ ತೋತಲಾಂ ದೇವೀಂ ಪೂಜಯೇಚ್ಛಕ್ತಿಭಿರ್ಯುತಾಂ ।
ತದಗ್ರಸ್ಥಾಂ ತು ಫಟ್‌ಕಾರೀಂ ಶರಚಾಪಕರೋಜ್ವಲಾಂ ॥ ೧೪೧ ॥

ಪ್ರಸಾದೇ ಫಲದಾನೇ ಚ ಸಾಧಕಾನಾಂ ತ್ವರಾನ್ವಿತಾ ।
ಏಷಾ ತು ನವಮೀ ನಿತ್ಯಾ ತ್ವರಿತೋಕ್ತಾ ಮುನೀಶ್ವರ ॥ ೧೪೨ ॥

ವಿಘ್ನದುಃಸ್ವಪ್ನಶಮನೀ ಸರ್ವಾಭೀಷ್ಟಪ್ರದಾಯಿನೀ ।
ಶುಚಿಃ ಸ್ವೇನ ಯುತಸ್ತ್ವಾದ್ಯೋ ರಸಾವಹ್ನಿಸಮನ್ವಿತಃ ॥ ೧೪೩ ॥

---

ಮಯವಾದ ಕಿರೀಟದಿಂದ ಪ್ರಕಾಶಮಾನಳಾದ, ನವಿಲುಗರಿಯಿಂದ ನಿರ್ಮಿತವಾದ ಶಿಖೆಯುಳ್ಳ, ಅಂತಹ ಛತ್ರ ಪತಾಕೆಗಳಿಂದ ಯುಕ್ತಳಾದ, ಗುಂಜಾಹಾರದಿಂದ ವಕ್ಷಸ್ಥಳದಲ್ಲಿ ಕುಂಕುಮದಂತೆ ಹೊಳೆಯುತ್ತಿರುವ ಸ್ತನಮಂಡಲಗಳುಳ್ಳ, ಮೂರುಕಣ್ಣುಗಳು ಮನೋಹರ ಮತ್ತು ಮಂದಹಾಸಯುಕ್ತ ಮುಖಕಮಲ ಇವುಗಳಿಂದ ಕೂಡಿರುವ, ಪಾಶ ಅಂಕುಶ ವರ ಅಭಯಗಳಿಂದ ಪ್ರಕಾಶಮಾನವಾದ ನಾಲ್ಕು ಹಸ್ತಗಳುಳ್ಳ, ತ್ವರಿತಾದೇವಿಯನ್ನು ಧ್ಯಾನಿಸಿ ಆ ದೇವಿಯನ್ನು ಶಕ್ತಿಗಳೊಡನೆ ಪೂಜಿಸಬೇಕು.

ಆ ದೇವಿಯ ಮುಂಭಾಗದಲ್ಲಿ ಫಟ್‌ಕಾರಮಾಡುತ್ತಿರುವ, ಧನುರ್ಬಾಣಗಳಿಂದ ಪ್ರಕಾಶಮಾನವಾದ ಹಸ್ತದ್ವಯವುಳ್ಳ ಶಕ್ತಿಯನ್ನು ಪೂಜಿಸಬೇಕು.

೧೪೨-೧೪೪. ಮುನೀಶ್ವರನೇ! ಈ ದೇವಿಯು ಸಾಧಕರಿಗೆ ಬಹು ಶೀಘ್ರವಾಗಿ ಅನುಗ್ರಹಮಾಡಿ ಫಲವನ್ನು ಕೊಡುವವಳಾದುದರಿಂದ ತ್ವರಿತಾ ಎಂಬುದಾಗಿ ಉಕ್ತಳಾಗಿರುವಳು. ಈರೀತಿಯಾಗಿ ಒಂಬತ್ತನೆಯದಾದ, ವಿಘ್ನ ದುಃಸ್ವಪ್ನಗಳನ್ನು ಪರಿಹರಿಸುವ, ಸಕಲಾಭೀಷ್ಟದಾಯಕಳಾದ ತ್ವರಿತಾದೇವಿಯ ಮಂತ್ರಾದಿವಿಧಾನವು ಉಕ್ತವಾಯಿತು.

ಪ್ರಾಣೋ ದ್ವಿತೀಯಃ ಸ್ವಯುತೋ ವನದುಚ್ಛಕ್ತಿಭಿಃ ಪರಃ |
ಇತೀರಿತಾ ತ್ರ್ಯಕ್ಷರಾಖ್ಯಾ ನಿತ್ಯೇಯಂ ಕುಲಸುಂದರೀ || ೧೪೪ ||

ಯಸ್ಯಾಃ ಸ್ಮರಣಮಾತ್ರೇಣ ಸರ್ವಜ್ಞತ್ವಂ ಪ್ರಜಾಯತೇ |
ತ್ರಿಭಿಸ್ತೈರುದಿತೈರ್ಮೂಲವರ್ಣೈಃ ಕುರ್ಯಾತ್ಷಡಂಗಕಂ || ೧೪೫ ||

ಆದಿಮಧ್ಯಾವಸಾನೇಷು ಪೂಜಾಜಪವಿಧೌ ಕ್ರಮಾತ್ |
ಪ್ರತ್ಯೇಕಂ ತೈಸ್ತ್ರಿಭಿರ್ಬೀಜೈರ್ದೀರ್ಘಸ್ವರಸಮನ್ವಿತೈಃ || ೧೪೬ ||

ಕುರ್ಯಾತ್ಕರಾಂಗವಕ್ತ್ರಾಣಾಂ ನ್ಯಾಸಂ ಪ್ರೋಕ್ತಂ ಯಥಾವಿಧಿ |
ಊರ್ಧ್ವಪ್ರಾಗ್ದಕ್ಷಿಣೋದಕ್ಷು ಪಶ್ಚಿಮಾಧರನಾಮಭಿಃ || ೧೪೭ ||

---

"ಶುಚಿಃ" ಇತ್ಯಾದಿ ಒಂದೂವರೆಶ್ಲೋಕದಿಂದ ಕುಲಸುಂದರೀನಿತ್ಯಾ ಮಂತ್ರವನ್ನು ಹೇಳಿದೆ.

"ಐಂ ಕ್ಲೀಂ ಸೌಃ" ಎಂಬುದೇ ಮೂರು ಅಕ್ಷರಗಳ ಕುಲಸುಂದರೀ ನಿತ್ಯಾಮಂತ್ರವು.

೧೪೫–೧೪೬. ಈ ಕುಲಸುಂದರೀ ಮಂತ್ರವನ್ನು ಸ್ಮರಿಸುವ ಮಾತ್ರದಿಂದ ಸರ್ವಜ್ಞನಾಗುವನು. ಪೂಜೆ ಮತ್ತು ಜಪಗಳ ವಿಧಾನಗಳ ಆದಿಯಲ್ಲಿ ಈ ಮಂತ್ರದ "ಐಂ" ಎಂಬ ಮೊದಲನೆಯ ಬೀಜಾಕ್ಷರಕ್ಕೆ ಆ, ಈ ಮುಂತಾದ ಆರು ದೀರ್ಘಸ್ವರಗಳನ್ನು ಸಂಯೋಜನೆ ಮಾಡಿ (ಸ್ವರಕ್ಕೆ ದೀರ್ಘ ಸ್ವರವನ್ನು ಸೇರಿಸುವುದೆಂದರೆ "ಆಂ, ಈಂ" ಮುಂತಾಗಿ ದೀರ್ಘಸ್ವರಾಕ್ಷರಗಳನ್ನೇ ಹೇಳಿ) ಷಡಂಗನ್ಯಾಸವನ್ನೂ, ಪೂಜಾದಿಗಳ ಮಧ್ಯದಲ್ಲಿ ಮಂತ್ರಮಧ್ಯ ವರ್ಣಕ್ಕೆ ಆರುದೀರ್ಘಸ್ವರಗಳನ್ನು ಸೇರಿಸಿ ಷಡಂಗನ್ಯಾಸವನ್ನೂ, ಪೂಜಾದಿಗಳ ಕೊನೆಯಲ್ಲಿ ಮಂತ್ರಾಂತ್ಯವರ್ಣಕ್ಕೆ ದೀರ್ಘಸ್ವರ ಸಂಯೋಜನೆಮಾಡಿ ಹೃದಯಾದಿ ಷಡಂಗನ್ಯಾಸವನ್ನೂ ಮಾಡಬೇಕು.

೧೪೭. ಇದರಂತೆಯೇ ಆದಿಮಧ್ಯಾಂತಗಳಲ್ಲಿ ಕ್ರಮವಾಗಿ ದೀರ್ಘಸ್ವರ ಯುಕ್ತವಾದ ಆದಿಮಧ್ಯಾಂತ್ಯ ಬೀಜಗಳನ್ನು ಆದಿಯಲ್ಲಿಯೂ, 'ನಮಃ'

ಶುಚಿನತ್ಯಂತರಸ್ಥೈಸ್ತತ್ತದಾತ್ಮಸು ಯಥಾಕ್ರಮಂ ।
ಆಧಾರರಂಧ್ರಹೃತ್ಸ್ವೇಕಂ ದ್ವಿತೀಯಂ ಲೋಚನತ್ರಯೇ ॥ ೧೪೮ ॥

ತೃತೀಯಂ ಶ್ರೋತ್ರಚಿಬುಕೇ ಚತುರ್ಥಂ ಘ್ರಾಣತಾಲುಷು ।
ಪಂಚಮಂ ಚಾಂಸನಾಭೀಷು ತತಃ ಪಾಣಿಪದದ್ವಯೇ ॥ ೧೪೯ ॥

ಮೂಲಮಧ್ಯಾಗ್ರತೋ ನ್ಯಸೇನ್ನವಧಾ ಮೂಲವರ್ಣಕೈಃ ।
ಲೋಹಿತಾಂ ಲೋಹಿತಾಕಾರಶಕ್ತಿವೃಂದನಿಷೇವಿತಾಂ ॥ ೧೫೦ ॥

ಲೋಹಿತಾಂಶುಕಭೂಷಾಸ್ರಗ್ಲೇಪನಾಂ ಷಣ್ಮುಖಾಂಬುಜಾಂ ।
ಅನರ್ಘ್ಯರತ್ನಘಟಿತಮಾಣಿಕ್ಯಮುಕುಟೋಜ್ಜ್ವಲಾಂ ॥ ೧೫೧ ॥

ರತ್ನಸ್ತಬಕಸಂಭಿನ್ನಲಸದ್ವಕ್ಷಃಸ್ಥಲಾಂ ಶುಭಾಂ ।
ಕಾರುಣ್ಯಾನಂದಪರಮಾಂ ಅರುಣಾಂಬುಜವಿಷ್ಟರಾಂ ॥ ೧೫೨ ॥

---

ಎಂಬುದನ್ನು ಕೊನೆಯಲ್ಲಿಯೂ, ಮಧ್ಯದಲ್ಲಿ ಊರ್ಧ್ವ, ಪೂರ್ವ, ದಕ್ಷಿಣ, ಉತ್ತರ, ಅಧರ ನಾಮಗಳನ್ನೂ ಸೇರಿಸಿ ಆಯಾಯಾ ದಿಕ್ಕುಗಳಲ್ಲಿನ ಮುಖದಲ್ಲಿ "ಐಂ ಅಂ ಊರ್ಧ್ವವಕ್ತ್ರಾಯ ನಮಃ" ಇತ್ಯಾದಿರೀತಿಯಾಗಿ ವಕ್ತ್ರನ್ಯಾಸ ಮಾಡಬೇಕು.

೧೪೮-೧೫೬. ಅನಂತರ ಮೂರು ಮಂತ್ರವರ್ಣಗಳನ್ನು ಕ್ರಮವಾಗಿ ಮೂಲಾಧಾರ, ಬ್ರಹ್ಮರಂಧ್ರ, ಹೃದಯಗಳಲ್ಲಿ ನ್ಯಾಸಮಾಡಿ, ಬಳಿಕ ಮೂರು ಕಣ್ಣುಗಳಲ್ಲಿ ಮಂತ್ರಾಕ್ಷರತ್ರಯವನ್ನು ಕ್ರಮವಾಗಿ ನ್ಯಾಸಮಾಡಿ, ಆಮೇಲೆ ಅದೇ ರೀತಿಯಾಗಿ ಮಂತ್ರವರ್ಣತ್ರಯವನ್ನು ಎರಡು ಕಿವಿ ಗಡ್ಡಗಳಲ್ಲಿ ಕ್ರಮವಾಗಿ ನ್ಯಾಸಮಾಡಿ, ಹಾಗೆಯೇ ನಾಲ್ಕನೆಯದಾಗಿ ಎರಡು ನಾಸಿಕಾರಂಧ್ರ, ದವಡೆ ಗಳಲ್ಲಿ ನ್ಯಾಸಮಾಡಿ, ಐದನೆಯದಾಗಿ ಎರಡು ಭುಜನಾಭಿಗಳಲ್ಲಿ ಹಾಗೆಯೇ ನ್ಯಾಸಮಾಡಿ ಅನಂತರ ಹಸ್ತಪಾದದ್ವಯಗಳಲ್ಲಿ ಹಾಗೆಯೇ ನ್ಯಾಸಮಾಡಬೇಕು. ಈ ನ್ಯಾಸವೂ ಸಹ ಆದಿಮಧ್ಯಾವಸಾನಗಳಲ್ಲಿ ಕರ್ತವ್ಯವು. ಈರೀತಿಯಾಗಿ ಮೂಲಮಂತ್ರ ವರ್ಣಗಳಿಂದ ಒಂಬತ್ತುವಿಧವಾಗಿ ನ್ಯಾಸಮಾಡಬೇಕು.

ಭುಜೈರ್ದ್ವಾದಶಭಿರ್ಯುಕ್ತಾಂ ಸರ್ವೇಷಾಂ ಸರ್ವವಾಙ್ಮಯೀಂ ।
ಪ್ರವಾಲಾಕ್ಷಸ್ರಜಂ ಪದ್ಮಂ ಕುಂಡಿಕಾಂ ರತ್ನನಿರ್ಮಿತಾಂ ॥ ೧೫೩ ॥

ರತ್ನಪೂರ್ಣಂ ತು ಚಷಕಂ ಲುಂಗೀಂ ವ್ಯಾಖ್ಯಾನಮುದ್ರಿಕಾಂ ।
ದಧಾನಾಂ ದಕ್ಷಿಣೈರ್ವಾಮೈಃ ಪುಸ್ತಕಂ ಚಾರುಣೋತ್ಪಲಂ ॥ ೧೫೪ ॥

ಹೈಮೀಂ ಚ ಲೇಖನೀಂ ರತ್ನಮಾಲಾಂ ಕಂಬುವರಂ ಭುಜೈಃ ।
ಅಭಿತಃ ಸ್ತೂಯಮಾನಾಂ ಚ ದೇವಗಂಧರ್ವಕಿನ್ನರೈಃ ॥ ೧೫೫ ॥

ಯಕ್ಷರಾಕ್ಷಸದೈತ್ಯರ್ಷಿಸಿದ್ಧವಿದ್ಯಾಧರಾದಿಭಿಃ ।
ಧ್ಯಾತ್ವೈವಮರ್ಚಯೇನ್ನಿತ್ಯಾಂ ವಾಗ್ಲಕ್ಷ್ಮೀಕಾಂತಿಸಿದ್ಧಯೇ ॥ ೧೫೬ ॥

---

ಧ್ಯಾನವಿಧಾನ :—ಕೆಂಪಗಿರುವ, ಕೆಂಪುಬಣ್ಣದ ಆಕೃತಿಯುಳ್ಳ ಶಕ್ತಿ ಸಮೂಹದಿಂದ ಸೇವಿಸಲ್ಪಡುತ್ತಿರುವ, ರಕ್ತವರ್ಣದವಸ್ತ್ರ, ಆಭರಣ, ಮಾಲಿಕೆ, ಗಂಧಗಳನ್ನು ಧರಿಸಿರುವ, ಕಮಲದಂತಿರುವ ಆರುಮುಖಗಳುಳ್ಳ, ಅಮೂಲ್ಯ ರತ್ನಘಟಿತಮಾಣಿಕ್ಯದಿಂದ ನಿರ್ಮಿತವಾದ ಕಿರೀಟದಿಂದ ಪ್ರಕಾಶಮಾನಳಾದ, ರತ್ನಹಾರಗಳಿಂದ ಯುಕ್ತವಾಗಿ ಹೊಳೆಯುತ್ತಿರುವ ವಕ್ಷಸ್ಥಲವುಳ್ಳ, ಮಂಗಳ ಕರಳಾದ, ದಯೆ ಆನಂದಗಳಿಂದ ಪೂರ್ಣಳಾದ, ರಕ್ತಕಮಲಾಸನಸ್ಥಿತಳಾದ, ಹನ್ನೆರಡು ಭುಜಗಳುಳ್ಳ, ವೇದಭಾಷಾಶಬ್ದಮಯಳಾದ, ಹವಳದ ಜಪ ಮಾಲಿಕೆ, ಕಮಲ, ರತ್ನನಿರ್ಮಿತಕುಂಡಿಕೆ, ರತ್ನಗಳಿಂದ ತುಂಬಿದ ಪಾತ್ರೆ, ಮಾತುಲುಂಗೀ, ವ್ಯಾಖ್ಯಾನಮುದ್ರೆ ಇವುಗಳನ್ನು ಬಲಬಾಹುಗಳಿಂದ ಧರಿಸಿರುವ ಎಡಗೈಗಳಿಂದ ಪುಸ್ತಕ, ಕೆಂಪುಕನ್ನೈದಿಲೇಪುಷ್ಪ, ಬಂಗಾರದಲೇಖನೀ, ರತ್ನ ಹಾರ, ಶಂಖ, ವರಮುದ್ರೆ ಇವನ್ನು ಧರಿಸಿರುವ, ಸುತ್ತಲೂ ದೇವತೆ, ಗಂಧರ್ವ, ಕಿನ್ನರ, ಯಕ್ಷ, ರಾಕ್ಷಸ, ದೈತ್ಯ, ಋಷಿ, ಸಿದ್ಧ ಮತ್ತು ವಿದ್ಯಾಧರ ಮುಂತಾದ ವರಿಂದ ಸ್ತುತಿಸಲ್ಪಡುತ್ತಿರುವ ದೇವಿಯನ್ನು ಧ್ಯಾನಿಸಿ, ವಾಕ್ಕು ಸಂಪತ್ತು ಕಾಂತಿಗಳಸಿದ್ಧಿಗಾಗಿ, ಈ ಕುಲಸುಂದರೀ ನಿತ್ಯಾದೇವಿಯನ್ನು ಪೂಜಿಸಬೇಕು.

ಸಿತಾಂ ಕೇವಲವಾಕ್ಸಿದ್ಧ್ಯೈಲಕ್ಷ್ಮೈ ಹೇಮಸ್ರಭಾಮಪಿ ।
ಧೂಮಾಭಾಂ ವೈರಿವಿದ್ವಿಷ್ಟ್ಯೈ ಮೃತಯೇ ನಿಗ್ರಹಾಯ ಚ ॥ ೧೫೭ ॥

ನೀಲಾಂ ಚ ಮೂಕೀಕರಣೇ ಸ್ಮರೇತ್ತತ್ತದಪೇಕ್ಷಯಾ ।
ಇತ್ಯೇಷಾ ದಶಮಿ ನಿತ್ಯಾ ಪ್ರೋಕ್ತಾ ತೇ ಕುಲಸುಂದರೀ ॥ ೧೫೮ ॥

ನಿತ್ಯಾನಿತ್ಯಾಂ ತ್ರಿಕೂಟಾಂ ತು ವದಾಮ್ಯೇಕಾದಶೀಮಥ ।
ಹಂಸಶ್ಚ ಹೃತ್ಪ್ರಾಣರಸಾದಾಹಕುಭಿಃ ಸಮನ್ವಿತಃ ॥ ೧೫೯ ॥

ವಿದ್ಯಯಾ ಕುಲಸುಂದರ್ಯಾ ಯೋಜಿತಃ ಸಂಪ್ರದಾಯತಃ ।
ನಿತ್ಯಾನಿತ್ಯಾ ತ್ರಿವರ್ಣೇಯಂ ಷಡ್ಭಿಃ ಕೂಟಾಕ್ಷರೈರ್ಯುತಾ ॥ ೧೬೦ ॥

---

೧೫೭-೧೫೮. ಕೇವಲ ವಾಕ್ಸಿದ್ಧಿಮಾತ್ರವನ್ನು ಬಯಸುವವನು ಶುಕ್ಲ ವರ್ಣೋಪೇತಳಾದ ಈ ದೇವಿಯನ್ನೂ, ಸಂಪತ್ತನ್ನು ಅಪೇಕ್ಷಿಸುವವನು ಸುವರ್ಣಬಣ್ಣದ ದೇವಿಯನ್ನೂ, ಶತ್ರುವಿದ್ವೇಷ, ಮರಣ ಮತ್ತು ನಿಗ್ರಹಗಳನ್ನಿಚ್ಛಿಸುವವನು ಹೊಗೆಯಬಣ್ಣದ ದೇವಿಯರೂಪವನ್ನೂ, ವಾಗ್ಬಂಧನ ಮಾಡಲು ನೀಲವರ್ಣದೇವಿಯನ್ನೂ ಧ್ಯಾನಿಸಿ ಪೂಜಿಸಬೇಕು.

ನಾರದನೇ! ನಿನಗೆ ಈರೀತಿ ಹತ್ತನೆಯದಾದ ಕುಲಸುಂದರೀನಿತ್ಯಾ ದೇವಿಯ ಮಂತ್ರಾದಿ ವಿಧಾನವನ್ನು ಹೇಳಿರುವೆನು.

೧೫೯-೧೬೦. ಈಗ ಮೂರು ಕೂಟಗಳನ್ನೊಳಗೊಂಡಿರುವ ಹನ್ನೊಂದನೆಯದಾದ ನಿತ್ಯಾನಿತ್ಯಾದೇವಿಯ ಮಂತ್ರಾದಿ ವಿಧಾನವನ್ನು ಹೇಳುವೆನು :—

ಸಂಪ್ರದಾಯಾನುಸಾರವಾಗಿ ಕುಲಸುಂದರೀ ವಿದ್ಯೆಯೊಂದಿಗೆ ಸೇರಿಸಿದ "ಹಸಕಲರಡ" ಎಂಬ ಆರು ವರ್ಣಗಳು ನಿತ್ಯಾನಿತ್ಯಾ ವಿದ್ಯೆಯು. ಇದರಲ್ಲಿ ಆರುಕೂಟಾಕ್ಷರಗಳಿಂದ ಯುಕ್ತವಾದ ಮೂರುವರ್ಣಗಳು ಅಡಕವಾಗಿವೆ. ಈ ವಿದ್ಯೆಯಲ್ಲಿ ಹಕಾರಾದಿಡಕಾರಾಂತ ವರ್ಣಗಳನ್ನು ಪ್ರತ್ಯೇಕವಾಗಿ ಪ್ರತಿಲೋಮ ಕ್ರಮದಿಂದ ಸಂಯೋಜನೆಮಾಡುವುದರಿಂದಲೂ, ಡಕಾರಾದಿ ಹಕಾರಾಂತ ವರ್ಣಗಳನ್ನು ಪ್ರತ್ಯೇಕವಾಗಿ ಅನುಲೋಮಕ್ರಮದಿಂದ ಸಂಯೋಜನೆಮಾಡುವುದ

ಪ್ರತಿಲೋಮಾದಿಭೀರೂಪೈರ್ದ್ವಿಸಪ್ತತಿಭಿದಾ ಮತಾ ।
ಯಸ್ಯಾ ಭಜನತಃ ಸಿದ್ಧೋ ನರಃ ಸ್ಯಾತ್ಖೇಚರಃ ಸುಖೀ ॥ ೧೬೧ ॥

ನಿಗ್ರಹಾನುಗ್ರಹೌ ಕರ್ತುಂ ಕ್ಷಮಃ ಸ್ಯಾದ್ಭುವನತ್ರಯೇ ।
ದೀರ್ಘಸ್ವರಸಮೇತಾಭ್ಯಾಂ ಹಂಸಹೃದ್ಭ್ಯಾಂ ಷಡಂಗಕಂ ॥ ೧೬೨ ॥

ಭ್ರೂಮಧ್ಯೇ ಕಂಠಹೃನ್ನಾಭಿಗುಹ್ಯಾಧಾರೇಷು ಚ ಕ್ರಮಾತ್ ।
ವಿದ್ಯಾಕ್ಷರಾಣಿ ಕ್ರಮಶೋ ನ್ಯಸೇದ್ಬಿಂದುಯುತಾನಿ ಚ ॥ ೧೬೩ ॥

ವ್ಯಾಪಕಂ ಚ ಸಮಸ್ತೇನ ವಿಧಾಯ ವಿಧಿನಾ ಪುನಃ ।
ಧ್ಯಾಯೇತ್ಸಮಸ್ತಸಂಪತ್ತಿಹೇತೋಃ ಸರ್ವಾತ್ಮಿಕಾಂ ಶಿವಾಂ ॥ ೧೬೪ ॥

---

ರಿಂದಲೂ, ಆಗುವ ಹನ್ನೆರಡು ಪ್ರಭೇದಗಳಿಗೆ ಕುಲಸುಂದರೀವಿದ್ಯೆಯ ಮೂರು ವರ್ಣಗಳನ್ನು ಪ್ರತ್ಯೇಕವಾಗಿ ಸಂಪ್ರದಾಯಾನುಸಾರ ಸಂಯೋಜನೆಮಾಡಿದರೆ ನಿತ್ಯಾನಿತ್ಯಾ ವಿದ್ಯೆಯು ಎಪ್ಪತ್ತೆರಡು ವಿಧವಾಗುವುದು.

"ಹಸಕಲರಡೈಂ, ಹಸಕಲರಡೀಂ, ಹಸಕಲರಡೌಃ" ಇತ್ಯಾದಿ ರೀತಿಯಾಗಿ ಸಂಯೋಜಿತವಿದ್ಯೆಗಳನ್ನು ತಿಳಿದುಕೊಳ್ಳಬೇಕು. ಈ ನಿತ್ಯಾನಿತ್ಯಾ ವಿದ್ಯೆಯ ಸೇವನೆಯಿಂದ ಸಿದ್ಧಿಯನ್ನು ಪಡೆದ ಪುರುಷನು ಅಂತರಿಕ್ಷದಲ್ಲಿ ಸಂಚರಿಸುವವನಾಗಿ ಸುಖವಾಗಿರುವನು. ಮತ್ತು ಮೂರುಲೋಕಗಳಲ್ಲಿಯೂ ನಿಗ್ರಹಾನುಗ್ರಹಗಳನ್ನು ಮಾಡಲು ಸಮರ್ಥನಾಗುವನು.

೧೬೨-೧೬೪. ದೀರ್ಘಸ್ವರಸಹಿತ ಹ, ಸ ವರ್ಣಗಳಿಂದ ಷಡಂಗವಿನ್ಯಾಸ ಮಾಡಬೇಕು. ಹುಬ್ಬುಗಳ ಮಧ್ಯ, ಕಂಠ, ಹೃದಯ, ಹೊಕ್ಕಳು, ಶಿಶ್ನ, ಮೂಲಾಧಾರಸ್ಥಾನಗಳಲ್ಲಿ ಈ ವಿದ್ಯೆಯ ಅಕ್ಷರಗಳನ್ನು ಕ್ರಮವಾಗಿ ಅನುಸ್ವಾರದೊಡನೆ ಒಂದೊಂದನ್ನು ನ್ಯಾಸಮಾಡಬೇಕು. ಸಂಪೂರ್ಣ ಮಂತ್ರದಿಂದ ಪುನಃ ಸರ್ವಾಂಗನ್ಯಾಸಮಾಡಬೇಕು.

ಸಕಲೈಶ್ವರ್ಯಗಳನ್ನು ಪಡೆಯುವುದಕ್ಕೆ ಸರ್ವಾತ್ಮಕಳಾದ ಶಿವಾದೇವಿಯನ್ನು ಧ್ಯಾನಿಸಬೇಕು.

ಉದ್ಯದ್ಭಾಸ್ಕರಬಿಂಬಾಭಾಂ ಮಾಣಿಕ್ಯಮುಕುಟೋಜ್ಜ್ವಲಾಂ ।
ಪದ್ಮರಾಗಕೃತಾಕಲ್ಪಾಮರುಣಾಂಶುಕಧಾರಿಣೀಂ ॥ ೧೬೫ ॥

ಚಾರುಸ್ಮಿತಲಸದ್ವಕ್ತ್ರಷಟ್ಸರೋಜವಿರಾಜಿತಾಂ ।
ಪ್ರತಿವಕ್ತ್ರಂ ತ್ರಿನಯನಾಂ ಭುಜೈರ್ದ್ವಾದಶಭಿರ್ಯುತಾಂ ॥ ೧೬೬ ॥

ಪಾಶಾಕ್ಷಗುಣಪುಂಡ್ರೇಕ್ಷುಚಾಪಖೇಟತ್ರಿಶೂಲಕಾನ್ ।
ಕರೈರ್ವಾಮೈರ್ದಧಾನಾಂ ಚ ಅಂಕುಶಂ ಪುಸ್ತಕಂ ತಥಾ ॥ ೧೬೭ ॥

ಪುಷ್ಪೇಷುಮಂಬುಜಂ ಚೈವ ನೃಕಪಾಲಾಭಯೇ ತಥಾ ।
ದಧಾನಾಂ ದಕ್ಷಿಣೈರ್ಹಸ್ತೈರ್ಧ್ಯಾಯೇಪ್ಸ್ವೇವಿಮನಸ್ಯಧೀಃ ॥ ೧೬೮ ॥

ಇತ್ಯೇಷೈಕಾದಶೀ ಪ್ರೋಕ್ತಾ ದ್ವಾದಶೀಂ ಶೃಣು ನಾರದ ।
ತ್ವರಿತೋಽಪಾಂತ್ಯಮಾದ್ಯಂ ಸ್ಯಾದ್ದ್ವಿತೀಯಾಹಚರಸ್ವಯುಕ್ ॥ ೧೬೯ ॥

---

೧೬೫-೧೬೮. ಧ್ಯಾನವಿಧಾನ :-ಉದಯಿಸುತ್ತಿರುವ ಸೂರ್ಯಬಿಂಬವಂತೆ ಪ್ರಕಾಶಮಾನಳಾದ, ಮಾಣಿಕ್ಯಕಿರೀಟದಿಂದ ಹೊಳೆಯುತ್ತಿರುವ, ಪದ್ಮರಾಗ ಮಣಿಯಿಂದಲಂಕೃತಳಾಗಿರುವ, ರಕ್ತವಸ್ತ್ರವನ್ನುಟ್ಟಿರುವ ದಿವ್ಯಮಂದಹಾಸದಿಂದ ಹೊಳೆಯುತ್ತಿರುವ, ಕಮಲದಂತಿರುವ ಆರುಮುಖಗಳಿಂದ ವಿರಾಜಿಸುತ್ತಿರುವ, ಒಂದೊಂದುಮುಖದಲ್ಲಿಯೂ ಮೂರುನೇತ್ರಗಳುಳ್ಳ, ಹನ್ನೆರಡು ಭುಜಗಳಿಂದ ಯುಕ್ತಳಾದ, ಪಾಶ ಅಕ್ಷಮಾಲೆ ಪುಂಡ್ರ ಧನುಸ್ಸು ಖಡ್ಗ ಮತ್ತು ತ್ರಿಶೂಲ ಗಳನ್ನು ಎಡಗೈಗಳಲ್ಲಿ ಧರಿಸಿಕೊಂಡಿರುವ, ಬಲಗೈಗಳಲ್ಲಿ ಅಂಕುಶ ಪುಸ್ತಕ ಪುಷ್ಪಬಾಣ ಪದ್ಮ ನರಕಪಾಲ ಅಭಯಮುದ್ರೆ ಇವುಗಳನ್ನು ಹಿಡಿದುಕೊಂಡಿರುವ ನಿತ್ಯಾನಿತ್ಯಾ ದೇವಿಯನ್ನು ಏಕಾಗ್ರಮನಸ್ಸಿನಿಂದ ಧ್ಯಾನಿಸಬೇಕು.

೧೬೯-೧೭೨. ನಾರದನೇ ! ಈರೀತಿಯಾಗಿ ಹನ್ನೊಂದನೆಯ ನಿತ್ಯಾ ವಿದ್ಯೆಯು ಉಕ್ತವಾಯಿತು. ಈಗ ಹನ್ನೆರಡನೆಯ ನಿತ್ಯಾವಿಧಾನವನ್ನು ಹೇಳುವೆನು ; ಕೇಳು.

ಹೃಚ್ಛೇ ದಾಹಕ್ಷ್ಮಾಸ್ವಯುತಂ ವಜ್ರೇಶೀಪಂಚಮಂ ತಥಾ ।
ಮರುತ್ಸ್ವಯುಕ್ತೋ ಮಧ್ಯಾದ್ಯೇ ದಶವ್ಯಾಃ ಕ್ರಮಶಃ ಸ್ಮೃತೇ ॥ ೧೭೦ ॥

ಭೂಮಿರಸಾಕ್ಷ್ಮಾಸ್ವಯುತಾ ವಜ್ರೇಶೀ ಷಷ್ಠತಃ ಕ್ರಮಾತ್ ।
ಷಡಕ್ಷರಾಣಿ ತ್ವರಿತಾ ತೃತೀಯಂ ತದನಂತರಂ ॥ ೧೭೧ ॥

ದ್ಯುತಿರ್ದಾಹಚರಸ್ತೇನ ಅಸ್ಯಾ ಆದ್ಯಮನಂತರಂ ।
ಉಕ್ತಾ ನೀಲಪತಾಕಾಖ್ಯಾ ನಿತ್ಯಾ ಸಪ್ತದಶಾಕ್ಷರೀ ॥ ೧೭೨ ॥

ದ್ವಿದ್ವಿಪಕ್ಷಾಕ್ಷಿ ಷಟ್‌ತ್ರ್ಯರ್ಣೈಃ ಮಂತ್ರೋತ್ಥೈರಂಗಕಲ್ಪನಂ ।
ಶ್ರೋತ್ರಾಕ್ಷಿನಾಸಯುಗಲೇ ವಾಚಿ ಕಂಠೇ ಹೃದಿ ಕ್ರಮಾತ್ ॥ ೧೭೩ ॥

ನಾಭಾವಾಧಾರಕೇ ಪಾದಸಂಧಿಷು ತ್ರಿಷು ಚ ಕ್ರಮಾತ್ ।
ಮಂತ್ರಾಕ್ಷರಾಣಿ ಕ್ರಮಶೋ ನ್ಯಸೇತ್ಸಪ್ತದಶಾಪಿ ಚ ॥ ೧೭೪ ॥

---

## ನೀಲಪತಾಕಾನಿತ್ಯಾಮಂತ್ರ

"ಹ್ರೀಂ ಫ್ರೇಂ ಸ್ರೂಂ ಓಂ ಆಂ ಕ್ಲೀಂ ಐಂ ವ್ಲೂಂ ನಿತ್ಯಮದದ್ರವೇ ಹುಂ ಫ್ರೇಂ ಹ್ರೀಂ" ಎಂಬುದು ಹದಿನೇಳಕ್ಷರಗಳ ನೀಲಪತಾಕಾ ನಿತ್ಯಾದೇವಿಯ ಮಂತ್ರವು ಎಂದು ಉಕ್ತವಾಗಿದೆ.

೧೭೩-೧೭೪. ಈ ಮಂತ್ರದ 2, 2, 2, 2, 6, 3 ವರ್ಣಗಳಿಂದ ಕ್ರಮವಾಗಿ ಹೃದಯ ಮುಂತಾದ ಆರುಅಂಗಗಳನ್ನು ನ್ಯಾಸಮಾಡಬೇಕು.

ಬಳಿಕ ಎರಡು ಕಿವಿ, ನೇತ್ರ, ನಾಸಿಕೆಗಳು, ವಾಗಿಂದ್ರಿಯ, ಕಂಠ, ಹೃದಯ, ನಾಭಿ, ಮೂಲಾಧಾರ ಮತ್ತು ಪಾದಗಳ ಮೂರುಮೂರು ಸಂಧಿ ಪ್ರದೇಶಗಳು ಒಟ್ಟು ಈ ಹದಿನೇಳು ಸ್ಥಾನಗಳಲ್ಲಿ ಕ್ರಮವಾಗಿ ಮಂತ್ರದ ಒಂದೊಂದು ವರ್ಣಗಳನ್ನು ನ್ಯಾಸಮಾಡಬೇಕು. ವಿಧಾನೋಕ್ತಪ್ರಕಾರವಾಗಿ ಸಂಪೂರ್ಣಮಂತ್ರದಿಂದ ಸರ್ವಾಂಗನ್ಯಾಸಮಾಡಬೇಕು.

ವ್ಯಾಪಕಂ ಚ ಸಮಸ್ತೇನ ವಿದಧ್ಯಾಚ್ಚ ಯಥಾವಿಧಿ ।
ಇಂದ್ರನೀಲನಿಭಾಂ ಭಾಸ್ವನ್ಮಣಿಮೌಲಿವಿರಾಜಿತಾಂ ॥ ೧೭೫ ॥

ಪಂಚವಕ್ತ್ರಾಂ ತ್ರಿನಯನಾಮರುಣಾಂಶುಕಧಾರಿಣೀಂ ।
ದಶಹಸ್ತಾಂ ಲಸನ್ಮುಕ್ತಾಮಣ್ಯಾಭರಣಮಂಡಿತಾಂ ॥ ೧೭೬ ॥

ರತ್ನಸ್ತಬಕಸಂಪನ್ನದೇಹಾಂ ಚಾರುಸ್ಮಿತಾನನಾಂ ।
ಪಾಶಂ ಪತಾಕಾಂ ಚರ್ಮಾಪಿ ಶಾರ್ಙ್ಗಚಾಪಂ ವರಂ ಕರೈಃ ॥ ೧೭೭ ॥

ದಧಾನಾಂ ವಾಮಪಾರ್ಶ್ವಸ್ಥೈಃ ಸರ್ವಾಭರಣಭೂಷಿತೈಃ ।
ಅಂಕುಶಂ ಚ ತಥಾ ಶಕ್ತಿಂ ಖಡ್ಗಂ ಬಾಣಂ ತಥಾಭಯಂ ॥ ೧೭೮ ॥

---

೧೭೫-೧೭೮. ಧ್ಯಾ ನ ವಿ ಧಾ ನ :—ಇಂದ್ರನೀಲಮಣಿಯಂತಿರುವ, ಪ್ರಕಾಶಮಾನಮಣಿಮಯಕಿರೀಟದಿಂದ ವಿರಾಜಿಸುತ್ತಿರುವ, ಐದುಮುಖಗಳುಳ್ಳ, ಮೂರುಕಣ್ಣುಗಳುಳ್ಳ, ಕೆಂಪುವಸ್ತ್ರವನ್ನುಟ್ಟಿರುವ, ಹತ್ತುಕೈಗಳುಳ್ಳ. ಹೊಳೆಯುತ್ತಿರುವ ಮುತ್ತು ರತ್ನಗಳಿಂದ ಮಾಡಿದ ಒಡವೆಗಳಿಂದಲಂಕೃತಳಾದ, ರತ್ನಸಮೂಹಗಳಿಂದ ಯುಕ್ತದೇಹವುಳ್ಳ, ದಿವ್ಯಮಂದಹಾಸಯುಕ್ತಮುಖವುಳ್ಳ, ಪಾಶ, ಪತಾಕೆ, ಚರ್ಮ, ಧನುರ್ಬಾಣ, ವರಮುದ್ರೆಗಳನ್ನು ಸರ್ವಾಭರಣಗಳಿಂದ ಅಲಂಕೃತವಾದ ಎಡಗಡೆಯ ಕೈಗಳಿಂದ ಹಿಡಿದುಕೊಂಡಿರುವ, ಅಂಕುಶ ಶಕ್ತಿ ಕತ್ತಿ ಬಾಣ ಅಭಯಮುದ್ರೆ ಇವನ್ನು ಬಲಗೈಗಳಲ್ಲಿ ಧರಿಸಿರುವ, ಪದ್ಮಾಸನದಲ್ಲಿ ಕುಳಿತಿರುವ, ತನ್ನಂತೆಯೇ ಆಕಾರ ಬಣ್ಣ ವೇಷ ಮುಖ ಹಸ್ತ ಆಯುಧ ಆಭರಣಗಳಿಂದ ಯುಕ್ತವಾದ ಶಕ್ತಿಸಮೂಹದಿಂದ ಕೂಡಿದ' ದೇವಿಯನ್ನು ನಿತ್ಯಾರ್ಚನೆಯ ಕ್ರಮದಲ್ಲಿ ಧ್ಯಾನಿಸಬೇಕು.

ತ್ರಿಕೋಣಾಂತರ್ಗತ ಷಟ್ಕೋಣಯುಕ್ತವಾದ ಅಷ್ಟದಳಪದ್ಮವನ್ನು ರಚಿಸಿ, ಅದರ ಹೊರಗೆ ಅಷ್ಟಾಸ್ರವನ್ನು ಲೇಖಿಸಿ, ಅದು ಅಡಗುವಂತೆ ಚತುರಸ್ರ ಗೃಹದ್ವಯವನ್ನು ರಚಿಸಿ, ನಾಲ್ಕುದಿಕ್ಕುಗಳಲ್ಲಿ ನಾಲ್ಕುಬಾಗಿಲುಗಳನ್ನು

ದಧಾನಾಂ ದಕ್ಷಿಣೈರ್ಹಸ್ತೈರಾಸೀನಾಂ ಪದ್ಮವಿಷ್ಟರೇ ।
ಸ್ವಾಕಾರವರ್ಣವೇಷಾಸ್ಯಪಾಣ್ಯಾಯುಧವಿಭೂಷಣೈಃ ॥ ೧೭೯ ॥

ಶಕ್ತಿವೃಂದೈರ್ವೃತಾಂ ಧ್ಯಾಯೇದ್ದೇವೀಂ ನಿತ್ಯಾರ್ಚನಕ್ರಮೇ ।
ತ್ರಿಷಟ್ಕೋಣಯುತಂ ಪದ್ಮಮಷ್ಟಪತ್ರಂ ತತೋ ಬಹಿಃ ॥ ೧೮೦ ॥

ಅಷ್ಟಾಸ್ರಂ ಭೂಪುರದ್ವಂದ್ವಾವೃತಂ ತತ್ಪುರಯುಗ್ಮಕಂ ।
ಚತುರ್ದ್ವಾರಯುತಂ ದಿಕ್ಷು ಶಾಖಾಭಿಶ್ಚ ಸಮನ್ವಿತಂ ॥ ೧೮೧ ॥

ಕೃತ್ವಾ ತಾಮಾವೃತಾಂ ಶಕ್ತಿಗಣೈಸ್ತತ್ರಾರ್ಚಯೇಚ್ಛಿವಾಂ ।
ಏಷಾ ತೇ ದ್ವಾದಶೀ ನಿತ್ಯಾ ಪ್ರೋಕ್ತಾ ನೀಲಪತಾಕಿನೀ ॥ ೧೮೨ ॥

ಸಮರೇ ವಿಜಯಂ ಖಡ್ಗಪಾದುಕಾಂಜನಸಿದ್ಧಿದಾ ।
ವೇತಾಲಯಕ್ಷಿಣೀಚೇಟಪಿಶಾಚಾದಿಪ್ರಶೋಧಿನೀ ॥ ೧೮೩ ॥

ನಿಧಾನಬಿಲಸಿದ್ಧಾನ್ನಸಾಧಿನೀ ಕಾಮದೋದಿತಾ ।
ಅಥ ತ್ರಯೋದಶೀಂ ನಿತ್ಯಾಂ ವಕ್ಷ್ಯಾಮಿ ಶೃಣು ನಾರದ ॥ ೧೮೪ ॥

---

ಮಾಡಿ, ಶಾಖೆಗಳನ್ನೂ ಸೇರಿಸಿ, ಅದರ ಸುತ್ತಲೂ ಶಕ್ತಿಗಣವನ್ನು ರಚಿಸಿ ಅದರ ಮಧ್ಯದಲ್ಲಿ ಶಿವಾದೇವಿಯನ್ನು ಪೂಜಿಸಬೇಕು.

ನಾರದನೇ! ಈರೀತಿಯಾಗಿ ನೀಲಪತಾಕಿನೀ ಎಂಬ ಹನ್ನೆರಡನೆಯ ನಿತ್ಯಾವಿಧಾನವು ನಿನಗೆ ಹೇಳಲ್ಪಟ್ಟಿತು.

೧೮೩. ಈ ಮಂತ್ರವು ಯುದ್ಧದಲ್ಲಿ ವಿಜಯವನ್ನೂ, ಖಡ್ಗ ಅಂಜನ ಪಾದುಕಾ ಸಿದ್ಧಿಗಳನ್ನೂ ಕೊಡುತ್ತದೆ. ಬೇತಾಳ ಯಕ್ಷಿಣೀ ಚೇಟ ಪಿಶಾಚ ಮುಂತಾದುವುಗಳ ಬಾಧೆಯನ್ನು ಪರಿಹರಿಸುವುದು.

೧೮೪. ಗುಹೆ ಮುಂತಾದುವುಗಳಲ್ಲಿಯೂ ಸಹ ಸಿದ್ಧಾನ್ನವನ್ನು ಕೊಡಿಸುವುದು. ಹೆಚ್ಚೇನು! ಇದು ಸಕಲ ಇಷ್ಟಾರ್ಥಗಳನ್ನೂ ಕೊಡುತ್ತದೆಂದುಕ್ತವಾಗಿದೆ. ನಾರದನೇ! ಈಗ ಹದಿಮೂರನೆಯ ನಿತ್ಯಾದೇವಿಯ ಮಂತ್ರಾದಿ ವಿಧಾನವನ್ನು ಹೇಳುವೆನು ಕೇಳು.

**ರಸೋ ನಭಸ್ತಥಾ ದಾಹೋ ವ್ಯಾಪ್ತಂ ಕ್ಷ್ಮಾವನಪೂರ್ವಿಕಾ |**
**ಸ್ವೇನ ಯುಕ್ತ್ವಾ ಭವೇನ್ನಿತ್ಯಾ ವಿಜಯೈಕಾಕ್ಷರಾ ಮುನೇ || ೧೮೫ ||**

**ವಿದ್ಯಾಯಾ ವ್ಯಂಜನೈರ್ದೀರ್ಘಸ್ವರಯುಕ್ತೈಶ್ಚತುಷ್ಟಯಂ |**
**ಶೇಷಾಭ್ಯಾಂ ಚ ದ್ವಯಂ ಕುರ್ಯಾತ್ಷಡಂಗಾನಿ ಕರಾಂಗಯೋಃ || ೧೮೬ ||**

**ಜ್ಞಾನೇಂದ್ರಿಯೇಷು ಶ್ರೋತ್ರಾದಿಷ್ವಥ ಚಿತ್ತೇ ಚ ವಿನ್ಯಸೇತ್ |**
**ಅಕ್ಷರಾಣಿ ಕ್ರಮಾದ್ಬಿಂದುಯುತಾನ್ಯನ್ಯತ್ತು ಪೂರ್ವವತ್ || ೧೮೭ ||**

**ಪಂಚವಕ್ತ್ರಾಂ ದಶಭುಜಾಂ ಪ್ರತಿವಕ್ತ್ರಂ ತ್ರಿಲೋಚನಾಂ |**
**ಭಾಸ್ವನ್ಮುಕುಟವಿನ್ಯಾಸಚಂದ್ರಲೇಖಾವಿರಾಜಿತಾಂ || ೧೮೮ ||**

## ವಿಜಯಾನಿತ್ಯಾಮಂತ್ರ

೧೮೫ "ಭ ಮ ರ ಯ ಉ ಓಂ" ಇಷ್ಟು ಅಕ್ಷರಗಳು ಸೇರಿರುವ "ಭ್ಮ್ರ್ಯೂಂ" ಎಂಬ ಕೂಟರೂಪವಾದ ಏಕಾಕ್ಷರ ವಿದ್ಯೆಯು ವಿಜಯಾನಿತ್ಯಾ ವಿದ್ಯೆಯೆನಿಸುವುದು.

೧೮೬. ದೀರ್ಘಸ್ವರಸಹಿತವಾದ, ಈ ವಿದ್ಯೆಯ ನಾಲ್ಕು ವ್ಯಂಜನಾಕ್ಷರಗಳಿಂದ ಎಂದರೆ "ಭಾಂ, ಮಾಂ, ರೂಂ, ಯೈಂ" ಎಂಬ ನಾಲ್ಕು ವರ್ಣಗಳಿಂದ ಹೃದಯಾದಿ ನಾಲ್ಕು ಅಂಗಗಳನ್ನೂ. 'ಉಂ ಓಂ' ಎಂಬ ಎರಡು ಅಕ್ಷರಗಳಿಂದ ಎರಡು ಅಂಗಗಳನ್ನೂ ನ್ಯಾಸಮಾಡಬೇಕು. ಇದೇ ಕರಾಂಗನ್ಯಾಸವು.

೧೮೭. ಈ ಮಂತ್ರದ ಒಂದೊಂದು ವರ್ಣವನ್ನೂ ಅನುಸ್ವಾರ ಸಹಿತವಾಗಿ ಕ್ರಮವಾಗಿ ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ರಸನ, ಘ್ರಾಣ ಮತ್ತು ಮನಸ್ಸು ಎಂಬ ಆರು ಇಂದ್ರಿಯಗಳಲ್ಲಿ ನ್ಯಾಸಮಾಡಬೇಕು. ಉಳಿದುದನ್ನು ಹಿಂದಿನ ಮಂತ್ರಕ್ಕೆ ಹೇಳಿರುವಂತೆ ತಿಳಿಯಬೇಕು.

೧೮೮-೧೯೩. ಧ್ಯಾನವಿಧಾನ :—ಒಂದೊಂದು ಮುಖದಲ್ಲಿಯೂ ಮೂರರಂತೆ ಕಣ್ಣುಗಳುಳ್ಳ, ಐದು ಮುಖಗಳು ಹತ್ತು ಬಾಹುಗಳು ಇವುಗಳುಳ್ಳ,

ಸರ್ವಾಭರಣಸಂಯುಕ್ತಾಂ ಪೀತಾಂಬರಸಮುಜ್ವಲಾಂ ।
ಉದ್ಯದ್ಭಾಸ್ವದ್ಬಿಂಬತುಲ್ಯದೇಹಕಾಂತಿಂ ಶುಚಿಸ್ಮಿತಾಂ ॥ ೧೮೯ ॥

ಶಂಖಂ ಪಾಶಂ ಖೇಟಚಾಪೌ ಕಲ್ಹಾರಂ ವಾಮಬಾಹುಭಿಃ ।
ಚಕ್ರಂ ತಥಾಂಕುಶಂ ಖಡ್ಗಂ ಸಾಯಕಂ ಮಾತುಲುಂಗಕಂ ॥ ೧೯೦ ॥

ದಧಾನಾಂ ದಕ್ಷಿಣೈರ್ಹಸ್ತೈಃ ಪ್ರಯೋಗೇ ಭೀಮದರ್ಶನಾಂ ।
ಉಪಾಸನೇತಿಸೌಮ್ಯಾಂ ಚ ಸಿಂಹೋಪರಿ ಕೃತಾಸನಾಂ ॥ ೧೯೧ ॥

ವ್ಯಾಘ್ರಾರೂಢಾಭಿರಭಿತಃ ಶಕ್ತಿಭಿಃ ಪರಿವಾರಿತಾಂ ।
ಸಮರೇ ಪೂಜನೇಽನ್ಯೇಷು ಪ್ರಯೋಗೇಷು ಸುಖಾಸನಾಂ ॥ ೧೯೨ ॥

ಶಕ್ತಯಶ್ಚಾಪಿ ಪೂಜಾಯಾಂ ಸುಖಾಸನಸಮನ್ವಿತಾಃ ।
ಸರ್ವಾ ದೇವ್ಯಾಃ ಸಮಾಕಾರಮುಖಪಾಣ್ಯಾಯುಧಾ ಅಪಿ ॥ ೧೯೩ ॥

---

ಪ್ರಕಾಶಮಾನವಾದ ಕಿರೀಟದಲ್ಲಿ ವಿನ್ಯಸ್ತವಾಗಿರುವ ಚಂದ್ರಲೇಖೆಯಿಂದ ವಿರಾಜಿಸುತ್ತಿರುವ, ಸಕಲಾಭರಣಯುಕ್ತಳಾದ, ಪೀತಾಂಬರದಿಂದ ಹೊಳೆಯುತ್ತಿರುವ, ಉದಯಿಸುತ್ತಿರುವ ಸೂರ್ಯಬಿಂಬಸಮಾನವಾದ ದೇಹಕಾಂತಿಯುಳ್ಳ, ಮಂದಹಾಸಮಾಡುತ್ತಿರುವ, ಎಡಗೈಗಳಿಂದ ಶಂಖ ಪಾಶ ಖಡ್ಗ ಧನುಸ್ಸು ಮತ್ತು ಕಲ್ಹಾರಪುಷ್ಪಗಳನ್ನು ಹಿಡಿದುಕೊಂಡಿರುವ, ಚಕ್ರ ಅಂಕುಶ ಖಡ್ಗ ಬಾಣ ಮಾತುಲುಂಗಗಳನ್ನು ಬಲಗೈಗಳಲ್ಲಿ ಧರಿಸಿರುವ, ಪ್ರಯೋಗದಶೆಯಲ್ಲಿ ಭಯಂಕರ ರೂಪವನ್ನು ತೋರಿಸುತ್ತಿರುವ, ಉಪಾಸನೆಮಾಡುವ ಕಾಲದಲ್ಲಿ ಅತ್ಯಂತ ಸೌಮ್ಯ ಮೂರ್ತಿಯಾಗಿ ತೋರುವ, ಸಿಂಹದಮೇಲೆ ಕುಳಿತಿರುವ, ಹುಲಿಯ ಮೇಲೆ ಕುಳಿತಿರುವ ಶಕ್ತಿಪರಿವಾರಯುಕ್ತಳಾದ, ಯುದ್ಧ ಪೂಜೆ ಇತರ ಪ್ರಯೋಗಗಳಲ್ಲಿ ಸುಖಾಸೀನಳಾದ ದೇವಿಯನ್ನು ಧ್ಯಾನಿಸಬೇಕು.

ಪೂಜೆಯ ಕಾಲದಲ್ಲಿ ಪರಿವಾರಶಕ್ತಿಗಳೂ ಸಹ ಸುಖಾಸನಗಳಲ್ಲಿ ಕುಳಿತಿರುವರೆಂದು ಭಾವಿಸಬೇಕು. ಮತ್ತು ಸಕಲ ದೇವಿಯರೂ ಸಹ ಪ್ರಧಾನದೇವಿಗೆ ಸಮಾನವಾದ ಆಕಾರ, ಮುಖ, ಹಸ್ತ, ಆಯುಧಗಳುಳ್ಳವರೆಂದು ಚಿಂತಿಸಬೇಕು.

ಚತುರಸ್ರದ್ವಯಂ ಕೃತ್ವಾ ಚತುರ್ದ್ವಾರೋಪಶೋಭಿತಂ ।
ಶಾಖಾಷ್ಟಕಸಮೋಪೇತಂ ತತ್ರ ಪ್ರಾಗ್ವತ್ಸಮಾರ್ಚಯೇತ್ ॥ ೧೯೪ ॥

ತದಂತರ್ವೃತಯುಗ್ಮಾಂತರಷ್ಟಕೋಣಂ ವಿಧಾಯ ತು ।
ತದಂತಶ್ಚ ತಥಾ ಪದ್ಮಂ ಷೋಡಶಚ್ಛದಸಂಯುತಂ ॥ ೧೯೫ ॥

ತಥೈವಾಷ್ಟಚ್ಛದಂ ಪದ್ಮಂ ವಿಧಾಯಾವಾಹ್ಯ ತತ್ರ ತಾಂ ।
ತತ್ತಚ್ಛಕ್ತ್ಯಾ ವೃತಾಂ ಸಮ್ಯಗುಪಚಾರೈಸ್ತಥಾರ್ಚಯೇತ್ ॥ ೧೯೬ ॥

ಏಷಾ ತ್ರಯೋದಶೀ ಪ್ರೋಕ್ತಾ ವಾದೇ ಯುದ್ಧೇ ಜಯಪ್ರದಾ ।
ಚತುರ್ದಶೀಂ ಪ್ರವಕ್ಷ್ಯೇಽಥ ನಿತ್ಯಾಂ ವೈ ಸರ್ವಮಂಗಲಾಂ ॥ ೧೯೭ ॥

ಹೃದಂಬುವಸಯುಕ್ತಂ ಸ್ವಂ ನಿತ್ಯಾ ಸ್ಯಾತ್ಸರ್ವಮಂಗಲಾ ॥ ೧೯೮ ॥

೧೯೪-೧೯೬. ಎಂಟು ಶಾಖೆಗಳು ಮತ್ತು ನಾಲ್ಕು ದ್ವಾರಗಳಿಂದ ಸಹಿತವಾದ ಚತುರಸ್ರಮಂಡಲದ್ವಯವನ್ನು ರಚಿಸಿ ಅದರ ಒಳಭಾಗದಲ್ಲಿ ಅಷ್ಟಕೋಣಗಳನ್ನು ಮಾಡಿ, ಅದರಲ್ಲಿ ಹದಿನಾರು ದಳಗಳುಳ್ಳ ಪದ್ಮ, ಅದರಲ್ಲಿ ಅಷ್ಟದಳ ಪದ್ಮಗಳನ್ನು ಮಾಡಿ ಅಲ್ಲಿ ಆಯಾಯಾ ಶಕ್ತಿ ಸಹಿತ ದೇವಿಯನ್ನು ಆವಾಹನೆ ಮಾಡಿ ಸಮಿಾಚೀನೋಪಚಾರಗಳಿಂದ ಪೂಜಿಸಬೇಕು.

೧೯೭. ಈ ರೀತಿಯಾಗಿ ವಾದ ಮತ್ತು ಯುದ್ಧಗಳಲ್ಲಿ ಜಯಪ್ರದಳಾದ ವಿಜಯಾ ಎಂಬ ಹದಿಮೂರನೆಯ ನಿತ್ಯಾದೇವಿಯ ಮಂತ್ರಾದಿ ವಿಧಾನವು ಹೇಳಲ್ಪಟ್ಟಿತು. ಈಗ 'ಸರ್ವಮಂಗಳಾ' ಎಂಬ ಹದಿನಾಲ್ಕನೆಯ ನಿತ್ಯಾ ವಿದ್ಯೆಯ ವಿಧಾನವನ್ನು ಹೇಳುವೆನು; ಕೇಳು.

## ಸರ್ವಮಂಗಳಾನಿತ್ಯಾವಿದ್ಯೆ

೧೯೮. "ಸ್ವಾಂ" ಎಂಬ ಏಕಾಕ್ಷರ ವಿದ್ಯೆಯು ಸರ್ವಮಂಗಳಾ ನಿತ್ಯಾ ವಿದ್ಯೆಯೆನಿಸುವುದು.

ಏಕಾಕ್ಷರ್ಯರ್ಜನಯಾ ಸಿದ್ಧೋ ಜಾಯತೇ ಖೇಚರಃ ಕ್ಷಣಾತ್ ।
ಷಡ್ದೀರ್ಘಾರ್ಢ್ಯಾಂ ಮೂಲವಿದ್ಯಾಂ ಷಡಂಗೇಷು ಪ್ರವಿನ್ಯಸೇತ್ ॥ ೧೯೯ ॥

ತಾಂ ನಿತ್ಯಾಂ ಜಾತರೂಪಾಭಾಂ ಮುಕ್ತಾಮಾಣಿಕ್ಯಭೂಷಣಾಂ ।
ಮಾಣಿಕ್ಯಮುಕುಟಾಂ ನೇತ್ರದ್ವಯಪ್ರೇಂಖದ್ದಯಾಪರಾಂ ॥ ೨೦೦ ॥

ದ್ವಿಭುಜಾಂ ಸ್ವಾಸನಾಂ ಪದ್ಮೇ ತ್ವಷ್ಟಷೋಡಶತದ್ದ್ವಯೈಃ ।
ಪತ್ರೈರುಪೇತೇ ಸಚತುರ್ದ್ವಾರಭೂಸದ್ಮಯುಗ್ಮಕೇ ॥ ೨೦೧ ॥

ಮಾತುಲುಂಗಫಲಂ ದಕ್ಷೇ ದಧಾನಾಂ ಕರಪಂಕಜೇ ।
ವಾಮೇನ ನಿಜಭಕ್ತಾನಾಂ ಪ್ರಯಚ್ಛಂತೀಂ ಧನಾದಿಕಂ ॥ ೨೦೨ ॥

---

೧೯೯. ಈ ಮಂತ್ರಸಿದ್ಧಿಯನ್ನು ಪಡೆದವನು ಕ್ಷಣಮಾತ್ರದಲ್ಲಿ ಆಕಾಶದಲ್ಲಿ ಸಂಚರಿಸುವಂತಹ ಶಕ್ತಿಯನ್ನು ಹೊಂದಿ ಸುಖಪಡುವನು.

ಆರು ದೀರ್ಘಸ್ವರಸಹಿತವಾದ ಈ ವಿದ್ಯಾಕ್ಷರಗಳಿಂದ ಪ್ರತ್ಯೇಕವಾಗಿ ಹೃದಯಾದಿ ಷಡಂಗನ್ಯಾಸಮಾಡಬೇಕು.

೨೦೦-೨೦೪. ಧ್ಯಾನವಿಧಾನ:— ನಾಲ್ಕು ದ್ವಾರಗಳುಳ್ಳ ಚತುರಸ್ರ ಮಂಡಲದ್ವಯದಲ್ಲಿ ಅಷ್ಟದಳ ಪದ್ಮಾಂತರ್ಗತ ಷೋಡಶದಳ ಪದ್ಮದಲ್ಲಿ ಸುಖಾಸೀನಳಾದ, ಬಂಗಾರದಂತೆ ಹೊಳೆಯುತ್ತಿರುವ ಮತ್ತು ಮಾಣಿಕ್ಯಗಳಿಂದ ನಿರ್ಮಿತವಾದ ಆಭರಣಗಳನ್ನಿಟ್ಟುಕೊಂಡಿರುವ, ಮಾಣಿಕ್ಯ ಕಿರೀಟವನ್ನು ಧರಿಸಿರುವ, ನೇತ್ರದ್ವಯದಿಂದ ದಯಾರಸವನ್ನು ಬೀರುತ್ತಿರುವ, ಎರಡು ಭುಜಗಳುಳ್ಳ ಬಲಗೈಯಲ್ಲಿ ಮಾತುಲುಂಗಫಲವನ್ನು ಧರಿಸಿ, ಎಡಗೈಯಿಂದ ತನ್ನ ಭಕ್ತರಿಗೆ ಧನಾದಿಗಳನ್ನು ಕೊಡುತ್ತಿರುವ, ಸುತ್ತಲೂ ತನಗೆ ಸಮಾನರಾದ ಶಕ್ತಿಪರಿವಾರಗಳಿಂದ ಯುಕ್ತಳಾದ ನಿತ್ಯಾದೇವಿಯನ್ನು ನಿತ್ಯಪೂಜೆಯಲ್ಲಿ ಧ್ಯಾನಿಸಿ ಅರ್ಚಿಸಬೇಕು.

**ಸ್ವಸಮಾನಾಭಿರಭಿತಃ ಶಕ್ತಿಭಿಃ ಪರಿವಾರಿತಾಂ ।**
**ಷಟ್ಸಪ್ತತಿಭಿರನ್ಯಾಭಿರಪ್ಸರೋತ್ಥಾಭಿರನ್ವಿತಾಂ ॥ ೨೦೩ ॥**

**ಪ್ರಯೋಗೇಷ್ವನ್ಯದಾ ನಿತ್ಯಂ ಸಪರ್ಯಾಸೂಕ್ತಶಕ್ತಿಕಾಂ ।**
**ಏಷಾ ಚತುರ್ದಶೀ ಪ್ರೋಕ್ತಾ ತಥಾ ಪಂಚದಶೀಂ ಶೃಣು ॥ ೨೦೪ ॥**

**ಭೂಃ ಶೂನ್ಯಂ ನಭಸಾ ಭೂಶ್ಚ ರಸಾಶ್ಚಾಥ ಸ್ಥಿರಾಂಬು ಚ ।**
**ರಯೋಽಗ್ನಿನಾ ಯುತೋ ಜ್ಯಾಂಬುಮರುದ್ಯುಕ್ತಾ ರಸಾ ಮರುತ್ ॥**

**ನಭಶ್ಚ ಮರುತಾ ಯುಕ್ತಂ ರಸಾ ಶೂನ್ಯೇಽಗ್ನಿಸಂಯುತೇ ।**
**ಗೋತ್ರಾ ಚರೇಣ ಸಹಿತಾ ಅಂಬುಪೂರ್ವಾಕ್ಷರಸ್ತಥಾ ॥ ೨೦೬ ॥**

**ಅಂಬ್ವಗ್ನೀ ಹೃಚ್ಚ ದಾಹಾಂಬುರಸಕ್ಷ್ಮಾರಯುಹೃತ್ಸ್ವಯುಕ್ ।**
**ಹಂಸಶ್ಚ ಮರುತಾ ದಾಹಃ ಪ್ರಾಣಶ್ಚ ಮರುತಾ ಯುತಃ ॥ ೨೦೭ ॥**

**ದಾಹಃ ಸಾಗ್ನಿಪ್ರಾಣಚರೌ ಜ್ಯಾಮರುತ್ಸಹಿತಾರಯುಃ ।**
**ಚರೇಣಾಂಬು ಚ ಗೋತ್ರಾಹೃತ್ಸಾಗ್ನಿಜ್ಯಾಗಂಬುರಸಾ ಸ್ವಯುಕ್ ॥೨೦೮॥**

**ರಯುಃ ಸಾಗ್ನಿಜ್ಯಾಗಂಬುರಸಾ ಪುನರೇತ್ಯೈಜಪೀ ತತಃ ।**
**ದಾಹೇನಾನೇನ ತೇ ದ್ವಿಃ ಸ್ಯಾದ್ಧಂಸೋ ದಾಹಮರುತ್ಸ್ವಯುಕ್ ॥ ೨೦೯ ॥**

---

ಇತರ ವಿಶೇಷ ಪ್ರಯೋಗಗಳಲ್ಲಿ ನಿತ್ಯಾ ದೇವಿಯನ್ನು ಇತರ ಎಪ್ಪತ್ತಾರು ಅಪ್ಸರಸ್ತ್ರೀಯರಿಂದ ಸಹಿತವಾಗಿ ಪೂಜಿಸಬೇಕು.

ಈ ರೀತಿಯಾಗಿ ಹದಿನಾಲ್ಕನೆಯ ನಿತ್ಯಾದೇವಿಯ ವಿಧಾನವು ಉಕ್ತವಾಯಿತು. ಅಂತಯೇ ಹದಿನೈದನೆಯ ನಿತ್ಯಾದೇವಿಯ ವಿದ್ಯಾದಿಗಳನ್ನು ಹೇಳುವೆನು ಕೇಳು.

## ಜ್ವಾಲಾಮಾಲಿನೀನಿತ್ಯಾಮಂತ್ರ

೨೦೫-೨೧೧. "ಓಂ ನಮೋ ಭಗವತೇ ಜ್ವಾಲಾಮಾಲಿನಿ ದೇವದೇವಿ ಸರ್ವಭೂತಸಂಹಾರಕಾರಿಕೇ ಜಾತವೇದಸಿ ಜ್ವಲಂತಿ ಜ್ವಲಜ್ವಲ ಪ್ರಜ್ವಲಪ್ರಜ್ವಲ

ಹಂಸಃ ಸದಾಷವಹ್ನಿಸ್ಥೋ ದಾಹಕ್ಷ್ಮಾಸ್ವಯುತಶ್ಚ ಸಃ ।
ಸಪ್ತದಾಹಾಸ್ತತೋಽಸ್ಯಾಃ ಸ್ಯುರಷ್ಟಮಾದ್ಯಾಸ್ತು ಪಂಚ ತೇ ॥ ೨೧೦ ॥

ಉಪಾಂತ್ಯಾಧಃ ಸ್ಥಿತಂ ನೀಲಪತಾಕಾಯಾ ಅನಂತರಂ ।
ತ್ವರಿತಾಂತ್ಯಂ ಚ ಭೇರುಂಡಾಷ್ಟಮಂ ಚ ನವಮಂ ತಥಾ ॥ ೨೧೧ ॥

ಸಾ ಜ್ವಾಲಾಮಾಲಿನೀ ನಿತ್ಯಾತ್ರಿಷಷ್ಟ್ಯರ್ಣಾ ಸಮೀರಿತಾ ।
ಏಕದ್ವಯಚತುಃ ಪಂಚಚತುಷ್ಟಯದಶಾಕ್ಷರೈಃ ॥ ೨೧೨ ॥

ಕುರ್ಯಾದಂಗಾನಿ ಮೂಲಾರ್ಣೈರಾದಿತಃ ಷಟ್ಕರಾಂಗಯೋಃ ।
ಶೇಷೈಸ್ತು ವ್ಯಾಪಕಂ ಕುರ್ಯಾತ್ತತೋ ಧ್ಯಾಯೇತ್ಸನಾತನೀಂ ॥ ೨೧೩ ॥

ಜ್ವಲಜ್ಜ್ವಲನಸಂಕಾಶಾಂ ಮಾಣಿಕ್ಯಮುಕುಟೋಜ್ವಲಾಂ ।
ಷಡ್ವಕ್ತ್ರಾಂ ದ್ವಾದಶಭುಜಾಂ ಸರ್ವಾಭರಣಭೂಷಿತಾಂ ॥ ೨೧೪ ॥

---

ಹ್ರಾಂ ಹ್ರೀಂ ಹ್ರೂಂ ರರರರರರರ ಜ್ವಾಲಾಮಾಲಿನಿ ಹುಂ ಫಟ್ ಸ್ವಾಹಾ" ಎಂಬುದು ಅರವತ್ತುಮೂರಕ್ಷರಗಳುಳ್ಳ ಜ್ವಾಲಾಮಾಲಿನೀ ನಿತ್ಯಾಮಂತ್ರವೆಂದು ಉಕ್ತವಾಗಿದೆ.

೨೧೨-೨೧೩. ಈ ಮಂತ್ರದ ೧, ೨, ೪, ೫, ೪, ೧೦ ಅಕ್ಷರಗಳಿಂದ ಕ್ರಮವಾಗಿ ಹೃದಯಾದಿ ಷಡಂಗನ್ಯಾಸ ಮಾಡಬೇಕು. ಉಳಿದ ಮಂತ್ರವರ್ಣಗಳಿಂದ ಸರ್ವಾಂಗನ್ಯಾಸ ಮಾಡಬೇಕು. ಅನಂತರ ಪುರಾತನಳಾದ ಈ ಮಂತ್ರದೇವತೆಯನ್ನು ಧ್ಯಾನಿಸಬೇಕು.

೨೧೪-೨೧೬. ಧ್ಯಾನವಿಧಾನ :—ಉರಿಯುತ್ತಿರುವ ಬೆಂಕಿಗೆ ಸಮಾನವಾಗಿ ಹೊಳೆಯುತ್ತಿರುವ, ಮಾಣಿಕ್ಯಮಯವಾದ ಕಿರೀಟದಿಂದ ಪ್ರಕಾಶಿಸುತ್ತಿರುವ, ಆರು ಮುಖಗಳು ಮತ್ತು ಹನ್ನೆರಡು ಭುಜಗಳುಳ್ಳ, ಸಮಸ್ತಾಭರಣಗಳಿಂದಲಂಕೃತಳಾದ, ಪದ್ಮದಂತಿರುವ ಹಸ್ತಗಳಲ್ಲಿ ಪಾಶ ಅಂಕುಶ ಖಡ್ಗ ಕತ್ತಿ

ಪಾಶಾಂಕುಶೌ ಖಡ್ಗಖೇಟೌ ಚಾಪಬಾಣೌ ಗದಾದರೌ ।
ಶೂಲವಹ್ನೀ ವರಾಭೀತೀ ದಧಾನಾಂ ಕರಪಂಕಜೈಃ ॥ ೨೧೫ ॥

ಸ್ವಪ್ರಮಾಣಾಭಿರಭಿತಃ ಶಕ್ತಿಭಿಃ ಪರಿವಾರಿತಾಂ ।
ಚಾರುಸ್ಮಿತಲಸದ್ವಕ್ತ್ರಸರೋಜಾಂ ತ್ರೀಕ್ಷಣಾನ್ವಿತಾಂ ॥ ೨೧೬ ॥

ಧ್ಯಾತ್ವೈವಮುಪಚಾರೈಸ್ತೈರರ್ಚಯೇತ್ತಾಂ ತು ನಿತ್ಯಶಃ ।
ಚತುರಸ್ರದ್ವಯಂ ಕೃತ್ವಾ ಚತುರ್ದ್ವಾರಸಮನ್ವಿತಾಂ ॥ ೨೧೭ ॥

ಸಶಾಖಮಷ್ಟಪತ್ರಾಬ್ಜಮಂತರಾತ್ರ್ಯಸ್ರಕಂ ತತಃ ।
ಷಟ್ಕೋಣಂ ಮಧ್ಯತಸ್ತ್ರ್ಯಸ್ರಂ ವಿಧಾಯಾಂತ್ರ ಶಿವಾಂ ಯಜೇತ್ ॥೨೧೮॥

ಏಷಾ ಪಂಚದಶೀ ಪ್ರೋಕ್ತಾ ಷೋಡಶೀಂ ಶೃಣು ನಾರದ ।
ವಾಯುಪ್ರಾಣವನಸ್ಥೈಸ್ತು ಚಿತ್ರಾಸ್ಯಾದಕ್ಷರದ್ವಯಾ ॥ ೨೧೯ ॥

---

ಧನುಸ್ಸು ಬಾಣ ಗದೆ ವರ ಶೂಲ ವಹ್ನಿ ವರ ಅಭಯ ಇವುಗಳನ್ನು ಧರಿಸಿರುವ ತನ್ನಷ್ಟಿರುವ ಶಕ್ತಿಪರಿವಾರಂಗಳಿಂದ ಸುತ್ತಲೂ ಕೂಡಿರುವ, ದಿವ್ಯಮಂದಹಾಸ ದಿಂದ ಪ್ರಕಾಶಮಾನವಾದ ಪದ್ಮದಂತಿರುವ ಮುಖವುಳ್ಳ, ಮೂರು ಕಣ್ಣುಗಳಿಂದ ಕೂಡಿದ, ಜ್ವಾಲಾಮಾಲಿನೀ ದೇವಿಯನ್ನು ಧ್ಯಾನಿಸಬೇಕು.

೨೧೭-೨೧೮. ಈ ರೀತಿಯಾಗಿ ಧ್ಯಾನಿಸಿ ಉಪಚಾರಗಳಿಂದ ನಿತ್ಯವೂ ದೇವಿಯನ್ನು ಪೂಜಿಸಬೇಕು.

ನಾಲ್ಕು ಬಾಗಿಲುಗಳಿಂದ ಯುಕ್ತವಾದ ಎರಡು ಚತುರಸ್ರಮಂಡಲಗಳನ್ನು ರಚಿಸಿ, ಅದರೊಳಗೆ ಶಾಖೆಗಳಿಂದ ಸಹಿತವಾದ ಅಷ್ಟದಳ ಪದ್ಮವನ್ನು ಬರೆದು, ಅದರೊಳಗೆ ತ್ರಿಕೋಣಾಂತರ್ಗತ ಷಟ್ಕೋಣವನ್ನು ರಚಿಸಿ, ತ್ರಿಕೋಣಮಧ್ಯದಲ್ಲಿ ದೇವಿಯನ್ನು ಪೂಜಿಸಬೇಕು.

೨೧೯. ಈ ರೀತಿಯಾಗಿ ಹದಿನೈದನೆಯ ನಿತ್ಯಾದೇವಿಯ ಮಂತ್ರಾದಿ ವಿಧಾನವು ಉಕ್ತವಾಯಿತು. ಈಗ ಹದಿನಾರನೆಯ ನಿತ್ಯಾದೇವಿಯ ಮಂತ್ರಾದಿ ವಿಧಾನವನ್ನು ಹೇಳುವೆನು ಕೇಳು.

ಯಾ ಸಿದ್ಧಾ ಧನಧಾನ್ಯಾತ್ಮನಿಧಿಲಾಭಾಯ ಕಲ್ಪ್ಯತೇ ।
ವಿದ್ಯಾದ್ಯವಾಯೆುನಾ ಕುರ್ಯಾದ್ದೀರ್ಘಸ್ವರಯುಜಾ ಕ್ರಮಾತ್ ॥ ೨೨೦ ॥

ಷಡಂಗಾನಿ ಯಥಾಪೂರ್ವಂ ಮಾತೃಕಾಂ ವಿದ್ಯಯಾ ನ್ಯಸೇತ್ ।
ಉದ್ಯದಾದಿತ್ಯಬಿಂಬಾಭಾಂ ನವರತ್ನವಿಭೂಷಣಾಂ ॥ ೨೨೧ ॥

ನವರತ್ನಕಿರೀಟಾಂ ಚ ಚಿತ್ರಪಟ್ಟಾಂಶುಕೋಜ್ವಲಾಂ ।
ಚತುರ್ಭುಜಾಂ ತ್ರಿನಯನಾಂ ಶುಚಿಸ್ಮಿತಲಸನ್ಮುಖೀಂ ॥ ೨೨೨ ॥

ಸರ್ವಾನಂದಮಯೀಂ ನಿತ್ಯಾಂ ಸಮಸ್ತೇಪ್ಸಿತದಾಯಿನೀಂ ।
ಚತುರ್ಭುಜೇಷು ವೈ ಪಾಶಮಂಕುಶಂ ವರದಾಭಯೇ ॥ ೨೨೩ ॥

---

"ಚ ಕಾಂ" ಎಂಬುದು ಎರಡುವರ್ಣಗಳುಳ್ಳ ಚಿತ್ರಾ ಎಂಬ ಹದಿನಾರನೆಯ ವಿದ್ಯೆಯು.

೨೨೦. ಜಪಾದಿಗಳಿಂದ ಸಿದ್ಧವಾದ ಈ ವಿದ್ಯೆಯು ಧನ, ಧಾನ್ಯ, ನಿಧಿಗಳನ್ನು ಕೊಡುತ್ತದೆ.

ಈ ವಿದ್ಯೆಯು ಆದ್ಯಕ್ಷರವಾದ 'ಚ' ಎಂಬ ವರ್ಣಕ್ಕೆ 'ಆ, ಈ' ಮುಂತಾದ ಆರು ದೀರ್ಘಸ್ವರಗಳನ್ನು ಸೇರಿಸಿ "ಚಾಂ ಹೃದಯಾಯ ನಮಃ" ಇತ್ಯಾದಿ ರೀತಿಯಾಗಿ ಕರಷಡಂಗನ್ಯಾಸಮಾಡಬೇಕು.

೨೨೧-೨೨೪. ಅನಂತರ "ಚಕಾಂ ಅಂ ನಮಃ" ಇತ್ಯಾದಿ "ಚಕಾಂ ಕ್ಷಂ ನಮಃ" ಎನ್ನುವವರೆಗೆ ಮಾತೃಕಾನ್ಯಾಸಮಾಡಬೇಕು.

**ಧ್ಯಾನವಿಧಾನ :—** ಉದಯಿಸುತ್ತಿರುವ ಸೂರ್ಯಬಿಂಬದಂತೆ ಕಾಂತಿಯುಳ್ಳ, ನವರತ್ನಗಳಿಂದ ಅಲಂಕೃತಳಾದ, ನವರತ್ನಖಚಿತ ಕಿರೀಟವನ್ನು ಧರಿಸಿರುವ, ಚಿತ್ರಿತವಾದ ರೇಷ್ಮೆವಸ್ತ್ರದಿಂದ ಪ್ರಕಾಶಮಾನಳಾದ, ನಾಲ್ಕುಭುಜಗಳು, ಮೂರು

ದಧಾನಾಂ ಮಂಗಲಾಂ ಪದ್ಮಕರ್ಣಿಕಾಯೋನಿಮಧ್ಯಗಾಂ ।
ತಚ್ಛಕ್ತಿಭಿಶ್ಚ ತಚ್ಚಕ್ರೇ ತಥೈವಾರ್ಚನಮೀರಿತಂ ॥ ೨೨೪ ॥

ಪ್ರಾಣದಾಹೌ ಧರಾಯುಕ್ತೌ ಪುನರಾದ್ಯಂ ರಸೇ ಮರುತ್ ।
ವ್ಯಾಪ್ತಂ ಮರುಚ್ಛಕ್ತಿಯುತಂ ಭೂಃ ಸ್ವಯುಕ್ತಾ ತತಸ್ತ್ರಯಂ ॥ ೨೨೫ ॥

ಅಸ್ಯಾ ಆದ್ಯಂ ರಸಾಯುಗ್ಮಂ ಚರಣೇನ ಪ್ರಯೋಜಿತಂ ।
ದಾಹೇನ ವಹ್ನಿಶಕ್ತಿಭ್ಯಾಂ ಯುತೋ ಹಂಸಸ್ತತಃ ಪರಂ ॥ ೨೨೬ ॥

ನಭೋ ದ್ವಿಹ್ಯರ್ತ್ಸದಾಹಾಂಬುಚ್ಯಾ ಶೂನ್ಯಂ ಸ್ವೇನ ಸಂಯುತಂ ।
ಅಂಬು ಪಶ್ಚಾದ್ವಿಯದ್ಯುಕ್ತಂ ಮರುತಾ ತು ನಭೋಽಯುತಂ ॥ ೨೨೭ ॥

ಶೂನ್ಯಂ ವ್ಯಾಪ್ತಂ ಭುವಾ ಹಂಸಃ ಪೂರ್ವಾಂತ್ಯಾ ಸ್ಯಾನ್ಮನುತ್ರಯಂ ।
ಅಸ್ಯಾಃ ಷಷ್ಠ್ಯಾದಿಪಂಚಾರ್ಣಾದಂತ್ಯೌಸ್ಯಾದಾದ್ಯ ಈರಿತಃ ॥ ೨೨೮ ॥

---

ಕಣ್ಣುಗಳು ಮತ್ತು ಶುದ್ಧಮಂದಹಾಸದಿಂದ ಹೊಳೆಯುತ್ತಿರುವ ಮುಖ ಇವುಗಳುಳ್ಳ, ಪೂರ್ಣಾನಂದಮಯಳಾದ ಸಕಲಾಭೀಷ್ಟದಾಯಕಳಾದ, ಪಾಶ ಅಂಕುಶ ವರದಾ ಅಭಯಗಳನ್ನು ಚತುರ್ಭುಜಗಳಲ್ಲಿ ಧರಿಸಿರುವ ಮಂಗಳ ರೂಪಿಣಿಯಾದ, ಪದ್ಮಕೋಶದ ಯೋನಿಮಧ್ಯದಲ್ಲಿರುವ, ಚಿತ್ರಾನಿತ್ಯಾದೇವಿಯನ್ನು ಧ್ಯಾನಮಾಡಬೇಕು. ಆ ಚಕ್ರದಲ್ಲಿ ಪರಿವಾರಶಕ್ತಿಗಳಿಂದ ಸಹಿತವಾಗಿ ಪೂಜೆಯೂ ವಿಹಿತವಾಗಿದೆ.

೨೨೫-೨೨೯. (1) "ಓಂ ಕುರುಕುಲ್ಲೇ ಸ್ವಾಹಾ" ಎಂಬುದು ಸಪ್ತಾಕ್ಷರೀಕುರುಕುಲ್ಲಾಮಂತ್ರವು.

(2) "ಕುರುಕುಲ್ಲಾಯಾಃ ಓಂ ಕುರುಕುಲ್ಲೇ ಹ್ರೀಃ ಸ್ವಾಹಾ" ಎಂಬುದು ತ್ರಯೋದಶಾಕ್ಷರ ಕುರುಕುಲ್ಲಾಮಂತ್ರವು.

ಏಕಾದಶಾಕ್ಷರಾವಂತ್ಯೌ ದ್ವಿತೀಯಃ ಖಂಡ ಈರಿತಃ |
ತೃತೀಯಃ ಪಂಚವಿಂಶಾರ್ಣಃ ಪ್ರೋಕ್ತಾ ಮಂತ್ರಾ ಇತಿ ಕ್ರಮಾತ್ ||೨೨೯||

ಬಾಲಾ ಬೀಜತ್ರಯಾದ್ಯೈರ್ದ್ವಿಸ್ತ್ರಿಭಿರ್ಮಂತ್ರೈಃ ಷಡಂಗಕಂ |
ವಿಕೀರ್ಣಕುಂತಲಾಂ ನಗ್ನಾಂ ರಕ್ತಾಮಾನಂದವಿಗ್ರಹಾಂ || ೨೩೦ ||

ಪಧಾನಾಂ ಚಿಂತಯೇದ್ಬಾಣಚಾಪಪಾಶಸೃಣೀಕರೈಃ |
ತತ್ಸಮಾನಾಯುಧಾಕಾರವರ್ಣಾ ದೇವ್ಯಸ್ತು ಬಾಹ್ಯಗಾಃ || ೨೩೧ ||

ಋತುಸ್ನಾತಾಃ ಸ್ಫುರದ್ಯೋನ್ಯಃ ಸದಾನಂದಾರುಣೇಕ್ಷಣಾಃ |
ಇತ್ಯೇಷಾ ಕುರುಕುಲ್ಲಾಂತೇ ಪ್ರೋಕ್ತಾ ಚಂದ್ರಾವಲೀ ಸ್ವಯಂ || ೨೩೨ ||

---

(3) "ಕುರುಕುಲ್ಲಾಯಾಃ ಓಂ ಕುರುಕುಲ್ಲೇ ಹ್ರೀಃ ಮಮ ಸರ್ವಜನಂ ವಶಮಾನಯ ಹ್ರೀಂ ಸ್ವಾಹಾ" ಎಂಬುದು ಪಂಚವಿಂಶತಿ (25) ಅಕ್ಷರಗಳ ಕುರುಕುಲ್ಲಾಮಂತ್ರವು.

೨೩೦-೨೩೨. ಬಾಲಾಬೀಜತ್ರಯಾದಿಮಂತ್ರಗಳಿಂದ ಷಡಂಗನ್ಯಾಸ ಮಾಡಬೇಕು.

ಧ್ಯಾನವಿಧಾನ :—ವಿಶಕಲಿತಕೇಶವುಳ್ಳ, ದಿಗಂಬರಳಾದ, ಕೆಂಪಗಿರುವ, ಆನಂದಮಯದೇಹವುಳ್ಳ, ಕೈಗಳಲ್ಲಿ ಬಾಣ ಧನುಸ್ಸು ಪಾಶ ಅಂಕುಶಗಳನ್ನು ಧರಿಸಿರುವ ದೇವಿಯನ್ನು ಧ್ಯಾನಿಸಬೇಕು.

ಆ ದೇವಿಗೆ ಸಮಾನವಾದ ಆಯುಧ, ಆಕಾರ, ಬಣ್ಣಗಳುಳ್ಳ, ಋತುಸ್ನಾನಮಾಡಿದ, ವಿರಾಜಿಸುವ ಯೋನಿಗಳುಳ್ಳ, ಒಳ್ಳೆಯ ಆನಂದದಿಂದ ಕೆಂಪು ಕಣ್ಣುಗಳುಳ್ಳ ದೇವಿಯರು ಕುರುಕುಲ್ಲಾದೇವಿಯ ಬಾಹ್ಯಪರಿವಾರವು. ಈರೀತಿಯಾಗಿ ಸ್ವತಃ ಚಂದ್ರಾವಳಿಯಾದ ಕುರುಕುಲ್ಲಾದೇವಿಯ ಮಂತ್ರಾದಿವಿಧಾನವು ಷೋಡಶನಿತ್ಯಾಮಂತ್ರದ ಕೊನೆಯಲ್ಲಿ ಹೇಳಲ್ಪಟ್ಟಿದೆ.

ವಾರಾಹೀಮಭಿಧಾಸ್ಯಾಮಿ ಲಲಿತಾಯಾಃ ಪರಾ ತನುಃ ।
ಶುಚಿಃ ಸ್ವೇನಾಥ ಶೂನ್ಯಂ ಸ್ಯಾನ್ನಭಸಾ ಭೂರಸಃ ಸ್ಥಿರಾ ॥ ೨೩೩ ॥

ಅಂಬು ಪಶ್ಚಾದ್ವ್ರಯಃ ಸಾಗ್ನಿರ್ಮರುತಾಂಬುರಯೌ ತಥಾ ।
ಇಲಾಯುತೋಗ್ನಿರೇತಾನಿ ಪುನರಂಬುಮರುದ್ಯುತಂ ॥ ೨೩೪ ॥

ದಾಹಶ್ಚ ಮರುತಾ ಹಂಸಸ್ತ್ವಗ್ನಿರೇತತ್ತ್ರಯಂ ಪುನಃ ।
ಅಂಬುದಾಹೌ ಮರುದ್ಯುಕ್ತೌ ಹಂಸೋಽಥ ಧರಯಾ ನಭಃ ॥ ೨೩೫ ॥

ತೇಜೋಗ್ನಿನಾ ಪುನಃ ಪಂಚ ವಾತಃ ಸ್ವೇನ ಸಮಾಯುತಃ ।
ತೋಯಂ ಚರೇಣ ತತ್ಪೂರ್ವಂ ತೋಯಮಗ್ನಿಯುತಂ ತತಃ ॥ ೨೩೬ ॥

ಶೂನ್ಯಂ ವ್ಯಾಪ್ತೇನ ಶುಚಿನಾ ಶೂನ್ಯಂ ಶಕ್ತ್ಯಾ ನಭೋಯುತಂ ।
ದಾಹೋ ಧರಾ ಸ್ವಸಹಿತಸ್ತೋಯಂ ಚರಸಮನ್ವಿತಂ ॥ ೨೩೭ ॥

ಏತತ್ಪೂರ್ವಮಧಃ ಪ್ರೋಕ್ತಂ ಚತುಷ್ಟಯಮತಃ ಪರಂ ।
ಜ್ಯಾ ಸ್ವೇನ ಯುಕ್ತಾ ಸಚರೋ ರಸಶ್ಚೈತಸ್ಯ ಪೂರ್ವಕಂ ॥ ೨೩೮ ॥

ರಸೋಗ್ನಿನಾ ಪುನಃ ಪ್ರೋಕ್ತಂ ಚತುಷ್ಕಾ ತ್ರಯಮಂ ತತಃ ।
ನಭೋ ಭುವಾ ಚರೇಣಾಪಿ ಹಂಸಸ್ತ್ವೇತಸ್ಯಪೂರ್ವಕಂ ॥ ೨೩೯ ॥

ಹಂಸೋಗ್ನಿನಾ ಪ್ರಾಕ್ತ್ರಿತಯಂ ಹೃದಯಂ ಸ್ವಸಮಾಯುತಂ ।
ರಸಶ್ಚರೇಣ ತತ್ಪೂರ್ವಮಗ್ನಿನಾ ಚ ರಸಾಯುತಃ ॥ ೨೪೦ ॥

---

೨೩೩-೨೪೦. ಲಲಿತಾದೇವಿಯ ಇನ್ನೊಂದು ರೂಪವಾದ ವಾರಾಹೀ ಮಂತ್ರವನ್ನು ಹೇಳುವೆನು.

### ವಾರಾಹೀಮಂತ್ರ

“ ಐಂ ನಮೋ ಭಗವತಿ ವಾತ್ತಾಲಿ ವಾತ್ತಾಲಿ ವಾರಾಹಿ ವರಾಹಿ ವರಾಹ ಮುಖಿ ವರಾಹಮುಖಿ ಅಂಧೇ ಅಂಧಿನ್ಯೈ ನಮಃ ರುಂಧೇ ರುಂಧಿನ್ಯೈ ನಮಃ ಜಂಭೇ ಜಂಭಿನ್ಯೈ ನಮಃ ಮೋಹೇ ಮೋಹಿನ್ಯೈ ನಮಃ ಸ್ತಂಭೇ ಸ್ತಂಭಿನ್ಯೈ

**ಕಾಮಿನೀ ಖೇಚರೀ ಗರ್ವಾ ಪುರಾಣಾ ಪರಮೇಶ್ವರೀ ।**
**ಗೌರೀ ಶಿವಾ ಹ್ಯಮೇಯಾ ಚ ವಿಮಲಾ ವಿಜಯಾ ಪರಾ ॥ ೫೪ ॥**

**ಪವಿತ್ರಾ ಪೀಡನೀ ವಿದ್ಯಾ ವಿಶ್ವೇಶೀ ಶಿವವಲ್ಲಭಾ ।**
**ಅಶೇಷರೂಪಾ ಸ್ವಾನಂದಾಂಬುಜಾಕ್ಷೀ ಚಾಪ್ಯನಿಂದಿತಾ ॥ ೫೫ ॥**

**ವರದಾ ವಾಕ್ಯದಾ ವಾಣೀ ವಿವಿಧಾ ವೇದವಿಗ್ರಹಾ ।**
**ವಿದ್ಯಾ ವಾಗೀಶ್ವರೀ ಸತ್ಯಾ ಸಂಯುತಾ ಚ ಸರಸ್ವತೀ ॥ ೫೬ ॥**

**ನಿರ್ಮಲಾನಂದರೂಪಾ ಚ ಹ್ಯಮೃತಾ ಮಾನದಾ ತಥಾ ।**
**ಪೂಷಾ ಚೈವ ತಥಾ ತುಷ್ಟಿಃ ಪುಷ್ಟಿಶ್ಚಾಪಿ ರತಿರ್ಧೃತಿಃ ॥ ೫೭ ॥**

**ಶಶಿನೀ ಚಂದ್ರಿಕಾ ಕಾಂತಿರ್ಜ್ಯೋತ್ಸ್ನಾ ಶ್ರೀಃ ಪ್ರೀತಿರಂಗದಾ ।**
**ದೇವೀನಾಮಾನಿ ಚೈತಾನಿ ಚುಲಿಕೇ ಸಲಿಲೇ ಸ್ಮರೇತ್ ॥ ೫೮ ॥**

**ಮಾತೃಕಾಸಹಿತಾಂ ವಿದ್ಯಾಂ ತ್ರಿರಾವೃತ್ಯಾಮೃತಾತ್ಮಕಂ ।**
**ನಾಡೀಂ ಸರಸ್ವತೀಂ ಜಿಹ್ವಾಂ ದೀಪಾಕಾರಾಂ ಸ್ಮರೇತ್ ಪಿಬೇತ್ ॥ ೫೯ ॥**

---

ವಿಮಲಾ, ವಿಜಯಾ, ಕಾಮಿನೀ, ಖೇಚರೀ, ಗರ್ವಾ, ಪುರಾಣಾ, ಪರಮೇಶ್ವರೀ, ಗೌರೀ, ಪರಾ, ಪವಿತ್ರಾ, ಪೀಡಿನೀ, ವಿದ್ಯಾ, ವಿಶ್ವೇಶೀ, ಶಿವವಲ್ಲಭಾ, ಅಶೇಷ ರೂಪಾ, ಸ್ವಾನಂದಾ, ಅಂಬುಜಾಕ್ಷೀ, ಅನಿಂದಿತಾ, ವರದಾ, ವಾಕ್ಯದಾ, ವಾಣೀ, ವಿವಿಧಾ, ವೇದವಿಗ್ರಹಾ, ವಿದ್ಯಾ, ವಾಗೀಶ್ವರೀ, ಸತ್ಯಾ, ಸಂಯುತಾ, ಸರಸ್ವತೀ, ನಿರ್ಮಲಾನಂದರೂಪಾ, ಅಮೃತಾ, ಮಾನದಾ, ಪೂಷಾ, ತುಷ್ಟಿ, ಪುಷ್ಟಿ, ರತಿ, ಧೃತಿ, ಶಶಿನೀ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀಃ, ಪ್ರೀತಿ ಮತ್ತು ಅಂಗದಾ ಎಂಬೀ ದೇವೀನಾಮಗಳನ್ನು ಚುಲಿಕೋದಕದಲ್ಲಿ ಸ್ಮರಿಸಿ, ಎಂದರೆ ಈ ನಾಮಗಳಿಂದ ಉದಕವನ್ನಭಿಮಂತ್ರಿಸಿ ವಿದ್ಯೆಯನ್ನು ಮಾತೃಕಾಸಹಿತವಾಗಿ ಮೂರಾವರ್ತಿ ಜಪಿಸಿ, ದೀಪಾಕಾರವಾದ, ಸರಸ್ವತೀನಾಡೀ ವಿಗ್ರಹವಾದ ಜಿಹ್ವೆಯನ್ನು ಸ್ವಾತ್ಮ ತೇಜೋವಿಗ್ರಹವೆಂದು ಭಾವಿಸಿ, ಆ ತೇಜಸ್ಸಿನಲ್ಲಿ ಹೋಮವೆಂಬ ಭಾವನೆಯಿಂದ ಆ ಅಮೃತವನ್ನು ಪಾನಮಾಡಬೇಕು.

ಅಬ್ದಾಚ್ಚತುರ್ವಿಧಂ ತಸ್ಯ ಪಾಂಡಿತ್ಯಂ ಭುವಿ ಜಾಯತೇ ।
ಏವಂ ನಿತ್ಯಮುಷಃಕಾಲೇ ಯಃ ಕುರ್ಯಾಚ್ಛುದ್ಧಮಾನಸಃ ॥ ೬೦ ॥

ಸ ಯೋಗೀ ಬ್ರಹ್ಮವಿಜ್ಞಾನೀ ಶಿವಯೋಗೀ ತಥಾತ್ಮವಿತ್ ।
ಅನುಗ್ರಹೋಕ್ತಚಕ್ರಸ್ಥಾಂ ದೇವೀಂ ತಾಭಿರ್ವೃತಾಂ ಸ್ಮರೇತ್ ॥ ೬೧ ॥

ಚಂಪಕೇಂದೀವರೈರ್ನಾಸಾದಾರೋಗ್ಯಮುಪಜಾಯತೇ ।
ಜ್ವರಭೂತಗ್ರಹೋನ್ಮಾದಶೀತಕಾ ಕಾಮಲಾಕ್ಷಿರುಕ್ ॥ ೬೨ ॥

ದಂತಕರ್ಣಜ್ವರಶಿರಃಶೂಲಗುಲ್ಮಾದಿಕುಕ್ಷಿಜಾಃ ।
ವ್ರಣಪ್ರಮೇಹಚ್ಛರ್ದ್ಯರ್ಶೋ ಗ್ರಹಣ್ಯಾಮತ್ರಿದೋಷಜಾಃ ॥ ೬೩ ॥

ಸರ್ವೇ ತಥಾ ಶಮಂ ಯಾಂತಿ ಚೇಶ್ವರೀಪೂಜಯಾ ದ್ವಿಜ ।
ದ್ರವ್ಯಂ ಚಕ್ರಸ್ಯ ನಿರ್ಮಾಣೇ ಕಾಶ್ಮೀರಂ ಸಮುದೀರಿತಂ ॥ ೬೪ ॥

---

೬೦-೬೫. ಈರೀತಿ ಒಂದುವರ್ಷ ಮಾಡುವವನಿಗೆ ಲೋಕದಲ್ಲಿ ವಾದಿತ್ವ, ಕವಿತ್ವ, ವಾಗ್ಮಿತ್ವ, ವ್ಯಾಖ್ಯಾತೃತ್ವ ಎಂಬ ನಾಲ್ಕುವಿಧವಾದ ಪಾಂಡಿತ್ಯ ವುಂಟಾಗುವುದು. ಈಪ್ರಕಾರವಾಗಿ ಪ್ರತಿದಿನವೂ ಉಷಃಕಾಲದಲ್ಲಿ ನಿರ್ಮಲ ಚಿತ್ತನಾಗಿ ಅನುಷ್ಠಾನಮಾಡುವವನು ಬ್ರಹ್ಮಜ್ಞಾನಿಯೂ, ಆತ್ಮವಿಜ್ಞಾನಿಯೂ ಆದ ಶಿವಯೋಗಿಯಾಗುವನು.

ನಿತ್ಯಾಪಟಲೋಕ್ತವಾದ, ಅನುಗ್ರಹಚಕ್ರಸ್ಥಿತಳಾದ ದೇವಿಯನ್ನು ಅದೇ ಪಟಲದಲ್ಲಿ ಹೇಳಿರುವ ಡಾಕಿನ್ಯಾದಿ ನಲವತ್ತೆಂಟುಶಕ್ತಿಪರಿವಾರಸಹಿತ ಳಾಗಿ ಧ್ಯಾನಿಸಿ, ಸಂಪಿಗೆ ಮತ್ತು ಕನ್ನೈದಿಲೇ ಪುಷ್ಪಗಳಿಂದ ಪೂಜಿಸಿದರೆ ಆರೋಗ್ಯವುಂಟಾಗುವುದು.

ಈ ಪೂಜೆಯಿಂದ ಜ್ವರ, ಭೂತಗ್ರಹ ಪೀಡೆ, ಉನ್ಮಾದ, ಕಾಮಾಲೆ, ನೇತ್ರರೋಗ, ದಂತಕರ್ಣಜ್ವರಗಳು, ತಲೆನೋವು, ಗುಲ್ಮ ಮುಂತಾದ ಉದರ ರೋಗಗಳು, ವ್ರಣ, ಪ್ರಮೇಹ, ಛರ್ದಿ, ಅರ್ಶೋರೋಗ, ಗ್ರಹಣೀ, ಅಜೀರ್ಣ

**ಸಿಂದೂರಂ ಗೈರಿಕಂ ಲಾಕ್ಷಾ ದರದಂ ಚಂದನದ್ವಯಂ ।**
**ಬಿಲದ್ವಾರೇ ಲಿಖೇತ್ತ್ರ್ಯಸ್ರಂ ಷೋಡಶತ್ರ್ಯಸ್ರಸಂಯುತಂ ॥ ೬೫ ॥**

**ವರದೇನಾಸ್ಯ ಮಧ್ಯಸ್ಥಾಂ ಪ್ರೂಜಯೇತ್ಪರಮೇಶ್ವರೀಂ ।**
**ತಾಭಿಸ್ತಚ್ಛಕ್ತಿಭಿಃ ಸಾಕಂ ಸಿದ್ಧದ್ರವ್ಯೈಃ ಸುಗಂಧಿಭಿಃ ॥ ೬೬ ॥**

**ಕುಸುಮೈರ್ಮಾಸಮಾತ್ರೇಣ ನಾಗಕನ್ಯಾಸಮನ್ವಿತಂ ।**
**ಪಾತಾಲಾದಿಷು ಲೋಕೇಷು ರಮಯತ್ಯನಿಶಂ ಚಿರಂ ॥ ೬೭ ॥**

**ಯಕ್ಷರಾಕ್ಷಸಗಂಧರ್ವಸಿದ್ಧವಿದ್ಯಾಧರಾಂಗನಾಃ ।**
**ಪಿಶಾಚಾ ಗುಹ್ಯಕಾ ವೀರಾಃ ಕಿನ್ನರಾ ಭುಜಗಾಸ್ತಥಾ ॥ ೬೮ ॥**

---

ಮುಂತಾದ ವಾತಪಿತ್ತ ಶ್ಲೇಷ್ಮದೋಷಗಳಿಂದುಂಟಾಗುವ ಸಕಲ ರೋಗಗಳೂ ವಾಸಿಯಾಗುವುವು.

ಕಾಶ್ಮೀರ, ಸಿಂದೂರ, ಗೈರಿಕ, ಲಾಕ್ಷಾ, (ಅರಗು) ದರದ, ಎರಡುವಿಧ ಗಂಧಗಳು ಎಂಬೀ ಏಳೂ ಶ್ರೀಚಕ್ರಲೇಖನೋಪಯುಕ್ತ ದ್ರವ್ಯಗಳು.

ಬಿಲದ್ವಾರ ಎಂದರೆ ಪಾತಾಲ ಪ್ರವೇಶಮಾರ್ಗದ್ವಾರದಲ್ಲಿ ಹದಿನಾರು ತ್ರಿಕೋಣಗಳಿಂದ ಯುಕ್ತವಾದ ತ್ರಿಕೋಣಮಂಡಲವನ್ನು ಬರೆಯಬೇಕು.

೬೬-೬೭. ಈ ಚಕ್ರಮಧ್ಯಸ್ಥಿತಳಾದ ಪರಮೇಶ್ವರಿಯನ್ನು ಆ ದೇವಿಯ ಶಕ್ತಿಪರಿವಾರದೊಡನೆ ದರದ, ಸಿದ್ಧದ್ರವ್ಯ, ಸುವಾಸನೆಯುಳ್ಳ ಪುಷ್ಪ ಇವುಗಳಿಂದ ಒಂದುತಿಂಗಳಕಾಲ ಪೂಜೆಮಾಡಿದರೆ ಪಾತಾಳಾದಿ ಲೋಕಗಳಲ್ಲಿ ಬಹುಕಾಲದ ವರೆಗೆ ನಾಗಕನ್ಯೆಯರೊಡನೆ ವಿಹರಿಸುವನು.

೬೮-೬೯. ಅಲ್ಲಿ ಪೂಜೆಮಾಡುವುದರಿಂದ ಯಕ್ಷರು, ರಾಕ್ಷಸರು, ಗಂಧರ್ವರು, ಸಿದ್ಧರು, ವಿದ್ಯಾಧರರು, ಸ್ತ್ರೀಯರು, ಪಿಶಾಚ, ಗುಹ್ಯಕ, ಸಿದ್ಧಮನುಷ್ಯ ಮತ್ತು ಸರ್ಪ ಇವುಗಳೆಲ್ಲವೂ ವಶವಾಗುವುವು.

ಸಿಧ್ಯಂತಿ ಪೂಜನಾತ್ತತ್ರ ತಥಾ ತತ್ಪ್ರೋಕ್ತಕಾಲತಃ ।
ಕಿಂಶುಕೈರ್ಭೂಷಣಾವಾಪ್ತ್ಯೈ ಪಾಟಲೈರ್ಗಜಸಿದ್ಧಯೇ ॥ ೬೯ ॥

ರಕ್ತೋತ್ಪಲೈರಶ್ವಸಿದ್ಧ್ಯೈ ಕುಮುದೈಃ ಖರಸಿದ್ಧಯೇ ।
ಉತ್ಪಲೈರುಷ್ಟ್ರಸಂಸಿದ್ಧ್ಯೈ ತಗರೈಃ ಪಶುಸಿದ್ಧಯೇ ॥ ೭೦ ॥

ಜಂಬೀರೈರ್ಮಹಿಷಾವಾಪ್ತ್ಯೈ ಲಿಕುಚೈರಜಸಿದ್ಧಯೇ ।
ದಾಡಿಮೈರ್ನಿಧಿಸಂಸಿದ್ಧ್ಯೈ ಮಧುಕೈರ್ಗಾನಸಿದ್ಧಯೇ ॥ ೭೧ ॥

ಬಕುಲೈರಂಗನಾಸಿದ್ಧ್ಯೈ ಕಲ್ಹಾರೈಃ ಪುತ್ರಸಿದ್ಧಯೇ ।
ಶತಪತ್ರೈರ್ಜಯಾವಾಪ್ತ್ಯೈ ಕೇತಕೈರ್ವಾಹನಾಪ್ತಯೇ ॥ ೭೨ ॥

ಸೌರಭಾಢ್ಯೈಃ ಪ್ರಸೂನೈಸ್ತು ನಿತ್ಯಂ ಸೌಭಾಗ್ಯಸಿದ್ಧಯೇ ।
ಪೂಜಯೇನ್ಮಾಸಮಾತ್ರಂ ವಾ ದ್ವಿಗುಣಂ ತ್ರಿಗುಣಂ ತು ವಾ ॥ ೭೩ ॥

---

ಹಾಗೆಯೇ ಆಯಾಯಾ ವಿಹಿತಕಾಲಗಳಲ್ಲಿ ಒಂದುತಿಂಗಳು ಅಥವಾ ಎರಡುಮೂರುತಿಂಗಳುಗಳಕಾಲ ಮುತ್ತುಗದಹೂವುಗಳಿಂದ ಪೂಜೆಮಾಡಿದರ ಆಭರಣಪ್ರಾಪ್ತಿಯೂ, ಪಾದರಿಹೂವುಗಳಿಂದ ಪೂಜಿಸಿದರೆ ಗಜಸಿದ್ಧಿಯೂ, ಕೆಂಪುಕಮಲಪುಷ್ಪಗಳಿಂದ ಪೂಜಿಸಿದರೆ ಅಶ್ವಸಿದ್ಧಿಯೂ, ಕುಮುದಪೂಜೆಯಿಂದ ಗರ್ದಭಸಿದ್ಧಿಯೂ, ಕಮಲಪೂಜೆಯಿಂದ ಒಂಟೆಯಲಾಭವೂ, ತಗರಪುಷ್ಪಪೂಜೆಯಿಂದ ಪಶುಸಿದ್ಧಿಯೂ, ಜಂಬೀರಪೂಜೆಯಿಂದ ಮಹಿಷಲಾಭವೂ, ಲಿಕುಚಪೂಜೆಯಿಂದ ಆಡಿನಲಾಭವೂ, ದಾಳಿಂಬರೆಹೂವಿನಪೂಜೆಯಿಂದ ನಿಧಿಲಾಭವೂ, ಮಧುಕಪುಷ್ಪಗಳಪೂಜೆಯಿಂದ ಗಾನವಿದ್ಯಾಪ್ರಾಪ್ತಿಯೂ, ಬಕುಲಪುಷ್ಪಪೂಜೆಯಿಂದ ಸ್ತ್ರೀಲಾಭವೂ, ಕಲ್ಹಾರಪುಷ್ಪಪೂಜೆಯಿಂದ ಪುತ್ರಪ್ರಾಪ್ತಿಯೂ, ಕಮಲಪೂಜೆಯಿಂದ ಜಯವೂ, ಕೇದಗೆಹೂವುಗಳಪೂಜೆಯಿಂದ ವಾಹನಲಾಭವೂ, ಸುಗಂಧಪುಷ್ಪಗಳಪೂಜೆಯಿಂದ ನಿರಂತರ ಸೌಭಾಗ್ಯಲಾಭವೂ ಆಗುವುದು.

**ಯಾವತ್ಫಲಾವಾಪ್ತಿಕಾಂಕ್ಷೀ ಶರ್ಕರಾಘೃತಪಾಯಸೈಃ ।**
**ಸಚಕ್ರಪರಿವಾರಾಂ ತಾಂ ದೇವೀಂ ಸಲಿಲಮಧ್ಯಗಾಂ ॥ ೭೪ ॥**

**ತರ್ಪಯೇತ್ಕುಸುಮೈಃ ಸಾರ್ಘ್ಯೈಃ ಸರ್ವೋಪದ್ರವಶಾಂತಯೇ ।**
**ಘೃತೈಃ ಪೂರ್ಣಾಯುಷಃ ಸಿದ್ಧ್ಯೈ ಕ್ಷೌದ್ರೈಃ ಸೌಭಾಗ್ಯಸಿದ್ಧಯೇ ॥ ೭೫ ॥**

**ದುಗ್ಧೈರಾರೋಗ್ಯಸಂಸಿದ್ಧ್ಯೈ ತ್ರಿಭಿರೈಶ್ವರ್ಯಸಿದ್ಧಯೇ ।**
**ನಾಲಿಕೇರೋದಕೈಃ ಪ್ರೀತ್ಯೈ ಹಿಮತೋಯೈರ್ನೃಪಾಪ್ತಯೇ ।**
**ಸರ್ವಾರ್ಥಸಿದ್ಧಯೇ ತೋಯೈರಭಿಷಿಂಚೇನ್ಮಹೇಶ್ವರೀಂ ॥ ೭೬ ॥**

**ಪೂಗೋದ್ಯಾನೇ ಯಜೇದ್ದೇವೀಂ ಸಿದ್ಧದ್ರವ್ಯೈರ್ದಿವಾನಿಶಂ ।**
**ನಿವಸಂಸ್ತತ್ರ ತತ್ಪುಷ್ಪೈರ್ಜಾಯತೇ ಮನ್ಮಥೋಪಮಃ ॥ ೭೭ ॥**

---

೭೪-೭೬. ಫಲವನ್ನು ಬಯಸುವವನು ತನ್ನ ಇಷ್ಟ ಫಲಸಿದ್ಧಿಯಾಗುವ ವರೆಗೂ ನಾಥಾಜ್ಞೆಯಿಂದ ನೀರಿನಮೇಲೆ ಶ್ರೀಚಕ್ರವನ್ನು ಭಾವಿಸಿ, ಅದರ ಮಧ್ಯದಲ್ಲಿ ಪರಿವಾರಸಹಿತ ದೇವಿಯನ್ನು ಅನುಸಂಧಾನಮಾಡಿಕೊಂಡು, ಪುಷ್ಪ ಸಹಿತವಾಗಿ ಅರ್ಘ್ಯಗಳಿಂದ ತರ್ಪಣಕೊಡಬೇಕು. ಅದರಿಂದ ಸರ್ವೋಪದ್ರವವೂ ನಾಶವಾಗುವುದು.

ಪೂರ್ಣಾಯುಸ್ಸಿದ್ಧಿಗಾಗಿ ಘೃತದಿಂದಲೂ, ಸೌಭಾಗ್ಯಲಾಭಕ್ಕಾಗಿ ಮಧುವಿನಿಂದಲೂ, ಆರೋಗ್ಯವನ್ನು ಪಡೆಯಲು ಹಾಲಿನಿಂದಲೂ, ಐಶ್ವರ್ಯಕ್ಕಾಗಿ ಮೂರರಿಂದಲೂ, ಪ್ರೀತಿಯನ್ನು ಸಂಪಾದಿಸಲು ಎಳನೀರಿನಿಂದಲೂ, ರಾಜರ ಪ್ರಸಾದವನ್ನು ಗಳಿಸಲು ಹಿಮಜಲದಿಂದಲೂ, ಸಕಲೇಷ್ಟಾರ್ಥಸಿದ್ಧಿಗಾಗಿ ಶುದ್ಧೋದಕದಿಂದಲೂ ಮಹೇಶ್ವರೀದೇವಿಯನ್ನು ಅಭಿಷೇಕಮಾಡಬೇಕು.

೭೭. ಅಡಕೆಯ ತೋಟದಲ್ಲಿಯೇ ಅಹೋರಾತ್ರಿ ವಾಸಮಾಡುತ್ತಾ ಅದರ ಪುಷ್ಪ ಮತ್ತು ಸಿದ್ಧದ್ರವ್ಯಗಳಿಂದ ದೇವಿಯನ್ನು ಪೂಜಿಸುವವನು ಮನ್ಮಥನಂತೆ ಸುಂದರಪುರುಷನಾಗುವನು.

ಪೂರ್ಣಾಸು ನಿಯತಂ ದೇವೀಂ ಕನ್ಯಕಾಯಾಂ ಸಮರ್ಚನಾತ್ ।
ಕೃತ್ಯಾಃ ಪರೇರಿತಾ ಮಂತ್ರಾ ವಿಮುಖಾಸ್ತಾನ್ ಗ್ರಸಂತಿ ವೈ ॥ ೭೮ ॥

ಲಿಂಗತ್ರಯಮಯೀಂ ದೇವೀಂ ಚಕ್ರಸ್ಥಾಭಿಶ್ಚ ಶಕ್ತಿಭಿಃ ।
ಪೂಜಯನ್ನಿಷ್ಟಮಖಿಲಂ ಲಭತೇತ್ರ ಪರತ್ರ ಚ ॥ ೭೯ ॥

ಶತಮಾನಕೃತೈಃ ಸ್ವರ್ಣಪುಷ್ಪೈಃ ಸೌರಭ್ಯವಾಸಿತೈಃ ।
ಪೂಜಯನ್ಮಾಸಮಾತ್ರೇಣ ಪ್ರಾಗ್ಜನ್ಮಾಘೈರ್ವಿಮುಚ್ಯತೇ ॥ ೮೦ ॥

ತಥಾ ರತ್ನೈಶ್ಚ ನವಭಿರ್ಮಾಸಂ ತು ಯದಿ ಪೂಜಯೇತ್ ।
ವಿಮುಕ್ತಸರ್ವಪಾಪೌಘೈಸ್ತಾಂ ಚ ಪಶ್ಯತಿ ಚಕ್ಷುಷಾ ॥ ೮೧ ॥

---

೭೮. ಪೂರ್ಣಿಮೆಯದಿವಸ ಕನ್ಯೆಯಲ್ಲಿ ದೇವಿಯನ್ನು ಆವಾಹನೆಮಾಡಿ ಪೂಜಿಸುವುದರಿಂದ ಶತ್ರುಗಳಿಂದ ಪ್ರೇರಿತರಾದ ಮಂತ್ರಕೃತ್ಯಾಶಕ್ತಿಗಳು ಹಿಂದಿರುಗಿ ಅವರನ್ನೇ ನುಂಗುತ್ತವೆ.

೭೯. ಸ್ವಯಂಭು, ಬಾಣ, ಇತರ ಲಿಂಗಮಯಳಾದ ಎಂದರೆ ಮೂಲಾಧಾರ ಹೃದಯ, ಬ್ರಹ್ಮರಂಧ್ರಗತಳಾದ ದೇವಿಯನ್ನು ಚಕ್ರಸ್ಥಿತ ಅಣಿಮಾದಿ ಶಕ್ತಿಸಹಿತವಾಗಿ ಪೂಜಿಸುವವನು ಇಹಪರಗಳಲ್ಲಿ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

೮೦. ಸುಗಂಧಯುಕ್ತಗಳಾದ, ಒಂದುನೂರು ಸುವರ್ಣಮಯ ಪುಷ್ಪಗಳಿಂದ ದೇವಿಯನ್ನು ಪೂಜಿಸುವವನು ಒಂದುತಿಂಗಳಲ್ಲಿ ಪೂರ್ವಜನ್ಮದ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಳ್ಳುವನು.

೮೧. ಅದರಂತೆಯೇ ಒಂಬತ್ತು ರತ್ನಗಳಿಂದ ಒಂದುತಿಂಗಳು ಪೂಜಿಸಿದರೆ ಸಕಲಪಾಪಗಣಗಳನ್ನೂ ಪರಿಹರಿಸಿಕೊಂಡು ದೇವಿಯ ಸಾಕ್ಷಾತ್ಕಾರ ಪಡೆಯುವನು.

ಅಂಶುಕೈರರ್ಚಯೇದ್ದೇವೀಂ ಮಾಸಮಾತ್ರಂ ಸುಗಂಧಿಭಿಃ ।
ಮುಚ್ಯತೇ ಪಾಪಕೃತ್ಯಾದಿದುಃಖೌಘೈರಿತರೈರಪಿ ॥ ೮೨ ॥

ದೇವೀರೂಪಂ ಸ್ವಮಾತ್ಮಾನಂ ಚಕ್ರಂ ಶಕ್ತೀಃ ಸಮಂತತಃ ।
ಭಾವಯನ್ವಿಷಯೈಃ ಪುಷ್ಪೈಃ ಪೂಜಯಂಸ್ತನ್ಮಯೋ ಭವೇತ್ ॥ ೮೩ ॥

ಷೋಡಶಾನಾಂ ತು ನಿತ್ಯಾನಾಂ ಪ್ರತ್ಯೇಕಂ ತಿಥಿಷು ಕ್ರಮಾತ್ ।
ತತ್ತತಿಥೌ ತದ್ಪೂಜನಂ ಜಪಹೋಮಾದಿಕಂ ಚರೇತ್ ॥ ೮೪ ॥

ಘೃತಂ ಚ ಶರ್ಕರಾಂ ದುಗ್ಧಮಪೂಪಂ ಕದಲೀಫಲಂ ।
ಕ್ಷೌದ್ರಂ ಗುಡಂ ನಾಲಿಕೇರಂ ಫಲಂ ಲಾಜಾಂ ತಿಲಂ ದಧಿ ॥ ೮೫ ॥

---

೮೨. ಸುಗಂಧಯುಕ್ತವಾದ ವಸ್ತ್ರಗಳಿಂದ ಒಂದುತಿಂಗಳು ದೇವಿಯನ್ನು ಪೂಜಿಸಿದರೆ ಪಾಪ ಮತ್ತು ಶತ್ರುಕೃತವಾದ ಅಭಿಚಾರಿಕಪ್ರಯೋಗಾದಿಗಳಿಂದ ಸಂಭವಿಸುವ ದುಃಖಸಮೂಹ ಮುಂತಾದುವುಗಳನ್ನು ಪರಿಹರಿಸಿಕೊಳ್ಳುವನು.

೮೩. ಶ್ರೀ ಚಕ್ರ, ಅದರಲ್ಲಿ ದೇವೀರೂಪನಾದ ಸ್ವಾತ್ಮ, ಸುತ್ತಲೂ ಅಸಂಖ್ಯಾಕಶಕ್ತಿಪರಿವಾರ ಇವುಗಳನ್ನು ಭಾವಿಸಿದವನಾಗಿ ಶಬ್ದಾದಿವಿಷಯ ಗಳಿಂದಲೂ, ಪುಷ್ಪಗಳಿಂದಲೂ ಪೂಜಿಸುವವನು ದೇವೀಮಯ ಎಂದರೆ ಜೀವ ನ್ಮುಕ್ತನಾಗುವನು.

೮೪-೮೭. ಕಾಮೇಶ್ವರ್ಯಾದಿ ಹದಿನೈದು ನಿತ್ಯಾದೇವತೆಗಳನ್ನು ಪ್ರತ್ಯೇಕ ವಾಗಿ ಪಾಡ್ಯದಿಂದ ಪೂರ್ಣಿಮಾಂತವಾದ ತಿಥಿಗಳಲ್ಲಿ ಒಂದೊಂದು ದಿವಸ ಒಂದೊಂದು ನಿತ್ಯಾದೇವತೆಯ ಭಜನೆ, ಜಪ, ಹೋಮ, ತರ್ಪಣ, ಅಭಿಷೇಕ ಗಳನ್ನು ಮಾಡಿ ಕ್ರಮವಾಗಿ ಆಯಾಯಾ ತಿಥಿಗಳಲ್ಲಿ ತುಪ್ಪ, ಸಕ್ಕರೆ, ಹಾಲು,

ಪೃಥುಕಂ ಚಣಕಂ ಮುದ್ಗಂ ಪಾಯಸಂ ಚ ನಿವೇದಯೇತ್ ।
ಕಾಮೇಶ್ವರ್ಯಾದಿಶಕ್ತೀನಾಂ ಸರ್ವಾಸಾಮಪಿ ಚೋದಿತಂ ॥ ೮೬ ॥

ಆದ್ಯಾಯಾ ಲಲಿತಾಯಾಸ್ತು ಸರ್ವಾಣ್ಯೇತಾನಿ ಸರ್ವದಾ ।
ನಿವೇದಯೇಚ್ಚ ಜುಹುಯಾದ್ವಹ್ನೌ ದದ್ಯಾನ್ನೃಣಾಮಪಿ ॥ ೮೭ ॥

ತತ್ತದ್ವಿದ್ಯಾಕ್ಷರಪ್ರೋಕ್ತಮೌಷಧಂ ತತ್ಪ್ರಮಾಣತಃ ।
ಸಂಪಿಷ್ಯ ಗುಟಿಕೀಕೃತ್ಯ ತಾಭಿಃ ಸರ್ವಂ ಚ ಸಾಧಯೇತ್ ॥ ೮೮ ॥

ರವಿವಾರೇಽರುಣಾಂಭೋಜೈಃ ಕುಮುದೈಃ ಸೋಮವಾರಕೇ ।
ಭೌಮೇ ರಕ್ತೋತ್ಪಲೈಃ ಸೌಮ್ಯೇ ವಾರೇ ತಗರಸಂಭವೈಃ ॥ ೮೯ ॥

---

ಅಪೂಪ. ಬಾಳೆಹಣ್ಣು, ಜೇನುತುಪ್ಪ, ಬೆಲ್ಲ, ತೆಂಗಿನಕಾಯಿ, ಅರಳು, ಎಳ್ಳು, ಮೊಸರು, ಅವಲಕ್ಕಿ, ಕಡಲೆ, ಹೆಸರು, ಪಾಯಸ ಇವುಗಳಲ್ಲೊಂದನ್ನು ನಿವೇದನೆಮಾಡಬೇಕು.

೮೭. ಮೊದಲನೆಯದಾದ ಲಲಿತಾದೇವಿಗೆ ಯಾವಾಗಲೂ ಉಕ್ತವಾದ ಎಲ್ಲಾ ಪದಾರ್ಥಗಳನ್ನೂ ನೈವೇದ್ಯಮಾಡಬೇಕು. ಅಗ್ನಿಯಲ್ಲಿ ಹೋಮ ಮಾಡಬೇಕು. ಮನುಷ್ಯರಿಗೆ ದಾನವನ್ನೂ ಮಾಡಬೇಕು.

೮೮. ಆಯಾಯಾ ನಿತ್ಯಾದೇವತೆಗಳ ವಿದ್ಯೆಯ ಅಕ್ಷರಗಳಿಂದ ಉಕ್ತವಾದ ಔಷಧವನ್ನು ಚೂರ್ಣಮಾಡಿ ಕಲಸಿ ಆಯಾಯಾ ಅಕ್ಷರಾವೃತ್ತಿ ಸಂಖ್ಯಾ ಪರಿಮಾಣವಾಗಿ ಗುಳಿಗೆಗಳನ್ನು ಮಾಡಿ ಅವುಗಳಿಂದ ಸಕಲೇಷ್ಟಾರ್ಥಗಳನ್ನೂ ಸಾಧಿಸಬೇಕು.

೮೯-೯೦. ಭಾನುವಾರದದಿನ ರಕ್ತಕಮಲಗಳಿಂದಲೂ, ಸೋಮವಾರ ಕುಮುದಪುಷ್ಪಗಳಿಂದಲೂ, ಮಂಗಳವಾರ ರಕ್ತೋತ್ಪಲಗಳಿಂದಲೂ, ಬುಧವಾರ

ಗುರುವಾರೇ ಸುಕಲ್ಹಾರೈಃ ಶುಕ್ರವಾರೇ ಸಿತಾಂಬುಜೈಃ |
ನಿಲೋತ್ಪಲೈರ್ಮಂದವಾರೇ ಪೂಜಯೇದಿಷ್ಟನಾಪರಾತ್ || ೯೦ ||

ನಿವೇದಯೇತ್ಕ್ರಮಾತ್ತೇಷು ರವಿವಾರಾದಿಷು ಕ್ರಮಾತ್ |
ಪಾಯಸಂ ದುಗ್ಧಕದಲೀನವನೀತಾಸಿತಾಘೃತಂ || ೯೧ ||

ಏವಮಬ್ದಂ ಸಮಾರಾಧ್ಯ ದೇವೀಂ ಗಂಧಾದಿಭಿರ್ಯಜೇತ್ |
ಗ್ರಹಪೀಡಾಂ ವಿಜಿತ್ಯಾಶು ಸುಖಾನಿ ಚ ಸಮಶ್ನುತೇ || ೯೨ ||

ಅರ್ಧರಾತ್ರೇ ತು ಸಾಧ್ಯಾಂ ಸ್ತ್ರೀಂ ಸ್ಮರನ್ಮದನವಹ್ನಿನಾ |
ದಹ್ಯಮಾನಾಂ ಹೃತಸ್ವಾಂತಾಂ ಮಸ್ತಕಸ್ಥಾಪಿತಾಂಜಲಿಂ || ೯೩ ||

ವಿಕೀರ್ಣಕೇಶೀಮಾಲೋಲಲೋಚನಾಮರುಣಾರುಣಾಂ |
ವಾಯುಪ್ರೇಂಖತ್ಪತಾಕಾಖ್ಯಪಟೋಪಮಕಲೇವರೀಂ || ೯೪ ||

---

ನಂದಿವರ್ಧನಪುಷ್ಪದಿಂದಲೂ, ಗುರುವಾರ ಕಲ್ಹಾರಪುಷ್ಪಗಳಿಂದಲೂ, ಶುಕ್ರವಾರ ಬಿಳಿಯಕಮಲಗಳಿಂದಲೂ, ಶನಿವಾರದ ದಿವಸ ನಿಲೋತ್ಪಲಗಳಿಂದಲೂ ಇಷ್ಟ ದೇವಿಯನ್ನು ಭಕ್ತಿಯಿಂದ ಪೂಜಿಸಬೇಕು.

೯೧-೯೨. ಭಾನುವಾರಾದಿಗಳಲ್ಲಿ ಪೂಜೆಮಾಡಿದನಂತರ ಕ್ರಮವಾಗಿ ಪಾಯಸ, ಕ್ಷೀರ, ಬಾಳೆಹಣ್ಣು, ಬೆಣ್ಣೆ, ಸಕ್ಕರೆ, ಘೃತ ಇವುಗಳ ನೈವೇದ್ಯವನ್ನು ಸಮರ್ಪಿಸಬೇಕು.

ಈರೀತಿ ಒಂದುವರ್ಷ ಆರಾಧನೆಮಾಡಿ ದೇವಿಯನ್ನು ಗಂಧಾದಿಗಳಿಂದ ಪೂಜಿಸಿದರೆ ಗ್ರಹಬಾಧೆಯು ಹೋಗುವುದು. ಸುಖವೂ ಲಭಿಸುವುದು.

೯೩-೯೬. ಅರ್ಧರಾತ್ರಿಯಲ್ಲಿ ಕಾಮಾಗ್ನಿಯಿಂದ ದಹಿಸಲ್ಪಡುತ್ತಿರುವ, ತನ್ನ ಮನಸ್ಸನ್ನಪಹರಿಸಿರುವ, ತಲೆಯಮೇಲಿಟ್ಟುಕೊಂಡಿರುವ ಅಂಜಲಿಯುಳ್ಳ, ಕೆದರಿರುವ ಕೂದಲುಳ್ಳ, ಚಂಚಲನಯನಳಾದ, ಅರುಣೆಯಂತೆ ಕೆಂಪಗಿರುವ, ಗಾಳಿಯಿಂದ ಹಾರಾಡುತ್ತಿರುವ ಧ್ವಜಪಟಕ್ಕೆ ಸಮಾನವಾದ ಶರೀರವುಳ್ಳ,

ವಿವೇಕವಿಧುರಾಂ ಮತ್ತಾಂ ಮಾನಲಜ್ಜಾಭಯಾತಿಗಾಂ ।
ಚಿಂತಯನ್ನರ್ಚಯೇಚ್ಚಕ್ರಂ ಮಧ್ಯೇ ದೇವೀಂ ದಿಗಂಬರಾಂ ॥ ೯೫ ॥

ಜಪಾದಾಡಿಮಬಂಧೂಕಕಿಂಶುಕಾದ್ಯೈಃ ಸಮರ್ಚಯೇತ್ ।
ಅನ್ಯೈಃ ಸುಗಂಧಿಶೇಫಾಲೀಕುಸುಮಾದ್ಯೈಃ ಸಮರ್ಚಯೇತ್ ॥ ೯೬ ॥

ತ್ರಿಸಪ್ತರಾತ್ರಾದಾಯಾತಿ ಪ್ರೋಕ್ತರೂಪಾ ಮದಾಕುಲಾ ।
ಯಾವಚ್ಛರೀರಪಾತಃ ಸ್ಯಾಚ್ಛಾಯೇವಾನುಗಾಽಸ್ಯ ಸಾ ॥ ೯೭ ॥

ಪದ್ಮೈ ರಕ್ತೈಸ್ತ್ರಿಮಧ್ವಕ್ತೈರ್ಹೋಮಾಲ್ಲಕ್ಷ್ಮೀಮವಾಪ್ನುಯಾತ್ ।
ತಥೈವ ಕೈರವೈ ರಕ್ತೈರಂಗನಾಃ ಸ್ವವಶಂ ನಯೇತ್ ॥ ೯೮ ॥

ಸಮಾನರೂಪವತ್ಸಾಯಾಃ ಶುಕ್ಲಾಯಾ ಗೋಃ ಪಯಃಪ್ಲುತೈಃ ।
ಮಲ್ಲಿಕಾಮಾಲತೀಜಾತೀಶತಪತ್ರೈರ್ಹುತೈರ್ಭವೇತ್ ॥ ೯೯ ॥

---

ವಿವೇಕರಹಿತಳಾದ, ಮದಿಸಿದ, ಮಾನ ನಾಚಿಕೆ ಭಯ ಇವುಗಳನ್ನು ಬಿಟ್ಟಿರುವ, ಸಾಧಿಸಲ್ಪಡಬೇಕೆಂದಿರುವ ಸ್ತ್ರೀಯನ್ನು ಚಿಂತಿಸುತ್ತಾ, ಚಕ್ರವನ್ನು ಪೂಜಿಸಿ, ಅದರ ಮಧ್ಯದಲ್ಲಿ ದಿಗಂಬರಳಾದ ದೇವಿಯನ್ನು ಜಪಾ, ದಾಳಿಂಬರೆ, ಬಂಧೂಕ, ಮುತ್ತಗ ಮುಂತಾದ ಹೂವುಗಳು ಮತ್ತು ಇತರ ಸುಗಂಧವಾದ ಲಕ್ಕಿಲಿ ಹೂವು ಮುಂತಾದುವುಗಳಿಂದ ಚೆನ್ನಾಗಿ ಪೂಜಿಸಬೇಕು.

೯೭. ಇಪ್ಪತ್ತೊಂದುದಿವಸಗಳೊಳಗೆ ತಾನು ಚಿಂತಿಸಿದಂತಹ ಸ್ತ್ರೀಯು ಮದದಿಂದ ಆಕುಲಿತಳಾಗಿ ಪೂಜಕನ ಬಳಿಗೆ ಬಂದು ಸಾಯುವವರೆಗೂ ಅವನನ್ನು ಅನುಸರಿಸಿರುವಳು.

೯೮. ಸಕ್ಕರೆ, ತುಪ್ಪ, ಜೇನುತುಪ್ಪಗಳಲ್ಲಿ ನೆನೆಸಿದ ರಕ್ತಕಮಲಗಳಿಂದ ಹೋಮಮಾಡಿದರೆ ಲಕ್ಷ್ಮೀಪ್ರಾಪ್ತಿಯಾಗುವುದು. ಅಂತೆಯೇ ರಕ್ತಕೈರವ ಪುಷ್ಪಗಳಿಂದ ಹೋಮಮಾಡಿದರೆ ಸ್ತ್ರೀಯರು ವಶರಾಗುವರು.

೯೯-೧೦೨. ಬಿಳಿಯಕರುವುಳ್ಳ ಬಿಳಿಯಹಸುವಿನಹಾಲಿನಲ್ಲಿ ನೆನೆಸಿದ ಮಲ್ಲಿಗೆ, ಮಾಲತೀ, ಜಾಜೀ ಮತ್ತು ಕಮಲಪುಷ್ಪಗಳಿಂದ ಹೋಮಮಾಡಿದರೆ

**ಕೀರ್ತಿವಿದ್ಯಾಧನಾರೋಗ್ಯಸೌಭಾಗ್ಯವಿತ್ತಪಾದಿಕಂ ।**
**ಆರಗ್ವಧಪ್ರಸೂನೈಸ್ತು ಕ್ಷೌದ್ರಾಕ್ತೈರ್ಹವನಾದ್ಭವೇತ್ ॥ ೧೦೦ ॥**

**ಸ್ವರ್ಣಾಪ್ತಿಃ ಸ್ತಂಭನಂ ಶತ್ರೋರ್ನೃಪಾದೀನಾಂ ಕ್ರುಧೋಽಪಿ ಚ ।**
**ಆಜ್ಯಾಕ್ತೈಃ ಕರವೀರೋತ್ಥೈಃ ಪ್ರಸೂನೈರರುಣೈರ್ಹುತೈಃ ॥ ೧೦೧ ॥**

**ರಕ್ತಾಂಬರಾಣಿ ವನಿತಾ ಭೂಪಾಮಾತ್ಯವಶಂ ತಥಾ ।**
**ಭೂಷಾವಾಹನವಾಣಿಜ್ಯಸಿದ್ಧಯಶ್ಚಾಸ್ಯ ವಾಂಛಿತಾಃ ॥ ೧೦೨ ॥**

**ಲವಣೈಃ ಸರ್ಷಪೈರ್ಗೌರೈರಿತರೈರ್ವಾಥ ಹೋಮತಃ ।**
**ತತ್ತೈಲಾಕ್ತೈರ್ನಿಶಾಮಧ್ಯೇ ತ್ವಾನಯೇದ್ವಾಂಛಿತಾಂ ವಧೂಂ ॥ ೧೦೩ ॥**

**ತೈಲಾಕ್ತೈರ್ಜುಹುಯಾತ್ಕೃಷ್ಣದರಪುಷ್ಪೈರ್ನಿಶಾಂತರೇ ।**
**ಮಾಸಾದರಾತೇಸ್ತಸ್ಯಾರ್ತಿಜ್ವರೇಣ ಭವತಿ ಧ್ರುವಂ ॥ ೧೦೪ ॥**

---

ಯಶಸ್ಸು, ವಿದ್ಯೆ, ಧನ, ಆರೋಗ್ಯ, ಸೌಭಾಗ್ಯ, ವಿಜಯ ಮುಂತಾದುವುಗಳು ಲಭಿಸುವುವು.

ಜೇನುತುಪ್ಪದಲ್ಲಿ ನೆನೆಸಿದ ಆರಗ್ವಧ (ಕಕ್ಕೆ) ಪುಷ್ಪಗಳಿಂದ ಹೋಮ ಮಾಡಿದರೆ ಸುವರ್ಣಪ್ರಾಪ್ತಿಯೂ, ಶತ್ರು ಮತ್ತು ನೃಪಾದಿಗಳ ಕೋಪಸ್ತಂಭನವೂ ಆಗುವುದು.

ತುಪ್ಪದಲ್ಲಿ ನೆನೆಸಿದ ಕೆಂಪುಕರವೀರಪುಷ್ಪಗಳಿಂದ ಹೋಮಮಾಡಿದರೆ ರಕ್ತವಸ್ತ್ರ, ಸ್ತ್ರೀ, ರಾಜ, ಅಮಾತ್ಯ ಇವರುಗಳು ವಶರಾಗುವರು ಮತ್ತು ಆಭರಣ, ವಾಹನ, ವ್ಯಾಪಾರ ಮುಂತಾದ ಇಷ್ಟವೆಲ್ಲವೂ ಸಿದ್ಧಿಸುವುವು.

೧೦೩. ಉಪ್ಪು, ಅದರದರ ತೈಲದಲ್ಲಿ ನೆನೆಸಿದ ಬಿಳಿ ಅಥವಾ ಕರಿಯ ಸಾಸವೆಗಳಿಂದ ಮಧ್ಯರಾತ್ರಿಯಲ್ಲಿ ಹೋಮಮಾಡಿದರೆ ಇಷ್ಟವಧುವಿನ ಲಾಭ ವಾಗುವುದು.

೧೦೪. ಎಣ್ಣೆಯಲ್ಲಿ ನೆನೆಸಿದ ಕೃಷ್ಣದರಪುಷ್ಪಗಳಿಂದ ಮಧ್ಯರಾತ್ರಿಯಲ್ಲಿ ಹೋಮಮಾಡಿದರೆ ಅವನ ಶತ್ರುವಿಗೆ ಒಂದುತಿಂಗಳೊಳಗಾಗಿ ಆರ್ತಿಜ್ವರ ವುಂಟಾಗುವುದು.

ಆರುಷ್ಕರೈರ್ಘೃತಾಭ್ಯಕ್ತೈಸ್ತದ್ಬೀಜೈರ್ನಿಶಿ ಹೋಮತಃ ।
ಶತ್ರೋರ್ದಾಹವ್ರಣಾನಿ ಸ್ಯುರ್ದುಃಸಾಧ್ಯಾನಿ ಚಿಕಿತ್ಸಕೈಃ ॥ ೧೦೫ ॥

ತಥಾ ತತ್ತೈಲಸಂಸಿಕ್ತೈರ್ಬೀಜೈರಂಕೋಲಕೈರಪಿ ।
ಮರೀಚೈಃ ಸರ್ಷಪಾಜ್ಯಾಕ್ತೈರ್ನಿಶಿ ಹೋಮಾನುಸಾರತಃ ॥ ೧೦೬ ॥

ವಾಂಛಿತಾಂ ವನಿತಾಂ ಕಾಮಜ್ವರಾರ್ತಾಮಾನಯೇದ್ಧ್ರುತಂ ।
ಶಾಲಿಭಿಶ್ಚಾಜ್ಯಸಂಸಿಕ್ತೈರ್ಹೋಮಾಚ್ಛಾಲೀನವಾಪ್ನುಯಾತ್ ॥ ೧೦೭ ॥

ಮುದ್ಗೈರ್ಮುದ್ಗಂ ಘೃತೈರಾಜ್ಯಂ ಸಿದ್ಧೈರಿತ್ಥಂ ಹುತೈರ್ಭವೇತ್ ।
ಸಾಧ್ಯರ್ಕ್ಷವೃಕ್ಷಸಂಭೂತಾಂ ಪಿಷ್ಟ್ವಾ ಪಾದರಜಃಕೃತಾಂ ॥ ೧೦೮ ॥

ರಾಜೀಮರೀಚಲೋಣೋತ್ಥಾಂ ಪುತ್ತಲೀಂ ಜುಹುಯಾನ್ನಿಶಿ ।
ಪ್ರಪದಾಭ್ಯಾಂ ಚ ಜಂಘಾಭ್ಯಾಂ ಜಾನುಭ್ಯಾಮುರುಯುಗ್ಮತಃ ॥ ೧೦೯ ॥

---

೧೦೫. ಆರುಷ್ಕರ ತುಪ್ಪದಲ್ಲಿ ನೆನೆಸಿದ ಅದರ ಬೀಜಗಳಿಂದ ರಾತ್ರಿ ಕಾಲದಲ್ಲಿ ಹೋಮಮಾಡಿದರೆ ಶತ್ರುವಿಗೆ ವೈದ್ಯರು ವಾಸಿಮಾಡಲಶಕ್ಯಗಳಾದ ದಾಹವ್ರಣಗಳುಂಟಾಗುವುವು.

೧೦೬-೧೦೭. ಹಾಗೆಯೇ ಅದರ ತೈಲದಿಂದ ಸಿಕ್ತವಾದ ಅಂಕೋಲೆ ಬೀಜಗಳಿಂದ ಹೋಮಮಾಡಿದರೂ ಶತ್ರುವಿಗೆ ಅಂತಹ ದಾಹವ್ರಣಾದಿಗಳುಂಟಾಗುವುವು.

ಸಾಸವೆಯ ತುಪ್ಪದಲ್ಲಿ ನೆನೆಸಿದ ಮೆಣಸುಗಳಿಂದ ರಾತ್ರಿ ಹೋಮಮಾಡಿದರೆ ಅದಕ್ಕನುಸಾರವಾಗಿ ತಾನು ಬಯಸಿದ ಸ್ತ್ರೀಯು ಕಾಮಜ್ವರಪೀಡಿತಳಾಗಿ ತನ್ನಲ್ಲಿಗೆ ಶೀಘ್ರವಾಗಿ ಬರುವಳು.

ಘೃತಸಿಕ್ತಬತ್ತದಿಂದ ಹೋಮಮಾಡಿದರೆ ಬತ್ತವು ಲಭಿಸುವುದು.

೧೦೮-೧೧೧. ಹೆಸರುಕಾಳಿನಿಂದ ಹೋಮಮಾಡಿದರೆ ಹೆಸರೂ, ತುಪ್ಪ

ನಾಭೇರಧಸ್ತಾದ್ಧೃದಯಾದ್ಭಿನ್ನೇನಾಕಂಠತಸ್ತಥಾ ।
ಶಿರಸಾ ಚ ಸುತೀಕ್ಷ್ಣೇನ ಛಿತ್ವಾ ಶಸ್ತ್ರೇಣ ವೈ ಕ್ರಮಾತ್ ॥ ೧೧೦ ॥

ಏವಂ ದ್ವಾದಶಧಾ ಹೋಮಾನ್ನರನಾರೀನರಾಧಿಪಾಃ ।
ವಶ್ಯಾ ಭವಂತಿ ಸಪ್ತಾಹಾಜ್ಜ್ವರಾರ್ತಿಶ್ಚಾಸ್ಯ ವಾಂಛಯಾ ॥ ೧೧೧ ॥

ಪಿಷ್ಟೇನ ಗುಡಯುಕ್ತೇನ ಮರೀಚೈರ್ಜೀರಕೈರ್ಯುತಾಂ ।
ಕೃತ್ವಾ ಪುತ್ತಲಿಕಾಂ ಸಾಧ್ಯನಾಮಯುಕ್ತಾಮಥೋ ಹೃದಿ ॥ ೧೧೨ ॥

---

ದಿಂದ ಹೋಮಮಾಡಿದರೆ ತುಪ್ಪವೂ, ಇಷ್ಟವಸ್ತುವಿನಿಂದ ಹೋಮಮಾಡಿದರೆ ಅದೂ ಲಭಿಸುವುದು.

ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳಿಗೂ ಒಂದೊಂದು ಮರಗಳು ಕ್ಲಪ್ತವಾಗಿವೆ. ಅದರಲ್ಲಿ ಸಾಧ್ಯಪುರುಷನ ಜನ್ಮನಕ್ಷತ್ರಕ್ಕೆ ವಿಹಿತವಾದ ಮರದಿಂದ ಅಥವಾ ಸಾಧ್ಯಪುರುಷನ ಪಾದಧೂಳಿಯಿಂದ ಸಹಿತವಾದ ಹಿಟ್ಟಿನಿಂದ ಇಲ್ಲವೇ ಸಾಸವೆ ಮೆಣಸು ಉಪ್ಪುಗಳಿಂದ ಬೊಂಬೆಯನ್ನು ಮಾಡಿ, ಅದನ್ನು ಮೊನೆಯಾದ ಚೂರಿಯಿಂದ ಪಾದಾಗ್ರ, ಜಂಘೆಗಳು, ಮೊಣಕಾಲುಗಳು, ಎರಡು ತೊಡೆಗಳು, ಅದರಮೇಲೆ ನಾಭಿವರೆಗಿನಭಾಗ, ಅಲ್ಲಿಂದ ಹೃದಯದವರೆಗಿನಭಾಗ, ಹೃದಯದಿಂದ ಕುತ್ತಿಗೆಯವರೆಗೆ ಒಂದುಭಾಗ, ಶಿರಸ್ಸು ಈರೀತಿಯಾಗಿ ಹನ್ನೆರಡು ಭಾಗಗಳನ್ನಾಗಿ ಕತ್ತರಿಸಿ, ಆ ಹನ್ನೆರಡುಭಾಗಗಳನ್ನು ರಾತ್ರಿಕಾಲದಲ್ಲಿ ಕ್ರಮವಾಗಿ ಹೋಮಮಾಡಬೇಕು. ಹಾಗೆ ಹೋಮಮಾಡಿದರೆ ಪುರುಷರು, ಸ್ತ್ರೀಯರು, ರಾಜರೂ ಸಹ ಏಳುದಿವಸಗಳಲ್ಲಿ ಅಧೀನರಾಗುವರು. ಅವರಿಗೆ ಜ್ವರಪೀಡೆಯುಂಟಾಗಬೇಕೆಂದು ಸಾಧಕನು ಕೋರಿದರೆ ಅದೂ ಬರುತ್ತದೆ.

೧೧೨-೧೧೩.. ಬೆಲ್ಲ, ಮೆಣಸು, ಜೀರಿಗೆಗಳಿಂದ ಸಹಿತವಾದ ಹಿಟ್ಟಿನಿಂದ ಬೊಂಬೆಯನ್ನು ಮಾಡಿ, ಅದರ ಹೃದಯದಲ್ಲಿ ಸಾಧ್ಯಪುರುಷನ ಹೆಸರನ್ನು ಬರೆದು ಅದನ್ನು ಸಾಧ್ಯನಾಮಸಹಿತ ವಿದ್ಯಾ ಹೋಮಮಾಡಿ ಉಳಿದ ತುಪ್ಪದಲ್ಲಿ

**ಸನಾಮಹೋಮಸಂಪಾತಘೃತೇ ಸಂಪಾಚ್ಯೈತಾಂ ಪುನಃ |**
**ಸ್ಪೃಶನ್ನಿಜಕರಾಗ್ರೇಣ ಸಹಸ್ರಂ ಪ್ರಜಪೇನ್ಮನುಂ || ೧೧೩ ||**

**ಅಭ್ಯರ್ಚ್ಯ ತತ್ಸ್ಪೃತಾಭ್ಯಕ್ತಂ ಭಕ್ಷಯೇತ್ತದ್ಧಿಯಾ ಜಪನ್ |**
**ನರನಾರೀನೃಪಾಸ್ತಸ್ಯ ವಶ್ಯಾಃ ಸ್ಯುರ್ಮರಣಾವಧಿ || ೧೧೪ ||**

**ಶಕ್ತ್ಯಷ್ಟಗಂಧಂ ಸಂಪಿಷ್ಯ ಕನ್ಯಯಾ ಶಿಶಿರೇ ಜಲೇ |**
**ತೇನ ಸ್ವೈ ತಿಲಕಂ ಭಾಲೇ ಧಾರಯನ್ವಶಯೇಜ್ಜಗತ್ || ೧೧೫ ||**

**ಶಾಲಿತಂದುಲಮಾದಾಯ ಪ್ರಸ್ಥಂ ಭಾಂಡೇ ನವೇ ಕ್ಷಿಪೇತ್ |**
**ಸಮಾನವರ್ಣವತ್ಸಾಯಾ ರಕ್ತಾಯಾ ಗೋಃ ಪಯಸ್ತಥಾ || ೧೧೬ ||**

**ದ್ವಿಗುಣಂ ತತ್ರ ನಿಕ್ಷಿಪ್ಯ ಶ್ರಪಯೇತ್ಸಂಸ್ಕೃತೇ ನಲೇ |**
**ಘೃತೇನ ಸಿಕ್ತಸಿಕ್ಥಂ ತು ಕೃತ್ವಾ ತತ್ಸಸಿತಂ ಕರೇ || ೧೧೭ ||**

---

ಮಜ್ಜನ ಮಾಡಿಸಿ, ಪುನಃ ಅದನ್ನು ತನ್ನ ಹಸ್ತಾಗ್ರದಿಂದ ಸ್ಪರ್ಶಮಾಡಿಕೊಂಡು ಮಂತ್ರವನ್ನು ಒಂದುಸಾವಿರ ಜಪಮಾಡಬೇಕು.

೧೧೪. ಬಳಿಕ ಅದನ್ನು ಪ್ರಾಣಪ್ರತಿಷ್ಠಾವಿದ್ಯೆಯಿಂದ ಪೂಜಿಸಿ, ಘೃತದಲ್ಲಿ ಸ್ನಾನಮಾಡಿಸಿದ ಆ ಬೊಂಬೆಯನ್ನು ಸಾಧ್ಯಪುರುಷನನ್ನೇ ತಿನ್ನುವೆನೆಂಬ ಭಾವನೆಯಿಂದ ಜಪಿಸುತ್ತಾ ಭಕ್ಷಣಮಾಡಬೇಕು. ಹಾಗೆ ಮಾಡಿದವನಿಗೆ ಸಾಯುವವರೆಗೂ, ಪುರುಷ, ಸ್ತ್ರೀ, ರಾಜರುಗಳು ಅಧೀನರಾಗುವರು.

೧೧೫. ಕನ್ಯೆಯಿಂದ ಶಕ್ತ್ಯಷ್ಟಗಂಧವನ್ನು ಹಿಮಜಲದಲ್ಲಿ ಅರೆಸಿ ಅದರಿಂದ ಹಣೆಯಮೇಲೆ ತಿಲಕವನ್ನು ಧರಿಸುವವನು ಲೋಕವನ್ನೇ ವಶಪಡಿಸಿಕೊಳ್ಳುವನು.

೧೧೬-೧೧೮. ಒಂದು ಬಳ್ಳ ಅಕ್ಕಿಯನ್ನು ಹೊಸಪಾತ್ರೆಯಲ್ಲಿಟ್ಟು, ಕೆಂಪು ಕರುವುಳ್ಳ ರಕ್ತಗೋವಿನ ಹಾಲನ್ನು ಅಕ್ಕಿಯ ಎರಡರಷ್ಟು ಆ ಪಾತ್ರೆಯಲ್ಲಿನ ಅಕ್ಕಿಗೆ

ವಿಧಾಯ ವಿದ್ಯಾಮಷ್ಟೋರ್ಧ್ವಶತಂ ಜಪ್ತ್ವಾ ಹುನೇತ್ತತಃ ।
ಏವಂ ಹೋಮೋ ಮಹಾಲಕ್ಷ್ಮೀಮಾವಹೇತ್ಪ್ರತಿಪತ್ಕೃತಃ ॥ ೧೧೮ ॥

ಶುಕ್ರವಾರೇಷ್ವಪಿ ತಥಾ ವರ್ಷಾನ್ನೃಪಸಮೋ ಭವೇತ್ ।
ಪಂಚಮ್ಯಾಂ ತು ವಿಶೇಷೇಣ ಪ್ರಾಗ್ವದ್ಧೋಮಂ ಸಮಾಚರೇತ್ ॥ ೧೧೯ ॥

ತಸ್ಯಾಂ ತಿಥೌ ತ್ರಿಮಧ್ವಕ್ತೈರ್ಮಲ್ಲಿಕಾದ್ಯೈಃ ಸಿತೈರ್ಹುನೇತ್ ।
ಅನ್ನಾಜ್ಯಾಭ್ಯಾಂ ಚ ನಿಯತಂ ಹುತ್ವಾsನ್ನಾಢ್ಯೋ ಭವೇನ್ನರಃ ॥ ೧೨೦ ॥

ಯದ್ಯದ್ಧಿ ವಾಂಛಿತಂ ವಸ್ತು ತತ್ತತ್ಸರ್ವಂ ತು ಸರ್ವದಾ ।
ಘೃತಹೋಮಾದವಾಪ್ನೋತಿ ತಥೈವ ತಿಲತಂಡುಲೈಃ ॥ ೧೨೧ ॥

ಸೇರಿಸಿ, ಸಂಸ್ಕೃತಾಗ್ನಿಯಲ್ಲಿ ಅದನ್ನು ಬೇಯಿಸಿ ಅನ್ನಮಾಡಿ ತುಪ್ಪಹಾಕಿದ ಅನ್ನದಮುದ್ದೆಯನ್ನು ಸಕ್ಕರೆಸಹಿತವಾಗಿ ಕೈಯಲ್ಲಿಟ್ಟುಕೊಂಡು, ವಿದ್ಯೆಯನ್ನು ನೂರೆಂಟಾವೃತ್ತಿ ಜಪಿಸಿ, ಬಳಿಕ ಅದನ್ನು ಹೋಮಮಾಡಬೇಕು. ಈರೀತಿಯಾಗಿ ಪಾಡ್ಯದ ದಿನ ಮಾಡಿದ ಹೋಮವು ಮಹದೈಶ್ವರ್ಯದಾಯಕವಾಗುವುದು.

೧೧೯. ಶುಕ್ರವಾರಗಳಲ್ಲಿ ಆರೀತಿ ಹೋಮಮಾಡುವವನು ಒಂದು ವರ್ಷದಲ್ಲಿ ರಾಜನಿಗೆ ಸಮಾನನಾಗುವನು. ಪಂಚಮಿಾದಿವಸ ವಿಶೇಷವಾಗಿ ಪೂರ್ವದಂತೆ ಹೋಮಮಾಡಬೇಕು.

೧೨೦. ಆ ದಿವಸದಲ್ಲಿ ಶರ್ಕರಾಘೃತಮಧುಗಳಿಂದ ಯುಕ್ತವಾದ ಮಲ್ಲಿಗೆ ಮುಂತಾದ ಬಿಳಿಯಹೂವುಗಳಿಂದ ಹೋಮಮಾಡಬೇಕು. ಅನ್ನ ಮತ್ತು ತುಪ್ಪ ಗಳಿಂದ ನಿಯತವಾಗಿ ಹೋಮಮಾಡುವ ಮನುಷ್ಯನು ಅನ್ನಸಮೃದ್ಧಿಯನ್ನು ಹೊಂದುವನು.

೧೨೧. ಬಯಸಿದ ವಸ್ತುವೆಲ್ಲವನ್ನೂ ಘೃತಹೋಮದಿಂದ ಯಾವಾಗಲೂ ಪಡೆಯುವನು. ಅಂತೆಯೇ ಎಳ್ಳು, ಅಕ್ಕಿಗಳ ಹೋಮದಿಂದಲೂ ಸಕಲೇಷ್ಟ ವನ್ನೂ ಪಡೆಯುವನು.

ಅರುಣೈಃ ಪಂಕಜೈರ್ಹೋಮಂ ಕುರ್ವಂಸ್ತ್ರಿಮಧುರಾಪ್ಲುತೈಃ ।
ಮಂಡಲಾಲ್ಲಭತೇ ಲಕ್ಷ್ಮೀಂ ಮಹತೀಂ ಶ್ಲಾಘ್ಯವಿಗ್ರಹಾಂ ॥ ೧೨೨ ॥

ಕಲ್ಹಾರೈಃ ಕ್ಷೌದ್ರಸಂಯುಕ್ತೈಃ ಪೂರ್ಣಾದ್ಯಂ ತದ್ದಿನಾವಧಿ ।
ಜುಹುಯಾನ್ನಿತ್ಯಶೋ ಭಕ್ತ್ಯಾ ಸಹಸ್ರಂ ವಿಕಚೈಃ ಶುಭೈಃ ॥ ೧೨೩ ॥

ಸ ತು ಕೀರ್ತಿಂ ಧನಂ ಪುತ್ರಾನ್ಪ್ರಾಪ್ನುಯಾನ್ನಾತ್ರ ಸಂಶಯಃ ।
ಚಂಪಕೈಃ ಕ್ಷೌದ್ರಸಂಸಿಕ್ತೈಃ ಸಹಸ್ರಹವನಾದ್ಧ್ರುವಂ ॥ ೧೨೪ ॥

ಲಭತೇ ಸ್ವರ್ಣನಿಷ್ಕಾಣಾಂ ಶತಂ ಮಾಸೇನ ನಾರದ ।
ಪಾಟಲೈರ್ಘೃತಸಂಸಿಕ್ತೈಸ್ತ್ರಿಸಹಸ್ರಂ ಹುತೈಸ್ತಥಾ ॥ ೧೨೫ ॥

ದರ್ಶಾದಿಮಾಸಾಲ್ಲಭತೇ ಚಿತ್ರಾಣಿ ವಸನಾನಿ ಚ ।
ಕರ್ಪೂರಚಂದನಾದ್ಯಾನಿ ಸುಗಂಧಾನಿ ತು ಮಾಸತಃ ॥ ೧೨೬ ॥

---

೧೨೨. ಸಕ್ಕರೆ, ತುಪ್ಪ, ಜೇನುತುಪ್ಪಗಳಿಂದ ಮಿಶ್ರವಾದ ಕೆಂಪುಕಮಲಗಳಿಂದ ಹೋಮಮಾಡುವವನು ಸ್ತೋತ್ರಾರ್ಹವಾದ ಮಹದೈಶ್ವರ್ಯವನ್ನು ಹೊಂದುವನು.

೧೨೩-೧೨೪. ಪೂರ್ಣಿಮೆಯಿಂದ ಆ ದಿನದವರೆಗೆ ವಿಕಸಿತಗಳಾದ, ಮಧುಮಿಶ್ರವಾದ, ಶುಭ ಪದ್ಮಪುಷ್ಪಗಳಿಂದ ಭಕ್ತಿಪೂರ್ವಕವಾಗಿ ಒಂದುಸಾವಿರ ಹೋಮಮಾಡಿದರೆ ಅವನು ಕೀರ್ತಿ, ಧನ, ಪುತ್ರರುಗಳನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ.

ನಾರದನೇ! ಮಧುಸಿಕ್ತವಾದ ಸಂಪಿಗೆಹೂವುಗಳಿಂದ ಒಂದುಸಾವಿರ ಹೋಮಮಾಡಿದರೆ ಒಂದುತಿಂಗಳಲ್ಲಿ ನೂರು ಸುವರ್ಣನಾಣ್ಯಗಳು ಲಭಿಸುವುವು.

ಅಮಾವಾಸ್ಯೆಯಿಂದ ಒಂದುತಿಂಗಳುವರೆಗೆ ಘೃತಸಿಕ್ತವಾದ ಪಾದರೀ ಹೂವುಗಳಿಂದ ಮೂರುಸಾವಿರ ಹೋಮಮಾಡಿದರೆ ನಾನಾವಿಧ ವಸ್ತ್ರಗಳು ಲಭಿಸುವುವು.

ವಸ್ತೂನಿ ಲಭತೇ ಹೃದ್ಯೈರನ್ಯೈರ್ಭೋಗೋಪಯೋಗಿಭಿಃ ।
ಶಾಲಿಭಿಃ ಕ್ಷೀರಸಿಕ್ತಾಭಿಃ ಸಪ್ತಮೀಷು ಶತಂ ಹುತಂ ॥ ೧೨೭ ॥

ತೇನ ಶಾಲಿಸಮೃದ್ಧಿಸ್ಸ್ಯಾನ್ಮಾಸೈಃ ಷಡ್ಭಿರಸಂಶಯಂ ।
ತಿಲೈರ್ಹುತೈಸ್ತು ದಿವಸೈರ್ವರ್ಷಾದಾರೋಗ್ಯಮಾಪ್ನುಯಾತ್ ॥ ೧೨೮ ॥

ಸ್ವಜನ್ಮರ್ಕ್ಷತ್ರಿಷು ತಥಾ ದೂರ್ವಾಭಿರ್ಜುಹುಯಾನ್ನರಃ ।
ನಿರಾತಂಕೋ ಮಹಾಭೋಗಃ ಶತಂ ವರ್ಷಾಣಿ ಜೀವತಿ ॥ ೧೨೯ ॥

ಗುಡೂಚೀತಿಲದೂರ್ವಾಭಿಸ್ತ್ರಿಷು ಜನ್ಮಸು ವಾ ಹುನೇತ್ ।
ತೇನಾಯುಃಶ್ರೀಯಶೋಭೋಗಪುಣ್ಯವಿಧ್ಯಾದಿಮಾಪ್ನುವೇತ್ ॥ ೧೩೦ ॥

---

ಮನೋಹರಗಳಾದ ಇತರ ಭೋಗಸಾಧನವಸ್ತುಗಳಿಂದ ಹೋಮಮಾಡಿದರೆ ಒಂದುತಿಂಗಳಲ್ಲಿ ಕರ್ಪೂರ, ಗಂಧ ಮುಂತಾದ ಸುಗಂಧವಸ್ತುಗಳು ಲಭಿಸುವುವು.

ಸಪ್ತಮಿದಿನಗಳಲ್ಲಿ ಹಾಲಿನಲ್ಲಿ ನೆನೆಸಿದ ಬತ್ತದಿಂದ ಒಂದುನೂರು ಹೋಮಮಾಡಿದರೆ ಆರು ತಿಂಗಳಲ್ಲಿ ಬತ್ತಸಮೃದ್ಧಿಯುಂಟಾಗುವುದು ಸಂದೇಹವಿಲ್ಲ.

ಪ್ರತಿದಿನವೂ ತಿಲಹೋಮ ಮಾಡುತ್ತಿದ್ದರೆ ಒಂದುವರ್ಷದೊಳಗೆ ಆರೋಗ್ಯ ವುಂಟಾಗುವುದು.

೧೨೯. ತನ್ನ ಮೂರು ಜನ್ಮನಕ್ಷತ್ರಗಳಲ್ಲಿ, ಗರಿಕೇಹುಲ್ಲಿನಿಂದ ಹೋಮ ಮಾಡುವ ಮನುಷ್ಯನು ಆತಂಕವಿಲ್ಲದೆ ಮಹಾಭೋಗಿಯಾಗಿ ನೂರುವರ್ಷ ಬದುಕುವನು.

೧೩೦. ಅಮೃತಬಳ್ಳಿ, ಎಳ್ಳು, ದೂರ್ವಾ ಇವುಗಳಿಂದ ಮೂರು ಜನ್ಮ ನಕ್ಷತ್ರಗಳಲ್ಲಿ ಹೋಮಮಾಡಿದರೆ ಆಯುಸ್ಸು, ಕೀರ್ತಿ, ಭೋಗ, ಪುಣ್ಯ, ವಿಧ್ಯಾದಿ ಗಳೂ ಸಹ ಲಭಿಸುವುವು.

ಘೃತಪಾಯಸದುಗ್ಧೈಸ್ತು ಹುತ್ವೈಸ್ತೇಷು ತ್ರಿಷು ಕ್ರಮಾತ್ ।
ಆಯುರಾರೋಗ್ಯವಿಭವೈರ್ನೃಪಾಮಾತ್ಯೋ ಭವೇತ್ತಥಾ ॥ ೧೩೧ ॥

ಸಪ್ತಮ್ಯಾಂ ಕದಲೀಹೋಮಾತ್ಸೌಭಾಗ್ಯಂ ಲಭತೇಽನ್ವಹಂ ।
ದೂರ್ವಾತ್ರಿಕೈಸ್ತು ಪ್ರಾದೇಶಮಾನೈಸ್ತ್ರಿಸ್ವಾದುಸಂಯುತೈಃ ॥ ೧೩೨ ॥

ಜುಹುಯಾದ್ದಿನಶೋ ಘೋರೇ ಸನ್ನಿಪಾತಜ್ವರೇ ತಥಾ ।
ತದ್ದಿನೇಷು ಜಪೇದ್ವಿದ್ಯಾಂ ನಿತ್ಯಶಃ ಸಲಿಲಂ ಸ್ಪೃಶನ್ ॥ ೧೩೩ ॥

ಸಹಸ್ರವಾರಂ ತತ್ತೋಯೈಃ ಸ್ನಾನಂ ಪಾನಂ ಸಮಾಚರೇತ್ ।
ಪಾಕಾದ್ಯಮಪಿ ತೈರೇವ ಕುರ್ಯಾದ್ರೋಗವಿಮುಕ್ತಯೇ ॥ ೧೩೪ ॥

ಸಾಧ್ಯರ್ಕ್ಷವೃಕ್ಷಸಂಚೂರ್ಣಂ ತ್ರ್ಯೂಷಣಂ ಸರ್ಷಪಂ ತಿಲಂ ।
ಪಿಷ್ಟಂ ಚ ಸಾಧ್ಯಪಾದೋತ್ಥರಜಸಾ ಚ ಸಮನ್ವಿತಂ ॥ ೧೩೫ ॥

---

೧೩೧. ತುಪ್ಪ, ಪಾಯಸ, ಹಾಲುಗಳಿಂದ ಆಜನ್ಮನಕ್ಷತ್ರತ್ರಯದಲ್ಲಿ ಹೋಮಮಾಡಿದರೆ ಕ್ರಮವಾಗಿ ಆಯುಸ್ಸು, ಆರೋಗ್ಯ, ಐಶ್ವರ್ಯಗಳಿಂದ ಕೂಡಿ ರಾಜಾಮಾತ್ಯನಾಗುವನು.

೧೩೨-೧೩೪. ಸಪ್ತಮೀ ದಿವಸ ಬಾಳೆಹಣ್ಣಿನ ಹೋಮ ಮಾಡಿದರೆ ಸೌಭಾಗ್ಯಲಾಭವಾಗುವುದು.

ಮಧುರವಸ್ತುತ್ರಯಸಹಿತವಾದ ಚೋಟುದ್ದ ಮೂರು ದೂರ್ವಾ (ಗರಿಕೆ) ಗಳಿಂದ ಪ್ರತಿದಿನವೂ ಹೋಮಮಾಡಬೇಕು.

ಭಯಂಕರ ಸನ್ನಿಪಾತಜ್ವರಬಂದಾಗ ಪ್ರತಿದಿನವೂ ನೀರನ್ನು ಸ್ಪರ್ಶಮಾಡಿ ಕೊಂಡು ವಿದ್ಯೆಯನ್ನು ಸಾವಿರಸಾರಿ ಜಪಿಸಿ ರೋಗವು ವಾಸಿಯಾಗುವುದಕ್ಕಾಗಿ ಆ ನೀರಿನಿಂದ ಸ್ನಾನ ಪಾನಗಳನ್ನೂ ಪಾಕಾದಿಗಳನ್ನೂ ಸಹ ಮಾಡಬೇಕು.

೧೩೫-೧೩೬. ಸಾಧ್ಯಪುರುಷನ ಜನ್ಮನಕ್ಷತ್ರಸಂಜ್ಞಿತ ಮರದಪುಡಿ, ಶುಂಠಿ, ಹಿಪ್ಪಲಿ, ಮೆಣಸು, ಸಾಸವೆ, ಎಳ್ಳು, ಹಿಟ್ಟು, ಸಾಧ್ಯಪುರುಷನ ಪಾದ

ಕೃತ್ವಾ ಪುತ್ಥಲಿಕಾಂ ಸಮ್ಯಗ್ಘೃದಯೇ ನಾಮಸಂಯುತಾಂ ।
ಪ್ರಾಗ್ವಚ್ಛಿತ್ವಾಯಸ್ಯೈಸ್ತೀಕ್ಷ್ಣೈಃ ಶಸ್ತ್ರೈಃ ಪುತ್ಥಲಿಕಾಂ ಹುನೇತ್ ॥ ೧೩೬ ॥

ಏವಂ ದಿನೈಃ ಸಪ್ತಭಿಸ್ತು ಸಾಧ್ಯೋ ವಶ್ಯೋ ಭವೇದ್ಧ್ರುವಂ ।
ತಥಾವಿಧಾಂ ಪುತ್ಥಲಿಕಾಂ ಕುಂಡಮಧ್ಯೇ ನಿಖನ್ಯ ಚ ॥ ೧೩೭ ॥

ಉಪರ್ಯಗ್ನಿಂ ನಿಧಾಯಾಥ ವಿದ್ಯಯಾ ದಿನಶೋ ಹುನೇತ್ ।
ತ್ರಿಸಹಸ್ರಂ ತ್ರಿಯಾಮಾಯಾಂ ಸರ್ಷಪೈಸ್ತದ್ರಸಾಪ್ಲುತೈಃ ॥ ೧೩೮ ॥

ಶತಯೋಜನದೂರಾವಪ್ಯಾನಯೇದ್ವನಿತಾಂ ಬಲಾತ್ ।
ವಶಯೇದ್ವನಿತಾಂ ಹೋಮಾತ್ಕೌಶಿಕೈರ್ಮಧುಮಿಶ್ರಿತೈಃ ॥ ೧೩೯ ॥

---

ಧೂಳಿ ಇವುಗಳನ್ನು ಚೆನ್ನಾಗಿ ಪುಡಿಮಾಡಿ ಕಲೆಸಿ ಅದರಿಂದ ಬೊಂಬೆಯನ್ನು ಮಾಡಿ ಅದರ ಹೃದಯದಲ್ಲಿ ಸಾಧ್ಯನಾಮಧೇಯವನ್ನು ಬರೆದು, ಹಿಂದೆ ಹೇಳಿದಂತೆ ಮೊನೆಯಾದ ಚೂರಿಯಿಂದ ಹನ್ನೆರಡು ತುಂಡುಮಾಡಿ ಅದನ್ನು ಅಗ್ನಿಯಲ್ಲಿ ಹೋಮಮಾಡಬೇಕು.

೧೩೭-೧೩೮. ಈರೀತಿ ಏಳುದಿನಗಳು ಮಾಡಿದರೆ ಸಾಧ್ಯನು ವಶನಾಗುವನು. ಅಂತಹ ಬೊಂಬೆಯನ್ನು ಹೋಮಕುಂಡದ ಮಧ್ಯಭಾಗದಲ್ಲಿ ಹೂಳಿ, ಅದರಮೇಲೆ ಅಗ್ನಿಪ್ರತಿಷ್ಠೆಮಾಡಿ, ಅದರಲ್ಲಿ ವಿದ್ಯೆಯಿಂದ ಪ್ರತಿದಿನವೂ ರಾತ್ರಿಕಾಲದಲ್ಲಿ ಅದರ ರಸದಲ್ಲಿ ತೊಯಿಸಿದ ಸಾಸವೆಗಳಿಂದ ಮೂರುಸಾವಿರ ಹೋಮಮಾಡಬೇಕು.

೧೩೯. ಹಾಗೆ ಮಾಡಿದರೆ ನೂರುಗಾವುದ ದೂರದಲ್ಲಿದ್ದರೂ ಸ್ತ್ರೀಯನ್ನು ಬಲಾತ್ಕಾರದಿಂದ ಸೆಳೆತರುವುದು. ಮಧುಮಿಶ್ರಿತವಾದ ಗುಗ್ಗುಲುಗಳಿಂದ ಹೋಮಮಾಡಿದರೆ ಸ್ತ್ರೀಯು ವಶಳಾಗುವಳು.

ನಾಲಿಕೇರಫಲೋಪೇತೈರ್ಗುಡೈರ್ಲಕ್ಷ್ಮೀಮವಾಪ್ನುಯಾತ್ ।
ತಥಾಜ್ಯಸಿಕ್ತೈಃ ಕಲ್ಹಾರೈಃ ಕ್ಷೀರಾಕ್ತೈರರುಣೋತ್ಪಲೈಃ ॥ ೧೪೦ ॥

ತ್ರಿಮಧ್ವಕ್ತೈಶ್ಚಂಪಕೈಶ್ಚ ಪ್ರಸೂನೈರ್ಬಕುಲೋದ್ಭವೈಃ ।
ಮಧೂಕಜೈಃ ಪ್ರಸೂನೈಶ್ಚ ಹುತೈಃ ಕನ್ಯಾಮವಾಪ್ನುಯಾತ್ ॥ ೧೪೧ ॥

ಪುನ್ನಾಗಜೈರ್ಹುತೈರ್ವಸ್ತ್ರಾಣ್ಯಾಜ್ಯೈರಿಷ್ಟಮವಾಪ್ನುಯಾತ್ ।
ಮಾಹಿಷ್ಯೈರ್ಮಹಿಷೀರಾಜ್ಯೈರಜಾನ್ ಗವ್ಯೈಶ್ಚ ಗಾಸ್ತಥಾ ॥ ೧೪೨॥

ಅವಾಪ್ನೋತಿ ಹುತೈರಾಜ್ಯೈಃ ರತ್ನೈ ರತ್ನಂ ಚ ಸಾಧಕಃ ।
ಶಾಲಿಪಿಷ್ಟಮಯೀಂ ಕೃತ್ವಾ ಪುತ್ಥಲೀಂ ಸಸಿತಾಂ ತತಃ ॥ ೧೪೩ ॥

---

೧೪೦-೧೪೧. ತೆಂಗಿನಕಾಯಿ ಮತ್ತು ಬೆಲ್ಲಗಳಿಂದ ಹೋಮಮಾಡಿದರೆ ಐಶ್ವರ್ಯಪ್ರಾಪ್ತಿಯಾಗುವುದು. ಘೃತಸಿಕ್ತ ಕಲ್ಹಾರಪುಷ್ಪ, ಹಾಲಿನಲ್ಲಿ ನೆನೆಸಿದ ಕೆಂಪುಕಮಲ, ಸಕ್ಕರೆ, ಘೃತಮಧುಗಳಲ್ಲಿ ತೋಯಿಸಿದ ಸಂಪಿಗೆಹೂವು, ಬಕುಲ ಪುಷ್ಪ ಮಧೂಕಪುಷ್ಪ ಇವುಗಳಿಂದ ಹೋಮಮಾಡಿದರೆ ಕನ್ಯಾಲಾಭವಾಗುವುದು.

೧೪೨-೧೪೪. ಪುನ್ನಾಗಪುಷ್ಪಹೋಮವು ವಸ್ತ್ರದಾಯಕವು. ಆಜ್ಯ ಹೋಮದಿಂದ ಇಷ್ಟಪ್ರಾಪ್ತಿಯಾಗುವುದು. ಎಮ್ಮೆಯ ತುಪ್ಪದಿಂದ ಹೋಮ ಮಾಡಿದರೆ ಎಮ್ಮೆಗಳೂ, ಮೇಕೆಘೃತದಿಂದ ಹೋಮಮಾಡಿದರೆ ಮೇಕೆಗಳೂ, ಗೋಘೃತ ಹೋಮಮಾಡಿದರೆ ಗೋವುಗಳೂ, ರತ್ನಗಳಿಂದ ಹೋಮಮಾಡಿದರೆ ರತ್ನಗಳೂ ಸಾಧಕನಿಗೆ ಲಭಿಸುವುವು.

ಅನಂತರ ಸಕ್ಕರೆಸಹಿತವಾದ ಅಕ್ಕಿಹಿಟ್ಟಿನಿಂದ ಬೊಂಬೆಯನ್ನು ಮಾಡಿ ಅದರ ಹೃದಯಪ್ರದೇಶದಲ್ಲಿ ಸಾಧ್ಯನಾಮಾಕ್ಷರಗಳನ್ನು ಬರೆದು ಎಣ್ಣೆ ತುಪ್ಪ ಮಿಶ್ರಮಾಡಿ ಅದರಲ್ಲಿ ಆ ಬೊಂಬೆಯನ್ನು ರಾತ್ರಿ ಮಜ್ಜನಮಾಡಿಸಿ, ಹಗಲು

ಹೃದ್ದೇಶನ್ಯಸ್ತನಾಮಾರ್ಣಾಂ ಪಚೇತ್ತ್ರೈಲಾಜ್ಯಯೋರ್ನಿಶಿ ।
ತಾಮನಶ್ನನ್ದಿವಾರಾತ್ರೌ ವಿದ್ಯಾಜಪ್ತಾಂ ತು ಭಕ್ಷಯೇತ್ ॥ ೧೪೪ ॥

ಸಪ್ತರಾತ್ರಪ್ರಯೋಗೇಣ ನರೋ ನಾರೀ ನೃಪೋಽಪಿ ವಾ ।
ದಾಸವದ್ವಶಮಾಯಾತಿ ಚಿತ್ತಪ್ರಾಣಾದಿ ಚಾರ್ಪಯೇತ್ ॥ ೧೪೫ ॥

ಹಯಾರಿಪುಷ್ಪೈರರುಣೈಃ ಸಿತೈರ್ವಾ ಜುಹುಯಾತ್ತಥಾ ।
ತ್ರಿಸಪ್ತರಾತ್ರಾನ್ಮಹತೀಮವಾಪ್ನೋತಿ ಶ್ರಿಯನ್ನರಃ ॥ ೧೪೬ ॥

ಛಾಗಮಾಂಸೈಸ್ತ್ರಿಮಧ್ವಕ್ತೈರ್ಹೋಮಾತ್ಸ್ವರ್ಣಮವಾಪ್ನುಯಾತ್ ।
ಕ್ಷೀರಾಕ್ತೈಃ ಸಸ್ಯಸಂಪನ್ನಾಂ ಭುವಮಾಪ್ನೋತಿ ಮಂಡಲಾತ್ ॥ ೧೪೭ ॥

---

ಉಪವಾಸವಿದ್ದು, ರಾತ್ರಿಯಲ್ಲಿ ವಿದ್ಯಾಜಪದಿಂದ ಅದನ್ನು ಅಭಿಮಂತ್ರಿಸಿ ತಿನ್ನಬೇಕು.

೧೪೫. ಹೀಗೆ ಏಳುರಾತ್ರಿ ಮಾಡುವುದರಿಂದ ಪುರುಷ, ಸ್ತ್ರೀ ಮತ್ತು ರಾಜರೂ ಸಹ ದಾಸರಂತೆ ವಶರಾಗಿ, ಮನಸ್ಸು ಮತ್ತು ಪ್ರಾಣಗಳನ್ನು ಸಮರ್ಪಿಸುವರು.

೧೪೬. ಬಿಳಿ ಅಥವಾ ಕೆಂಪುಕರವೀರಪುಷ್ಪಗಳಿಂದ ಹಾಗೆ ಹೋಮ ಮಾಡುವ ಮನುಷ್ಯನು ಇಪ್ಪತ್ತೊಂದು ದಿವಸಗಳಲ್ಲಿ ಮಹದೈಶ್ವರ್ಯವನ್ನು ಪಡೆಯುವನು.

೧೪೭. ಸಕ್ಕರೆ, ಘೃತ, ಮಧುಮಿಶ್ರವಾದ ಆಡಿನ ಮಾಂಸದಿಂದ ಹೋಮಮಾಡಿದರೆ ಬಂಗಾರವನ್ನು ಪಡೆಯುವನು.

ಆ ಮಾಂಸವನ್ನು ಹಾಲಿನಲ್ಲಿ ನೆನೆಸಿ ಹೋಮಮಾಡಿದರೆ ಬೆಳೆಯಿಂದ ಸಮೃದ್ಧವಾದ ಭೂಮಿಯು ಒಂದು ಮಂಡಲದಲ್ಲಿ ಲಭಿಸುವುದು.

ಪದ್ಮಾಕ್ಷೈರ್ಹವನಾಲ್ಲಕ್ಷ್ಮೀಮವಾಪ್ನೋತಿ ತ್ರಿಭಿರ್ದಿನೈಃ ।
ಬಿಲ್ವೈರ್ದಶಾಂಶಂ ಜುಹುಯಾನ್ಮಂತ್ರಾದ್ಯೈಃ ಸಾಧನೇ ಜಪೇ ॥ ೧೪೮ ॥

ಏವಂ ಸಂಸಿದ್ಧಮಂತ್ರಸ್ತು ಮಂತ್ರಿತೈಶ್ಚುಲುಕೋದಕೈಃ ।
ಫಣಿದಷ್ಟಮೃತಾನಾಂ ತು ಮುಖೇ ಸಂತಾಡ್ಯ ಜೀವಯೇತ್ ॥ ೧೪೯ ॥

ತತ್ಕರ್ಣಯೋರ್ಜಪನ್ವಿದ್ಯಾಂ ಯಷ್ಟ್ಯಾ ವಾ ಜಯಸಿದ್ಧಯಾ ।
ಸಂತಾಡ್ಯ ಶೀರ್ಷಂ ಸಹಸಾ ಮೃತಮುತ್ಥಾಪಯೇದಿತಿ ॥ ೧೫೦ ॥

ಕೃತ್ವಾ ಯೋನಿಂ ಕುಂಡಮಧ್ಯೇ ತತ್ರಾಗ್ನಿಂ ವಿಧಿವದ್ಧನೇತ್ ।
ತಿಲಸರ್ಷಪಗೋಧೂಮಶಾಲಿಧಾನ್ಯಯವೈರ್ಹುನೇತ್ ॥ ೧೫೧ ॥

ತ್ರಿಮಧ್ವಕ್ತೈರೇಕಶೋ ವಾ ಸಮೇತೈರ್ವಾ ಸಮೃದ್ಧಯೇ ।
ಬಕುಲೈಶ್ಚಂಪಕೈರಬ್ಜೈಃ ಕಲ್ಹಾರೈರರುಣೋತ್ಪಲೈಃ ॥ ೧೫೨ ॥

---

೧೪೮. ಕಮಲಾಕ್ಷಗಳ ಹೋಮದಿಂದ ಮೂರುದಿನಗಳಲ್ಲಿ ಸಂಪತ್ತು ಲಭಿಸುವುದು.

ಜಪವನ್ನು ಸಾಧಿಸಲು ಮಂತ್ರಾದಿಗಳಿಂದ ಜಪದ ಹತ್ತನೆಯ ಒಂದು ಭಾಗದಷ್ಟು ಬಿಲ್ವಗಳಿಂದ ಹೋಮಮಾಡಬೇಕು.

೧೪೯. ಈರೀತಿ ಮಂತ್ರಸಿದ್ಧಿಯನ್ನು ಪಡೆದವನು ಮಂತ್ರದಿಂದ ಅಭಿಮಂತ್ರಿಸಿ ಬೊಗಸೆಯಲ್ಲಿ ಹಿಡಿದಿದ್ದ ಉದಕಗಳಿಂದ ಹಾವು ಕಚ್ಚಿ ಸತ್ತವರ ಮುಖವನ್ನು ಪ್ರೋಕ್ಷಿಸಿದರೆ ಅವನು ಬದುಕುವನು.

೧೫೦. ಆ ಮೃತನ ಕಿವಿಗಳಲ್ಲಿ ವಿದ್ಯೆಯನ್ನು ಜಪಿಸಿ, ಜಯಸಿದ್ಧದಂಡದಿಂದ ತಲೆಯಮೇಲೆ ಹೊಡೆದು ಸತ್ತವನನ್ನು ಎಬ್ಬಿಸಬಹುದು.

೧೫೧-೧೫೪. ವಿಧಿವತ್ತಾಗಿ ಹೋಮಕುಂಡವನ್ನು ರಚಿಸಿ ಆದರ ಮಧ್ಯ

ಕೈರವೈರ್ಮಲ್ಲಿಕಾಕುಂದಮಧೂಕೈರಿಂದಿರಾಪ್ತಯೇ ।
ಅಶೋಕೈಃ ಪಾಟಲೈರ್ಬಿಲ್ವೈರ್ಜಾತೀವಿಕಂಕಿತೈಃ ಸಿತೈಃ ॥ ೧೫೩ ॥

ನವನೀಲೋತ್ಪಲೈರಶ್ವರಿಪುಜೈಃ ಕರ್ಣಿಕಾರಜೈಃ ।
ಹೋಮಾಲ್ಲಕ್ಷ್ಮೀಂ ಚ ಸೌಭಾಗ್ಯಂ ನಿಧಿಮಾಯುರ್ಯಶೋ ಲಭೇತ್ ॥

ದೂರ್ವಾಗುಡೂಚೀಮಶ್ವತ್ಥಂ ವಟಮಾರಗ್ವಧಂ ತಥಾ ।
ಸಿತಾರ್ಕಪ್ಲಕ್ಷಜಂ ಹುತ್ವಾ ಚಿರಾನ್ಮುಚ್ಯೇತ ರೋಗತಃ ॥ ೧೫೫ ॥

---

ದಲ್ಲಿ ಅಗ್ನಿಯನ್ನು ಸ್ಥಾಪಿಸಿ ವಿಧಾನೋಕ್ತಪ್ರಕಾರ ಅದರಲ್ಲಿ ಹೋಮ ಮಾಡಬೇಕು.

ಸಕ್ಕರೆ, ಘೃತ, ಮಧು ಎಂಬ ಮಧುತ್ರಯಗಳಲ್ಲಿ ನೆನೆಸಿ ಎಳ್ಳು, ಸಾಸವೆ. ಗೋಧಿ, ಬತ್ತ, ಯವ ಇವುಗಳಲ್ಲೊಂದನ್ನು ಅಥವಾ ಒಟ್ಟಿಗೆ ಹೋಮಮಾಡಿದರೆ ಸಮೃದ್ಧಿಯುಂಟಾಗುವುದು.

ಬಕುಲಪುಷ್ಪ, ಸಂಪಿಗೆ, ಕಮಲ, ಕಲ್ಹಾರ, ಕೆಂದಾವರೆ, ಕೈರವ, ಮಲ್ಲಿಗೆ, ಮಲ್ಲೆ ಮತ್ತು ಮಧೂಕಪುಷ್ಪಗಳಿಂದ ಸಂಪತ್ಪ್ರಾಪ್ತಿಗಾಗಿ ಹೋಮ ಮಾಡಬೇಕು.

ಅಶೋಕಪುಷ್ಪ, ಪಾದರೀಹೂವು, ಬಿಲ್ವ, ಜಾಜೀ, ವಿಕಂಕತ (ಹುಳಿ ಬೇಲ) ಸಕ್ಕರೆ, ನವನೀಲೋತ್ಪಲ, ಕರವೀರಪುಷ್ಪ, ಕರ್ಣಿಕಾರಪುಷ್ಪ ಇವುಗಳ ಹೋಮದಿಂದ ಲಕ್ಷ್ಮೀ, ಸೌಭಾಗ್ಯ, ನಿಧಿ, ಆಯುಸ್ಸು, ಯಶಸ್ಸು ಇವುಗಳು ಲಭಿಸುವುವು.

೧೫೫. ಗರಿಕೆ, ಅಮೃತಬಳ್ಳಿ, ಅಶ್ವತ್ಥ, ಆಲ, ಕಕ್ಕೆ, ಬಿಳಿಎಕ್ಕೆ, ಬಸರೀ ಇವುಗಳಿಂದ ಹೋಮಮಾಡಿದರೆ ಬೇಗ ರೋಗವು ವಾಸಿಯಾಗುವುದು.

ಇಕ್ಷುಜಂಬೂನಾಲಿಕೇರಮೋಚಾಗುಡಸಿತೈರ್ಹುತೈಃ ।
ಅಚಲಾಂ ಲಭತೇ ಲಕ್ಷ್ಮೀಂ ಭೋಕ್ತಾ ಚ ಭವತಿ ಧ್ರುವಂ ॥ ೧೫೬ ॥

ಸರ್ಷಪಾಜ್ಯೈರ್ಹುನೇನ್ಮೃತ್ಯುಕಾಷ್ಠಾಗ್ನೌ ವೈರಿಮೃತ್ಯವೇ ।
ಚತುರಂಗಲಜೈರ್ಹೋಮಾಚ್ಚತುರಂಗಬಲಂ ರಿಪೋಃ ॥ ೧೫೭ ॥

ಸಪ್ತಾಹಾದ್ರೋಗದುಃಖಾರ್ತಂ ಭವತ್ಯೇವ ನ ಸಂಶಯಃ ।
ನಿತ್ಯಂ ನಿತ್ಯಾರ್ಚನಂ ಕುರ್ಯಾತ್ತಥಾ ಹೋಮಂ ಘೃತೇನ ವೈ ॥ ೧೫೮ ॥

ವಿದ್ಯಾಭಿಮಂತ್ರಿತಂ ತೋಯಂ ಪಿಬೇತ್ಪ್ರಾತಸ್ತದಾಪ್ತಯೇ ।
ಚಂದನೋಶೀರಕರ್ಪೂರಕಸ್ತೂರೀರೋಚನಾನ್ವಿತೈಃ ॥ ೧೫೯ ॥

ಕಾಶ್ಮೀರಕಾಲಾಗರುಭಿರ್ಮೃಗಸ್ವೇದಮಯೈರಪಿ ।
ಪೂಜಯೇಚ್ಚ ಶಿವಾಮೇತೈರ್ಗಂಧೈಃ ಸರ್ವಾರ್ಥಸಿದ್ಧಯೇ ॥ ೧೬೦ ॥

---

೧೫೬. ಕಬ್ಬು, ನೇರಳೆ, ತೆಂಗು, ಬಾಳೆ, ಬೆಲ್ಲ, ಸಕ್ಕರೆಗಳ ಹೋಮದಿಂದ ನಿಶ್ಚಲಸಂಪತ್ತುಂಟಾಗುವುದು. ಅದನ್ನು ಮಂತ್ರಿಯು ಅನುಭವಿಸುವನು.

೧೫೭-೧೫೮. ಶತ್ರುಮರಣಕ್ಕಾಗಿ ಸಾಸವೆ ತುಪ್ಪಗಳಿಂದ ಮೃತ್ಯುಕಾಷ್ಠಾಗ್ನಿಯಲ್ಲಿ ಹೋಮಮಾಡಬೇಕು.

ಕಕ್ಕೆಹೂವಿನ ಹೋಮದಿಂದ ಶತ್ರುವಿನ ಚತುರಂಗಬಲವು ಏಳುದಿನಗಳೊಳಗಾಗಿ ದುಃಖಪೀಡಿತವಾಗುವುದು, ಸಂದೇಹವಿಲ್ಲ. ನಿರಂತರವೂ ನಿತ್ಯಾರ್ಚನೆ, ಘೃತಹೋಮಗಳನ್ನು ಮಾಡಬೇಕು.

೧೫೯-೧೬೦. ವಿದ್ಯೆಯಿಂದ ಅಭಿಮಂತ್ರಿಸಲ್ಪಟ್ಟ ನೀರನ್ನು ವಿದ್ಯಾಲಾಭಕ್ಕಾಗಿ ಪ್ರಾತಃಕಾಲದಲ್ಲಿ ಕುಡಿಯಬೇಕು.

ಗಂಧ, ಉಶೀರ, (ಲಾವಂಚ) ಕರ್ಪೂರ, ಕಸ್ತೂರಿ, ಗೋರೋಜನ, ಕಾಶ್ಮೀರ, ಕಾಲಾಗರು, ಮೃಗಸ್ವೇದ, ಎಂಬೀ ಗಂಧಗಳಿಂದ ಸಕಲೇಷ್ಟಾರ್ಥಲಾಭಕ್ಕಾಗಿ ಶಿವಾದೇವಿಯನ್ನು ಪೂಜಿಸಬೇಕು.

ಸರ್ವಾಭಿರಪಿ ನಿತ್ಯಾಭಿಃ ಪ್ರಾತರ್ಮಾತೃಕಯಾ ಸಮಂ ।
ತ್ರಿಜಪ್ತಾಭಿಃ ಪಿಬೇತ್ತೋಯಂ ತಥಾ ವಾಕ್ಸಿದ್ಧಯೇ ಶಿವೇ ॥ ೧೬೧ ॥

ವಿದಧ್ಯಾತ್ಸಾಧನಂ ಪ್ರಾಗ್ವದ್ವರ್ಣಲಕ್ಷಂ ಪಯೋವ್ರತಃ ।
ತ್ರಿಸ್ವಾದುಸಿಕ್ತೈರರುಣೈರಂಬುಜೈರ್ಹವನಂ ಚರೇತ್ ॥ ೧೬೨ ॥

ಜಪತರ್ಪಣಹೋಮಾರ್ಚಾಸ್ವೇಕಸಿದ್ಧಮನುರ್ನರಃ ।
ಕುರ್ಯಾದುಕ್ತಾನ್ಪ್ರಯೋಗಾಂಶ್ಚ ನಚೇತ್ತದ್ವಾನುದೇವತಾಃ ॥ ೧೬೩ ॥

ಪ್ರಾಣಾಂಸ್ತಸ್ಯ ಗ್ರಸಂತ್ಯೇವ ಕುಪಿತಾಸ್ತತ್ಕ್ಷಣಾನ್ಮುನೇ ।
ಅನಯಾ ವಿದ್ಯಯಾ ಲೋಕೇ ಯದಸಾಧ್ಯಂ ನ ತತ್ಕ್ವಚಿತ್ ॥ ೧೬೪ ॥

೧೬೧. ಪ್ರಾತಃಕಾಲದಲ್ಲಿ ಸಕಲ ನಿತ್ಯಾ ಮಂತ್ರಗಳಿಂದಲೂ ಮಾತೃಕಾ ಸಹಿತವಾಗಿ ಮೂರಾವರ್ತಿ ಅಭಿಮಂತ್ರಿಸಿದ ಉದಕವನ್ನು ವಾಕ್ಸಿದ್ಧಿಗಾಗಿ ಪಾನಮಾಡಬೇಕು.

೧೬೨. ಕ್ಷೀರವ್ರತಧಾರಿಯಾಗಿ ಹಿಂದಿನಂತೆ ಮೂರುಲಕ್ಷ ಜಪಿಸಿ ವಿದ್ಯೆಯನ್ನು ಸಾಧಿಸಬೇಕು. ಬಳಿಕ ಸಕ್ಕರೆ ಮುಂತಾದ ಮಧುತ್ರಯಸಿಕ್ತವಾದ ರಕ್ತಕಮಲಗಳಿಂದ ಹೋಮಮಾಡಬೇಕು.

೧೬೩-೧೬೪. ಜಪ, ತರ್ಪಣ, ಹೋಮ, ಪೂಜೆಗಳನ್ನು ಮಾಡಿ ಮಂತ್ರಸಿದ್ಧಿ ಹೊಂದಿದ ಮನುಜನು ಈ ಪ್ರಯೋಗಗಳನ್ನಾಚರಿಸಬೇಕು. ಸಿದ್ಧಿಯನ್ನು ಪಡೆಯದೆ ಕೇವಲ ಪ್ರಯೋಗಗಳನ್ನೇ ಮಾಡಿದರೆ ಆ ದೇವತೆಗಳು ಕುಪಿತರಾಗಿ ತಕ್ಷಣದಲ್ಲಿಯೇ ಅವನ ಪ್ರಾಣಗಳನ್ನು ನುಂಗುತ್ತವೆ. ಲೋಕದಲ್ಲಿ ಈ ವಿದ್ಯೆಯಿಂದ ಸಾಧಿಸಲಶಕ್ಯವಾದುದಾವುದೂ ಇಲ್ಲ.

ಅರಣ್ಯವಟಮೂಲೇ ಚ ಪರ್ವತಾಗ್ರಗುಹಾಸು ಚ |
ಉದ್ಯಾನಮಧ್ಯಕಾಂತಾರೇ ಮಾತೃಪಾದಪಮೂಲತಃ || ೧೬೫ ||

ಸಿಂಧುತೀರೇ ವನೇ ಚೈತಾ ಯಕ್ಷಿಣೀ ಸಾಧಯೇನ್ನರಃ |
ಕಮಲೈಃ ಕೈರವೈ ರಕ್ತೈಃ ಸಿತೈಃ ಸೌಗಂಧಿಕೋತ್ಪಲೈಃ || ೧೬೬ ||

ಸುಗಂಧಿಸೇಫಾಲಿಕಯಾ ತ್ರಿಮಧ್ವಕ್ತೈರ್ಯಥಾವಿಧಿ |
ಹೋಮಾತ್ಸಪ್ತಸು ವಾರೇಷು ತನ್ಮಂಡಲತ ಏವ ವೈ || ೧೬೭ ||

ವಿಜಯಾಂ ಸಮವಾಪ್ನೋತಿ ಸಮರೇ ದ್ವಂದ್ವಯುದ್ಧಕೇ |
ಮಲ್ಲಯುದ್ಧೇ ಶಸ್ತ್ರಯುದ್ಧೇ ವಾದೇ ದ್ಯೂತದ್ವಯೇಽಪಿ ಚ || ೧೬೮ ||

ವ್ಯವಹಾರೇಷು ಸರ್ವತ್ರ ಜಯಮಾಪ್ನೋತಿ ನಿಶ್ಚಿತಂ |
ಚತುರಂಗುಲಜೈಃ ಪುಷ್ಪೈರ್ಹೋಮಾತ್ಸಂಸ್ತಂಭಯೇದರೀನ್ || ೧೬೯ ||

---

೧೬೫-೧೬೯. ಅರಣ್ಯದಲ್ಲಿ ಆಲದಗಿಡದ ಕೆಳಗೆ ಪರ್ವತಾಗ್ರ ಗುಹೆಗಳಲ್ಲಿ, ಉದ್ಯಾನ ಮಧ್ಯದ ಅಡವಿಯಲ್ಲಿ, ಮಾತೃವೃಕ್ಷದ ಕೆಳಗೆ, ನದೀತೀರದಲ್ಲಿ ಅಥವಾ ವನದಲ್ಲಿಯಾದರೂ ಮನುಷ್ಯನು ಈ ಯಕ್ಷಣಿಗಳನ್ನು ಆರಾಧಿಸಿ ಸಿದ್ಧಪಡಿಸಿ ಕೊಳ್ಳಬೇಕು.

ಕಮಲ, ಕೈರವ, ಕೆಂಪು, ಬಿಳಪು ಸೌಗಂಧಿಕ, ಉತ್ಪಲಗಳು, ಸುವಾಸನೆ ಯಾದ ಸೇಫಾಲಿಕಾಪುಷ್ಪ ಇವುಗಳನ್ನು ಸಕ್ಕರೆ, ಘೃತ, ಮಧುಗಳಲ್ಲಿ ನೆನೆಸಿ ವಿಧಾನೋಕ್ತಪ್ರಕಾರ ಆ ಮಂಡಲದಲ್ಲಿಯೇ ಏಳುವಾರಗಳಲ್ಲಿ ಹೋಮಮಾಡು ವುದರಿಂದ ಯುದ್ಧ, ದ್ವಂದ್ವಯುದ್ಧ, ಮಲ್ಲಯುದ್ಧ, ಶಸ್ತ್ರಯುದ್ಧ, ವಾದ, ದ್ಯೂತ ದ್ವಯ ಮತ್ತು ಸಕಲ ವ್ಯವಹಾರಗಳು ಇವೆಲ್ಲದರಲ್ಲಿಯೂ ವಿಜಯವನ್ನು ಹೊಂದುವನು. ಇದು ಖಂಡಿತ.

ಕಕ್ಕೆಹೂವುಗಳ ಹೋಮಮಾಡುವುದರಿಂದ ಶತ್ರುಗಳನ್ನು ಸ್ತಂಭನ ಮಾಡಬಹುದು.

ತಥೈವ ಕರ್ಣಿಕಾರೋತ್ಥೈಃ ಪುನ್ನಾಗಾಖ್ಯೈರ್ನಮೇರುಜೈಃ |
ಚಂಪಕೈಃ ಕೇತಕೈ ರಾಜವೃಕ್ಷಜೈರ್ಮಾಧವೋದ್ಭವೈಃ || ೧೭೦ ||

ಪ್ರಾಗ್ದ್ವಾರೇಷು ಜುಹುಯಾತ್ಕ್ರಮಾತ್ಪುಷ್ಪೈಸ್ತು ಸಪ್ತಭಿಃ |
ಪ್ರೋಕ್ತೇಷು ಸ್ತಂಭನಂ ಶತ್ರೋಃ ಭಂಗೋ ವಾ ಭವತಿ ಧ್ರುವಂ || ೧೭೧ ||

ಶತ್ರೋರ್ನಕ್ಷತ್ರವೃಕ್ಷಾಗ್ನೌ ತತ್ಸಮಿಧ್ಭಿಸ್ತು ಹೋಮತಃ |
ಸರ್ಷಪಾಜ್ಯಪ್ಲುತಾಭಿಸ್ತೇ ಪ್ರಣಮಂತ್ಯೇವ ಪಾದಯೋಃ || ೧೭೨ ||

ಮೃತ್ಯುಕಾಷ್ಠಾನಲೇ ಮೃತ್ಯುಪತ್ರಪುಷ್ಪಫಲೈರಪಿ |
ಸಮಿಧ್ಭಿರ್ಜುಹುಯಾತ್ಸಮ್ಯಗ್ವಾರೇಶಾರ್ಚನಪೂರ್ವಕಂ || ೧೭೩ ||

ಅರಾತೇಶ್ಚತುರಂಗಂ ತು ಬಲಂ ರೋಗಾರ್ದಿತಂ ಭವೇತ್ |
ತೇನಾಸ್ಯ ವಿಜಯೋ ಭೂಯಾನ್ನಿಧನೇನಾಪಿ ವಾ ಪುನಃ || ೧೭೪ ||

---

೧೭೦-೧೭೧. ಅಂತೆಯೇ ಬೆಟ್ಟದತಾವರೆ, ಪುನ್ನಾಗ, ಸುರಹೊನ್ನೆ, ಸಂಪಿಗೆ, ಕೇತಕಿ, ಕಕ್ಕೆ, ಮಾಧವೋದ್ಭವ ಎಂಬ ಏಳುಹೂವುಗಳಿಂದ ಕ್ರಮವಾಗಿ ಏಳುಪಾರಗಳಲ್ಲಿ ಹೋಮಮಾಡಿದರೆ ಶತ್ರುಸ್ತಂಭನ ಅಥವಾ ಅವರ ನಾಶವು ಖಂಡಿತವಾಗಿ ಆಗುವುದು.

೧೭೨. ಶತ್ರು ಜನ್ಮನಕ್ಷತ್ರ ಸಂಜ್ಞಿತ ಮರದಿಂದ ಪ್ರಕಾಶಿತವಾದ ಅಗ್ನಿಯಲ್ಲಿ ಸಾಸವೆಯು ತುಪ್ಪದಲ್ಲಿ ನೆನೆಸಿದ ಆ ಮರದ ಸಮಿತ್ತುಗಳ ಹೋಮ ಮಾಡಿದರೆ ಶತ್ರುಗಳು ಪಾದದಮೇಲೆ ಬೀಳುವರು.

೧೭೩. ಆಯಾಯಾ ವಾರಾಧಿಪನನ್ನರ್ಚಿಸಿ ಮೃತ್ಯುಕಾಷಾಗ್ನಿಯಲ್ಲಿ ಮೃತ್ಯುಪತ್ರ, ಪುಷ್ಪ, ಫಲ ಮತ್ತು ಸಮಿತ್ತುಗಳನ್ನು ಚೆನ್ನಾಗಿ ಹೋಮಮಾಡಬೇಕು.

೧೭೪. ಅದರಿಂದ ಶತ್ರುವಿನ ಚತುರಂಗಬಲವು ರೋಗಪೀಡಿತವಾಗಿ ನಾಶಹೊಂದಿ ಇವನಿಗೆ ಜಯವು ಲಭಿಸುವುದು.

ಅರ್ಕವಾರೇಽರ್ಕಜೈರಿಧ್ಮೈಃ ಸಮಿದ್ಭಿರ್ವಾ ಜಯೋಽನ್ವಿತಃ |
ಪಲಾಶೇಧ್ಮಾನಲೇ ತಸ್ಯ ಪಂಚಾಂಗೈಸ್ತದ್‌ಘೃತಾಪ್ಲುತೈಃ || ೧೭೫ ||

ಹೋಮೇನ ಸೋಮವಾರೇ ಚ ಭವೇತ್ಪ್ರಾಗ್ವನ್ನ ಸಂಶಯಃ |
ಖಾದಿರೇಧ್ಮಾನಲೇ ತಸ್ಯ ಪಂಚಾಂಗೈಸ್ತದ್‌ಘೃತಾಪ್ಲುತೈಃ || ೧೭೬ ||

ವಾರೇ ಭೌಮಸ್ಯ ಹವನಾತ್ತದಾಪ್ನೋತಿ ಸುನಿಶ್ಚಿತಂ |
ಅಪಾಮಾರ್ಗಸ್ಯ ಸೌಮ್ಯೇಽಹ್ನಿ ಪಿಪ್ಪಲಸ್ಯ ಗುರೋರ್ದಿನೇ || ೧೭೭ ||

ಉದುಂಬರಸ್ಯ ಭೃಗುಜೇ ಶಮ್ಯಾ ಮಾಂದೇಽಹ್ನಿ ಗೋಘೃತೈಃ |
ಶುಭ್ರಪೀತಸಿತಶ್ಯಾಮವರ್ಣಾದ್ಯಾಃ ಪೂರ್ವವತ್ತಥಾ || ೧೭೮ ||

---

೧೭೫-೧೭೮. ಭಾನುವಾರದ ದಿನ ಎಕ್ಕದಸಮಿತ್ತುಗಳ ಹೋಮದಿಂದ ಶತ್ರುನಾಶವಾಗುವುದು.

ಸೋಮವಾರದದಿನ ಮುತ್ತುಗದ ಕಟ್ಟಿಗೆಯಿಂದ ನಿರ್ಮಿತವಾದ ಅಗ್ನಿಯಲ್ಲಿ ಅರುಣ ವತ್ಸವುಳ್ಳ ಗೋವಿನ ಘೃತದಲ್ಲಿ ನೆನೆಸಿದ ಮುತ್ತುಗದ ಫಲ, ಪುಷ್ಪ, ಪತ್ರ, ಕಾಂಡ ಬೇರುಗಳ ಹೋಮದಿಂದ ಪೂರ್ವದಂತೆ ಜಯವು ಲಭಿಸುವುದು ; ಸಂದೇಹವಿಲ್ಲ.

ಮಂಗಳವಾರದದಿನ ಕಗ್ಗಲಿಕಟ್ಟಿಗೆಯ ಅಗ್ನಿಯಲ್ಲಿ ಅದರ ಪತ್ರ ಪುಷ್ಪಾದಿ ಪಂಚಾಂಗಗಳನ್ನು ಅರುಣವತ್ಸಗೋಘೃತಸಹಿತವಾಗಿ ಹೋಮಮಾಡುವುದರಿಂದ ವಿಜಯಲಾಭವಾಗುವುದು. ಇದು ನಿರ್ಧಾರವಾದುದು.

ಬುಧವಾರದದಿವಸ ಉತ್ತರಾಣಿಕಡ್ಡಿಯ ಅಗ್ನಿಯಲ್ಲಿ ಶುಕ್ಲಗೋಘೃತಾಕ್ತವಾದ ಉತ್ತರಾಣಿ ಸಮಿತ್ತುಗಳಿಂದಲೂ, ಗುರುವಾರದದಿನ ಅರಳಿಕಟ್ಟಿಗೆಯ ಅಗ್ನಿಯಲ್ಲಿ ಪೀತಗೋಘೃತಾಕ್ತವಾದ ಅರಳಿಸಮಿತ್ತುಗಳಿಂದಲೂ, ಶುಕ್ರವಾರದ ದಿನ ಅತ್ತಿಕಟ್ಟಿಗೆಯಿಂದ ನಿರ್ಮಿತವಾದ ಅಗ್ನಿಯಲ್ಲಿ ಬಿಳೀಗೋವಿನ ತುಪ್ಪದಲ್ಲಿ ಅದ್ದಿದ ಅತ್ತಿಯಸಮಿತ್ತುಗಳಿಂದಲೂ, ಶನಿವಾರದದಿನ ಬನ್ನಿಕಟ್ಟಿಗೆಯಿಂದ ರಚಿಸಿದ ಅಗ್ನಿಯಲ್ಲಿ ಶ್ಯಾಮವರ್ಣದ ಹಸುವಿನ ತುಪ್ಪದಲ್ಲಿ ಅದ್ದಿದ ಬನ್ನಿಯಸಮಿತ್ತುಗಳಿಂದಲೂ ಹೋಮಮಾಡಿದರೆ ಶತ್ರುವಿಜಯಾದಿ ಫಲವು ಉಕ್ತಲಭಿಸುವುದು.

ತತ್ಫಲಂ ಸಮವಾಪ್ನೋತಿ ತತ್ಸಮಿದ್ಧೇಪಿತ್ಯೇನಲೇ ।
ಪ್ರತಿಪತ್ತಿಥಿಮಾರಭ್ಯ ಪಂಚಮ್ಯಂತಂ ಕ್ರಮೇಣ ವೈ ॥ ೧೭೯ ॥

ಶಾಲೀಚಣಕಮುದ್ಗೈಶ್ಚ ಯವಮಾಷೈಶ್ಚ ಹೋಮತಃ ।
ಮಾಹಿಷಾಜ್ಯಪ್ಲುತೈಸ್ತಾಭಿಸ್ತಿಥಿಭಿಃ ಸಮವಾಪ್ನುಯಾತ್ ॥ ೧೮೦ ॥

ಷಷ್ಠ್ಯಾದಿ ಚ ದಶಮ್ಯಂತಮಜಾಭವಘೃತೈಸ್ತಥಾ ।
ಪ್ರಾಗುಕ್ತೈರ್ನಿಸ್ತುಷೈರ್ಹೋಮಾತ್ಪ್ರಾಗುಕ್ತ ಫಲಮಾಪ್ನುಯಾತ್ ॥ ೧೮೧ ॥

ತದೂರ್ಧ್ವಂ ಪಂಚಕೇ ತ್ವೇತೈಃ ಸಮಸ್ತೈಶ್ಚ ತಿಲದ್ವಯೈಃ ।
ಸಿತಾನ್ನೈಃ ಪಾಯಸೈಃ ಸಿಕ್ತೈರಾವಿಕೈಸ್ತು ಘೃತೈಸ್ತಥಾ ॥ ೧೮೨ ॥

ಹವನಾತ್ತದವಾಪ್ನೋತಿ ಯದಾದೌ ಫಲಮೀರಿತಂ ।
ಏವಂ ನಕ್ಷತ್ರವೃಕ್ಷೋತ್ಥವಹ್ನೌ ತೈಸ್ತೈರ್ಮಧುಪ್ಲುತೈಃ ॥ ೧೮೩ ॥

---

ಪಾಡ್ಯದಿಂದ ಪಂಚಮ್ಯಂತವಾದ ಐದುದಿನಗಳಲ್ಲಿ ಕ್ರಮವಾಗಿ ಬತ್ತ, ಕಡಲೆ, ಹೆಸರು, ಯವ, ಉದ್ದು ಈ ಧಾನ್ಯಗಳನ್ನು ಎಮ್ಮೆಯ ತುಪ್ಪದಲ್ಲಿ ಸೇರಿಸಿ ಆಯಾಯಾ ತಿಥಿಗಳಲ್ಲಿ ಹೋಮಮಾಡಿದರೆ ಶತ್ರುವಿಜಯವು ಲಭಿಸುವುದು.

೧೮೧. ಷಷ್ಠಿಯಿಂದವ ಶಮ್ಯಂತವಾದ ಐದುದಿನಗಳಲ್ಲಿ ಮೇಕೆಯ ತುಪ್ಪ ಸಹಿತವಾಗಿ ಹಿಂದೆ ಹೇಳಿದ ಬತ್ತ ಮುಂತಾದುವನ್ನು ಹೊಟ್ಟಿಲ್ಲದಂತೆ ಹೋಮ ಮಾಡಿದರೆ ಪೂರ್ವೋಕ್ತಫಲವು ಲಭಿಸುವುದು.

೧೮೨. ದಶಮಿಯಾದಮೇಲೆ ಏಕಾದಶಿಯಿಂದ ಐದುದಿನಗಳಲ್ಲಿ ಕುರಿಯ ತುಪ್ಪದಿಂದ ಸಿಕ್ತವಾದ ಉಕ್ತವಾದ ಶಾಲ್ಯಾದಿಗಳೆಲ್ಲದರಿಂದಲೂ, ಬಿಳಿಯ ಅಥವಾ ಕರಿಯ ಎಳ್ಳುಗಳಿಂದಲೂ, ಸಕ್ಕರೆಮಿಶ್ರವಾದ ಅನ್ನಗಳಿಂದಲೂ, ಪಾಯಸ ಗಳಿಂದಲೂ ಹೋಮಮಾಡಿದರೆ ವಿಜಯಾದಿಗಳು ಲಭಿಸುವುವು.

೧೮೩-೧೮೭. ಈ ರೀತಿಯಾಗಿ ಆಯಾಯಾ ನಕ್ಷತ್ರಗಳಲ್ಲಿ ಅದರದರ ಹೆಸರಿನ ಮರದಿಂದ ಏರ್ಪಟ್ಟತವಾದ ಅಗ್ನಿಯಲ್ಲಿ ಆಯಾಯಾ ಮರದ ಸಮಿತ್ತು

ಹವನಾದಪಿ ತತ್ಪ್ರಾಪ್ತಿರ್ಭವತ್ಯೇವ ನ ಸಂಶಯಃ |
ವಿದ್ಯಾಂ ಸಂಸಾಧ್ಯ ಪೂರ್ವಂ ತು ಪಶ್ಚಾದುಕ್ತಾನಶೇಷತಃ || ೧೮೪ ||

ಪ್ರಯೋಗಾನ್ಸಾಧಯೇದ್ಧೀಮಾನ್ ಮಂಗಲಾಯಾಃ ಪ್ರಸಾದತಃ |
ಸಂಪೂಜ್ಯ ದೇವತಾಂ ವಿಪ್ರ ಕುಮಾರೀಂ ಕನ್ಯಕಾಂ ತು ವಾ || ೧೮೫ ||

ಸಶುಭಾಂಗೀಂ ಯುವಾಂ ಮುಗ್ಧಾಂ ಸ್ನಾತಾಂ ಧೌತಾಂಬರಾಂ ಶುಭಾಂ |
ತಥಾವಿಧಂ ಕುಮಾರಂ ವಾ ಸಂಸ್ಥಾಪ್ಯಾಭ್ಯರ್ಚ್ಯ ವಿದ್ಯಯಾ || ೧೮೬ ||

ಸ್ಪೃಷ್ಟ್ವಾ ಶೀರ್ಷಂ ಜಪೇದ್ವಿದ್ಯಾಂ ಶತವಾರಂ ತಥಾರ್ಚಯೇತ್ |
ಪ್ರಸೂನೈರರುಣೈಃ ಶುಭ್ರೈಃ ಸೌರಭಾಢ್ಯೈರಥಾಪಿ ವಾ || ೧೮೭ ||

ದದ್ಯಾದ್ಗುಗ್ಗುಲಧೂಪಂ ಚ ಯಾವತ್ಕರ್ಮಾವಸಾನಕಂ |
ತತೋ ದೇವ್ಯಾ ಸಮಾವಿಷ್ಟೇ ತಸ್ಮಿನ್ಸಂಪೂಜ್ಯ ಭಕ್ತಿತಃ || ೧೮೮ ||

---

ಗಳಿಂದ ಆಯಾಯಾ ಘೃತಸಹಿತವಾಗಿ ಹೋಮ ಮಾಡುವುದರಿಂದಲೂ ವಿಜಯವು ಲಭಿಸುವುದು. ಸಂದೇಹವಿಲ್ಲ.

ಮೊದಲು ವಿದ್ಯೆಯ ಸಿದ್ಧಿಯನ್ನು ಪಡೆದು ಅನಂತರ ಬುದ್ಧಿವಂತನಾದವನು ಉಕ್ತವಾದ ಪ್ರಯೋಗಗಳನ್ನೆಲ್ಲಾ ಮಂಗಳಾದೇವಿಯ ಅನುಗ್ರಹದಿಂದ ಸಾಧಿಸಬೇಕು.

ಬ್ರಾಹ್ಮಣನಾದ ನಾರದನೇ! ದೇವತೆಯನ್ನು ಪೂಜೆಮಾಡಿ ಬಳಿಕ ಶುಭಾಂಗಿಯೂ, ಮುಗ್ಧೆಯೂ, ಋತುಸ್ನಾತಳು, ಒಗೆದಬಟ್ಟೆಯನ್ನುಟ್ಟಿರುವವಳೂ, ಭದ್ರೆಯೂ ಆದ ಕುಮಾರಿಯಾದ ಕನ್ಯೆಯನ್ನು ಅಥವಾ ಅಂತಹ ಕುಮಾರನನ್ನು ಸ್ಥಾಪಿಸಿ ವಿದ್ಯೆಯಿಂದ ಪೂಜಿಸಿ ಅವನ ತಲೆಯನ್ನು ಮುಟ್ಟಿಕೊಂಡು ವಿದ್ಯೆಯನ್ನು ನೂರಾವರ್ತಿ ಜಪಿಸಿ ನಿರ್ಮಲವಾದ, ಸುಗಂಧಯುಕ್ತ ರಕ್ತಪುಷ್ಪಗಳಿಂದ ಪೂಜಿಸಬೇಕು.

೧೮೮-೧೮೯. ಆ ಕರ್ಮವು ಮುಗಿಯುವವರೆಗೂ ಗುಗ್ಗುಲಧೂಪವನ್ನು ಸಮರ್ಪಿಸಬೇಕು. ಅನಂತರ ದೇವ್ಯಾವಿಷ್ಟರಾದ ಕನ್ಯೆ, ಅಥವಾ ಕುಮಾರನಲ್ಲಿ

ತತಸ್ತಾಮುಪಚಾರೈಸ್ತೈಃ ಪ್ರಾಗುಕ್ತೈರ್ವಿದ್ಯಯಾ ವ್ರತೀ ।
ಪ್ರಜಪಂಸ್ತಾಂ ತತಃ ಪೃಚ್ಛೇದಭೀಷ್ಟಂ ಕಥಯೇಚ್ಚ ಸಾ ॥ ೧೮೯ ॥

ಭೂತಂ ಭವದ್ಭವಿಷ್ಯಂ ಚ ಯದನ್ಯನ್ಮನಸಿ ಸ್ಥಿತಂ ।
ಜನ್ಮಾಂತರಾಪನೀತಾನಿ ಸರ್ವಂ ಸಾ ಪೂಜಿತಾ ವದೇತ್ ॥ ೧೯೦ ॥

ತತಸ್ತಾಂ ಪ್ರಾಗ್ವದಭ್ಯರ್ಚ್ಯ ಸ್ವಾತ್ಮನ್ಯುದ್ವಾಸ್ಯ ತಾಂ ಜಪೇತ್ ।
ಸಹಸ್ರವಾರಂ ಸ್ಥಿರಧೀಃ ಪೂರ್ಣಾತ್ಮಾ ವಿಚರೇತ್ಸುಖೀ ॥ ೧೯೧ ॥

ಮಧುರತ್ರಯಸಂಸಿಕ್ತೈರರುಣೈರಂಬುಜೈಃ ಶ್ರಿಯಂ ।
ಪ್ರಾಪ್ನೋತಿ ಮಂಡಲಂ ಹೋಮಾತ್ಸಿತೈಸ್ತೈಶ್ಚ ಮಹದ್ಯಶಃ ॥ ೧೯೨ ॥

---

ದೇವಿಯನ್ನು ಪೂರ್ವೋಕ್ತವಾದ ಉಪಚಾರಗಳಿಂದ ವ್ರತಿಯು ವಿದ್ಯೆಯನ್ನು ಅನುಸಂಧಾನ ಮಾಡುತ್ತಾ ಭಕ್ತಿಪುರಸ್ಸರವಾಗಿ ಪೂಜಿಸಿ, ವಿದ್ಯೆಯನ್ನು ಜಪಿಸುತ್ತ ಆ ಕನ್ಯೆಯನ್ನು ಕುರಿತು ಅಭೀಷ್ಟವಾದುದನ್ನು ಕೇಳಬೇಕು. ಅದೆಲ್ಲವನ್ನೂ ಆ ಕನ್ಯೆಯು ಹೇಳುವಳು.

೧೯೦. ಹೀಗೆ ಪೂಜಿತ ಕನ್ಯೆಯು ಜನ್ಮಾಂತರದಿಂದಲೂ ಬಂದಿರುವ ಮನಸ್ಸಿನಲ್ಲಿದ್ದ ಭೂತಭವಿಷ್ಯದ್ವರ್ತಮಾನ ವಿಷಯಗಳನ್ನೆಲ್ಲಾ ಹೇಳುವಳು.

೧೯೧. ತರುವಾಯ ಆಕೆಯನ್ನು ಪೂಜಿಸಿ ಸ್ವಾತ್ಮನಲ್ಲಿ ಉದ್ವಾಸನೆ ಮಾಡಿ, ಆ ದೇವಿಯನ್ನು ಸ್ಥಿರಚಿತ್ತದಿಂದ ಸಾವಿರಸಾರಿ ಜಪಿಸಬೇಕು. ಹಾಗೆ ಮಾಡಿದರೆ ಪೂರ್ಣಮನೋರಥನಾಗಿ ಸುಖವಾಗಿ ಸಂಚರಿಸುವನು.

೧೯೨. ಸಕ್ಕರೆ, ಘೃತ, ಮಧುಮಿಶ್ರವಾದ ಕೆಂಪುಕಮಲಗಳಿಂದ ಒಂದು ಮಂಡಲ ಹೋಮಮಾಡಿದರೆ ಐಶ್ವರ್ಯವು ಲಭಿಸುವುದು. ಅದೇರೀತಿಯಾದ ಬಿಳಿಯಕಮಲಗಳಿಂದ ಹೋಮಮಾಡಿದರೆ ಮಹಾಕೀರ್ತಿಸಂಪನ್ನನಾಗುವನು.

ಕ್ಷೌದ್ರಾಕ್ತೈರುತ್ಪಲೈ ರಕ್ತೈರ್ಹವನಾತ್ಪ್ರೋಕ್ತಕಾಲತಃ |
ಸುವರ್ಣಂ ಸಮವಾಪ್ನೋತಿ ನಿಧಿಂ ವಾ ವಸುಧಾಂ ತು ವಾ || ೯೩ ||

ಕ್ಷೀರಾಕ್ತೈಃ ಕೈರವೈರ್ಹೋಮಾತ್ಪ್ರೋಕ್ತಂ ಕಾಮಮವಾಪ್ನುಯಾತ್ |
ಧಾನ್ಯಾನಿ ವಿವಿಧಾನ್ಯಾಶು ಸುಭಗಃ ಸ ಭವೇನ್ನರಃ || ೯೪ ||

ಆಜ್ಯಾಕ್ತೈರುತ್ಪಲೈರ್ಹೋಮಾದ್ವಾಂಛಿತಂ ಸಮವಾಪ್ನುಯಾತ್ |
ತದ್ರಕ್ತೈರಪಿ ಕಲ್ಹಾರೈರ್ಹವನಾದ್ರಾಜವಲ್ಲಭಃ || ೯೫ ||

ಪಲಾಶಪುಷ್ಪೈಸ್ತ್ರಿಸ್ವಾದುಯುಕ್ತೈಸ್ತತ್ಕಾಲ ಹೋಮತಃ |
ಚತುರ್ವಿಧಂ ತು ಪಾಂಡಿತ್ಯಂ ಭವತ್ಯೇವ ನ ಸಂಶಯಃ || ೯೬ ||

---

೯೩. ಮಧುಸಿಕ್ತವಾದ ಉತ್ಪಲಪುಷ್ಪಗಳಿಂದ ಒಂದುಮಂಡಲ ಹೋಮ ಮಾಡುವವನು ಸುವರ್ಣ, ನಿಧಿ, ಅಥವಾ ಭೂಮಿಯನ್ನು ಪಡೆಯುವನು.

೯೪. ಹಾಲಿನಲ್ಲಿ ನೆನೆಸಿದ ಕೈರವ ಪುಷ್ಪಹೋಮವನ್ನು ಒಂದು ಮಂಡಲಕಾಲ ಮಾಡುವವನು ನಾನಾವಿಧ ಧಾನ್ಯಗಳನ್ನು ಯಥೇಷ್ಟವಾಗಿ ಬೇಗ ಪಡೆಯುವನು.

೯೫. ಘೃತಮಿಶ್ರವಾದ ಉತ್ಪಲಪುಷ್ಪಹೋಮದಿಂದ ಇಷ್ಟಾರ್ಥವು ಲಭಿಸುವುದು. ರಕ್ತೋತ್ಪಲಹೋಮ ಅಥವಾ ಕಲ್ಹಾರಪುಷ್ಪಹೋಮ ಇವುಗಳಿಂದ ರಾಜಪ್ರಿಯನಾಗುವನು.

೯೬. ಮಧುರತ್ರಯ ಸಹಿತ ಮುತ್ತಗದಹೂವಿನ ಹೋಮವನ್ನು ನಲವತ್ತುದಿನಗಳು ಮಾಡಿದರೆ ನಾಲ್ಕುವಿಧವಾದ ಪಾಂಡಿತ್ಯವು ಖಂಡಿತವಾಗಿಯೂ ಲಭಿಸುವುದು. ಸಂದೇಹವಿಲ್ಲ.

ಲಾಜೈಸ್ತ್ರಿಮಧುರೋಪೇತೈಸ್ತತ್ಕಾಲಹವನೇನ ವೈ ।
ಕನ್ಯಕಾಂ ಲಭತೇಽಯತ್ನಾತ್ಸಮಸ್ತಗುಣಸಂಯುತಾಂ ॥ ೧೯೭ ॥

ನಾಲಿಕೇರಫಲಕ್ಷೋದಂ ಸಸಿತಂ ಸಗುಡಂ ತು ವಾ ।
ಕ್ಷೌದ್ರಾಕ್ತಂ ಜುಹುಯಾತ್ತದ್ವದಯತ್ನಾದ್ಧನದೋಪಮಃ ॥ ೧೯೮ ॥

ತಥೈವಾನ್ನಾಜ್ಯಹೋಮೇನ ಸತಂಡುಲತಿಲೈರಪಿ ।
ಪ್ರಸೂನೈರರುಣೈಸ್ತದ್ವತ್ತಥಾ ಬಂಧೂಕಸಂಭವೈಃ ॥ ೧೯೯ ॥

ಸಿತೈಃ ಪ್ರಸೂನೈರ್ವಾಕ್ಸಿದ್ಧಿಂ ಹವನಾತ್ಸಮವಾಪ್ನುಯಾತ್ ।
ಸಿತರಕ್ತೈಸ್ತು ಮಿಲಿತೈರಾಯುರಾರೋಗ್ಯಮಾಪ್ನುಯಾತ್ ॥ ೨೦೦ ॥

೧೯೭. ನಲವತ್ತುದಿವುಸ ಮಧುರತ್ರಯ ಯುಕ್ತವಾದ ಅರಳಿನಿಂದ ಹೋಮಮಾಡಿದರೆ ಪ್ರಯಾಸವಿಲ್ಲದೇ ಸಕಲಗುಣಸಂಪನ್ನಳಾದ ಕನ್ಯೆಯು ಲಭಿಸುವಳು.

೧೯೮. ಸಕ್ಕರೆ, ಬೆಲ್ಲ, ಜೇನುತುಪ್ಪಗಳಿಂದ ಸಹಿತವಾದ ಕೊಬ್ಬರೀ ತುರಿಯನ್ನು ಹೋಮಮಾಡಿದರೆ ಕಷ್ಟವಿಲ್ಲದೇ ಕುಬೇರನಿಗೆ ಸಮಾನನಾಗುವನು.

೧೯೯-೨೦೦. ಅಂತೆಯೇ ಅನ್ನ ತುಪ್ಪಗಳ ಹೋಮ ಮತ್ತು ತಂಡುಲ ಮಿಶ್ರಿತತಿಲ, ಕೆಂಪುಹೂವು, ಬಂಧೂಕಪುಷ್ಪ, ಬಿಳಿಯುಹೂವು ಇವುಗಳ ಹೋಮ ಗಳನ್ನು ಮಾಡುವವನು ವಾಕ್ಸಿದ್ಧಿಯನ್ನು ಹೊಂದುವನು.

ಬಿಳಿ ಕೆಂಪುಪುಷ್ಪಗಳನ್ನು ಸೇರಿಸಿ ಹೋಮಮಾಡುವವನು ಆಯುಸ್ಸು, ಆರೋಗ್ಯಗಳನ್ನು ಪಡೆಯುವನು.

ದೂರ್ವಾತ್ರಿಕೈಸ್ತ್ರಿಮಧ್ವಕ್ತ್ರೈರ್ಹವನಾತ್ತು ಜಯೇಚ್ಛ ತಾನ್ |
ತಥಾ ಗುಡೂಚ್ಯಾ ಹೋಮೇನ ಪಾಯಸೇನ ತಿಲೇನ ಚ || ೨೦೧ ||

ಶ್ರೀಖಂಡಪಂಕಕರ್ಪೂರಮಿಲಿತೈಃ ಶತಪತ್ರಕೈಃ |
ಹವನಾಚ್ಛ್ರಿಯಮಾಪ್ನೋತಿ ಯಾವದನ್ಯಪಗಾ ಭವೇತ್ || ೨೦೨ ||

ಕುಂಕುಮಂ ಹಿಮತೋಯೇನ ಪಿಷ್ಟ್ವಾ ಕರ್ಪೂರಸಂಯುತಂ |
ತತ್ಪಂಕಮರ್ದಿತೈರ್ಹೋಮಾತ್ಕಲ್ಹಾರೈರ್ವಿಕಚೈಃ ಶುಭೈಃ || ೨೦೩ ||

ರಾಜಕಲ್ಪಃ ಶ್ರಿಯಾ ಭೂಯಾಜ್ಜೀವೇದ್ವರ್ಷಶತಂ ಭುವಿ |
ನಿಃಸಪತ್ನೋ ನಿರಾತಂಕೋ ನಿರ್ದ್ವಂದ್ವೋ ನಿರ್ಮಲಾಶಯಃ || ೨೦೪ ||

೨೦೧. ಸಕ್ಕರೆ ಮುಂತಾದ ಮಧುರತ್ರಯ ಸಂಯುಕ್ತವಾದ ದೂರ್ವಾತ್ರಿಕಗಳ ಹೋಮದಿಂದ ಶತ್ರುಗಳನ್ನು ಜಯಿಸುವನು ಅಂತೆಯೇ ಅಮೃತ ಬಳ್ಳಿ, ಪಾಯಸ ಮತ್ತು ತಿಲ ಇವುಗಳ ಹೋಮದಿಂದಲೂ ಶತ್ರುಗಳನ್ನು ಜಯಿಸುವನು.

೨೦೨. ಶ್ರೀಖಂಡಪಂಕ ಕರ್ಪೂರಗಳಿಂದ ಮಿಶ್ರವಾದ ಕಮಲಪುಷ್ಪಗಳ ಹೋಮದಿಂದ ಯಾವಜ್ಜೀವವೂ ಅನುವರ್ತಿಸುವಂತಹ ಐಶ್ವರ್ಯವನ್ನು ಪಡೆಯುವನು.

೨೦೩-೨೦೪. ಹಿಮಜಲದಿಂದ ಕರ್ಪೂರಸಹಿತವಾಗಿ ಕುಂಕುಮವನ್ನು ಕಲೆಸಿ, ಅದರಲ್ಲಿ ತೋಯಿಸಿದ ವಿಕಸಿತವಾದ ಶುಭಕಲ್ಹಾರಪುಷ್ಪಗಳಿಂದ ಹೋಮ ಮಾಡಿದರೆ ಐಶ್ವರ್ಯದಲ್ಲಿ ರಾಜಸಮನಾಗಿ, ಶತ್ರುವಿಲ್ಲದವನು, ಆತಂಕರಹಿತನು, ಸುಖದುಃಖಾದಿ ದ್ವಂದ್ವ ಸಹಿಷ್ಣುವು ಮತ್ತು ನಿರ್ಮಲಾಂತಃಕರಣನೂ ಆಗಿ ನೂರು ವರ್ಷ ಬದುಕುವನು.

ಇಕ್ಷುಕಾಂಡಸ್ಯ ಶಕಲೈರ್ಹವನಾದ್ವಸ್ತ್ರಮಾಪ್ನುಯಾತ್ ।
ತಥೈವ ಕರವೀರೋತ್ಥೈಃ ಪ್ರಸೂನೈರರುಣೈಃ ಸಿತೈಃ ॥ ೨೦೫ ॥

ಕ್ಷೌದ್ರಾಕ್ತೈಃ ಪಾಟಲಾಪುಷ್ಪೈರ್ಹವನಾದ್ವಶಯೇದ್ವಧೂಃ ।
ತಥೈವ ಪಂಕಜೈರ್ಹೋಮಾದ್ರೂಪಾಜೀವಾಂ ವಶಂ ನಯೇತ್ ॥ ೨೦೬ ॥

ಸರೂಪವತ್ಸಾಸಿತಗೋಕ್ಷೀರಾಕ್ತಸಿತಹೋಮತಃ ।
ಲಭತೇऽನುಪಮಾಂ ಲಕ್ಷ್ಮೀಮಪಿ ಪಾಪಿಷ್ಠಚೇತನಃ ॥ ೨೦೭ ॥

ಸೌವೀರಾಕ್ತೈಸ್ತು ಕಾರ್ಪಾಸಬೀಜೈಸ್ತತ್ಕಾಲಹೋಮತಃ ।
ಅರ್ಧೇಂದುಕುಂಡೇ ನಿಯತಂ ವಶಗಾ ರಿಪವೋ ಮುನೇ ॥ ೨೦೮ ॥

೨೦೫. ಕಬ್ಬಿನ ತುಂಡುಗಳಿಂದ ಹೋಮಮಾಡಿದರೆ ವಸ್ತ್ರಪ್ರಾಪ್ತಿಯಾಗುವುದು. ಹಾಗೆಯೇ ಕೆಂಪು ಅಥವಾ ಬಿಳಿಯ ಕರವೀರಪುಷ್ಪ ಹೋಮದಿಂದಲೂ ವಸ್ತ್ರಲಾಭವಾಗುವುದು.

೨೦೬. ಮಧುಮಿಶ್ರವಾದ ಪಾದರಿಹೂವಿನ ಹೋಮದಿಂದ ಹೆಂಗಸನ್ನು ಸ್ವಾಧೀನಮಾಡಿಕೊಳ್ಳಬಹುದು. ಪದ್ಮಹೋಮದಿಂದ ಸೂಳೆಯರನ್ನು ವಶಪಡಿಸಿಕೊಳ್ಳಬಹುದು.

೨೦೭. ಬಿಳಿಯಕರುವುಳ್ಳ ಬಿಳಿಯಹಸುವಿನ ಹಾಲಿನಲ್ಲಿ ಕಲಸಿದ ಸಕ್ಕರೆಯ ಹೋಮದಿಂದ ಮಹಾಪಾಪಿ ಚೇತನನಾದಾಗ್ಯೂ ಅದ್ವಿತೀಯವಾದ, ಐಶ್ವರ್ಯವನ್ನು ಹೊಂದುವನು.

೨೦೮. ಸೌವೀರಾಂಜನಮಿಶ್ರವಾದ, ಹತ್ತಿಬೀಜಗಳಿಂದ ತತ್ಕಾಲದಲ್ಲಿ ಅರ್ಧಚಂದ್ರಾಕಾರಕುಂಡದಲ್ಲಿ ಹೋಮಮಾಡಿದರೆ ಶತ್ರುಗಳು ನಿಯತವಾಗಿ ವಶರಾಗುವರು.

ಅರಿಷ್ಟಪತ್ರೈಸ್ತದ್ಬೀಜೈಸ್ತದ್ವಹ್ನೌ ತೈಸ್ತಥಾ ಹುತೈಃ ।
ಮೃತ್ಯುಬೀಜೈರ್ನಿಂಬತೈಲಸಿಕ್ತೈರ್ಹೋಮಾನ್ನಿಹಂತಿ ತಾನ್ ॥ ೨೦೯ ॥

ರೋಗಾರ್ತಾಂಸ್ತುರಗಾಸ್ತದ್ವತ್ಪಂಚಗವ್ಯೈರ್ಹುತೈರ್ಧ್ರುವಂ ।
ಅಕ್ಷಬೀಜೈಸ್ತು ತೈಲಾಕ್ತೈರ್ಹೋಮಃ ಸರ್ವವಿನಾಶನಃ ॥ ೨೧೦ ॥

ಕರಂಜಬೀಜೈಃ ಸಂಸಿಕ್ತೈರ್ಹೋಮಾದ್ವೈರೀ ಪಿಶಾಚವಾನ್ ।
ತಥೈವಾಕ್ಷತರೂದ್ಭೂತಪಂಚಾಂಗಹವನಾದಪಿ ॥ ೨೧೧ ॥

ನಿಂಬತೈಲಾನ್ವಿತೈರಕ್ಷದ್ರುಮಬೀಜೈಸ್ತು ಹೋಮತಃ ।
ತದ್ದಿನೇ ಸ್ಯಾದಪಸ್ಮಾರೀ ವೈರೀ ಭವತಿ ನಿಶ್ಚಿತಂ ॥ ೨೧೨ ॥

---

೨೦೯. ಬೇವಿನಮರದ ಬೆಂಕಿಯಲ್ಲಿ ಬೇವಿನೆಲೆ, ಬೀಜಗಳ ಹೋಮದಿಂದಲೂ ಮತ್ತು ಬೇವಿನೆಣ್ಣೆಯಲ್ಲಿ ನೆನೆಸಿದ ಮೃತ್ಯುಬೀಜ ಹೋಮದಿಂದಲೂ ಶತ್ರುಗಳು ಹತರಾಗುವರು.

೨೧೦. ಪಂಚಗವ್ಯ ಹೋಮದಿಂದ ರೋಗಪೀಡಿತರಾಗುವರು. ಅದರ ತೈಲದಲ್ಲಿ ನೆನೆಸಿದ ತಾರೇಬೀಜಗಳ ಹೋಮವು ಸಕಲಾನಿಷ್ಟಗಳನ್ನೂ ನಾಶ ಪಡಿಸುವುದು.

೨೧೧. ತೈಲಸಂಸಿಕ್ತವಾದ ಹೊಂಗೇಬೀಜಗಳ ಹೋಮದಿಂದ ಶತ್ರುವು ಪಿಶಾಚಗ್ರಸ್ತನಾಗುವನು. ಅದರಂತೆಯೇ ತಾರೇಗಿಡದಪತ್ರ, ಪುಷ್ಪ, ಫಲ, ಕಾಂಡ, ಮೂಲಗಳೆಂಬ ಪಂಚಾಂಗಹೋಮದಿಂದಲೂ ಸಹ ಶತ್ರುವಿಗೆ ಪಿಶಾಚ ಹಿಡಿಯುವುದು.

೨೧೨. ಬೇವಿನೆಣ್ಣೆಸಹಿತವಾದ ತಾರೇಬೀಜಗಳ ಹೋಮದಿಂದ ವೈರಿಯು ಆದೇ ದಿನವೇ ಅಪಸ್ಮಾರ ರೋಗಯುಕ್ತನಾಗುವನು. ಇದು ನಿಶ್ಚಿತ.

ಅರಾತೇರ್ಜನ್ಮನಕ್ಷತ್ರ ವೃಕ್ಷೇಂಧನಗತೇಽನಲೇ ।
ತದ್ಯೋನಿಪಿಶಿತೈಸ್ತೈಶ್ಚ ಹವನಾನ್ಮೃತ್ಯುಕೃದ್ರಿಪೋಃ ॥ ೨೧೩ ॥

ಪದ್ಮಾಕ್ಷಬೀಜೈಃ ಸಾರ್ಷಪತೈಲಾಕ್ತೈರ್ಹವನಾತ್ತಥಾ ।
ಜಾಯಂತೇ ವೈರಿಣಃ ಕುಷ್ಠರೋಗಾ ದೇಹವಿಲೋಪಕಾಃ ॥ ೨೧೪ ॥

ಮರೀಚೈಃ ಸರ್ಷಪೈರ್ಹೋಮಾತ್ತೈಲಾಕ್ತೈರ್ಮಧ್ಯರಾಜಕೇ ।
ದಾಹಜ್ವರೇಣ ಗ್ರಸ್ತಃ ಸ್ಯಾದರಾತಿಸ್ತದ್ದಿನೇ ಧ್ರುವಂ ॥ ೨೧೫ ॥

ಏವಂ ನಿಗ್ರಹಹೋಮೇಷು ಸ್ವರಕ್ಷಾಯೈ ತಥಾನ್ವಹಂ ।
ಸ್ನಿಗ್ಧೈಃ ಸಂಪ್ರಾಪ್ತಸದ್ವಿದ್ಯೈರ್ಜಪಹೋಮಾದಿ ಕಾರಯೇತ್ ॥ ೨೧೬ ॥

ಮೃತ್ಯುಂಜಯೇನ ವಾ ತತ್ತತ್ಪ್ರಯೋಗಸ್ಥಾಭಿರೇವ ವಾ ।
ವಿದ್ಯಾಭಿರನ್ಯಥಾ ಸಿದ್ಧಮಂತ್ರಮಸ್ಯಾಶು ನಾಶಯೇತ್ ॥ ೨೧೭ ॥

---

೨೧೩. ಶತ್ರುವಿನ ಜನ್ಮನಕ್ಷತ್ರ ಸಂಜ್ಞಿತವಾದ ಮರದ ಅಗ್ನಿಯಲ್ಲಿ ಶತ್ರುಯೋನಿ ಮಾಂಸಹೋಮದಿಂದ ಶತ್ರುವು ಸಾಯುವನು.

೨೧೪. ಸಾಸವೇ ಎಣ್ಣೆಯಲ್ಲಿ ಮಿಶ್ರಮಾಡಿದ ಪದ್ಮಾಕ್ಷಬೀಜಗಳ ಹೋಮದಿಂದ ವೈರಿಗಳು ದೇಹನಾಶಕರವಾದ ಕುಷ್ಠರೋಗಗ್ರಸ್ತರಾಗುವರು.

೨೧೫. ಎಣ್ಣೆಯಲ್ಲಿ ನೆನೆಸಿದ ಮೆಣಸು ಸಾಸವೆಗಳನ್ನು ಮಧ್ಯರಾತ್ರಿಯಲ್ಲಿ ಹೋಮಮಾಡುವುದರಿಂದ ಆದಿನವೇ ಶತ್ರುವು ದಾಹಜ್ವರಗ್ರಸ್ತನಾಗುವನು.

೨೧೬-೨೧೭. ಈರೀತಿ ನಿಗ್ರಹ ಹೋಮಮಾಡುವಾಗ ಆತ್ಮರಕ್ಷಣೆಗಾಗಿ ಪ್ರತಿದಿನವೂ ವಿದ್ಯಾಸಿದ್ಧಿಯನ್ನು ಹೊಂದಿದ ದೇವೀಭಕ್ತರು ಮೃತ್ಯುಂಜಯವಿದ್ಯೆ ಅಥವಾ ಆಯಾಯಾ ಪ್ರಯೋಗಸ್ಥವಿದ್ಯೆಗಳಿಂದ ಜಪಹೋಮಾದಿಗಳನ್ನು ಮಾಡಿಸಬೇಕು. ಹಾಗೆಮಾಡದಿದ್ದರೆ ಮಂತ್ರಸಿದ್ಧಿ ಹೊಂದಿದವನನ್ನು ವೇಗ ನಾಶಮಾಡುವುದು.

ಲಕ್ಷತ್ರಯಂ ಕೃತೇ ಪ್ರೋಕ್ತಂ ತ್ರೇತಾಯಾಂ ದ್ವಿಗುಣೇ ತಥಾ ।
ದ್ವಾಪರೇ ತ್ರಿಗುಣಂ ಪ್ರೋಕ್ತಂ ಕಲೌ ತತ್ತು ಚತುರ್ಗುಣಂ ॥ ೨೧೮ ॥

ದಶಾಂಶಂ ಹವನಂ ಕಾರ್ಯಂ ತರ್ಪಣಂ ತದ್ದಶಾಂಶತಃ ।
ತದ್ದಶಾಂಶಂ ಮಾರ್ಜನಂ ಸ್ಯಾದ್ದಶಾಂಶಂ ದ್ವಿಜಭೋಜನಂ ॥ ೨೧೯ ॥

ಏವಂ ಕ್ರಮೇಣ ಸರ್ವಾಸಾಂ ಮಾಯಾಸಂಖ್ಯಾ ಜಪಸ್ಯ ಸಾ ।
ಕಾರ್ಯಾ ಸಿದ್ಧ್ಯೈ ತು ವಿದ್ಯಾಯಾಸ್ತತಃ ಕುರ್ಯಾತ್ಪ್ರಯೋಗಕಾನ್ ॥

ದ್ವಿಗುಣೋ ಹಿ ಜಪಃ ಕಾರ್ಯಃ ಕಾಮೇಶ್ವರ್ಯಾ ಮುನೀಶ್ವರ ।
ಸಿದ್ಧೇ ಮಂತ್ರೇ ಪ್ರಯೋಗಾಂಸ್ತು ವಿದಧೀತ ಯಥಾ ತಥಾ ॥ ೨೨೧ ॥

---

೨೧೮. ಕೃತಯುಗದಲ್ಲಿ ಮೂರುಲಕ್ಷ ಮಂತ್ರಜಪಾದಿಗಳು ವಿಹಿತವಾಗಿವೆ. ತ್ರೇತಾಯುಗದಲ್ಲಿ ಅದರ ಎರಡರಷ್ಟು, ದ್ವಾಪರದಲ್ಲಿ ಮೂರರಷ್ಟು, ಕಲಿಯುಗದಲ್ಲಿ ನಾಲ್ಕರಷ್ಟೂ ವಿಹಿತವಾಗಿವೆ.

೨೧೯. ಈರೀತಿ ವಿಹಿತವಾದ ಜಪದ ಹತ್ತನೆಯ ಒಂದುಭಾಗ ಹೋಮವನ್ನೂ, ಅದರ ಹತ್ತನೆಯ ಒಂದುಭಾಗ ತರ್ಪಣವನ್ನೂ, ಅದರ ಹತ್ತನೆಯ ಒಂದುಭಾಗ ಮಾರ್ಜನೆಯನ್ನೂ, ಅದರ ಹತ್ತನೆಯ ಒಂದುಭಾಗ ಬ್ರಾಹ್ಮಣ ಭೋಜನವನ್ನೂ ಮಾಡಿಸಬೇಕು.

೨೨೦. ಈರೀತಿ ಎಲ್ಲಕ್ಕೂ ಸಂಖ್ಯೆಯು ಕಲ್ಪಿತವಾಗಿದೆ. ವಿದ್ಯೆಯು ಸಿದ್ಧಿಸಬೇಕಾದರೆ ಇಲ್ಲಿ ಉಕ್ತವಾಗಿರುವಷ್ಟು ಜಪವನ್ನು ಮಾಡಲೇಬೇಕು. ಹಾಗೆ ಆಚರಿಸಿ ಸಿದ್ಧಿಯನ್ನು ಹೊಂದಿದ ಅನಂತರವೇ ಪ್ರಯೋಗಗಳನ್ನು ಮಾಡಬೇಕು.

೨೨೧. ಮುನೀಶ್ವರನೇ! ಕಾಮೇಶ್ವರೀ ವಿದ್ಯೆಯನ್ನು ದ್ವಿಗುಣವಾಗಿ ಜಪಿಸಬೇಕು. ಮಂತ್ರಸಿದ್ಧಿಯಾದಮೇಲೆ ನಾನಾವಿಧ ಪ್ರಯೋಗಗಳನ್ನಾಚರಿಸಬೇಕು.

ಜಪೋ ಲಕ್ಷಂ ಸಮಾಖ್ಯಾತೋ ಹೋಮಾದಿಸ್ತದ್ದಶಾಂಶತಃ |
ಕರ್ತವ್ಯೋ ಭಗಮಾಲಾಯಾ ವಿದ್ಯಾಸಿದ್ಧ್ಯೈ ಮುನೀಶ್ವರ || ೨೨೨ ||

ನಿತ್ಯಕ್ಲಿನ್ನಾಜಪಃ ಪ್ರೋಕ್ತೋ ಲಕ್ಷಂ ಹೋಮೋ ದಶಾಂಶತಃ |
ಕಾರ್ಯಃ ಸಿದ್ಧ್ಯೈ ತು ವಿದ್ಯಾಯಾಃ ಪ್ರಯೋಗಾನ್ಸಾಧಯೇತ್ತತಃ ||

ತತೋ ಮೌನೀ ಪಯೋಭಕ್ಷಃ ಪ್ರಜಪೇನ್ನವಲಕ್ಷಕಂ |
ಭೇರುಂಡಾಮಂತ್ರಮುಕ್ತಂ ತು ಶೇಷಂ ಕುರ್ಯಾತ್ಪ್ರಯತ್ನತಃ ||೨೨೪||

ಲಕ್ಷತ್ರಯಂ ಜಪೋ ವಹ್ನಿವಾಸಿನ್ಯಾಃ ಸಮುದೀರಿತಃ |
ಅನ್ಯತ್ಸರ್ವಂ ಪುರಾವಚ್ಚ ಕಾರ್ಯಂ ಸಾಧಕಸತ್ತಮೈಃ || ೨೨೫ ||

ಮಹಾವಜ್ರೇಶ್ವರೀವಿದ್ಯಾಜಪೋ ಲಕ್ಷತ್ರಯೋ ಮತಃ |
ಹವನಾದಿದಶಾಂಶೇನ ಕಾರ್ಯಂ ಪ್ರೋಕ್ತಕ್ರಮೇಣ ಹಿ || ೨೨೬ ||

---

೨೨೨. ಭಗಮಾಲಾವಿದ್ಯೆಯಸಿದ್ಧಿಗಾಗಿ ಆ ವಿದ್ಯೆಯ ಜಪ ಒಂದುಲಕ್ಷ, ಹೋಮವು ಹತ್ತುಸಾವಿರಕರ್ತವ್ಯವೆಂದು ಉಕ್ತವಾಗಿದೆ.

೨೨೩. ನಿತ್ಯಕ್ಲಿನ್ನಾವಿದ್ಯೆಯ ಸಿದ್ಧಿಯನ್ನು ಹೊಂದಬೇಕಾದರೆ ಒಂದು ಲಕ್ಷ ಅದರ ಜಪ, ಹತ್ತುಸಾವಿರ ಹೋಮ ಇವುಗಳನ್ನು ಮಾಡಬೇಕು. ಅನಂತರ ಪ್ರಯೋಗಗಳನ್ನು ಸಾಧಿಸಬೇಕು.

೨೨೪. ಅನಂತರ ಮೌನವ್ರತವನ್ನು ಧರಿಸಿ, ಕ್ಷೀರಾಹಾರ ಮಾತ್ರವನ್ನೇ ಸೇವಿಸುತ್ತಾ, ಭೇರುಂಡಾಮಂತ್ರವನ್ನು ಒಂಬತ್ತುಲಕ್ಷ ಜಪಿಸಬೇಕು. ಉಳಿದ ಹೋಮಾದಿಗಳನ್ನು ಹಿಂದೆ ಹೇಳಿರುವಂತೆ ನಡೆಯಿಸಬೇಕು.

೨೨೫. ವಹ್ನಿವಾಸಿನೀ ವಿದ್ಯೆಯ ಜಪವನ್ನು ಮೂರುಲಕ್ಷ ಮಾಡಬೇಕು. ಉಳಿದುದೆಲ್ಲವನ್ನೂ ಹಿಂದಿನಂತೆ ನಡೆಯಿಸತಕ್ಕುದು.

೨೨೬. ಮಹಾವಜ್ರೇಶ್ವರೀ ವಿದ್ಯೆಯ ಜಪವು ಮೂರುಲಕ್ಷ, ಅದರಲ್ಲಿ ಹತ್ತನೆಯ ಒಂದುಭಾಗ ಹೋಮಾದಿಗಳು ಉಕ್ತರೀತಿಯಿಂದ ನಡೆಯಿಸಬೇಕು.

ಅತಂದ್ರಿತೋ ಜಪೇಲ್ಲಕ್ಷಮಿತಂ ದೂತೀಮನುಂ ಮುನೇ ।
ತದ್ದಶಾಂಶಕ್ರಮೇಣೈವ ಹೋಮಾದಿಃ ಪ್ರೋಕ್ತಮಾರ್ಗತಃ ॥ ೨೨೭ ॥

ತ್ವರಿತಾಂ ಪ್ರಜಪೇಲ್ಲಕ್ಷಪ್ರಮಿತಾಂ ತದ್ದಶಾಂಶತಃ ।
ಕೃತ್ವಾ ಹೋಮಾದಿಕಂ ಸರ್ವಂ ವಿದ್ಯಾಸಿದ್ಧ್ಯೈ ಮುನೀಶ್ವರ ॥ ೨೨೮ ॥

ಜಪೇಲ್ಲಕ್ಷಂ ಸಮಾಖ್ಯಾತೋ ಹೋಮಾದಿಸ್ತದ್ದಶಾಂಶತಃ ।
ವಿದ್ಯಾಯಾಃ ಕುಲಸುಂದರ್ಯಾಃ ಕರ್ತವ್ಯೋ ದ್ವಿಜಸತ್ತಮ ॥ ೨೨೯ ॥

ನಿತ್ಯಾನಿತ್ಯಾಜಪೋ ವಿಪ್ರ ತ್ರಿಲಕ್ಷಪ್ರಮಿತೋ ಮತಃ ।
ಹೋಮಾದಿಸ್ತದ್ದಶಾಂಶೇನ ಪ್ರೋಕ್ತಃ ಪ್ರೋಕ್ತವಿಧಾನತಃ ॥ ೨೩೦ ॥

ತ್ರಿಪಂಚಾಶಲ್ಲಕ್ಷಮುಕ್ತೋ ನಿಯಮೇನ ಮುನೀಶ್ವರ ।
ಜಪೋ ನಿತ್ಯಪತಾಕಾಯಾ ಹೋಮಾದಿಸ್ತದ್ದಶಾಂಶತಃ ॥ ೨೩೧ ॥

---

೨೨೭. ಮುನಿಯೇ! ಆಲಸ್ಯವಿಲ್ಲದೇ ದೂತೀಮಂತ್ರವನ್ನು ಒಂದು ಲಕ್ಷ ಜಪ, ಅದರ ಹತ್ತನೆಯ ಒಂದುಭಾಗ ಹೋಮಾದಿಗಳನ್ನೂ ಉಕ್ತರೀತಿಯಿಂದ ಆಚರಿಸಬೇಕು.

೨೨೮. ಮುನೀಶ್ವರನೇ! ತ್ವರಿತಾವಿದ್ಯೆಯನ್ನು ಒಂದುಲಕ್ಷ ಜಪ, ಅದರ ಹತ್ತನೆಯ ಒಂದುಭಾಗ ಹೋಮಾದಿಗಳನ್ನೂ ವಿದ್ಯಾಸಿದ್ಧಿಗಾಗಿ ಆಚರಿಸಬೇಕು.

೨೨೯. ದ್ವಿಜಶ್ರೇಷ್ಠನೇ! ಕುಲಸುಂದರೀ ವಿದ್ಯೆಯನ್ನು ಒಂದುಲಕ್ಷ ಜಪಿಸಿ ಹೋಮಾದಿಗಳನ್ನು ಹತ್ತುಸಾವಿರ ಮಾಡಬೇಕು.

೨೩೦. ನಿತ್ಯಾವಿದ್ಯೆಯನ್ನು ಮೂರುಲಕ್ಷ ಜಪಿಸಿ ಮೂವತ್ತುಸಾವಿರ ಹೋಮಾದಿಗಳನ್ನು ಉಕ್ತವಿಧಾನಾನುಸಾರವಾಗಿ ಆಚರಿಸಬೇಕು.

೨೩೧. ಮುನೀಶ್ವರನೇ! ನಿತ್ಯಪತಾಕಾವಿದ್ಯೆಯ ಜಪವನ್ನು ಐವತ್ತು ಮೂರುಲಕ್ಷ ಮಾಡಿ, ಅದರ ಹತ್ತನೆಯ ಒಂದುಭಾಗ ಹೋಮಮಾಡಬೇಕೆಂದು ಉಕ್ತವಾಗಿದೆ.

ವಿಜಯಾಯಾ ಜಪಃ ಪ್ರೋಕ್ತೋ ಲಕ್ಷಮಾನೇನ ನಾರದ ।
ಅನ್ಯತ್ಪೂರ್ವವದಾಖ್ಯಾತಂ ವಿದ್ಯಾಸಿದ್ಧ್ಯೈ ತು ಸಾಧನಂ ॥ ೨೩೨ ॥

ದಂತಲಕ್ಷಪ್ರಮಾಣೇನ ಸರ್ವಮಂಗಲಿಕಾಂ ಜಪೇತ್ ।
ತದ್ದಶಾಂಶಕ್ರಮೇಣೈವ ಹೋಮಾದಿ ಸಮುದೀರಿತಂ ॥ ೨೩೩ ॥

ಅಷ್ಟಲಕ್ಷಂ ಹವಿಷ್ಯಾಶೀ ಜ್ವಾಲಾಮಾಲನಿಕಾಂ ಜಪೇತ್ ।
ಹೋಮಾದಿಸ್ತದ್ದಶಾಂಶೇನ ಪ್ರೋಕ್ತದ್ರವ್ಯೈಃ ಸಮೀರಿತಃ ॥ ೨೩೪ ॥

ಚಿತ್ರಾಯಾ ಭೂತಲಕ್ಷಂ ತು ಜಪೋ ಹೋಮಾದಿಕಸ್ತತಃ ।
ಪ್ರೋಕ್ತೇನ ತನ್ಮನಾಃ ಕಾರ್ಯೋ ವಿದ್ಯಾಸಿದ್ಧ್ಯೈ ಮುನೀಶ್ವರ ॥ ೨೩೫ ॥

೨೩೨. ನಾರದನೇ! ವಿಜಯಾ ವಿದ್ಯೆಯ ಜಪವು ಒಂದುಲಕ್ಷ, ಉಳಿದುದೆಲ್ಲವೂ ಪೂರ್ವದಂತೆಯೇ ವಿದ್ಯಾಸಿದ್ಧಿಗಾಗಿ ಕರ್ತವ್ಯವೆಂದು ಹೇಳಿದೆ.

೨೩೩. ಸರ್ವಮಂಗಳಾವಿದ್ಯೆಯನ್ನು ಮೂವತ್ತೆರಡುಲಕ್ಷ ಜಪಿಸಬೇಕು. ಅದರ ಹತ್ತನೆಯ ಒಂದುಭಾಗ ಹೋಮಾದಿಗಳನ್ನೂ ಆಚರಿಸಬೇಕು.

೨೩೪. ಕೇವಲ ಹವಿಷ್ಯಾಶನನಾಗಿ ಜ್ವಾಲಾಮಾಲಿನೀವಿದ್ಯೆಯನ್ನು ಎಂಟುಲಕ್ಷ ಜಪಿಸಬೇಕು. ವಿಹಿತವಸ್ತುಗಳಿಂದ ಅದರ ಹತ್ತನೆಯ ಒಂದುಭಾಗ ಹೋಮಾದಿಗಳನ್ನಾಚರಿಸಬೇಕು.

೨೩೫. ಮುನೀಶ್ವರನೇ! ಚಿತ್ರಾವಿದ್ಯೆಯನ್ನು ಐದುಲಕ್ಷ ಜಪಿಸಬೇಕು. ಆ ದೇವಿಯಲ್ಲಿ ಏಕಾಗ್ರಚಿತ್ತದಿಂದ ವಿದ್ಯಾಸಿದ್ಧಿಗಾಗಿ ಅದರ ಹತ್ತನೆಯ ಒಂದು ಭಾಗ ಹೋಮಾದಿಗಳನ್ನು ಕ್ರಮವಾಗಿ ಆಚರಿಸಬೇಕು.

ಏತತ್ಸಂಕ್ಷೇಪತಃ ಪ್ರೋಕ್ತಂ ನಿತ್ಯಾಪಟಲಮಾದಿತಃ ।
ಜ್ಞಾತವ್ಯಂ ಸರ್ವತೋವಾತ್ರ ಯಂತ್ರಸಾಧನಪೂರ್ವಕಂ ॥ ೨೩೬ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ನಿತ್ಯಾಪಟಲಕಥನಂ ನಾಮ
॥ ನವತಿತಮೋಽಧ್ಯಾಯಃ ॥

---

೨೩೬. ಈ ನಿತ್ಯಾಪಟಲವು ಸಂಕ್ಷೇಪವಾಗಿ ಉಕ್ತವಾಗಿದೆ. ಇಲ್ಲಿ ಹೇಳಿರುವುದೆಲ್ಲವನ್ನೂ ಯಂತ್ರಸಾಧನಪೂರ್ವಕವಾಗಿಯೇ ತಿಳಿಯಬೇಕು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಮೂರನೆಯ ಪಾದದಲ್ಲಿ ನಿತ್ಯಾಪಟಲಕಥನವೆಂಬ
ತೊಂಬತ್ತನೆಯ ಅಧ್ಯಾಯವು ಮುಗಿದುದು.

## ವಿಷಯಸಂಗ್ರಹ

ಲಲಿತಾನಾಮ ನಿರ್ವಚನೆ, ಆಸವಕಲ್ಪನಾಕ್ರಮ, ಷೋಡಶನಿತ್ಯಾದೇವಿಯ ಪೂಜಾಕ್ರಮ, ನಾನಾವಿಧ ಪ್ರಯೋಗ ಮುಂತಾದುವು ಸಾಂಗವಾಗಿ ವಿಸ್ತರಿಸಲ್ಪಟ್ಟಿವೆ.

## ಏಕನವತಿತಮೋಽಧ್ಯಾಯಃ

---

ಸನತ್ಕುಮಾರ ಉವಾಚ

**ಅಥ ವಕ್ಷ್ಯೇ ಮಹೇಶಸ್ಯ ಮಂತ್ರಂ ಸರ್ವಾರ್ಥಸಾಧಕಂ ।**
**ಯಂ ಸಮಾರಾಧ್ಯ ಮನುಜೋ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೧ ॥**

**ಹೃದಯಂ ವಪರಂ ಸಾಕ್ಷಿ ಲಾಂತೋ ನಂತಾನ್ವಿತೋ ಮರುತ್ ।**
**ಪಂಚಾಕ್ಷರೋ ಮನುಃ ಪ್ರೋಕ್ತಸ್ತಾರಾದ್ಯೋಽಯಂ ಷಡಕ್ಷರಃ ॥ ೨ ॥**

**ವಾಮದೇವೋ ಮುನಿಶ್ಛಂದಃ ಪಂಕ್ತಿರೀಶೋಽಸ್ಯ ದೇವತಾ ।**
**ಷಡ್ಭಿರ್ವರ್ಣೈಃ ಷಡಂಗಾನಿ ಕುರ್ಯಾನ್ಮಂತ್ರೇಣ ದೇಶಿಕಃ ॥ ೩ ॥**

---

## ತೊಂಬತ್ತೊಂದನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಈಗ ಸಕಲೇಷ್ಟಾರ್ಥಸಾಧಕವಾದ ಮಹೇಶ್ವರಮಂತ್ರವನ್ನು ಹೇಳುವೆನು ; ಅದನ್ನು ಆರಾಧಿಸುವ ಮನುಷ್ಯನು ಐಹಿಕದಲ್ಲಿ ಭೋಗವನ್ನೂ ಪರಲೋಕದಲ್ಲಿ ಮೋಕ್ಷವನ್ನೂ ಪಡೆಯುವನು.

### ಶಿವಪಂಚಾಕ್ಷರಮಂತ್ರ

೧. (ಹೃದಯಂ= ನಮಃ, ಸಾಕ್ಷಿವಪರಂ= ಶಿ, ಅನಂತಾನ್ವಿತೋ ಲಾಂತಃ= ವಾ, ಮರುತ್= ಯ. 'ಓಂ' ಎಂಬುದನ್ನು ಆದಿಯಲ್ಲಿ ಸೇರಿಸುವುದರಿಂದ ಇದು ಷಡಕ್ಷರಮಂತ್ರವಾಗುವುದು.)

"ಓಂ ನಮಃ ಶಿವಾಯ" ಎಂಬುದು ತಾರಾದಿಯಾದ ಶಿವಪಂಚಾಕ್ಷರ ಮಂತ್ರವು.

೩. ಈ ಮಂತ್ರಕ್ಕೆ ವಾಮದೇವನು ಋಷಿ, ಪಂಕ್ತಿ ಎಂಬುದು ಛಂದಸ್ಸು, ಈಶ್ವರನು ದೇವತೆಯು. ಕ್ರಮವಾಗಿ ಈ ಮಂತ್ರದ ಆರು ವರ್ಣಗಳಿಂದ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು.

ಮಂತ್ರವರ್ಣಾದಿಕಾನ್ಯಸ್ಯೇನ್ಮಂತ್ರಮೂರ್ತೀರ್ಯಥಾಕ್ರಮಂ ।
ತರ್ಜನೀಮಧ್ಯಯೋರಂತ್ಯಾನಾಮಿಕಾಂಗುಷ್ಠಕೇ ಪುನಃ ॥ ೪ ॥

ತಾಃ ಸ್ಯುಸ್ತತ್ಪುರುಷಾಘೋರಭವವಾಮೇಶಸಂಜ್ಞಿಕಾಃ ।
ವಕ್ತ್ರಹೃತ್ಪಾದಗುಹ್ಯೇಷು ನಿಜಮೂರ್ಧನಿ ತಾಃ ಪುನಃ ॥ ೫ ॥

ಪ್ರಾಗ್ಯಾಮ್ಯವಾರುಣೋದೀಚ್ಯಮಧ್ಯವಕ್ತ್ರೇಷು ಪಂಚಸು ।
ಮಂತ್ರಾಂಗಾನಿ ನ್ಯಸೇತ್ಪಶ್ಚಾಜ್ಜಾತಿಯುಕ್ತಾನಿ ಷಟ್ಕ್ರಮಾತ್ ॥ ೬ ॥

ಕುರ್ವೀತ ಗೋಲಕನ್ಯಾಸಂ ರಕ್ಷಾಯೈ ತದನಂತರಂ ।
ಹೃದಿ ವಕ್ತ್ರೇಂಸಯೋರೂರ್ವೋಃ ಕಂಠೇ ನಾಭೌ ದ್ವಿಪಾರ್ಶ್ವಯೋಃ ॥ ೭ ॥

---

೪-೬. ಬಳಿಕ ಈ ಮಂತ್ರದ ಒಂದೊಂದು ಅಕ್ಷರವನ್ನು ಆದಿಯಲ್ಲಿ ಸೇರಿಸಿ ಮಂತ್ರಮೂರ್ತಿಗಳಾದ ತತ್ಪುರುಷ, ಅಘೋರ, ಭವ, ವಾಮದೇವ, ಈಶನಾಮಕದೇವತೆಗಳನ್ನು ಕ್ರಮವಾಗಿ ತರ್ಜನೀ, ಮಧ್ಯಮ, ಕಿಬ್ಬೆರಳು, ಅನಾಮಿಕಾ, ಹೆಬ್ಬೆರಳುಗಳಲ್ಲಿ ನ್ಯಾಸಮಾಡಬೇಕು.

ಆ ಮಂತ್ರಮೂರ್ತಿಗಳನ್ನು ಪುನಃ ಮುಖ, ಹೃದಯ, ಪಾದ, ಗುಹ್ಯ ಮತ್ತು ತನ್ನ ಶಿರಸ್ಸುಗಳಲ್ಲಿ ನ್ಯಾಸಮಾಡಬೇಕು. ಆ ಮೂರ್ತಿಗಳನ್ನೇ ಪುನಃ ಮುಖದ ಪೂರ್ವ ದಕ್ಷಿಣ ಪಶ್ಚಿಮ ಉತ್ತರದಿಗ್ಭಾಗಗಳು ಮತ್ತು ಮಧ್ಯಭಾಗ ಈ ಐದರಲ್ಲಿ ನ್ಯಾಸಮಾಡಬೇಕು.

ತರುವಾಯ ನಮಃ, ಸ್ವಾಹಾ, ವಷಟ್, ಔಷಟ್, ಹುಂ, ಫಟ್, ಎಂಬ ಜಾತಿಪದಸಹಿತವಾಗಿ ಮಂತ್ರವರ್ಣಗಳಿಂದ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು.

೭-೮. ಅನಂತರ ರಕ್ಷಾರ್ಥವಾಗಿ ಗೋಲಕನ್ಯಾಸಮಾಡಬೇಕು

ಹೃದಯ, ಮುಖ, ಭುಜದ್ವಯ, ಎರಡು ತೊಡೆಗಳು, ಕಂಠ, ನಾಭಿ, ಪಾರ್ಶ್ವದ್ವಯ, ಪೃಷ್ಠ, ಹೃದಯ, ಶಿರಸ್ಸು, ಮುಖ, ನೇತ್ರದ್ವಯ, ನಾಸಿಕೆ,

ಪೃಷ್ಠೇ ಹೃದಿ ತಥಾ ಮೂರ್ಧ್ನಿ ವದನೇ ನೇತ್ರಯೋರ್ನಸೋಃ ।
ದೋಃ ಪತ್ಸಂಧಿಷು ಸಾಗ್ರೇಷು ವಿನ್ಯಸೇತ್ತದನಂತರಂ ॥ ೮ ॥

ಶಿರೋವದನಹೃತ್ಕುಕ್ಷಿಸೋರುಪಾದದ್ವಯೇ ಪುನಃ ।
ಹೃದಿ ವಕ್ತ್ರಾಂಬುಜೇ ಟಂಕಮೃಗಾಭಯವರೇಷ್ವಥ ॥ ೯ ॥

ವಕ್ತ್ರಾಂಸಹೃತ್ಸಪಾದೋರುಜಠರೇಷು ಕ್ರಮಾನ್ನ್ಯಸೇತ್ ।
ಮೂಲಮಂತ್ರಸ್ಯ ಷಡ್ವರ್ಣಾನ್ಯಥಾವದ್ವೇತಿಕೋತ್ತಮಃ ॥ ೧೦ ॥

ಮೂರ್ಧ್ನಿ ಫಾಲೋದರಾಂಸೇಷು ಹೃದಯೇ ತಾಃ ಪುನರ್ನ್ಯಸೇತ್ ।
ಪಶ್ಚಾದನೇನ ಮಂತ್ರೇಣ ಕುರ್ವೀತ ವ್ಯಾಪಕಂ ಸುಧೀಃ ॥ ೧೧ ॥

ನಮೋಸ್ತ್ವನಂತರೂಪಾಯ ಜ್ಯೋತಿರ್ಲಿಂಗಾಮೃತಾತ್ಮನೇ ।
ಚತುರ್ಮೂರ್ತಿವಪುಶ್ಛಾಯಾಭಾಸಿತಾಂಗಾಯ ಶಂಭವೇ ॥ ೧೨ ॥

---

ಅಗ್ರಸಹಿತವಾದ ಐದು ಬಾಹು, ಪಾದಸಂಧಿಗಳು ಇವುಗಳಲ್ಲಿ ಮಂತ್ರವರ್ಣ ನ್ಯಾಸಾವೃತ್ತಿಯನ್ನು ಮಾಡಬೇಕು.

೯-೧೦. ಆಮೇಲೆ ಬಳಿಕ ಶಿರಸ್ಸು, ಮುಖ, ಹೃದಯ, ಉದರ, ತೊಡೆ ಗಳ ಸಹಿತ ಪಾದದ್ವಯಗಳಲ್ಲಿಯೂ, ಪುನಃ ಹೃದಯ, ಮುಖಕಮಲ, ಟಂಕ (ಪರಶು) ಮೃಗ, ಅಭಯ, ವರಗಳಲ್ಲಿಯೂ, ತರುವಾಯ ಮುಖ, ಭುಜದ್ವಯ, ಪಾದಸಹಿತ ತೊಡೆಗಳು ಉದರ ಇವುಗಳಲ್ಲಿ ಮೂಲಮಂತ್ರದ ಆರು ವರ್ಣಗಳನ್ನು ಕ್ರಮವಾಗಿ ನ್ಯಾಸಮಾಡಬೇಕು.

೧೧. ಅವುಗಳನ್ನು ಪುನಃ ಶಿರಸ್ಸು, ಲಲಾಟ, ಉದರ, ಭುಜದ್ವಯ, ಹೃದಯಗಳಲ್ಲಿ ನ್ಯಾಸಮಾಡಬೇಕು. ಅನಂತರ ಜ್ಞಾನಿಯು ಈ ಮಂತ್ರದಿಂದ ಸರ್ವಾಂಗನ್ಯಾಸಮಾಡಬೇಕು.

೧೧. ಅನಂತರೂಪನು, ತೇಜೋಮಯ ಲಿಂಗರೂಪಿಯಾದ ಅಮೃತಾ ತ್ಮನು, ನಾಲ್ಕು ಮೂರ್ತಿಗಳ ಶರೀರಕಾಂತಿಯಿಂದ ಬೆಳಗುತ್ತಿರುವ ಅವಯವ ವುಳ್ಳವನೂ ಆಗಿರುವ ಈಶ್ವರನಿಗೆ ನಮಸ್ಕಾರ.

ಏವಂ ನ್ಯಸ್ತಶರೀರೋಽಸೌ ಚಿಂತಯೇತ್ಪಾರ್ವತೀಪತಿಂ ।
ಧ್ಯಾಯೇನ್ನಿತ್ಯಂ ಮಹೇಶಾನಂ ರೌಪ್ಯಪರ್ವತಸನ್ನಿಭಂ ॥ ೧೩ ॥

ಚಾರುಚಂದ್ರಾವತಂಸಂ ಚ ರತ್ನಾಕಲ್ಪೋಜ್ಜ್ವಲಾಂಗಕಂ ।
ಪರಶ್ವಧವರಾಭೀತಿಮೃಗಹಸ್ತಂ ಶುಭಾನನಂ ॥ ೧೪ ॥

ಪದ್ಮಾಸೀನಂ ಸಮಂತಾತ್ತು ಸ್ತುತಂ ಸುಮನಸಾಂ ಗಣೈಃ ।
ವ್ಯಾಘ್ರಕೃತ್ತಿಂ ವಸಾನಂ ಚ ವಿಶ್ವಾದ್ಯಂ ವಿಶ್ವರೂಪಕಂ ॥ ೧೫ ॥

ತ್ರಿನೇತ್ರಂ ಪಂಚವಕ್ತ್ರಂ ಚ ಸರ್ವಭೀತಿಹರಂ ಶಿವಂ ।
ತತ್ತ್ವಲಕ್ಷಂ ಜಪೇನ್ಮಂತ್ರಂ ದೀಕ್ಷಿತಃ ಶೈವವರ್ತ್ಮನಾ ॥ ೧೬ ॥

---

೧೩-೧೬. ಈರೀತಿ ನ್ಯಾಸಮಾಡಲ್ಪಟ್ಟ ಶರೀರವುಳ್ಳ ಆರಾಧಕನು ಪಾರ್ವತೀಪತಿಯನ್ನು ಧ್ಯಾನಿಸಬೇಕು.

ಧ್ಯಾನವಿಧಾನ :—ನಾಶರಹಿತನು, ಮಹೇಶ್ವರನು, ರಜತಾಚಲಸಮಾನನು, ಮನೋಹರಚಂದ್ರನೆಂಬ ಆಭರಣವನ್ನು ಶಿರಸ್ಸಿನಲ್ಲಿ ಧರಿಸಿರುವವನು, ರತ್ನಗಳಂತೆ ಹೊಳೆಯುತ್ತಿರುವ ಅವಯವಗಳುಳ್ಳವನು, ಪರಶು, ಮೃಗ, ವರಮುದ್ರೆ, ಅಭಯಮುದ್ರೆಗಳನ್ನು ಕೈಗಳಲ್ಲಿ ಧರಿಸಿರುವವನು, ಪ್ರಸನ್ನವದನನು, ಶ್ವೇತಪದ್ಮಪೀಠವನ್ನು ಅಲಂಕರಿಸಿರುವವನು, ಸುತ್ತಲೂ ದೇವತೆಗಳ ಸಮೂಹಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಿರುವವನು, ಹುಲಿಯ ಚರ್ಮವನ್ನು ಧರಿಸಿರುವವನು, ಜಗದಾದ್ಯನು, ವಿಶ್ವರೂಪಿಯು, ಮೂರು ಕಣ್ಣುಳ್ಳವನು, ಐದು ಮುಖಗಳುಳ್ಳವನು, ಸಕಲಭಯಪರಿಹಾರಕನೂ ಆದ ಶಿವನನ್ನು ಧ್ಯಾನಿಸಬೇಕು.

ಹೀಗೆ ಧ್ಯಾನಮಾಡಿ ಕಾಮಿಕಾಗಮಾದಿಗಳಲ್ಲುಕ್ತವಾದ ಶೈವದೀಕ್ಷೆಯನ್ನು ಹೊಂದಿದ ಪುರುಷನು ಈ ಮಂತ್ರವನ್ನು ಇಪ್ಪತ್ತುನಾಲ್ಕು ಲಕ್ಷಸಾರಿ ಜಪಿಸಬೇಕು.

ತಾವತ್ಸಂಖ್ಯಸಹಸ್ರಾಣಿ ಜುಹುಯಾತ್ಪಾಯಸೈಃ ಶುಭೈಃ ।
ತತಃ ಸಿದ್ಧೋ ಭವೇನ್ಮಂತ್ರಃ ಸಾಧಕಾಭೀಷ್ಟಸಿದ್ಧಿದಃ ॥ ೧೭ ॥

ದೇವಂ ಸಂಪೂಜಯೇತ್ಪೀಠೇ ವಾಮಾದಿನವಶಕ್ತಿಕೇ ।
ವಾಮಾ ಜ್ಯೇಷ್ಠಾ ತಥಾ ರೌದ್ರೀ ಕಾಲೀ ಕಲಪದಾದಿಕಾ ॥ ೧೮ ॥

ವಿಕರಿಣ್ಯಾಹ್ವಯಾ ಪ್ರೋಕ್ತಾ ಬಲಾದ್ಯಾ ವಿಕರಿಣ್ಯಥ ।
ಬಲಪ್ರಮಥನೀ ಪಶ್ಚಾತ್ಸರ್ವಭೂತದಮನ್ಯಥ ॥ ೧೯ ॥

ಮನೋನ್ಮನೀತಿ ಸಂಪ್ರೋಕ್ತಾಃ ಶೈವಪೀಠಸ್ಯ ಶಕ್ತಯಃ ।
ನಮೋ ಭಗವತೇ ಪಶ್ಚಾತ್ಸಕಲಾದಿ ವದೇತ್ತತಃ ॥ ೨೦ ॥

ಗುಣಾತ್ಮಶಕ್ತಿಯುಕ್ತಾಯ ತತೋನಂತಾಯ ತತ್ಪರಂ ।
ಯೋಗಪೀಠಾತ್ಮನೇ ಭೂಯೋ ನಮಸ್ತಾರಾದಿಕೋ ಮನುಃ ॥ ೨೧ ॥

---

೧೭. ಅನಂತರ ಇಪ್ಪತ್ತುನಾಲ್ಕುಸಾವಿರ ಹೋಮಗಳನ್ನು ಸಮೀಚೀನ ಪಾಯಸಗಳಿಂದ ಮಾಡಬೇಕು. ಹಾಗೆ ಮಾಡಿದರೆ ಮಂತ್ರಸಿದ್ಧಿಯುಂಟಾಗಿ ಸಾಧಕನಿಗೆ ಇಷ್ಟಾರ್ಥದಾಯಕವಾಗುವುದು.

೧೮-೨೨. ಅನಂತರ ವಾಮಾ ಮುಂತಾದ ಒಂಬತ್ತು ಶಕ್ತಿಗಳಿಂದ ಸಹಿತವಾದ ಪೀಠದಲ್ಲಿ ಈಶ್ವರನನ್ನು ಪೂಜಿಸಬೇಕು.

ವಾಮಾ, ಜ್ಯೇಷ್ಠಾ, ರೌದ್ರೀ, ಕಾಳೀ, ಕಲವಿಕಾರಿಣೀ, ಬಲವಿಕಾರಿಣೀ, ಬಲಪ್ರಮಥಿನೀ, ಸರ್ವಭೂತದಮನೀ ಮತ್ತು ಮನೋನ್ಮನೀ ಎಂಬ ಒಂಬತ್ತೂ ಶೈವಪೀಠಶಕ್ತಿಗಳೆಂದು ಉಕ್ತವಾಗಿದೆ.

" ಓಂ ನಮೋ ಭಗವತೇ ಸಕಲಾದಿ ಗುಣಾತ್ಮ ಶಕ್ತಿಯುಕ್ತಾಯ ಅನಂತಾಯ ಯೋಗಪೀಠಾತ್ಮನೇ ನಮಃ " ಎಂಬ ಮಂತ್ರದಿಂದ ಗಿರಿಜಾಪತಿಗೆ

ಅಮುನಾ ಮನುನಾ ದದ್ಯಾದಾಸನಂ ಗಿರಿಜಾಪತೇಃ ।
ಮೂರ್ತಿಂ ಮೂಲೇನ ಸಂಕಲ್ಪ್ಯ ತತ್ರಾವಾಹ್ಯ ಯಜೇಚ್ಛಿವಂ ॥ ೨೨ ॥

ಕರ್ಣಿಕಾಯಾಂ ಯಜೇನ್ಮೂರ್ತೀರೀಶಮೀಶಾನದಿಗ್ಗತಂ ।
ಶುದ್ಧಸ್ಫಟಿಕಸಂಕಾಶಂ ದಿಕ್ಷು ತತ್ಪುರುಷಾದಿಕಾಃ ॥ ೨೩ ॥

ಪೀತಾಂಜನಶ್ವೇತರಕ್ತಾಃ ಪ್ರಧಾನಸದೃಶಾಯುಧಾಃ ।
ಚತುರ್ವಕ್ತ್ರಸಮಾಯುಕ್ತಾ ಯಥಾವತ್ತಾಃ ಪ್ರಪೂಜಯೇತ್ ॥ ೨೪ ॥

ಕೋಣೇಷ್ವರ್ಚೇನ್ನಿವೃತ್ತ್ಯಾದ್ಯಾಸ್ತೇಜೋರೂಪಾಃ ಕಲಾಃ ಕ್ರಮಾತ್ ।
ಅಂಗಾನಿ ಕೇಸರಸ್ಥಾನಿ ವಿಘ್ನೇಶಾನ್ ಪತ್ರಗಾನ್ಯಜೇತ್ ॥ ೨೫ ॥

ಅನಂತಂ ಸುಖನಾಮಾನಂ ಶಿವೋತ್ತಮಮನಂತರಂ ।
ಏಕನೇತ್ರಮೇಕರುದ್ರಂ ತ್ರಿನೇತ್ರಂ ತದನಂತರಂ ॥ ೨೬ ॥

---

ಆಸನವನ್ನು ಕೊಡಬೇಕು. ಅಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಕಲ್ಪಿಸಿ, ಈಶ್ವರನನ್ನು ಆವಾಹನೆಮಾಡಿ ಪೂಜಿಸಬೇಕು.

೧೩-೧೪. ಕರ್ಣಿಕೆಯಲ್ಲಿ ಈಶಾನ್ಯ ದಿಕ್ಕಿನಲ್ಲಿರುವ, ನಿರ್ಮಲಸ್ಫಟಿಕದಂತೆ ಹೊಳೆಯುತ್ತಿರುವ, ಈಶ್ವರನನ್ನು ಪೂಜಿಸಬೇಕು.

ದಿಕ್ಕುಗಳಲ್ಲಿ ತತ್ಪುರುಷಾದಿಗಳಾದ, ಪೀತ (ಹಳದಿ) ಅಂಜನ, ಶ್ವೇತ, ರಕ್ತವರ್ಣಗಳುಳ್ಳ, ಪ್ರಧಾನಮೂರ್ತಿಯ ಆಯುಧಗಳಿಗೆ ಸಮಾನವಾದ ಆಯುಧಗಳನ್ನು ಧರಿಸಿರುವ, ನಾಲ್ಕು ಮುಖಗಳುಳ್ಳ ಆ ಮೂರ್ತಿಗಳನ್ನು ವಿಧಾನೋಕ್ತಪ್ರಕಾರವಾಗಿ ಪೂಜಿಸಬೇಕು.

೧೫. ಆಗ್ನೇಯಾದಿ ಕೋಣಗಳಲ್ಲಿ ನಿವೃತ್ತಿ ಮುಂತಾದ ತೇಜೋರೂಪಗಳಾದ ಕಲೆಗಳನ್ನು ಕ್ರಮವಾಗಿ ಪೂಜಿಸಬೇಕು. ಕೇಸರದಲ್ಲಿರುವ ಅಂಗಗಳನ್ನೂ, ಪತ್ರಸ್ಥಿತರಾದ ವಿಘ್ನೇಶ್ವರರನ್ನೂ ಪೂಜಿಸಬೇಕು.

೧೬-೧೮. ಕ್ರಮವಾಗಿ ಕೆಂಪು, ಹಳದಿ, ಬಿಳುಪು, ಕೆಂಪು, ಕಪ್ಪು, ರಕ್ತ, ಅಂಜನ, ಅಸಿತವರ್ಣಯುಕ್ತರಾದ, ಕಿರೀಟದಲ್ಲಿ ಬಾಲಚಂದ್ರನನ್ನು ಧರಿಸಿರುವ,

ಪಶ್ಚಾಚ್ಛ್ರೀಕಂಠನಾಮಾನಂ ಶಿಖಂಡಿನಮಿತಿಕ್ರಮಾತ್ ।
ರಕ್ತಪೀತಸಿತಾರಕ್ತಕೃಷ್ಣರಕ್ತಾಂಜನಾಸಿತಾನ್ ॥ ೨೭ ॥

ಕಿರೀಟಾರ್ಪಿತಬಾಲೇಂದೂನ್ಪದ್ಮಸ್ಥಾನ್ಭೂಷಣಾನ್ವಿತಾನ್ ।
ತ್ರಿನೇತ್ರಾಂಚ್ಛೂಲವಜ್ರಾಸ್ತ್ರಚಾಪಹಸ್ತಾನ್ಮನೋರಮಾನ್ ॥ ೨೮ ॥

ಉತ್ತರಾದಿ ಯಜೇತ್ಪಶ್ಚಾದ್ರುದ್ರಂ ಚಂಡೇಶ್ವರಂ ಪುನಃ ।
ತತೋ ನಂದಿಮಹಾಕಾಲೌ ಗಣೇಶಂ ವೃಷಭಂ ಪುನಃ ॥ ೨೯ ॥

ಅಥ ಭೃಂಗಿಂ ರಿಟಂ ಸ್ಕಂದಮೇತಾನ್ಪದ್ಮಾಸನಸ್ಥಿತಾನ್ ।
ಸ್ವರ್ಣತೋಯಾರುಣಶ್ಯಾಮಮುಕ್ತೇಂದುಸಿತಪಾಟಲಾನ್ ॥ ೩೦ ॥

ಇಂದ್ರಾದಯಸ್ತತಃ ಪೂಜ್ಯಾ ವಜ್ರಾದ್ಯಾಯುಧಸಂಯುತಾಃ ।
ಇತ್ಥಂ ತಂ ಪೂಜಯೇದ್ದೇವಂ ಸಹಸ್ರಂ ನಿತ್ಯಶೋ ಜಪೇತ್ ॥ ೩೧ ॥

---

ಪದ್ಮಸ್ಥಿತರಾದ, ಆಭರಣಗಳನ್ನಿಟ್ಟುಕೊಂಡಿರುವ, ಮೂರು ಕಣ್ಣುಗಳುಳ್ಳ, ಶೂಲ, ವಜ್ರ, ಅಸ್ತ್ರ, ಬಾಣಗಳನ್ನು ಕೈಗಳಲ್ಲಿ ಹಿಡಿದುಕೊಂಡಿರುವ, ಮನೋಹರರಾದ, ಸುಖನಾಮಕನನ್ನೂ, ಅನಂತನನ್ನೂ, ಶಿವೋತ್ತಮನನ್ನೂ, ಅನಂತರ ಏಕನೇತ್ರ, ಏಕರುದ್ರ, ತ್ರಿನೇತ್ರರುಗಳನ್ನೂ ತರುವಾಯ ಶ್ರೀಕಂಠನಾಮಕ ಶಿಖಂಡಿಯನ್ನೂ ಪೂಜಿಸಬೇಕು.

೨೯-೩೦. ಅನಂತರ ಪದ್ಮಾಸನಸ್ಥಿತರಾದ, ಪೀತ, ಶುಕ್ಲ, ರಕ್ತ, ಶ್ಯಾಮ, ಪಾದ್ರೀಬಣ್ಣದವರಾದ ರುದ್ರ, ಚಂಡೇಶ್ವರ, ನಂದಿ, ಮಹಾಕಾಲ, ಗಣೇಶ, ವೃಷಭ, ಭೃಂಗಿ, ರಿಟಿ ಮತ್ತು ಸ್ಕಂದ ಎಂಬೀ ಪರಿವಾರದೇವತೆಗಳನ್ನು ಉತ್ತರಾದಿಯಾಗಿ ಪೂಜಿಸಬೇಕು.

೩೧. ತರುವಾಯ ವಜ್ರಾದ್ಯಾಯುಧಸಹಿತರಾದ ಇಂದ್ರಾದಿ ದಿಕ್ಪಾಲಕರನ್ನು ಪೂಜಿಸಬೇಕು. ಈರೀತಿಯಾಗಿ ಆ ದೇವನನ್ನು ಪೂಜಿಸುತ್ತಾ ಈ ಮಂತ್ರವನ್ನು ಪ್ರತಿದಿನವೂ ಒಂದು ಸಾವಿರ ಸಾರಿ ಜಪಿಸಬೇಕು.

ಸರ್ವಪಾಪವಿನಿರ್ಮುಕ್ತಃ ಪ್ರಾಪ್ನುಯಾದ್ವಾಛಿಂತಂ ಶ್ರಿಯಂ |
ದ್ವಿಸಹಸ್ರಂ ಜಪನ್ ರೋಗಾನ್ಮುಚ್ಯತೇ ನಾತ್ರ ಸಂಶಯಃ || ೩೨ ||

ತ್ರಿಸಹಸ್ರಂ ಜಪನ್ಮಂತ್ರಂ ದೀರ್ಘಮಾಯುರವಾಪ್ನುಯಾತ್ |
ಸಹಸ್ರವೃದ್ಧ್ಯಾ ಪ್ರಜಪನ್ಸರ್ವಕಾಮಾನವಾಪ್ನುಯಾತ್ || ೩೩ ||

ಆಜ್ಯಾನ್ವಿತೈಸ್ತಿಲೈಃ ಶುದ್ಧೈರ್ಜುಹುಯಾಲ್ಲಕ್ಷಮಾದರಾತ್ |
ಉತ್ಪಾತಜನಿತಾನ್ ಕ್ಲೇಶಾನ್ನಾಶಯೇನ್ನಾತ್ರ ಸಂಶಯಃ || ೩೪ ||

ಶತಲಕ್ಷಂ ಜಪನ್ಸಾಕ್ಷಾಚ್ಛಿವೋ ಭವತಿ ಮಾನವಃ |
ಷಡಕ್ಷರಃ ಶಕ್ತಿರುದ್ಧಃ ಕಥಿತೋಷ್ಟಾಕ್ಷರೋ ಮನುಃ || ೩೫ ||

೩೧. ಹೀಗೆ ಜಪಿಸುವವನು ಸಕಲಪಾಪಗಳನ್ನೂ ಹೋಗಲಾಡಿಸಿಕೊಂಡು ಅಪೇಕ್ಷಿತ ಸಂಪತ್ತನ್ನು ಪಡೆಯುವನು. ಈ ಮಂತ್ರವನ್ನು ಎರಡು ಸಾವಿರ ಆವೃತ್ತಿ ಜಪಿಸುವವನು ರೋಗದಿಂದ ಮುಕ್ತನಾಗುವನು ಸಂದೇಹವಿಲ್ಲ.

೩೩-೩೪. ಮೂರುಸಾವಿರ ಮಂತ್ರಜಪಮಾಡುವವನು ದೀರ್ಘಾಯುಸ್ಸ್ಯವನ್ನು ಪಡೆಯುವನು.

ದಿನಕ್ಕೆ ಒಂದು ಸಾವಿರದಂತೆ ಹೆಚ್ಚಾಗಿ ಜಪಿಸುವವನು ಸಕಲೇಷ್ಟಾರ್ಥಗಳನ್ನೂ ಹೊಂದುವನು.

ಶುದ್ಧವಾದ, ಘೃತಸಹಿತ ಎಳ್ಳಿನಿಂದ ಭಕ್ತಿಪೂರ್ವಕವಾಗಿ ಒಂದುಲಕ್ಷ ಹೋವುನಾಡಿದರೆ ಉತ್ಪಾತದಿಂದ ಉಂಟಾಗುವ ಕ್ಲೇಶಗಳು ನಾಶವಾಗುವುವು. ಸಂದೇಹವಿಲ್ಲ.

೩೫. ಈ ಮಂತ್ರವನ್ನು ಒಂದುಕೋಟಿ ಜಪಿಸುವ ಮನುಷ್ಯನು ಸಾಕ್ಷಾತ್ ಶಿವನಾಗುವನು ಎಂದರೆ ಶಿವಸಾಯುಜ್ಯವನ್ನು ಪಡೆಯುವನು.

## ಅಷ್ಟಾಕ್ಷರಮಂತ್ರ

"ಹ್ರೀಂ ಓಂ ನಮಃ ಶಿವಾಯ ಹ್ರೀಂ" ಎಂಬುದು ಶಿವಾಷ್ಟಾಕ್ಷರ ಮಂತ್ರವೆಂದು ಉಕ್ತವಾಗಿದೆ.

ಋಷಿಶ್ಛಂದಃ ಪುರಾ ಪ್ರೋಕ್ತೌ ದೇವತಾ ಸ್ಯಾದುಮಾಪತಿಃ ।
ಅಂಗಾನಿ ಪೂರ್ವಮುಕ್ತಾನಿ ಸೌಮ್ಯಮೀಶಂ ವಿಚಿಂತಯೇತ್ ॥ ೩೬ ॥

ಬಂಧೂಕಾಭಂ ತ್ರಿನೇತ್ರಂ ಚ ಶಶಿಖಂಡಧರಂ ವಿಭುಂ ।
ಸ್ಮೇರಾಸ್ಯಂ ಸ್ವಕರೈಃ ಶೂಲಂ ಕಪಾಲಂ ವರದಾಭಯೇ ॥ ೩೭ ॥

ವಹಂತಂ ಚಾರುಭೂಷಾಢ್ಯಂ ವಾಮೋರುಸ್ಥಾದ್ರಿಕನ್ಯಯಾ ।
ಭುಜೇನಾಶ್ಲಿಷ್ಟದೇಹಂ ತಂ ಚಿಂತಯೇನ್ಮನಸಾ ಹೃದಿ ॥ ೩೮ ॥

ಮನುಲಕ್ಷಂ ಜಪೇನ್ಮಂತ್ರಂ ತತ್ಸಹಸ್ರಂ ಯಥಾವಿಧಿ ।
ಜುಹುಯಾನ್ಮಧುರಾಸಿಕ್ತೈರಾರಗ್ವಧಸಮಿದ್ವರೈಃ ॥ ೩೯ ॥

೩೬. ಹಿಂದೆ ಹೇಳಿರುವುವೇ ಋಷಿ, ಛಂದಸ್ಸುಗಳು, ಉಮಾಪತಿಯು ದೇವತೆ, ಪೂರ್ವೋಕ್ತವಾದುವುಗಳೇ ಅಂಗಗಳು, ಶಾಂತಮೂರ್ತಿಯಾದ ಈಶ್ವರನನ್ನು ಧ್ಯಾನಿಸಬೇಕು.

೩೭-೩೮. ಧ್ಯಾನವಿಧಾನ:—ಬಂಧೂಕಪುಷ್ಪದಂತೆ ಪ್ರಕಾಶಮಾನನಾದ ಮೂರುಕಣ್ಣುಳ್ಳ, ಶಿರಸ್ಸಿನಲ್ಲಿ ಚಂದ್ರನನ್ನು ಧರಿಸಿರುವ, ಸಮರ್ಥನಾದ, ಮುಖದಲ್ಲಿ ಮಂದಹಾಸವನ್ನು ತೋರುತ್ತಿರುವ, ತನ್ನ ಕೈಗಳಿಂದ ಶೂಲ, ಕಪಾಲ, ವರದ, ಅಭಯಗಳನ್ನು ಧರಿಸಿರುವ, ದಿವ್ಯಾಭರಣಗಳಿಂದ ಯುಕ್ತನಾದ, ಎಡತೊಡೆಯ ಮೇಲೆ ಕುಳಿತ ಪಾರ್ವತೀದೇವಿಯ ಭುಜದಿಂದ ಆಲಂಗಿಸಲ್ಪಟ್ಟ ಶರೀರವುಳ್ಳ, ಈಶ್ವರನನ್ನು ಮನಃಪೂರ್ವಕವಾಗಿ ಹೃದಯದಲ್ಲಿ ಧ್ಯಾನಿಸಬೇಕು.

೩೯. ಈ ಮಂತ್ರವನ್ನು ಹದಿನಾಲ್ಕುಲಕ್ಷ ಜಪಿಸಿ, ವಿಧಾನೋಕ್ತ ಪ್ರಕಾರವಾಗಿ ಹದಿನಾಲ್ಕುಸಾವಿರ ಹೋಮವನ್ನು ತುಪ್ಪದಲ್ಲಿ ನೆನೆಸಿದ ರಾಜವೃಕ್ಷದ (ಕಕ್ಕೇಗಿಡದ) ಸಮಿತ್ತುಗಳಿಂದ ಮಾಡಬೇಕು.

ಪ್ರಾಕ್ಪ್ರೋಕ್ತೇ ಪೂಜಯೇತ್ಪೀಠೇ ಗಂಧಪುಷ್ಪೈರುಮಾಪತಿಂ ।
ಅಂಗಾವೃತ್ತೈರ್ಬಹಿಃ ಪೂಜ್ಯಾ ಹೃಲ್ಲೇಖಾದ್ಯಾ ಯಥಾ ಪುರಾ ॥ ೪೦ ॥

ಮಧ್ಯಪ್ರಾಗ್ದಕ್ಷಿಣೋದೀಚ್ಯಪಶ್ಚಿಮೇಷು ವಿಧಾನತಃ ।
ಯಜೇತ್ಪೂರ್ವಾದಿಪತ್ರೇಷು ವೃಷಭಾದ್ಯಾನನುಕ್ರಮಾತ್ ॥ ೪೧ ॥

ಶೂಲಟಂಕಾಕ್ಷವಲಯಕಮಂಡಲುಲಸತ್ಕರಂ ।
ರಕ್ತಾಕಾರಂ ತ್ರಿನಯನಂ ಚಂಡೇಶಮಥಪೂಜಯೇತ್ ॥ ೪೨ ॥

ಚಕ್ರಶಂಖಾಭಯಾಭೀಷ್ಟಕರಾಂ ಮರಕತಪ್ರಭಾಂ ।
ದುರ್ಗಾಂ ಪ್ರಪೂಜಯೇತ್ಸೌಮ್ಯಾಂ ತ್ರಿನೇತ್ರಾಂ ಚಾರುಭೂಷಣಾಂ ॥೪೩॥

---

೪೦-೪೧. ಪೂರ್ವೋಕ್ತಪೀಠದಲ್ಲಿ ಗಂಧಪುಷ್ಪಗಳಿಂದ ಉಮಾಪತಿಯನ್ನು ಪೂಜಿಸಬೇಕು. ಹಿಂದೆ ಹೇಳಿರುವಂತೆ ಬಾಹ್ಯದಲ್ಲಿ ಅಂಗಾವರಣಗಳನ್ನೂ ಹೃಲ್ಲೇಖಾದಿಗಳನ್ನೂ ಮಧ್ಯ, ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮ ದಿಗ್ಭಾಗಗಳಲ್ಲಿ ವಿಧಿವತ್ತಾಗಿ ಪೂಜಿಸಬೇಕು. ಪೂರ್ವಾದಿದಿಕ್ಕುಗಳಲ್ಲಿ ಕ್ರಮವಾಗಿ ವೃಷಭಾದಿಗಳನ್ನು ಪೂಜಿಸಬೇಕು.

೪೨. ಅನಂತರ ಶೂಲ, ಟಂಕ, ಅಕ್ಷವಲಯ, ಕಮಂಡಲುಗಳನ್ನು ಕೈಗಳಲ್ಲಿ ಧರಿಸಿರುವ, ಕೆಂಪಗಿರುವ, ಮೂರುಕಣ್ಣುಗಳುಳ್ಳ, ಚಂಡೇಶ್ವರನನ್ನು ಪೂಜಿಸಬೇಕು.

೪೩. ತರುವಾಯ ಚಕ್ರ, ಶಂಖ, ಅಭಯ, ಅಭೀಷ್ಟಗಳನ್ನು ಕರಗಳಲ್ಲಿ ಹಿಡಿದಿರುವ, ಪಚ್ಚೆಯಂತೆ ಕಾಂತಿಯುಳ್ಳ, ಶಾಂತಮೂರ್ತಿಯಾದ, ಮೂರುಕಣ್ಣುಗಳುಳ್ಳ, ದಿವ್ಯಾಭರಣಗಳನ್ನು ತೊಟ್ಟಿರುವ ದುರ್ಗಾದೇವಿಯನ್ನು ಪೂಜಿಸಬೇಕು.

ಕಲ್ಪಶಾಖಾಂ ರತ್ನಘಂಟಾಂ ದಧಾನಂ ದ್ವಾದಶೇಕ್ಷಣಂ ।
ಬಾಲಾರ್ಕಾಭಂ ಶಿಶುಂ ಕಾಂತಂ ಷಣ್ಮುಖಂ ಪೂಜಯೇತ್ತತಃ ॥ ೪೪ ॥

ನಂದಿನಂ ಚ ಯಜೇತ್ಸೌಮ್ಯಂ ರತ್ನಭೂಷಣಮಂಡಿತಂ ।
ಪರಶ್ವಧವರಾಭೀತಿಟಂಕಿನಂ ಶ್ಯಾಮವಿಗ್ರಹಂ ॥ ೪೫ ॥

ಪಾಶಾಂಕುಶವರಾಭೀಷ್ಟಧಾರಿಣಂ ಕುಂಕುಮಪ್ರಭಂ ।
ವಿಘ್ನನಾಯಕಮಭ್ಯರ್ಚೇಚ್ಚಂದ್ರಾರ್ಧಕೃತಶೇಖರಂ ॥ ೪೬ ॥

ಶ್ಯಾಮಂ ರಕ್ತೋತ್ಪಲಕರಂ ವಾಮಾಂಕನ್ಯಸ್ತತತ್ಕರಂ ।
ದ್ವಿನೇತ್ರಂ ರಕ್ತವಸ್ತ್ರಾಢ್ಯಂ ಸೇನಾಪತಿಮಥಾರ್ಚಯೇತ್ ॥ ೪೭ ॥

---

೪೪. ಕಲ್ಪಶಾಖೆ, ರತ್ನಘಂಟೆಗಳನ್ನು ಧರಿಸಿರುವ, ಹನ್ನೆರಡು ಕಣ್ಣುಗಳುಳ್ಳ, ಬಾಲಸೂರ್ಯನಂತೆ ಪ್ರಕಾಶಮಾನನಾದ, ಮನೋಹರಶಿಶುರೂಪಿಯಾದ ಷಣ್ಮುಖನನ್ನು ಪೂಜಿಸಬೇಕು.

೪೫. ಸೌಮ್ಯವಿಗ್ರಹನಾದ, ರತ್ನಖಚಿತಾಭರಣಗಳಿಂದ ಅಲಂಕರಿಸಲ್ಪಟ್ಟ, ಪರಶು, ವರ, ಅಭಯ, ಟಂಕಗಳನ್ನು ಧರಿಸಿರುವ, ಶ್ಯಾಮಬಣ್ಣದ ಶರೀರವುಳ್ಳ, ನಂದಿಯನ್ನು ಪೂಜಿಸಬೇಕು.

೪೬. ಅನಂತರ ಪಾಶ, ಅಂಕುಶ, ವರ, ಅಭಯಗಳನ್ನು ಧರಿಸಿರುವ, ಕುಂಕುಮದಂತೆ ಹೊಳೆಯುತ್ತಿರುವ, ಅರ್ಧಚಂದ್ರ ಸಿರ್ಮಿತ ಶಿಖೆಯುಳ್ಳ ವಿಘ್ನೇಶ್ವರನನ್ನು ಪೂಜಿಸಬೇಕು.

೪೭. ಶ್ಯಾಮವರ್ಣದ, ಕರಪಲ್ಲಿ ಕೆಂಪುಕನ್ನೈದಿಲೇಹೂವನ್ನು ಹಿಡಿದಿರ ಆ ಕೈಯನ್ನು ಎಡತೊಡೆಯ ಮೇಲಿಟ್ಟಿರುವ, ನೇತ್ರದ್ವಯವುಳ್ಳ, ಕೆಂಪುವಸ್ತ್ರವನ್ನುಟ್ಟಿರುವ ಸೇನಾಪತಿಯನ್ನು ಪೂಜಿಸಬೇಕು.

ತತೋಽಷ್ಟಮಾತರಃ ಪೂಜ್ಯಾ ಬ್ರಾಹ್ಮ್ಯಾದ್ಯಾಃ ಪ್ರೋಕ್ತಲಕ್ಷಣಾಃ ।
ಇಂದ್ರಾದಿಕಾನ್ಲೋಕಪಾಲಾನ್ಸ್ವಸ್ವದಿಕ್ಷು ಸಮರ್ಚಯೇತ್ || ೪೮ ||

ವಜ್ರಾದೀನಿ ತದಸ್ತ್ರಾಣಿ ತದ್ಬಹಿಃ ಕ್ರಮತೋಽರ್ಚಯೇತ್ ।
ಏವಂ ಯೋ ಭಜತೇ ಮಂತ್ರೀ ದೇವಂ ಶಂಭುಮುಮಾಪತಿಂ || ೪೯ ||

ಸ ಭವೇತ್ಸರ್ವಲೋಕಾನಾಂ ಸೌಭಾಗ್ಯಶ್ರೇಯಸಾಂ ಪದಂ ।
ಸಾಂತಸದ್ಯಾಂತಸಂಯುಕ್ತೋ ಬಿಂದುಭೂಷಿತಮಸ್ತಕಃ || ೫೦ ||

ಪ್ರಾಸಾದಾಖ್ಯೋ ಮನುಃ ಪ್ರೋಕ್ತೋ ಭಜತಾಂ ಸರ್ವಸಿದ್ಧಿದಃ ।
ಷಡ್ದೀರ್ಘಯುಕ್ತಬೀಜೇನ ಷಡಂಗವಿಧಿರೀರಿತಃ || ೫೧ ||

---

೪೮. ತರುವಾಯ ಉಕ್ತಲಕ್ಷಣಯುಕ್ತರಾದ ಬ್ರಾಹ್ಮೀ ಮುಂತಾದ ಅಷ್ಟಮಾತೃಗಳನ್ನು ಪೂಜಿಸಬೇಕು. ಬಳಿಕ ಇಂದ್ರಾದಿ ಲೋಕಪಾಲಕರನ್ನು ಅವರವರ ದಿಕ್ಕುಗಳಲ್ಲಿ ಪೂಜಿಸಬೇಕು.

೪೯-೫೦. ಅದರ ಹೊರಗೆ ದಿಕ್ಪಾಲಕರ ವಜ್ರಾದ್ಯಾಯುಧಗಳನ್ನು ಕ್ರಮವಾಗಿ ಪೂಜಿಸಬೇಕು. ಈರೀತಿಯಾಗಿ ಉಮಾಪತಿಯಾದ ಶಂಭುದೇವನನ್ನು ಭಜಿಸುವ ಮಂತ್ರಿಯು ಸರ್ವಲೋಕಗಳಲ್ಲಿಯೂ ಸೌಭಾಗ್ಯಶ್ರೇಯಸ್ಸುಗಳನ್ನು ಹೊಂದುವನು.

## ಪ್ರಾಸಾದಮಂತ್ರ

(ಸಾಂತ= ಹ, ಸದ್ಯಾಂತ= ಔ, ಬಿಂದು= ೦) "ಹೌಂ" ಎಂಬುದು ಪ್ರಾಸಾದಮಂತ್ರವು.

೫೧. ಈ ಮಂತ್ರವು ಆರಾಧಕರಿಗೆ ಸಕಲಸಿದ್ಧಿಪ್ರದವು. ಈ ಮಂತ್ರಕ್ಕೆ 'ಆ, ಈ' ಮುಂತಾದ ಆರು ದೀರ್ಘಸ್ವರಯುಕ್ತ ಬೀಜಾಕ್ಷರದಿಂದ ಷಡಂಗ ನ್ಯಾಸವಿಧಾನವು ಉಕ್ತವಾಗಿದೆ.

ಷಡರ್ಣವತ್ತು ಮುನ್ಯಾದ್ಯಾಃ ಪ್ರೋಕ್ತಾಶ್ಚಾಸ್ಯಾಪಿ ನಾರದ ।
ಈಶಾನಾದ್ಯಾ ನ್ಯಸೇನ್ಮೂರ್ತೀರಂಗುಷ್ಠಾದಿಷು ದೇಶಿಕಃ ॥ ೫೨ ॥

ಈಶಾನಾಖ್ಯಂ ತತ್ಪುರುಷಮಘೋರಂ ತವನಂತರಂ ।
ವಾಮದೇವಾಹ್ವಯಂ ಸದ್ಯೋಜಾತಬೀಜಂ ಕ್ರಮಾದ್ವಿದುಃ ॥ ೫೩ ॥

ಉಕಾರಾದ್ಯೈಃ ಪಂಚಹ್ರಸ್ವೈರ್ವಿಲೋಮಾತ್ಸಂಯುತಂ ವಿಯತ್ ।
ತತ್ತದಂಗುಲಿಭಿರ್ಭೂಯಸ್ತತ್ತದ್ಬೀಜಾದಿಕಾನ್ನ್ಯಸೇತ್ ॥ ೫೪ ॥

ಶಿರೋವದನಹೃದ್ಗುಹ್ಯಪಾದದೇಶೇ ಯಥಾಕ್ರಮಾತ್ ।
ಊರ್ಧ್ವಪ್ರಾಗ್ದಕ್ಷಿಣೋದೀಚ್ಯಪಶ್ಚಿಮೇಷು ಮುಖೇಷು ಚ ॥ ೫೫ ॥

ತತಃ ಪ್ರವಿನ್ಯಸೇದ್ವಿದ್ವಾನಷ್ಟತ್ರಿಂಶತ್ಕಲಾಸ್ತನೌ ।
ಈಶಾನಾದ್ಯಾ ಋಚಃ ಸಮ್ಯಗಂಗುಲೀಷು ಯಥಾಕ್ರಮಂ ॥ ೫೬ ॥

---

೫೨-೫೩. ನಾರದಾ! ಷಡಕ್ಷರಮಂತ್ರಕ್ಕೆ ಹೇಳಿರುವ ಋಷ್ಯಾದಿಗಳೇ ಈ ಮಂತ್ರಕ್ಕೂ ಋಷ್ಯಾದಿಗಳೆಂದು ತಿಳಿಯಬೇಕು.

ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂಬ ಐದು ಮೂರ್ತಿಗಳನ್ನು ಅಂಗುಷ್ಠಾದಿಗಳಲ್ಲಿ ಕ್ರಮವಾಗಿ "ಹೌಂ, ಹೈಂ, ಹೂಂ, ಹಿಂ, ಹಾಂ" ಎಂಬ ಬೀಜಾಕ್ಷರಸಹಿತವಾಗಿ ನ್ಯಾಸಮಾಡಬೇಕು.

೫೪-೫೫. ಆಯಾಯಾ ಬೆಟ್ಟುಗಳಿಂದ ಪುನಃ ಆಯಾಯಾ ಬೀಜಾದಿ ಮೂರ್ತಿಗಳನ್ನು ಶಿರಸ್ಸು, ಮುಖ, ಹೃದಯ, ಶಿಶ್ನ, ಪಾದಗಳಲ್ಲಿ ಕ್ರಮವಾಗಿ ನ್ಯಾಸಮಾಡಬೇಕು ಅನಂತರ ಪುನಃ ಅವನ್ನೇ ಮುಖದ ಊರ್ಧ್ವ, ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮದಿಗ್ಭಾಗಗಳಲ್ಲಿ ನ್ಯಾಸಮಾಡಬೇಕು.

೫೬-೫೭. ಅನಂತರ ಜ್ಞಾನಿಯು ಶರೀರದಲ್ಲಿ ಮೂವತ್ತೆಂಟು ಕಲೆಗಳನ್ನು ನ್ಯಾಸಮಾಡಬೇಕು. ಎಂತೆಂದರೆ:—

ಅಂಗುಷ್ಠಾದಿಕನಿಷ್ಠಾಂತಂ ನ್ಯಸೇದ್ದೇಶಿಕಸತ್ತಮಃ ।
ಮೂರ್ಧಾಸ್ಯಹೃದಯಾಂಭೋಜಗುಹ್ಯಪಾದೇ ತು ತಾಃ ಪುನಃ ॥ ೫೭ ॥

ವಕ್ತ್ರೇ ಮೂರ್ಧಾದಿಷು ನ್ಯಸ್ಯ ಭೂಯೋಂಗಾನಿ ಪ್ರಕಲ್ಪಯೇತ್ ।
ತಾರಪಂಚಕಮುಚ್ಚಾರ್ಯ ಸರ್ವಜ್ಞಾಯ ಹೃದೀರಿತಂ ॥ ೫೮ ॥

---

'ಈಶಾನಃ' ಮುಂತಾದ ಐದು ಋಕ್ಕುಗಳನ್ನು ಕ್ರಮವಾಗಿ ಅಂಗುಷ್ಠಾದಿ ಕನಿಷ್ಠಾಂತವಾದ ಬೆರಳುಗಳಲ್ಲಿ ಚೆನ್ನಾಗಿ ನ್ಯಾಸಮಾಡಬೇಕು. ಅವುಗಳನ್ನು ಪುನಃ ಶಿರಸ್ಸು, ಮುಖ, ಹೃದಯಕಮಲ, ಶಿಶ್ನ, ಪಾದ ಈ ಸ್ಥಾನಗಳಲ್ಲಿ ನ್ಯಾಸಮಾಡಬೇಕು.

೫೮-೫೯. ಮುಖ, ಶಿರಸ್ಸು ಮುಂತಾದ ಐದು ಸ್ಥಾನಗಳಲ್ಲಿ ಪುನಃ ನ್ಯಾಸಮಾಡಬೇಕು. ಬಳಿಕ ಷಡಂಗಗಳನ್ನು ರಚಿಸಬೇಕು. ಹೇಗೆಂದರೆ :—

---

* 1. ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ.

2. ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ತನ್ನೋ ರುದ್ರಃ ಪ್ರಚೋದಯಾತ್.

3. ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರತರೇಭ್ಯಃ ಸರ್ವತಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ.

4. ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ.

5. ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮಃ ಭವೇ ಭವೇ ನಾತಿಭವೇ ಭಜಸ್ವ ಮಾಂ ಭವೋದ್ಭವಾಯ ನಮಃ.

ಆಮೃತತೇಜೋಮಾಲಿನಿ ತೃಪ್ತಾಯೇತಿ ಪದಂ ಪುನಃ ।
ತದಂತೇ ಬ್ರಹ್ಮಶಿರಸೇ ಶಿರೋಂಗಂ ಜ್ವಲಿತಂ ತತಃ ॥ ೫೯ ॥

ಶಿಖಿ ಶಿಖಾಯ ಪರತೋಽನಾದಿಬೋಧಾಯ ತಚ್ಛಿಖಾ ।
ವಜ್ರಿಣೇ ವಜ್ರಹಸ್ತಾಯ ಸ್ವತಂತ್ರಾಯ ತನುಚ್ಛದಂ ॥ ೬೦ ॥

ಸೌಂ ಖೌಂ ಹೌಮಿತಿ ಸಂಭಾಷ್ಯ ಪರತೋ ತೋಂ ಲುಪ್ತಶಕ್ತಯೇ ।
ನೇತ್ರಮುಕ್ತಂ ಶ್ಲೀಂ ಪಶುಂ ಹುಂ ಫಡಂತಂ ತು ಶಕ್ತಯೇ ॥ ೬೧ ॥

ಅಸ್ತ್ರಮುಕ್ತಂ ಷಡಂಗಾನಿ ಕುರ್ಯಾದೇವಂ ಸಮಾಹಿತಃ ।
ಪೂರ್ವದಕ್ಷಿಣಪಶ್ಚಾತ್ತ್ಯಾಕ್ಸೌಮ್ಯಮಧ್ಯೇಷು ಪಂಚಸು ॥ ೬೨ ॥

ವಕ್ತ್ರೇಷು ಪಂಚ ವಿನ್ಯಸ್ಯೇದೀಶಾನಸ್ಯ ಕಲಾಃ ಕ್ರಮಾತ್ ।
ಈಶಾನಃ ಸರ್ವವಿದ್ಯಾನಾಂ ಶಶಿನೀ ಪ್ರಥಮಾ ಕಲಾ ॥ ೬೩ ॥

---

'ಐಂ ಕ್ಲೀಂ ಬ್ಲೂಂ ಸ್ತ್ರೀಂ ಸಃ ಸರ್ವಜ್ಞಾಯ ಹೃದಯಂ' ಎಂಬುದಾಗಿ ಹೃದಯವನ್ನೂ, 'ಅಮೃತತೇಜೋಮಾಲಿನಿ ತೃಪ್ತಾಯ ಬ್ರಹ್ಮಶಿರಸೇ ಶಿರಃ' ಎಂಬುದಾಗಿ ಶಿರಸ್ಸನ್ನೂ, 'ಜ್ವಲಿತ ಶಿಖಿಶಿಖಾಯ ಅನಾದಿ ಬೋಧಾಯ ತಚ್ಛಿಖಾ' ಎಂಬುದಾಗಿ ಶಿಖೆಯನ್ನೂ, 'ವಜ್ರಿಣೇ ವಜ್ರಹಸ್ತಾಯ ಸ್ವತಂತ್ರಾಯ ಕವಚಂ' ಎಂಬುದಾಗಿ ಕವಚವನ್ನೂ, 'ಸೌಂ ಖೌಂ ಹೌಂ ತೋಂ ಲುಪ್ತಶಕ್ತಯೇ ನೇತ್ರಂ' ಎಂಬುದಾಗಿ ನೇತ್ರಗಳನ್ನೂ, 'ಶ್ಲೀಂ ಪಶುಂ ಹುಂ ಫಡನಂತ ಶಕ್ತಯೇ ಅಸ್ತ್ರಂ' ಎಂಬುದಾಗಿ ಅಸ್ತ್ರವನ್ನೂ ವಿನ್ಯಾಸಮಾಡಬೇಕು.

ಅನಂತರ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಮಧ್ಯದ ಮುಖಗಳಲ್ಲಿ ಐದು ಈಶಾನಕಲೆಗಳನ್ನು ಕ್ರಮವಾಗಿ ನ್ಯಾಸಮಾಡಬೇಕು. ಹೇಗೆಂದರೆ :—

'ಈಶಾನಃ ಸರ್ವವಿದ್ಯಾನಾಂ' ಎಂಬುದು ಶಶಿನೀ ಎಂಬ ಮೊದಲನೆಯ ಕಲೆಯು.

ಈಶ್ವರಃ ಸರ್ವಭೂತಾನಾಂ ಮಂಗಲಾ ತದನಂತರಂ ।
ಬ್ರಹ್ಮಾಧಿಪತಿಃ ಶಬ್ದಾಂತೇ ಬ್ರಹ್ಮಣೋಧಿಪತಿಃ ಪುನಃ ॥ ೬೪ ॥

ಬ್ರಹ್ಮೇಷ್ಟದಾ ತೃತೀಯಾಸ್ಯಾಚ್ಛಿವೋ ಮೇ ಅಸ್ತು ತತ್ಪರಾ ।
ಮರೀಚಿಃ ಕಥಿತಾ ವಿಪ್ರ ಚತುರ್ಥೀ ಚ ಸದಾಶಿವೋ ॥ ೬೫ ॥

ಅಂಶುಮಾಲಿನ್ಯಥ ಪರಾ ಪ್ರಣವಾದ್ಯಾ ನಮೋನ್ವಿತಾಃ ।
ಪೂರ್ವಪಶ್ಚಿಮಯಾಮ್ಯೋದಗ್ವಕ್ತ್ರೇಷು ತದನಂತರಂ ॥ ೬೬ ॥

ಚತಸ್ರೋ ವಿನ್ಯಸೇನ್ಮಂತ್ರೀ ಪುರುಷಸ್ಯ ಕಲಾಃ ಕ್ರಮಾತ್ ।
ಆದ್ಯಾ ತತ್ಪುರುಷಾಯೇತಿ ವಿದ್ಮಹೇ ಶಾಂತಿರೀರಿತಾ ॥ ೬೭ ॥

ಮಹಾದೇವಾಯ ಶಬ್ದಾಂತೇ ಧೀಮಹಿ ಸ್ಯಾತ್ತತಃ ಪರಂ ।
ವಿದ್ಯಾ ದ್ವಿತೀಯಾ ಕಥಿತಾ ತನ್ನೋ ರುದ್ರಃ ಪದಂ ತತಃ ॥ ೬೮ ॥

---

'ಈಶ್ವರಃ ಸರ್ವಭೂತಾನಾಂ' ಎಂಬುದು ಮಂಗಳಾ ಎಂಬ ಎರಡನೆಯ ಕಲೆಯು. 'ಬ್ರಹ್ಮಾಧಿಪತಿಃ ಬ್ರಹ್ಮಣೋಧಿಪತಿರ್ಬ್ರಹ್ಮಾ' ಎಂಬುದು ಇಷ್ಟದಾ ಎಂಬ ಮೂರನೆಯ ಕಲೆಯು.

'ಶಿವೋ ಮೇ ಅಸ್ತು' ಎಂಬುದು ಮರೀಚಿ ಎಂಬ ನಾಲ್ಕನೆಯ ಕಲೆಯು.

'ಸದಾಶಿವೋಂ' ಎಂಬುದು ಅಂಶುಮಾಲಿನೀ ಎಂಬ ಐದನೆಯ ಕಲೆಯು.

ಇವುಗಳಿಗೆ ಆದಿಯಲ್ಲಿ 'ಓಂ ನಮಃ' ಎಂಬುದನ್ನು ಸೇರಿಸಿ ನ್ಯಾಸ ಮಾಡಬೇಕು. ತರುವಾಯ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ದಿಕ್ಕುಗಳಲ್ಲಿನ ನಾಲ್ಕು ಮುಖಗಳಲ್ಲಿ ಕ್ರಮವಾಗಿ ಪುರುಷಕಲೆಗಳನ್ನು ನ್ಯಾಸಮಾಡಬೇಕು.

'ತತ್ಪುರುಷಾಯ ವಿದ್ಮಹೇ' ಎಂಬುದು ಶಾಂತಿಯೆಂಬ ಮೊದಲನೆಯ ಕಲೆಯು.

ಪ್ರತಿಷ್ಠಾ ಕಥಿತಾ ಪಶ್ಚಾತ್ತೃತೀಯಾ ಸ್ಯಾತ್ಪ್ರಚೋದಯಾತ್ ।
ನಿವೃತ್ತಿಸ್ತತ್ಪರಾ ಸರ್ವಾ ಪ್ರಣವಾದ್ಯಾ ನಮೋಽನ್ವಿತಾ ॥ ೬೯ ॥

ಹೃದಿ ಚಾಂಸದ್ವಯೇ ನಾಭಿಕುಕ್ಷೌ ಪೃಷ್ಠೇಽಥ ವಕ್ಷಸಿ ।
ಅಥೋರಸಿ ಕಲಾ ನ್ಯಸ್ಯೇದಷ್ಟೌ ಮಂತ್ರೀ ಯಥಾವಿಧಿ ॥ ೭೦ ॥

ಅಘೋರೇಭ್ಯಸ್ತಥಾ ಪೂರ್ವಮೀರಿತಾ ಪ್ರಥಮಾ ಕಲಾ ।
ಅಥ ಘೋರೇಭ್ಯ ಇತ್ಯಂತೇ ಮೋಹಾ ಸ್ಯಾತ್ತದನಂತರಂ ॥ ೭೧ ॥

---

'ಮಹಾದೇವಾಯ ಧೀಮಹಿ' ಎಂಬುದು ವಿದ್ಯೆಯೆಂಬ ಎರಡನೆಯ ಕಲೆಯು.

'ತನ್ನೋ ರುದ್ರಃ' ಎಂಬುದು ಪ್ರತಿಷ್ಠೆಯೆಂಬ ಮೂರನೆಯ ಕಲೆಯು.

'ಪ್ರಚೋದಯಾತ್' ಎಂಬ ಭಾಗವು ನಿವೃತ್ತಿ ಎಂಬ ನಾಲ್ಕನೆಯ ಕಲೆಯು.

ಎಲ್ಲಕ್ಕೂ ಆದಿಯಲ್ಲಿ 'ಓಂ ನಮಃ' ಎಂಬುದನ್ನು ಸೇರಿಸಿ ನ್ಯಾಸ ಮಾಡಬೇಕು.

೭೦-೭೪. ಅನಂತರ ಹೃದಯ, ಭುಜದ್ವಯ, ನಾಭಿ, ಕುಕ್ಷಿ, ಪೃಷ್ಠ, ವಕ್ಷಃಸ್ಥಲ, ಎದೆ ಎಂಬ ಎಂಟು ಸ್ಥಾನಗಳಲ್ಲಿ 'ಅಘೋರ' ಇತ್ಯಾದಿ ಮಂತ್ರದ ಎಂಟು ಕಲೆಗಳನ್ನು ಆದಿಯಲ್ಲಿ 'ಓಂ ನಮಃ' ಎಂಬುದರ ಸಹಿತವಾಗಿ ನ್ಯಾಸ ಮಾಡಬೇಕು. ಹೇಗೆಂದರೆ :—

'ಅಘೋರೇಭ್ಯಃ' ಎಂಬುದು ಮೊದಲನೆಯ ಕಲೆಯು.
'ಅಥ ಘೋರೇಭ್ಯಃ' ಎಂಬುದು ಮೋಹಾ ಎಂಬ ದ್ವಿತೀಯ ಕಲೆಯು.
'ಅಘೋರ' ಎಂಬುದು ಕ್ಷಮಾ ಎಂಬ ಮೂರನೆಯ ಕಲೆಯು.
'ಘೋರತರೇಭ್ಯಃ' ಎಂಬುದು ನಿದ್ರೆಯೆಂಬ ನಾಲ್ಕನೆಯ ಕಲೆಯು.

ಅಘೋರಾಂತೇ ಕ್ಷಮಾ ಪಶ್ಚಾತ್ತೃತೀಯಾ ಪರಿಕೀರ್ತಿತಾ ।
ಘೋರತರೇಭ್ಯೋ ನಿದ್ರಾ ಸ್ಯಾತ್ಸರ್ವತಃ ಸರ್ವತತ್ಪರಾ ॥ ೭೨ ॥

ವ್ಯಾಧಿಸ್ತು ಪಂಚಮೀ ಪ್ರೋಕ್ತಾ ಶರ್ವೇಭ್ಯಸ್ತದನಂತರಂ ।
ಮೃತ್ಯುರ್ನಿಗದಿತಾ ಷಷ್ಠೀ ನಮಸ್ತೇ ಅಸ್ತು ತತ್ಪರಂ ॥ ೭೩ ॥

ಕ್ಷುಧಾ ಸ್ಯಾತ್ಸಪ್ತಮೀ ರುದ್ರರೂಪೇಭ್ಯಃ ಕಥಿತಾ ತೃಷಾ ।
ಅಷ್ಟಮೀ ಕಥಿತಾ ಏತಾ ಧ್ರುವಾದ್ಯಾ ನಮಸಾನ್ವಿತಾಃ ॥ ೭೪ ॥

ಗುಹ್ಯಯುಗ್ಮೋರುಯುಗ್ಮೇಷು ಜಾನುಜಂಘಾಸ್ಫಿಜೋಃ ಪುನಃ ।
ಕಟ್ಯಾಂ ಪಾರ್ಶ್ವದ್ವಯೋ ವಾಮಕಲಾ ನ್ಯಸ್ಯೇತ್ತ್ರಯೋದಶ ॥ ೭೫ ॥

ಪ್ರಥಮಾ ವಾಮದೇವಾಯ ನಮೋಂತೇ ಸ್ಯಾದ್ರಜಾ ಕಲಾ ।
ಜ್ಯೇಷ್ಠಾಯ ನಮೋ ರಕ್ಷಾ ದ್ವಿತೀಯಾ ಪರಿಕೀರ್ತಿತಾ ॥ ೭೬ ॥

---

'ಸರ್ವತಃ ಸರ್ವ' ಎಂಬುದು ವ್ಯಾಧಿಯೆಂಬ ಐದನೆಯ ಕಲೆಯು.

'ಶರ್ವೇಭ್ಯಃ' ಎಂಬುದು ಮೃತ್ಯು ಎಂಬ ಆರನೆಯ ಕಲೆಯು.

'ನಮಸ್ತೇ ಅಸ್ತು' ಎಂಬುದು ಕ್ಷುಧಾ ಎಂಬ ಏಳನೆಯ ಕಲೆಯು.

'ರುದ್ರರೂಪೇಭ್ಯಃ' ಎಂಬುದು ತೃಷಾ ಎಂಬ ಎಂಟನೆಯ ಕಲೆಯು.

೭೫. ಶಿಶ್ನ, ಅಂಡಕೋಶ, ಎರಡು ತೊಡೆಗಳು, ಜಾನುದ್ವಯ, ಎರಡು ಜಂಘೆಗಳು, ಸ್ಫಿಕ್ಕುಗಳೆರಡು, ಸೊಂಟ, ಪಾರ್ಶ್ವದ್ವಯ ಎಂಬೀ ಹದಿಮೂರು ಸ್ಥಾನಗಳಲ್ಲಿ ವಾಮದೇವಮಂತ್ರದ ಹದಿಮೂರು ಕಲೆಗಳನ್ನು ನ್ಯಾಸಮಾಡಬೇಕು.

೭೬-೮೧. ಹೇಗೆಂದರೆ:—'ವಾಮದೇವಾಯ ನಮಃ' ಎಂಬುದು ರಜಾ ಎಂಬ ಪ್ರಥಮ ಕಲೆಯು.

ಸ್ಯಾದ್ರುದ್ರಾಯ ನಮಃ ಪಶ್ಚಾತ್ತೃತೀಯಾ ರತಿರೀರಿತಾ ।
ಕಾಲಾಯ ನಮ ಇತ್ಯಂತೇ ಪಾಲಿನೀ ಪರಿಕೀರ್ತಿತಾ ॥ ೭೭ ॥

ಕಲಕಾಮಾ ಪಂಚಮೀ ಸ್ಯಾತ್ತತೋ ವಿಕರಣಾಯ ಚ ।
ನಮಃ ಸಂಯಮನೀ ಷಷ್ಠೀ ಕಥಿತಾ ತದನಂತರಂ ॥ ೭೮ ॥

ಬಲಕ್ರಿಯಾ ಸಪ್ತಮೀಷ್ಟಾ ಕಲಾ ವಿಕರಣಾಯ ಚ ।
ನಮೋ ವೃದ್ಧಿಸ್ತ್ವಷ್ಟಮೀ ಸ್ಯಾದ್ಬಲಾಂತೇ ಚ ಸ್ಥಿರಾ ಕಲಾ ॥ ೭೯ ॥

ಪಶ್ಚಾತ್ಪ್ರಮಥನಾಯಾಂತೇ ನಮೋ ರಾತ್ರಿರುದೀರಿತಾ ।
ಸರ್ವಭೂತದಮನಾಯ ನಮೋಂತೇ ಭ್ರಾಮಣೀ ಕಲಾ ॥ ೮೦ ॥

---

'ಜ್ಯೇಷ್ಠಾಯ ನಮಃ' ಎಂಬುದು ರಕ್ಷಾ ಎಂಬ ದ್ವಿತೀಯ ಕಲೆಯು.

'ರುದ್ರಾಯ ನಮಃ' ಎಂಬುದು ರತಿಯೆಂಬ ಮೂರನೆಯ ಕಲೆಯು.

'ಕಾಲಾಯ ನಮಃ' ಎಂಬುದು ಪಾಲಿನೀ ಎಂಬ ನಾಲ್ಕನೆಯ ಕಲೆಯು.

'ಕಲ' ಎಂಬುದು ಕಾಮಾ ಎಂಬ ಐದನೆಯ ಕಲೆಯು.

'ವಿಕರಣಾಯ ನಮಃ' ಎಂಬುದು ಸಂಯಮಿನೀ ಎಂಬ ಆರನೆಯ ಕಲೆಯು.

'ಬಲ' ಎಂಬುದು ಕ್ರಿಯಾ ಎಂಬ ಏಳನೆಯ ಕಲೆಯು.

'ವಿಕರಣಾಯ ನಮೋ' ಎಂಬುದು ವೃದ್ಧಿಯೆಂಬ ಎಂಟನೆಯ ಕಲೆ.

'ಬಲಾಯ ನಮೋಬಲ' ಎಂಬುದು ಸ್ಥಿರಾ ಎಂಬ ಒಂಬತ್ತನೆಯ ಕಲೆ.

'ಪ್ರಮಥನಾಯ ನಮೋ' ಎಂಬುದು ರಾತ್ರಿಯೆಂಬ ಹತ್ತನೆಯ ಕಲೆ.

'ಸರ್ವಭೂತದಮನಾಯ ನಮಃ' ಎಂಬುದು ಭ್ರಾಮಣೀ ಎಂಬ ಹನ್ನೊಂದನೆಯ ಕಲೆ.

ಮನೋಂತೇ ಮೋಹಿನೀ ಪ್ರೋಕ್ತಾ ಮಂತ್ರಜ್ಞೈರ್ದ್ವಾದಶೀ ಕಲಾ ।
ಉನ್ಮನಾಯ ನಮಃ ಪಶ್ಚಾಜ್ಜ್ವರಾ ಪ್ರೋಕ್ತಾ ತ್ರಯೋದಶೀ ॥ ೮೧ ॥

ಪ್ರಣವಾದ್ಯಾಶ್ಚತುರ್ಥ್ಯಂತಾ ನಮೋಂತಾಸ್ತು ಪ್ರಕೀರ್ತಿತಾಃ ।
ಪಾದದೋಸ್ತಲನಾಸಾಸು ಮೂರ್ಧ್ನಿ ಬಾಹುಯುಗೇ ನ್ಯಸೇತ್ ॥

ಸದ್ಯೋಜಾತಭವಾಃ ಸಮ್ಯಗಷ್ಟೌ ಮಂತ್ರೀ ಕಲಾಃ ಕ್ರಮಾತ್ ।
ಸದ್ಯೋಜಾತಂ ಪ್ರಪದ್ಯಾಮಿ ಸಿದ್ಧಿಃ ಸ್ಯಾತ್ಪ್ರಥಮಾ ಕಲಾ ॥ ೮೨ ॥

ಸದ್ಯೋಜಾತಾಯ ವೈ ಭೂಯೋ ನಮಃ ಸ್ಯಾದ್ವೃದ್ಧಿರೀರಿತಾ ।
ಭವೇದ್ಯುತಿಸ್ತೃತೀಯಾ ಸ್ಯಾದಭವೇ ತದನಂತರಂ ॥ ೮೩ ॥

ಲಕ್ಷ್ಮೀ ಚತುರ್ಥೀ ಕಥಿತಾ ತತೋ ನಾತಿಭವೇಪದಂ ।
ಮೇಧಾ ಸ್ಯಾತ್ಪಂಚಮೀ ಪ್ರೋಕ್ತಾ ಕಲಾ ಭೂಯೋ ಭಜಸ್ವ ಮಾಂ ॥೮೪॥

---

'ಮನಃ' ಎಂಬುದು ಮೋಹಿನೀ ಎಂಬ ಹನ್ನೆರಡನೆಯ ಕಲೆ.

'ಉನ್ಮನಾಯ ನಮಃ' ಎಂಬುದು ಜ್ವರಾ ಎಂಬ ಹದಿಮೂರನೆಯ ಕಲೆಯು.

೮೨-೮೫. ಇವುಗಳಲ್ಲಿ ಚತುರ್ಥ್ಯಂತ ಶಬ್ದಗಳ ಹಿಂದೆ, 'ಓಂ' ಎಂಬುದನ್ನೂ, ಕೊನೆಯಲ್ಲಿ 'ನಮಃ' ಎಂಬುದನ್ನೂ ಸೇರಿಸಿ ನ್ಯಾಸ ಮಾಡಬೇಕು.

ಎರಡು ಅಂಗಾಲುಗಳು, ಎರಡು ಅಂಗೈಗಳು, ನಾಸಿಕೆ, ಶಿರಸ್ಸು, ಬಾಹುದ್ವಯ ಎಂಬೀ ಎಂಟು ಸ್ಥಾನಗಳಲ್ಲಿ ಮಂತ್ರಿಯು ಎಂಟು ಸದ್ಯೋಜಾತಕಲೆಗಳನ್ನು ಚೆನ್ನಾಗಿ ನ್ಯಾಸಮಾಡಬೇಕು. ಹೇಗೆಂದರೆ :—

'ಸದ್ಯೋಜಾತಂ ಪ್ರಪದ್ಯಾಮಿ' ಎಂಬುದು ಸಿದ್ಧಿಯೆಂಬ ಮೊದಲನೆಯ ಕಲೆ.

'ಸದ್ಯೋಜಾತಾಯ ವೈ ನಮಃ' ಎಂಬುದು ವೃದ್ಧಿ ಎಂಬ ಎರಡನೆಯ ಕಲೆ.

ಪ್ರಜ್ಞಾ ಸಮೀರಿತಾ ಪಶ್ಚೀ ಭವಾಂತೇ ಸ್ಯಾತ್ಪ್ರಭಾ ಕಲಾ ।
ಉದ್ಭವಾಯ ನಮಃ ಪಶ್ಚಾತ್ಸುಧಾ ಸ್ಯಾದಷ್ಟಮೀ ಕಲಾ || ೮೫ ||

ಪ್ರಣವಾದ್ಯಾಶ್ಚತುರ್ಥ್ಯಂತಾಃ ಕಲಾಃ ಸರ್ವಾ ನಮೋನ್ವಿತಾಃ ।
ಅಷ್ಟತ್ರಿಂಶತ್ಕಲಾಃ ಪ್ರೋಕ್ತಾಃ ಪಂಚ ಬ್ರಹ್ಮಪದಾಂತಿಕಾಃ || ೮೬ ||

ಇತಿ ವಿನ್ಯಸ್ತದೇಹೋಸೌ ಭವೇದ್ಗಂಗಾಧರಃ ಸ್ವಯಂ ।
ತತಃ ಸಮಾಹಿತೋ ಭೂತ್ವಾ ಧ್ಯಾಯೇದ್ದೇವಂ ಸದಾಶಿವಂ || ೮೭ ||

ಸಿತಪೀತಾಸಿತಶ್ವೇತಜಪಾಭೈಃ ಪಂಚಭಿರ್ಮುಖೈಃ ।
ತ್ರ್ಯಕ್ಷೈರ್ಯುತಂ ಗ್ಲೌಮುಕುಟಂ ಕೋಟಿಪೂರ್ಣೇಂದುಸಪ್ರಭಂ || ೮೮ ||

---

'ಭವೇ' ಎಂಬುದು ದ್ಯುತಿಯೆಂಬ ಮೂರನೆಯ ಕಲೆ.

'ಅಭವೇ' ಎಂಬುದು ಲಕ್ಷ್ಮೀ ಎಂಬ ನಾಲ್ಕನೆಯ ಕಲೆ.

'ನಾತಿಭವೇ' ಎಂಬುದು ಮೇಧಾ ಎಂಬ ಐದನೆಯ ಕಲೆ.

'ಭಜಸ್ವ ಮಾಂ' ಎಂಬುದು ಪ್ರಜ್ಞಾ ಎಂಬ ಆರನೆಯ ಕಲೆ.

'ಭವ' ಎಂಬುದು ಪ್ರಭಾ ಎಂಬ ಏಳನೆಯ ಕಲೆ.

'ಉದ್ಭವಾಯ ನಮಃ' ಎಂಬುದು ಸುಧಾ ಎಂಬ ಎಂಟನೆಯ ಕಲೆಯು.

೮೬. ಈ ಕಲೆಗಳೆಲ್ಲಕ್ಕೂ ಆದಿಯಲ್ಲಿ 'ಓಂ' ಎಂಬುದನ್ನೂ 'ನಮಃ' ಎಂಬುದನ್ನೂ ಅನಂತರದಲ್ಲಿಯೂ ಸೇರಿಸಬೇಕು. ಈರೀತಿಯಾಗಿ ಐದು ಬ್ರಹ್ಮಮುಖ್ಯಗಳಲ್ಲಿನ ಪದಾಂತ್ಯವಾದ ಮೂವತ್ತೆಂಟು ಕಲೆಗಳು ಉಕ್ತವಾದುವು.

೮೭. ದೇಹದಲ್ಲಿ ಈರೀತಿಯಾಗಿ ನ್ಯಾಸಮಾಡಿದವನು ಸಾಕ್ಷಾದ್ಗಂಗಾಧರನಾಗುವನು. ಆನಂತರ ಸಮಾಧಾನಮನಸ್ಸಿನಿಂದ ಈರೀತಿಯಾಗಿ ಸದಾಶಿವನನ್ನು ಧ್ಯಾನಿಸಬೇಕು.

೮೮-೮೯. ಧ್ಯಾನವಿಧಾನ:—ಬಿಳುಪು, ಹಳದಿ, ನೀಲ, ಬಿಳುಪು ಮತ್ತು ಜಪಾಕುಸುಮ ಬಣ್ಣ ಇವುಗಳಿಂದ ಪ್ರಕಾಶಮಾನಗಳಾದ ಐದು ಮುಖಗಳು

ಶೂಲಂ ಟಂಕಂ ಕೃಪಾಣಂ ಚ ವಜ್ರಾಗ್ನ್ಯಹಿಪತೀನ್ಕರೈಃ |
ದಧಾನಂ ಭೂಷಣೋದ್ದೀಪ್ತಂ ಘಂಟಾಪಾಶವರಾಭಯಾನ್ || ೮೯ ||

ಏವಂ ಧ್ಯಾತ್ವಾ ಜಪೇನ್ಮಂತ್ರಂ ಪಂಚಲಕ್ಷಂ ಮಧುಪ್ಲುತೈಃ |
ಪ್ರಸೂನೈಃ ಕರವೀರೋತ್ಥೈರ್ಜುಹುಯಾತ್ತದ್ದಶಾಂಶತಃ || ೯೦ ||

ಪೂರ್ವೋದಿತೇ ಯಜೇತ್ಪೀಠೇ ಮೂರ್ತಿಂ ಮೂಲೇನ ಕಲ್ಪಯೇತ್ |
ಆವಾಹ್ಯ ಪೂಜಯೇತ್ತಸ್ಯಾಂ ಮೂರ್ತ್ಯಾದ್ಯಾವರಣೈಃ ಸಹ || ೯೧ ||

ಶಕ್ತಿಂ ಡಮರುಕಾಭೀತಿವರಾನ್ ಸಂದಧತಂ ಕರೈಃ |
ಈಶಾನಂ ತ್ರೀಕ್ಷಣಂ ಶುಭ್ರಮೈಶಾನ್ಯಾಂ ದಿಶಿ ಪೂಜಯೇತ್ || ೯೨ ||

---

ಮತ್ತು ಮೂರು ಕಣ್ಣುಗಳು ಇವುಗಳಿಂದ ಕೂಡಿದ, ಚಂದ್ರಕಿರೀಟಿಯಾದ, ಕೋಟಿಪೂರ್ಣಚಂದ್ರರಿಗೆ ಸಮಾನವಾದ ಕಾಂತಿಯುಳ್ಳ, ಶೂಲ, ಟಂಕ, ಖಡ್ಗ, ವಜ್ರ, ಅಗ್ನಿ, ಸರ್ಪ, ಘಂಟೆ, ಪಾಶವರ, ಅಭಯಮುದ್ರೆಗಳನ್ನು ಕೈಗಳಲ್ಲಿ ಧರಿಸಿರುವ, ಆಭರಣಗಳಿಂದ ಪ್ರಕಾಶಮಾನನಾದ ಈಶ್ವರನನ್ನು ಧ್ಯಾನಿಸಬೇಕು.

೯೦. ಈರೀತಿ ಧ್ಯಾನಿಸಿ ಐದುಲಕ್ಷ ಮಂತ್ರ ಜಪಮಾಡಬೇಕು. ಅನಂತರ ಜೇನುತುಪ್ಪದಲ್ಲಿ ನೆನೆಸಿದ ಕರವೀರಪುಷ್ಪಗಳಿಂದ ಐವತ್ತುಸಾವಿರ ಹೋಮ ಮಾಡಬೇಕು.

೯೧. ಪೂರ್ವೋಕ್ತಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ, ಅದರಲ್ಲಿ ಸದಾಶಿವನನ್ನು ಆವಾಹನೆಮಾಡಿ, ಮೂರ್ತ್ಯಾವರಣ, ಅಂಗಾವರಣ ಮುಂತಾದುವುಗಳಿಂದ ಸಹಿತವಾಗಿ ಪೂಜಿಸಬೇಕು.

೯೨. ಈಶಾನ್ಯದಿಕ್ಕಿನಲ್ಲಿ ಶಕ್ತಿ, ಬುಡಬುಡಿಕೆ, ಅಭಯ, ವರಗಳನ್ನು ಕೈಗಳಲ್ಲಿ ಧರಿಸಿರುವ, ಮೂರು ಕಣ್ಣುಳ್ಳ, ನಿರ್ಮಲಸ್ವರೂಪಿಯಾದ ಈಶಾನನನ್ನು ಪೂಜಿಸಬೇಕು.

ರಶ್ವೇಣವರಾಭೀತೀರ್ದಧಾನಂ ವಿದ್ಯುದುಜ್ಜ್ವಲಂ ।
ತುರ್ಮುಖಂ ತತ್ಪುರುಷಂ ತ್ರಿನೇತ್ರಂ ಪೂರ್ವತೋಽರ್ಚಯೇತ್ ॥ ೯೩ ॥

ಕ್ಷಸ್ರಜಂ ವೇದಪಾಶೌ ಖುಷಿಂ ಡಮರುಕಂ ತತಃ ।
ಟ್ವಾಂಗಂ ನಿಶಿತಂ ಶೂಲಂ ಕಪಾಲಂ ಬಿಭ್ರತಂ ಕರೈಃ ॥ ೯೪ ॥

ಂಜನಾಭಂ ಚತುರ್ವಕ್ತ್ರಂ ಭೀಮದಂತಂ ಭಯಾವಹಂ ।
ಘೋರಂ ತ್ರೀಕ್ಷಣಂ ಯಾಮ್ಯೇ ಪೂಜಯೇನ್ಮಂತ್ರವಿತ್ತಮಃ ॥ ೯೫ ॥

ಂಕುಮಾಭಚತುರ್ವಕ್ತ್ರಂ ವಾಮದೇವಂ ತ್ರಿಲೋಚನಂ ।
ರಿಣಾಕ್ಷಗುಣಾಭೀತಿವರಹಸ್ತಂ ಚತುರ್ಮುಖಂ ॥ ೯೬ ॥

ಲೇಂದುಶೇಖರೋಲ್ಲಾಸಿಮುಕುಟಂ ಪಶ್ಚಿಮೇ ಯಜೇತ್ ।
ಪೂರ್ಣೇಂದುನಿಭಂ ಸೌಮ್ಯಂ ಸದ್ಯೋಜಾತಂ ತ್ರಿಲೋಚನಂ ॥ ೯೭ ॥

---

೯೩. ಪೂರ್ವದಿಕ್ಕಿನಲ್ಲಿ ಪರಶು, ಮೃಗ, ವರ, ಅಭಯಗಳನ್ನು ಧರಿಸಿರುವ, ಮಿಂಚಿನಂತೆ ಹೊಳೆಯುತ್ತಿರುವ, ನಾಲ್ಕು ಮುಖಗಳು ಮತ್ತು ಮೂರು ಕಣ್ಣುಗಳುಳ್ಳ ತತ್ಪುರುಷನನ್ನು ಪೂಜಿಸಬೇಕು.

೯೪-೯೫. ಮಂತ್ರಜ್ಞನಾದವನು ದಕ್ಷಿಣದಿಕ್ಕಿನಲ್ಲಿ ಅಕ್ಷಮಾಲೆ, ವೇದ, ಪಾಶ, ಖುಷಿ, ಡಮರುಕ, ಖಡ್ವಾಂಗ, ನಿಶಿತ, ಶೂಲ, ಕಪಾಲ ಇವುಗಳನ್ನು ಕೈಗಳಲ್ಲಿ ಧರಿಸಿರುವ, ಅಂಜನದಂತೆ ಪ್ರಕಾಶಮಾನನಾದ, ನಾಲ್ಕು ಮುಖಗಳುಳ್ಳ, ಭಯಂಕರ ದಂತಗಳುಳ್ಳ, ಭಯಜನಕವಾದ ಮೂರು ಕಣ್ಣುಗಳುಳ್ಳ ಅಘೋರಮೂರ್ತಿಯನ್ನು ಪೂಜಿಸಬೇಕು.

೯೬-೯೮. ಪಶ್ಚಿಮದಿಕ್ಕಿನಲ್ಲಿ ಕುಂಕುಮದಂತೆ ಹೊಳೆಯುತ್ತಿರುವ ನಾಲ್ಕು ಮುಖಗಳು ಮತ್ತು ಮೂರು ಕಣ್ಣುಗಳೂ ಉಳ್ಳ, ಮೃಗ ಪಾಶ ಅಭಯ

ವರಾಭಯಾಕ್ಷವಲಯಕುಠಾರಾನ್ದಧತಂ ಕರೈಃ ।
ವಿಲಾಸಿನಂ ಸ್ಮೇರವಕ್ತ್ರಂ ಸೌಮ್ಯೇ ಸಮ್ಯಕ್ಸಮರ್ಚಯೇತ್ ॥ ೯೮ ॥

ಕೋಣೇಷ್ವರ್ಚೇನ್ನಿವೃತ್ತ್ಯಾದ್ಯಾಸ್ತೇಜೋರೂಪಾಃ ಕಲಾಃ ಕ್ರಮಾತ್ ।
ವಿಘ್ನೇಶ್ವರಾನನಂತಾದ್ಯಾನ್ಪತ್ರೇಷು ಪರಿತೋ ಯಜೇತ್ ॥ ೯೯ ॥

ಉಮಾದಿಕಾಸ್ತತೋ ಬಾಹ್ಯೇ ಶಕ್ರಾದ್ಯಾನಾಯುಧೈಃ ಸಹ ।
ಇತಿ ಸಂಪೂಜ್ಯ ದೇವೇಶಂ ಭಕ್ತ್ಯಾ ಪರಮಯಾ ಯುತಃ ॥ ೧೦೦ ॥

ಪ್ರೀಣಯೇನ್ನೃತ್ಯಗೀತಾದ್ಯೈಃ ಸ್ತೋತ್ರೈರ್ಮಂತ್ರೀ ಮನೋಹರೈಃ ।
ಶಾರೋ ಮಾಯಾ ವಿಯದ್ಬಿಂದುಮನುಸ್ವರಸಮನ್ವಿತಃ ॥ ೧೦೧ ॥

---

ವರಗಳನ್ನು ಕೈಗಳಲ್ಲಿ ಹಿಡಿದಿರುವ, ಬಾಲೇಂದು ಶೇಖರದಿಂದ ಪ್ರಕಾಶಮಾನವಾದ ಕಿರೀಟವುಳ್ಳ, ಚತುರ್ಮುಖನಾದ ವಾಮದೇವನನ್ನು ಪೂಜಿಸಬೇಕು.

ಉತ್ತರದಿಕ್ಕಿನಲ್ಲಿ ಕರ್ಪೂರೇಂದುಸದೃಶನು, ಶಾಂತಮೂರ್ತಿಯು, ತ್ರಿನಯನನು, ವರ, ಅಭಯ, ಅಕ್ಷವಲಯ, ಪರಶುಗಳನ್ನು ಕೈಗಳಲ್ಲಿ ಇಟ್ಟುಕೊಂಡಿರುವವನು, ವಿಲಾಸಯುಕ್ತನು, ಸ್ಮಿತಮುಖನೂ ಆದ ಸದ್ಯೋಜಾತನನ್ನು ಚೆನ್ನಾಗಿ ಪೂಜಿಸಬೇಕು.

೯೯–೧೦೨. ಆಗ್ನೇಯಾದಿ ಕೋಣಗಳಲ್ಲಿ ನಿವೃತ್ತಿ ಮುಂತಾದ ತೇಜೋರೂಪವಾದ ಕಲೆಗಳನ್ನು ಕ್ರಮವಾಗಿ ಪೂಜಿಸಬೇಕು.

ಪತ್ರಗಳಲ್ಲಿ ಸುತ್ತಲೂ ವಿಘ್ನೇಶ್ವರಾದಿಗಳನ್ನೂ, ಅನಂತಾದಿಗಳನ್ನೂ, ಉಮಾದಿಗಳನ್ನೂ ಸಹ ಪೂಜಿಸಬೇಕು. ಅನಂತರ ಹೊರಗೆ ಅವರವರ ಆಯುಧಸಹಿತವಾಗಿ ಇಂದ್ರಾದಿ ಲೋಕಪಾಲಕರನ್ನು ಪೂಜಿಸಬೇಕು.

ಈ ರೀತಿಯಾಗಿ ಉತ್ಕೃಷ್ಟ ಭಕ್ತಿಯಿಂದ ದೇವೇಶನನ್ನು ಪೂಜಿಸಿ, ಮಂತ್ರಿಯು ನರ್ತನ, ಗಾನ ಮುಂತಾದುವುಗಳಿಂದಲೂ, ಮನೋಹರಸ್ತೋತ್ರಗಳಿಂದಲೂ ಈಶ್ವರನನ್ನು ಸಂತೋಷಪಡಿಸಬೇಕು.

ಪಂಚಾಕ್ಷರಸಮಾಯುಕ್ತೋ ವಸುವರ್ಣೋ ಮನುರ್ಮತಃ ।
ಪಂಚಾಕ್ಷರೋಕ್ತವತ್ಕುರ್ಯಾದಂಗನ್ಯಾಸಾದಿಕಂ ಬುಧಃ ॥ ೧೦೨ ॥

ಸಿಂಧೂರಾಭಂ ಲಸದ್ರತ್ನಮುಕುಟಂ ಚಂದ್ರಮೌಲಿನಂ ।
ದಿವ್ಯಭೂಷಾಂಗರಾಗಂ ಚ ನಾಗಯಜ್ಞೋಪವೀತಿನಂ ॥ ೧೦೩ ॥

ವಾಮೋರುಸ್ಥಪ್ರಿಯೋರೋಜನ್ಯಸ್ತಹಸ್ತಂ ಚ ಬಿಭ್ರತಂ ।
ವೇದಟಂಕೇಷ್ಟಮಭಯಂ ಧ್ಯಾಯೇತ್ಸರ್ವೇಶ್ವರಂ ಶಿವಂ ॥ ೧೦೪ ॥

ಅಷ್ಟಲಕ್ಷಂ ಜಪೇನ್ಮಂತ್ರಂ ತತ್ಸಹಸ್ರಂ ಘೃತಾನ್ವಿತೈಃ ।
ಪಾಯಸೈರ್ಜುಹುಯಾತ್ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ॥ ೧೦೫ ॥

---

## ಅಷ್ಟಾಕ್ಷರಶಿವಮಂತ್ರ

(ತಾರ = ಓಂ. ಮಾಯಾ = ಹ್ರೀಂ, ಬಿಂದುಮನುಸ್ವರಸಮನ್ವಿತ ವಿಯತ್= ಹೌಂ, ಪಂಚಾಕ್ಷರ= ನಮಃ ಶಿವಾಯ)

'ಓಂ ಹ್ರೀಂ ಹೌಂ ನಮಃ ಶಿವಾಯ' ಎಂಬುದು ಅಷ್ಟಾಕ್ಷರಮಂತ್ರವು. ಜ್ಞಾನಿಯು ಪಂಚಾಕ್ಷರಮಂತ್ರಕ್ಕೆ ಹೇಳಿರುವ ಪ್ರಕಾರ ಅಂಗನ್ಯಾಸಾದಿಗಳನ್ನು ಮಾಡಬೇಕು.

೧೦೩-೧೦೪. ಧ್ಯಾನವಿಧಾನ :—ಸಿಂದೂರದಂತೆ ಹೊಳೆಯುತ್ತಿರುವ, ವಿರಾಜಮಾನವಾದ ರತ್ನಕಿರೀಟವನ್ನು ಧರಿಸಿರುವ, ಶಿರಸ್ಸಿನಲ್ಲಿ ಚಂದ್ರನನ್ನು ಧರಿಸಿರುವ, ಮನೋಹರಾಭರಣಗಳಿಂದ ಅಂಗರಾಗವುಳ್ಳ, ಸರ್ಪವನ್ನು ಯಜ್ಞೋಪವೀತವನ್ನಾಗಿ ಮಾಡಿಕೊಂಡಿರುವ, ಎಡತೊಡೆಯ ಮೇಲೆ ಕುಳಿತಿರುವ ಪ್ರಿಯೆಯ ಸ್ತನಗಳಮೇಲೆ ಕೈಯನ್ನಿಟ್ಟುಕೊಂಡಿರುವ, ವೇದ ಟಂಕ ವರ ಅಭಯಗಳನ್ನು ಕೈಗಳಲ್ಲಿ ಧರಿಸಿರುವ, ಸರ್ವೇಶ್ವರನಾದ ಶಿವನನ್ನು ಧ್ಯಾನಿಸಬೇಕು.

೧೦೫-೧೦೬. ಈ ಮಂತ್ರವನ್ನು ಎಂಟುಲಕ್ಷ ಜಪಿಸಿ, ಆಜ್ಯ ಸಹಿತ ಪಾಯಸದಿಂದ ಎಂಟುಸಾವಿರ ಹೋಮಮಾಡಬೇಕು. ಅನಂತರ ಶೈವಪೀಠದಲ್ಲಿ

**ಅಂಗೈರಾವರಣಂ ಪೂರ್ವಮನಂತಾದ್ಯೈರನಂತರಂ ।**
**ಉಮಾದಿಭಿಃ ಸಮುದ್ದಿಷ್ಟಂ ತೃತೀಯಂ ಲೋಕನಾಯಕೈಃ ॥ ೧೦೬ ॥**

**ಚತುರ್ಥಂ ಪಂಚಮಂ ತೇಷಾಮಾಯುಧೈಃ ಪರಿಕೀರ್ತಿತಂ ।**
**ಏವಂ ಪ್ರತಿದಿನಂ ದೇವಂ ಪೂಜಯೇತ್ಸಾಧಕೋತ್ತಮಃ ॥ ೧೦೭ ॥**

**ಪುತ್ರಪೌತ್ರಾದಿಗಾಂ ಲಕ್ಷ್ಮೀಂ ಸಂಪ್ರಾಪ್ಯ ಹ್ಯತ್ರ ಮೋದತೇ ।**
**ತಾರಃ ಸ್ಥಿರಾ ಸಕರ್ಣೇಂದುರ್ಭೃಗುಃ ಸರ್ಗಸಮನ್ವಿತಃ ॥ ೧೦೮ ॥**

**ತ್ರ್ಯಕ್ಷರಾತ್ಮಾ ನಿಗದಿತೋ ಮಂತ್ರೋ ಮೃತ್ಯುಂಜಯಾತ್ಮಕಃ ।**
**ಋಷಿಃ ಕಹೋಲೋ ದೇವ್ಯಾದಿಗಾಯತ್ರೀಛಂದ ಈರಿತಂ ॥ ೧೦೯ ॥**

---

ಮೂರ್ತಿಯನ್ನು ಮೂಲಮಂತ್ರದಿಂದ ಸ್ಥಾಪಿಸಿ, ಆದಿಯಲ್ಲಿ ಅಂಗಾವರಣ, ಅನಂತರ ಅನಂತಾದಿಗಳು, ತರುವಾಯ ಉಮಾದಿಗಳೆಂಬ ಮೂರನೆಯ ಆವರಣ, ಬಳಿಕ ಲೋಕನಾಯಕರೆಂಬ ಚತುರ್ಥಾವರಣ ಮತ್ತು ಅವರ ಆಯುಧಗಳಿಂದ ಪಂಚಮಾವರಣ ಇವುಗಳ ಸಹಿತವಾಗಿ ಪ್ರತಿದಿನವೂ ದೇವನನ್ನು ಸಾಧಕವರ್ಯನು ಪೂಜಿಸಬೇಕು.

೧೦೮-೧೧೦. ಹೀಗೆ ಆರಾಧಿಸುವವನು ಪುತ್ರ ಪೌತ್ರಾದಿ ವಂಶಪರಂಪರೆಯಾಗಿ ಐಶ್ವರ್ಯವನ್ನು ಪಡೆದು ಇಲ್ಲಿ ಭೋಗಿಸುವನು.

## ಮೃತ್ಯುಂಜಯಮಂತ್ರ

(ತಾರ= ಓಂ, ಸಕರ್ಣೇಂದುಃ ಸ್ಥಿರಾ= ಜೂಂ, ಸರ್ಗಸಮನ್ವಿತೋ ಭೃಗುಃ= ಸಃ)

'ಓಂ ಜೂಂ ಸಃ' ಎಂಬುದು ತ್ರ್ಯಕ್ಷರ ಮೃತ್ಯುಂಜಯಮಂತ್ರ. ಈ ಮಂತ್ರಕ್ಕೆ ಕಹೋಲನು ಋಷಿ, ದೇವ್ಯಾದಿಯಾದ ಗಾಯತ್ರಿಯು ಛಂದಸ್ಸು.

ಮೃತ್ಯುಂಜಯೋ ಮಹಾದೇವೋ ದೇವತಾಸ್ಯ ಸಮೀರಿತಃ ।
ಭೃಗುಣಾ ದೀರ್ಘಯುಕ್ತೇನ ಷಡಂಗಾನಿ ಸಮಾಚರೇತ್ ॥ ೧೧೦ ॥

ಚಂದ್ರಾರ್ಕಹುತಭುಙ್ನೇತ್ರಂ ಸ್ಮಿತಾಸ್ಯಂ ಯುಗ್ಮಪದ್ಮಗಂ ।
ಮುದ್ರಾಪಾಶೈಣಾಕ್ಷಸೂತ್ರಲಸತ್ಪಾಣಿಂ ಶಶಿಪ್ರಭಂ ॥ ೧೧೧ ॥

ಫಾಲೇಂದುವಿಗಲತ್ಪೀಯೂಷಪ್ಲುತಾಂಗಮಲಂಕೃತಂ ।
ಹಾರಾದ್ಯೈರ್ನಿಜಕಾಂತ್ಯಾ ತು ಧ್ಯಾಯೇದ್ವಿಶ್ವವಿಮೋಹನಂ ॥ ೧೧೨ ॥

ಗುಣಲಕ್ಷಂ ಜಪೇನ್ಮಂತ್ರಂ ತದ್ದಶಾಂಶಂ ಹುನೇತ್ಸುಧೀಃ ।
ಅಮೃತಾಶಕಲೈಃ ಶುದ್ಧದುಗ್ಧಾಜ್ಯಸಮಭಿಪ್ಲುತೈಃ ॥ ೧೧೩ ॥

---

ಮೃತ್ಯುಂಜಯಮಹಾದೇವನು ದೇವತೆಯು. 'ಆ, ಈ' ಮುಂತಾದ ದೀರ್ಘ ಸಹಿತ ಸಕಾರದಿಂದ ಷಡಂಗನ್ಯಾಸವನ್ನಾಚರಿಸಬೇಕು.

೧೧೧-೧೧೨. ಧ್ಯಾನವಿಧಾನ :—ಚಂದ್ರಸೂರ್ಯಾಗ್ನಿಗಳೆಂಬ ನೇತ್ರತ್ರಯವುಳ್ಳ, ಮಂದಹಾಸಯುಕ್ತಮುಖವುಳ್ಳ, ಪದ್ಮದ್ವಯಾಂತಸ್ಥಿತನಾದ, ಮುದ್ರೆ ಪಾಶ ಮೃಗ ಅಕ್ಷಮಾಲೆಗಳಿಂದ ಶೋಭಿಸುತ್ತಿರುವ ಹಸ್ತಗಳುಳ್ಳ, ಚಂದ್ರನಂತೆ ಪ್ರಕಾಶಮಾನನಾದ, ಲಲಾಟದಲ್ಲಿರುವ ಚಂದ್ರನಿಂದ ಸುರಿಯುತ್ತಿರುವ ಅಮೃತದಿಂದ ನೆನೆಸಲ್ಪಟ್ಟ ಅವಯವಗಳುಳ್ಳ, ಹಾರ ಮುಂತಾದುವುಗಳಿಂದ ಅಲಂಕೃತನಾದ, ತನ್ನ ಕಾಂತಿಯಿಂದ ಜಗನ್ಮೋಹಕನಾಗಿರುವ ಮೃತ್ಯುಂಜಯನನ್ನು ಧ್ಯಾನಿಸಬೇಕು.

೧೧೩. ಈ ಮಂತ್ರವನ್ನು ಮೂರುಲಕ್ಷ ಜಪಿಸಿ, ನಿರ್ಮಲ ಕ್ಷೀರಾಜ್ಯ ಮಿಶ್ರಿತವಾದ ಅಮೃತಬಳ್ಳಿಯ ತುಂಡುಗಳಿಂದ ಮೂವತ್ತುಸಾವಿರ ಹೋಮ ಮಾಡಬೇಕು.

ಶೈವೇ ಸಂಪೂಜಯೇತ್ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ।
ಅಂಗಾವರಣಮಾರಾಧ್ಯ ಪಶ್ಚಾಲ್ಲೋಕೇಶ್ವರಾನ್ಯಜೇತ್ ॥ ೧೧೪ ॥

ತದಸ್ತ್ರಾಣಿ ತತೋ ಬಾಹ್ಯೇ ಪೂಜಯೇತ್ಸಾಧಕೋತ್ತಮಃ ।
ಜಪಪೂಜಾದಿಭಿಃ ಸಿದ್ಧೇ ಮಂತ್ರೇಽಸ್ಮಿನ್ಮುನಿಸತ್ತಮ ॥ ೧೧೫ ॥

ಕುರ್ಯಾತ್ಪ್ರಯೋಗಾನ್ಕಲ್ಪೋಕ್ತಾನಭೀಷ್ಟಫಲಸಿದ್ಧಯೇ ।
ದುಗ್ಧಸಿಕ್ತೈಃ ಸುಧಾಖಂಡೈರ್ಹುತ್ವಾ ಪ್ರತ್ಯಹಮಾದರಾತ್ ॥ ೧೧೬ ॥

ಸಹಸ್ರಂ ಮಾಸಪರ್ಯಂತಂ ಲಭೇದಾಯುರ್ಧನಂ ಸುತಾನ್ ।
ಸುಧಾವಟೌ ತಿಲೋ ದೂರ್ವಾ ಪಯಃ ಸರ್ಪಿಃ ಪಯೋ ಹವಿಃ ॥ ೧೧೭ ॥

---

೧೧೪. ಬಳಿಕ ಶೈವಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ, ಅಂಗಾವರಣವನ್ನು ಆರಾಧಿಸಿ, ಅನಂತರ ಇಂದ್ರಾದಿ ಲೋಕಪಾಲಕರನ್ನು ಪೂಜಿಸಬೇಕು.

೧೧೫-೧೧೬. ಅನಂತರ ಬಾಹ್ಯದಲ್ಲಿ ಲೋಕಪಾಲಕರ ಆಯುಧಗಳನ್ನು ಪೂಜಿಸಬೇಕು.

ಮುನಿಶ್ರೇಷ್ಠಾ ! ಜಪಪೂಜಾದಿಗಳಿಂದ ಈ ಮಂತ್ರಸಿದ್ಧಿಯನ್ನು ಪಡೆದ ಮೇಲೆ ಸಾಧಕವರ್ಯನು ಇಷ್ಟಫಲಸಿದ್ಧಿಗಾಗಿ ಕಲ್ಪೋಕ್ತಪ್ರಯೋಗಗಳನ್ನು ಆಚರಿಸಬೇಕು.

ಪ್ರತಿದಿನವೂ ಭಕ್ತಿಪೂರ್ವಕವಾಗಿ ಹಾಲಿನಲ್ಲಿ ನೆನೆಸಿದ ಅಮೃತಬಳ್ಳಿಯ ಶಕಲಗಳಿಂದ ಒಂದುಸಾವಿರ ಹೋಮದಂತೆ ಒಂದುತಿಂಗಳು ಮಾಡುವವನು ಆಯುಸ್ಸು, ಧನ, ಮಕ್ಕಳುಗಳನ್ನು ಪಡೆಯುವನು.

ಸಪ್ತದ್ರವ್ಯಾಣಿ ವಾರೇಷು ಕ್ರಮಾದ್ದಶಶತಂ ಹುನೇತ್ ।
ಸಪ್ತಾಧಿಕಾನ್ ದ್ವಿಜಾನ್ನಿತ್ಯಂ ಭೋಜಯೇನ್ಮಧುರಾನ್ವಿತಂ ॥ ೧೧೮ ॥

ಋತ್ವಿಗ್ಭ್ಯೋ ದಕ್ಷಿಣಾಂ ದದ್ಯಾದರುಣಾಂ ಗಾಂ ಪಯಸ್ವಿನೀಂ ।
ಗುರುಂ ಸಂಪ್ರೀಣಯೇತ್ಪಶ್ಚಾದ್ಧನಾದ್ಯೈರ್ದೇವತಾಧಿಯಾ ॥ ೧೧೯ ॥

ಅನೇನ ವಿಧಿನಾ ಸಾಧ್ಯಃ ಕೃತ್ಯಾದ್ರೋಹಜ್ವರಾದಿಭಿಃ ।
ವಿಮುಕ್ತಃ ಸುಚಿರಂ ಜೀವೇಚ್ಛರದಾಂ ಶತಮಂಜಸಾ ॥ ೧೨೦ ॥

ಅಭಿಚಾರೇ ಜ್ವರೇ ಸ್ತಂಭಘೋರೋನ್ಮಾದೇ ಶಿರೋಗದೇ ।
ಅಸಾಧ್ಯರೋಗೇ ಕ್ಷ್ವೇಡಾರ್ತೌ ಮೋಹೇ ದಾಹೇ ಮಹಾಭಯೇ॥ ೧೨೧ ॥

---

ಅಮೃತಬಳ್ಳಿ, ಆಲದಸಮಿತ್ತು, ಎಳ್ಳು, ಗರಿಕೆ, ಹಾಲು, ತುಪ್ಪ, ಪಾಯಸ ಎಂಬ ಏಳು ಪದಾರ್ಥಗಳನ್ನು ಕ್ರಮವಾಗಿ ಏಳು ವಾರಗಳಲ್ಲಿ ಪ್ರತಿ ದಿನವೂ ಒಂದುಸಾವಿರದಂತೆ ಹೋಮಮಾಡಬೇಕು. ಪ್ರತಿದಿನವೂ ಏಳಕ್ಕಿಂತ ಹೆಚ್ಚಾಗಿ ಬ್ರಾಹ್ಮಣರಿಗೆ ಮಧುರಪದಾರ್ಥಸಹಿತ ಭೋಜನವನ್ನು ಮಾಡಿಸಬೇಕು.

೧೧೯. ಋತ್ವಿಕ್ಕುಗಳಿಗೆ ದಕ್ಷಿಣೆಯನ್ನೂ, ಹಾಲುಕರೆಯುವ ಅರುಣವರ್ಣದ ಗೋವನ್ನೂ ಸಹ ಕೊಡಬೇಕು. ಅನಂತರ ದೇವತಾಭಾವನೆಯಿಂದ ಗುರುಗಳಿಗೆ ಧನಾದಿಗಳನ್ನು ಸಮರ್ಪಿಸಿ ಸಂತೋಷಪಡಿಸಬೇಕು.

೧೨೦. ಈ ವಿಧಾನವನ್ನಾಚರಿಸುವುದರಿಂದ ಮಾಟ, ದ್ರೋಹ, ಜ್ವರ, ಮುಂತಾದುವುಗಳಿಂದ ಮುಕ್ತನಾಗಿ ಬಹುಕಾಲ ಎಂದರೆ ನೂರುವರ್ಷಗಳವರೆಗೆ ಚೆನ್ನಾಗಿ ಬದುಕುವನು..

೧೨೧-೧೨೨. ಅಭಿಚಾರ (ಮಾಟ) ಜ್ವರ, ಸ್ತಂಭನ, ಭಯಂಕರಹುಚ್ಚು, ಶಿರೋರೋಗ, ಅಸಾಧ್ಯವ್ಯಾಧಿ, ವಿಷಬಾಧೆ, ಮೂರ್ಛೆ, ಬೆಂಕಿ, ಮಹಾಭಯ ಇವುಗಳು ಸಂಭವಿಸಿದಾಗ ಈ ಹೋಮವು ಸರ್ವಾಭಯಪ್ರದಾಯಕವಾಗಿ ಸುಖ

ಹೋಮೋಯಂ ಶಾಂತಿದಃ ಪ್ರೋಕ್ತಃ ಸರ್ವಾಭಯಪ್ರದಾಯಕಃ ।
ಪ್ರವ್ಯೈರೇತೈಃ ಪ್ರಜುಹಯಾತ್ತ್ರಿಜನ್ಮಸು ಯಥಾವಿಧಿ ॥ ೧೨೨ ॥

ಭೋಜಯೇನ್ಮಧುರೈರ್ಭೋಜ್ಯೈರ್ಬ್ರಾಹ್ಮಣಾನ್ವೇದಪಾರಗಾನ್ ।
ದೀರ್ಘಮಾಯುರವಾಪ್ನೋತಿ ವಾಂಛಿತಾಂ ವಿಂದತಿ ಶ್ರಿಯಂ ॥ ೧೨೩ ॥

ಏಕಾದಶಾಹುತೀರ್ನಿತ್ಯಂ ದೂರ್ವಾಭಿರ್ಜುಹುಯಾದ್ಬುಧಃ ।
ಅಪಮೃತ್ಯುಜಿದೇವ ಸ್ಯಾದಾಯುರಾರೋಗ್ಯವರ್ಧನಂ ॥ ೧೨೪ ॥

ತ್ರಿಜನ್ಮಸು ಸುಧಾವಲ್ಲೀಕಾಶ್ಮೀರೀಬಕುಲೋದ್ಭವೈಃ ।
ಸಮಿದ್ವರೈಃ ಕೃತೋ ಹೋಮಃ ಸರ್ವಮೃತ್ಯುಗದಾಪಹಃ ॥ ೧೨೫ ॥

---

ಪ್ರದವಾಗುವುದು ಎಂದು ಉಕ್ತವಾಗಿದೆ. ಈ ಪದಾರ್ಥಗಳಿಂದ ಪೂರ್ವೋಕ್ತ ಪ್ರಕಾರವಾಗಿ ಒಂದು, ಹತ್ತು, ಹತ್ತೊಂಬತ್ತನೆಯ ನಕ್ಷತ್ರಗಳಲ್ಲಿ ಹೋಮ ಮಾಡಬೇಕು

೧೨೩. ವೇದಪರಾಂಗತರಾದ ಬ್ರಾಹ್ಮಣರಿಗೆ ಮಧುರ ಭಕ್ಷ್ಯಸಹಿತ ಭೋಜನಮಾಡಿಸಬೇಕು. ಅದರಿಂದ ದೀರ್ಘಾಯುಸ್ಸು, ಅಪೇಕ್ಷಿತಸಂಪತ್ತೂ ಸಹ ಲಭಿಸುವುದು.

೧೨೪. ಪ್ರತಿದಿನವೂ ಗರಿಕೇಹುಲ್ಲುಗಳಿಂದ ಹನ್ನೊಂದು ಆಹುತಿಗಳನ್ನು ಅಗ್ನಿಯಲ್ಲಿ ಹೋಮಮಾಡುವವನು ಅಪಮೃತ್ಯುವನ್ನು ಕಳೆದುಕೊಳ್ಳುತ್ತಾನೆ. ಆಯುರಾರೋಗ್ಯ ವೃದ್ಧಿಯನ್ನು ಪಡೆಯುವನು.

೧೨೫. ಒಂದು, ಹತ್ತು, ಹತ್ತೊಂಬತ್ತನೆಯ ನಕ್ಷತ್ರಗಳಲ್ಲಿ ಅಮೃತಬಳ್ಳಿ, ಕಾಶ್ಮೀರ, ಬಕುಲಗಳ ಸಮಿತ್ತುಗಳಿಂದ ಮಾಡುವ ಹೋಮವು ಸಕಲ ಮೃತ್ಯು ಮತ್ತು ರೋಗಗಳನ್ನೂ ಪರಿಹರಿಸುವುದು.

**ಸಿದ್ಧಾನ್ನೈರ್ವಿಹಿತೋ ಹೋಮೋ ಮಹಾಜ್ವರವಿನಾಶನಃ ।**
**ಅಪಾಮಾರ್ಗಸಮಿದ್ಧೋಮಃ ಸರ್ವಾಮಯನಿಷೂದನಃ ॥ ೧೨೬ ॥**

**ದಕ್ಷಿಣಾಮೂರ್ತಯೇ ಪೂರ್ವಂ ತುಭ್ಯಂ ಪದಮನಂತರಂ ।**
**ವಟಮೂಲಪದಸ್ಯಾಂತೇ ಪ್ರವದೇಚ್ಚ ನಿವಾಸಿನೇ ॥ ೧೨೭ ॥**

**ಧ್ಯಾನೈಕನಿರತಾಂಗಾಯ ಪಶ್ಚಾದ್ದ್ವಯೋರ್ನ್ನಮಃ ಪದಂ ।**
**ರುದ್ರಾಯ ಶಂಭವೇ ತಾರಶಕ್ತಿರುದ್ಧೋಽಯಮೀರಿತಃ ॥ ೧೨೮ ॥**

**ಷಟ್‌ತ್ರಿಂಶದಕ್ಷರೋ ಮಂತ್ರಃ ಸರ್ವಕಾಮಫಲಪ್ರದಃ ।**
**ಮುನಿಃ ಶುಕಃ ಸಮುದ್ದಿಷ್ಟಶ್ಛಂದೋಽನುಷ್ಟುಪ್ಪ್ರಕೀರ್ತಿತಂ ॥ ೧೨೯ ॥**

**ದೇವತಾ ದಕ್ಷಿಣಾಮೂರ್ತಿರ್ನಾಮ್ನಾ ಶಂಭುರುದೀರಿತಃ ।**
**ತಾರಶಕ್ತಿಯುತೈಃ ಪೂರ್ವಂ ಹ್ರಾಮಾದ್ಯಂತೈಶ್ಚ ಮಂತ್ರಜೈಃ ॥ ೧೩೦ ॥**

---

೧೨೬. ಸಿದ್ಧಾನ್ನಗಳಿಂದ ಮಾಡುವ ಹೋಮವು ಮಹಾಜ್ವರವನ್ನು ನಾಶಪಡಿಸುವುದು. ಉತ್ತರಣಿಸಮಿತ್ತಿನ ಹೋಮವು ಸಕಲರೋಗ ಪರಿಹಾರಕ ವಾಗುವುದು.

## ದಕ್ಷಿಣಾಮೂರ್ತಿಮಂತ್ರ

೧೨೭-೧೩೨. "ಓಂ ಹ್ರೀಂ ದಕ್ಷಿಣಾಮೂರ್ತಯೇ ತುಭ್ಯಂ ವಟಮೂಲ ನಿವಾಸಿನೇ ।

ಧ್ಯಾನೈಕನಿರತಾಂಗಾಯ ನಮೋ ರುದ್ರಾಯ ಶಂಭವೇ ಹ್ರೀಂ ಓಂ"

ಎಂಬುದು ಮೂವತ್ತಾರಕ್ಷರಗಳ ದಕ್ಷಿಣಾಮೂರ್ತಿಯ ಮಂತ್ರವು. ಇದು ಸಕಲ ಇಷ್ಟಾರ್ಥದಾಯಕವು. ಇದಕ್ಕೆ ಶುಕನು ಋಷಿ, ಅನುಷ್ಟುಪ್ ಛಂದಸ್ಸು. ದಕ್ಷಿಣಾಮೂರ್ತಿನಾಮಕ ಶಂಭುವೇ ದೇವತೆಯು.

ಈ ಮಂತ್ರದ ೬, ತ್ರಿ, ೮, ೮, ೫, ೩ ವರ್ಣಗಳಿಗೆ ಆದಿಯಲ್ಲಿ 'ಓಂಹ್ರೀಂ' ಎಂಬುದನ್ನೂ, ಅಂತ್ಯದಲ್ಲಿ 'ಹ್ರಾಂ ನಮಃ' ಮುಂತಾದುವುಗಳನ್ನೂ ಸೇರಿಸಿ ಅವುಗಳಿಂದ "ಓಂ ಹ್ರೀಂ ದಕ್ಷಿಣಾಮೂರ್ತಯೇ ಹ್ರಾಂ ಹೃದಯಾಯ ನಮಃ" ಮುಂತಾಗಿ ಹೃದಯಾದಿ ಷಡಂಗಗಳನ್ನು ವಿನ್ಯಾಸಮಾಡಬೇಕು.

ಷಟ್ದ್ವ್ಯಷ್ಟಾಷ್ಟೇಷು ವರ್ಣ್ಯೈರ್ಹೃದಯಾದ್ಯಂಗಕಲ್ಪನಂ ।
ಮೂರ್ಧ್ನಿ ಭಾಲೇ ದೃಶೋಃ ಶ್ರೋತ್ರೇ ಗಂಡಯುಗ್ಮೇ ಸನಾಸಿಕೇ ॥೧೩೧॥

ಆಸ್ಯದೋಃಸಂಧಿಷು ಗಲೇ ಸ್ತನಹೃನ್ನಾಭಿಮಂಡಲೇ ।
ಕಟ್ಯಾಂ ಗುಹ್ಯೇ ಪುನಃ ಪಾದಸಂಧಿಷ್ವರ್ಣಾನ್ನ್ಯಸೇನ್ಮನೋಃ ॥ ೧೩೨ ॥

ವ್ಯಾಪಕಂ ತಾರಶಕ್ತಿಭ್ಯಾಂ ಕುರ್ಯಾದ್ದೇಹೇ ತತಃ ಪರಂ ।
ಹಿಮಾಚಲತಟೇ ರಮ್ಯೇ ಸಿದ್ಧಕಿನ್ನರಸೇವಿತೇ ॥ ೧೩೩ ॥

ವಿವಿಧದ್ರುಮಶಾಖಾಭಿಃ ಸರ್ವತೋ ವಾರಿತಾತಪೇ ।
ಸುಪುಷ್ಪಿತೈರ್ಲತಾಜಾಲೈರಾಶ್ಲಿಷ್ಟಕುಸುಮದ್ರುಮೇ ॥ ೧೩೪ ॥

ಶಿಲಾವಿವರನಿರ್ಗಚ್ಛನ್ನಿರ್ಝರಾನಿಲಶೀತಲೇ ।
ಗಾಯದ್ದೇವಾಂಗನಾಸಂಘೇ ನೃತ್ಯದ್ಬರ್ಹಿಕದಂಬಕೇ ॥ ೧೩೫ ॥

---

ಶಿರಸ್ಸು, ಹಣೆ, ನೇತ್ರದ್ವಯ, ಶ್ರೋತ್ರದ್ವಯ, ಎರಡು ಕೆನ್ನೆಗಳು, ಎರಡು ನಾಸಿಕಾರಂಧ್ರಗಳು, ಬಾಯಿ, ಬಾಹುಸಂಧಿಗಳೆಂಟು, ಕುತ್ತಿಗೆ, ಸ್ತನದ್ವಯ, ಹೃದಯ, ನಾಭಿಮಂಡಲ, ಸೊಂಟ, ಗುಹ್ಯ, ಪಾದಸಂಧಿಗಳೆಂಟು, ಈ ಮೂವತ್ತುನಾಲ್ಕು ಸ್ಥಾನಗಳಲ್ಲಿ ಮಂತ್ರವರ್ಣಗಳನ್ನು ಕ್ರಮವಾಗಿ ನ್ಯಾಸ ಮಾಡಬೇಕು. ಉಳಿದ 'ಓಂ, ಹ್ರೀಂ' ಎಂಬ ಎರಡು ವರ್ಣಗಳಿಂದ ದೇಹದಲ್ಲಿ ಸರ್ವಾಂಗನ್ಯಾಸಮಾಡಬೇಕು. ಅನಂತರ ಮಂತ್ರದೇವತೆಯನ್ನು ಧ್ಯಾನಿಸಬೇಕು.

೧೩೩-೧೪೩. ಧ್ಯಾನವಿಧಾನ:—ಮನೋಹರವಾದ, ಸಿದ್ಧಕಿನ್ನರರಿಂದ ಸೇವಿಸಲ್ಪಡುತ್ತಿರುವ ಎಲ್ಲಕಡೆಯಲ್ಲಿಯೂ ನಾನಾವಿಧ ವೃಕ್ಷಶಾಖೆಗಳ ಛಾಯೆಯಿಂದ ಬಿಸಿಲಿಲ್ಲದಂತಾಗಿ ತಂಪಾಗಿರುವ, ಹೂವುಗಳಿಂದ ಕೂಡಿದ ಬಳ್ಳಿಗಳ ಸಮೂಹಗಳಿಂದ ಆಲಂಗಿತವಾದ ಪುಷ್ಪವೃಕ್ಷಗಳುಳ್ಳ, ಕಲ್ಲುಗಳ ರಂಧ್ರಗಳಿಂದ ಹರಿಯುತ್ತಿರುವ ನೀರಿನಮೇಲಿನಗಾಳಿಯಿಂದ ಶೀತಲವಾಗಿರುವ, ಗಾನಮಾಡುತ್ತಿರುವ ದೇವಸ್ತ್ರೀಯರ ಸಂಘಗಳುಳ್ಳ, ಕುಣಿಯುತ್ತಿರುವ ನವಿಲುಗಳ ಸಮೂಹವುಳ್ಳ, ಧ್ವನಿ

ಕೂಜತ್ಕೋಕಿಲಸಂಘೇನ ಮುಖರೀಕೃತದಿಂಗ್ಮುಖೇ |
ಪರಸ್ಪರವಿನಿರ್ಮುಕ್ತಮಾತ್ಸರ್ಯಮೃಗಸೇವಿತೇ || ೧೩೬ ||

ಜಲಜೈಃ ಸ್ಥಲಜೈಃ ಪುಷ್ಪೈರಾಮೋದಿಭಿರಲಂಕೃತೇ |
ಆದ್ಯೈಃ ಶುಕಾದ್ಯೈರ್ಮುನಿಭಿರಜಸ್ರಸುಖಸೇವಿತೇ || ೧೩೭ ||

ಪುರಂದರಮುಖೈರ್ದೇವೈಃ ಸಾಂಗನಾದ್ಯೈರ್ವಿಲೋಕಿತೇ |
ವಟವೃಕ್ಷಂ ಮಹೋಚ್ಛ್ರಾಯಂ ಪದ್ಮರಾಗಫಲೋಜ್ವಲಂ || ೧೩೮ ||

ಗಾರುತ್ಮತಮಯೈಃ ಪತ್ರೈರ್ನಿಬಿಡೈರುಪಶೋಭಿತಂ |
ನವರತ್ನಮಯಾಕಲ್ಪೈರ್ಲಂಬಮಾನೈರಲಂಕೃತಂ || ೧೩೯ ||

ಸಂಸಾರತಾಪವಿಚ್ಛೇದಕುಶಲಚ್ಛಾಯಮದ್ಭುತಂ |
ತಸ್ಯ ಮೂಲೇ ಸುಸಂಕ್ಲೃಪ್ತರತ್ನಸಿಂಹಾಸನೇ ಶುಭೇ || ೧೪೦ ||

---

ಮಾಡುತ್ತಿರುವ ಕೋಗಿಲೆಗಳ ತಂಡದ ಶಬ್ದಗಳಿಂದ ವ್ಯಾಪ್ತವಾದ ದಿಙ್ಮುಖಗಳುಳ್ಳ, ಅನ್ಯೋನ್ಯವೈರವನ್ನು ಬಿಟ್ಟಿರುವ ನಾನಾ ಮೃಗಗಳಿಂದ ಸೇವಿಸಲ್ಪಡುತ್ತಲಿರುವ, ಸುವಾಸನೆಯುಳ್ಳ ಕಮಲ ಗುಲಾಬಿ ಹೂಗಳಿಂದ ಅಲಂಕೃತವಾದ, ಶುಕ ಮುಂತಾದ ಮುನಿಗಳು ಸುಖವಾಗಿ ವಾಸಿಸುತ್ತಿರುವ ಅವರವರ ಭಾರ್ಯೆಯರಿಂದ ಸಹಿತರಾದ ಇಂದ್ರಾದಿ ದೇವತೆಗಳಿಂದ ನೋಡಲ್ಪಡುತ್ತಿರುವ, ಹಿಮವತ್ಪರ್ವತ ಪ್ರದೇಶದಲ್ಲಿ ಶೋಭಿಸುತ್ತಿರುವ, ಮಹೋನ್ನತವಾದ, ಪದ್ಮರಾಗಫಲದಂತೆ ಪ್ರಕಾಶಮಾನವಾದ, ಪಚ್ಚೆಯಿಂದ ನಿರ್ಮಿತವಾದ ದಟ್ಟವಾಗಿ ತುಂಬಿರುವ ಪತ್ರಗಳಿಂದ ಶೋಭಿಸುತ್ತಿರುವ, ಜೋಲಾಡುತ್ತಿರುವ ನವರತ್ನಮಯ ನೇಪಥ್ಯಗಳಿಂದ ಅಲಂಕೃತವಾದ, ಸಂಸಾರತಾಪವನ್ನು ಹೋಗಲಾಡಿಸುವುದರಲ್ಲಿ ಕುಶಲವಾದ ಛಾಯೆಯುಳ್ಳ, ಆಶ್ಚರ್ಯಕರವಾದ ವಟವೃಕ್ಷವನ್ನೂ, ಅದರ ಕೆಳಗೆ ಚೆನ್ನಾಗಿ ಸ್ಥಾಪಿಸಲ್ಪಟ್ಟಿರುವ ಶುಭವಾದ ರತ್ನಸಿಂಹಾಸನದಲ್ಲಿ ಕುಳಿತಿರುವ, ಅಪರಿಮಿತಾಲಂಕಾರವುಳ್ಳ, ಶರತ್ಕಾಲದ ಚಂದ್ರನಿಗೆ ಸದೃಶವಾದ ಮುಖವುಳ್ಳ,

ಆಸೀನಮಮಿತಾಕಲ್ಪಂ ಶರಚ್ಚಂದ್ರನಿಭಾನನಂ ।
ಕೈಲಾಸಾದ್ರಿನಿಭಂ ತ್ರ್ಯಕ್ಷಂ ಚಂದ್ರಾಂಕಿತಕಪರ್ದಕಂ ॥ ೧೪೧ ॥

ನಾಸಾಗ್ರಾಲೋಕನಪರಂ ವೀರಾಸನಸಮಾಸ್ಥಿತಂ ।
ಮುದ್ರಾಟಂಕಕುರಂಗಾಢ್ಯಜಾನುಸ್ಥಕರಪಲ್ಲವಂ ॥ ೧೪೨ ॥

ಕಕ್ಷಾಬದ್ಧಭುಜಂಗಂ ಚ ಸುಪ್ರಸನ್ನಂ ಹರಂ ಸ್ಮರೇತ್ ।
ಅಯುತದ್ವಯಸಂಯುಕ್ತಗುಣಲಕ್ಷಂ ಜಪೇನ್ಮನುಂ ॥ ೧೪೩ ॥

ತದ್ದಶಾಂಶಂ ತಿಲೈಃ ಶುದ್ಧೈರ್ಜುಹುಯಾತ್ಕ್ಷೀರಸಂಯುತೈಃ ।
ಪಂಚಾಕ್ಷರೋದಿತೇ ಪೀಠೇ ತದ್ವಿಧಾನೇನ ಪೂಜಯೇತ್ ॥ ೧೪೪ ॥

ಭಿಕ್ಷಾಹಾರೋ ಜಪೇನ್ಮಾಸಂ ಮನುಮೇನಂ ಜಿತೇಂದ್ರಿಯಃ ।
ನಿತ್ಯಂ ಸಹಸ್ರಮಷ್ಟಾರ್ಧಂ ಪರಾಂ ವಿಂದತಿ ವಾಕ್ಶ್ರಿಯಂ ॥ ೧೪೫ ॥

---

ಕೈಲಾಸಪರ್ವತಕ್ಕೆ ಸದೃಶನಾದ, ನೇತ್ರತ್ರಯವುಳ್ಳ, ಚಂದ್ರನಿಂದ ಅಂಕಿತವಾದ ಜಟೆಯುಳ್ಳ, ನಾಸಿಕಾಗ್ರವನ್ನು ನೋಡುತ್ತಿರುವ, ವೀರಾಸನದಲ್ಲಿ ಕುಳಿತಿರುವ, ಮುದ್ರಾ ಪರಶು ಜಿಂಕೆಗಳಿಂದ ಯುಕ್ತವಾದ ಹಸ್ತಗಳು, ಮೊಣಕಾಲಿನ ಮೇಲಿಟ್ಟಿರುವ ಕರಪಲ್ಲವ ಇವುಗಳುಳ್ಳ, ಕೊಂಕಳಲ್ಲಿ ಹಾವನ್ನು ಕಟ್ಟಿಕೊಂಡಿರುವ, ಸುಪ್ರಸನ್ನನಾದ ಈಶ್ವರನನ್ನು ಸ್ಮರಿಸಬೇಕು.

ಅನಂತರ ಈ ಮಂತ್ರವನ್ನು ಮೂರುಲಕ್ಷದ ಇಪ್ಪತ್ತುಸಾವಿರ ಜಪಮಾಡಬೇಕು.

೧೪೪. ಹಾಲಿನಿಂದ ಮಿಶ್ರಿತವಾದ, ಪರಿಶುದ್ಧ ತಿಲದಿಂದ ಮೂವತ್ತೆರಡು ಸಾವಿರ ಹೋಮಮಾಡಬೇಕು. ಪಂಚಾಕ್ಷರಿಮಂತ್ರಕ್ಕೆ ವಿಹಿತಪೀಠದಲ್ಲಿ ಅದೇ ವಿಧಾನದಿಂದ ಪೂಜಿಸಬೇಕು.

೧೪೫. ಜಿತೇಂದ್ರಿಯನಾಗಿ ಭಿಕ್ಷಾನ್ನವನ್ನು ತಿನ್ನುತ್ತಾ ಪ್ರತಿದಿನವೂ ನಾಲ್ಕು ಸಾವಿರದಂತೆ ಒಂದು ತಿಂಗಳು ಈ ಮಂತ್ರವನ್ನು ಜಪಿಸುವ ಮಂತ್ರಸಿದ್ಧನು ಉತ್ಕೃಷ್ಟವಾಗ್ವೈಭವವನ್ನು ಪಡೆಯುವನು.

ತ್ರಿವಾರಂ ಜಪ್ತಮೇತೇನ ಪಯಸ್ತು ಮನುನಾ ಪಿಬೇತ್ ।
ದಕ್ಷಿಣಾಮೂರ್ತಿಸಂಧ್ಯಾನಾಚ್ಛಾಸ್ತ್ರವ್ಯಾಖ್ಯಾನಕೃದ್ಭವೇತ್ ॥ ೧೪೬ ॥

ಪ್ರಣವೋ ಹೃದಯಂ ಪಶ್ಚಾದ್ಭದೇದ್ಭಗವತೇಪದಂ ।
ಙೇಯುತಂ ದಕ್ಷಿಣಾಮೂರ್ತಿಂ ಮಹ್ಯಂ ಮೇಧಾಮುದೀರಯೇತ್ ॥ ೧೪೭ ॥

ಪ್ರಯಚ್ಛ ತದ್ವಯಾಂತೋಽಯಂ ದ್ವಾವಿಂಶತ್ಯಕ್ಷರೋ ಮನುಃ ।
ಮುನಿಶ್ಚತುರ್ಮುಖಶ್ಛಂದೋ ಗಾಯತ್ರೀ ದೇವತೋದಿತಾ ॥ ೧೪೮ ॥

ತಾರರುದ್ಧೈಃ ಸ್ವರೈರ್ದೀರ್ಘೈಃ ಷಡ್ಭಿರಂಗಾನಿ ಕಲ್ಪಯೇತ್ ।
ಪದೈರ್ಮಂತ್ರಭವೈರ್ವಾಪಿ ಧ್ಯಾನಾದ್ಯಂ ಪೂರ್ವವನ್ಮತಂ ॥ ೧೪೯ ॥

---

೧೪೬. ಈ ಮಂತ್ರದಿಂದ ಮೂರಾವರ್ತಿ ಅಭಿಮಂತ್ರಿಸಲ್ಪಟ್ಟ, ಉದಕ ಅಥವಾ ಹಾಲನ್ನು ಕುಡಿದು ದಕ್ಷಿಣಾಮೂರ್ತಿಯನ್ನು ಧ್ಯಾನಿಸಿದರೆ ಶಾಸ್ತ್ರ ಪ್ರವಚನಮಾಡುವ ಸಾಮರ್ಥ್ಯವುಂಟಾಗುವುದು

## ದಕ್ಷಿಣಾಮೂರ್ತಿಮಂತ್ರಾಂತರ

೧೪೭-೧೪೮. "ಓಂ ನಮೋ ಭಗವತೇ ದಕ್ಷಿಣಾಮೂರ್ತಯೇ ಮಹ್ಯಂ ಮೇಧಾಂ ಪ್ರಯಚ್ಛ ಸ್ವಾಹಾ" ಎಂಬುದು ಇಪ್ಪತ್ತೆರಡಕ್ಷರಗಳ ದಕ್ಷಿಣಾಮೂರ್ತಿ ಮಂತ್ರವು.

ಈ ಮಂತ್ರಕ್ಕೆ ಚತುರ್ಮುಖನು ಋಷಿ, ಗಾಯತ್ರೀ ಛಂದಸ್ಸು, ದಕ್ಷಿಣಾ ಮೂರ್ತಿಯೇ ದೇವತೆಯು.

೧೪೯. ಆದ್ಯಂತಗಳಲ್ಲಿ 'ಓಂ' ಎಂಬುದನ್ನು ಸೇರಿಸಿ ಆರು ದೀರ್ಘ ಸ್ವರಗಳಿಂದ ಕ್ರಮವಾಗಿ 'ಓಂ ಆಂ ಓಂ' ಮುಂತಾಗಿ ಷಡಂಗನ್ಯಾಸಮಾಡಬೇಕು. ಅಥವಾ ಈ ಮಂತ್ರದಲ್ಲಿನ ಪದಗಳಿಂದಲಾದರೂ ಷಡಂಗನ್ಯಾಸವನ್ನಾಚರಿಸ ಬೇಕು. ಹಿಂದಿನ ಮಂತ್ರವಿಧಾನದಲ್ಲಿ ಹೇಳಿರುವಂತೆ ಧ್ಯಾನಾದಿಗಳನ್ನು ತಿಳಿಯ ಬೇಕು.

ಲೋಹಿತೋಽಗ್ನ್ಯಾಸನಃ ಸದ್ಯೋಽಬಿಂದುಯೊನ್ಪ್ರಥಮಂ ತತಃ ।
ದ್ವಿತೀಯಂ ವಹ್ನಿಬೀಜಸ್ಥಾ ದೀರ್ಘಾ ಶಾಂತೀಂದುಭೂಷಿತಾ ॥ ೧೫೦ ॥

ತೃತೀಯಾ ಲಾಂಗಲೀಸರ್ಗೀ ಮಂತ್ರೋ ಬೀಜತ್ರಯಾನ್ವಿತೈಃ ।
ನೀಲಕಂಠಾತ್ಮಕಃ ಪ್ರೋಕ್ತೋ ವಿಷದ್ವಯಹರಃ ಪರಃ ॥ ೧೫೧ ॥

ಹರದ್ವಯಂ ವಹ್ನಿಜಾಯಾ ಹೃದಯಂ ಪರಿಕೀರ್ತಿತಂ ।
ಕಪರ್ದಿನೇ ಠಯುಗಲಂ ಶಿರೋಮಂತ್ರ ಉದಾಹೃತಃ ॥ ೧೫೨ ॥

ನೀಲಕಂಠಾಯ ಠದ್ವಂದ್ವಂ ಶಿಖಾಮಂತ್ರೋಽಯಮೀರಿತಃ ।
ಕಾಲಕೂಟಪದಸ್ಯಾಂತೇ ವಿಷಭಕ್ಷಣಜೇಽಯುತಂ ॥ ೧೫೩ ॥

ಹುಂ ಫಟ್ ಕವಚಮುದ್ದಿಷ್ಟಂ ನೀಲಕಂಠಿನ ಇತ್ಯತಃ ।
ಸ್ವಾಹಾಂತಮಸ್ತ್ರಮೇತಾನಿ ಪಂಚಾಂಗಾನಿ ಮನೋರ್ವಿದುಃ ॥ ೧೫೪ ॥

---

## ನೀಲಕಂಠಮಂತ್ರ

೧೫೦–೧೫೧. (ಲೋಹಿತ= ವ, ಅಗ್ನಿ= ರ. ಸದ್ಯ= ಓ, ಬಿಂದು= ೦ = ಪ್ರೋಂ, ವಹ್ನಿಬೀಜಸ್ಥಾದೀರ್ಘಾಶಾಂತೀಂದು ಭೂಷಿತಾ = ನ್ರೀಂ, ಸರ್ಗೀಲಾಂಗಲೀ = ಠಃ, ಈ ಮೂರುಬೀಜಾಕ್ಷರಗಳನ್ನೊಳಗೊಂಡ 'ಪ್ರೋ ನ್ರೀಂ ಠಃ' ಎಂಬುದು ನೀಲಕಂಠಮಂತ್ರವು. ಇದು ವಿಷದ್ವಯುವನ್ನು ಪರಿಹರಿಸುವ ಉತ್ತಮಮಂತ್ರವು.)

೧೫೨–೧೫೪. 'ಹರಹರ ಸ್ವಾಹಾ ಹೃದಯಾಯ' ಎಂಬುದಾಗಿ ಹೃದಯ, 'ಕಪರ್ದಿನೇ ಸ್ವಾಹಾ ಶಿರಸೇ' ಎಂಬುದಾಗಿ ಶಿರಸ್ಸು, 'ನೀಲಕಂಠಾಯ ಸ್ವಾಹಾ ಶಿಖಾಯೈ' ಎಂದು ಶಿಖೆ, 'ಕಾಲಕೂಟ ವಿಷ ಭಕ್ಷಣಾಯ ಹುಂ ಫಟ್ ಕವಚಾಯ' ಎಂದು ಕವಚ, 'ನೀಲಕಂಠಿನೇ ಸ್ವಾಹಾ ಅಸ್ತ್ರಾಯ ಫಟ್' ಎಂಬುದಾಗಿ ಅಸ್ತ್ರ ಈರೀತಿಯಾಗಿ ಈ ಮಂತ್ರಕ್ಕೆ ಪಂಚಾಂಗ ವಿನ್ಯಾಸವು ಉಕ್ತವಾಗಿದೆ.

ಮೂರ್ಧ್ನಿ ಕಂಠೇ ಹೃದಂಭೋಜೇ ಕ್ರಮಾದ್ಬೀಜತ್ರಯಂ ನ್ಯಸೇತ್ ।
ಬಾಲಾರ್ಕಾಯುತವರ್ಚಸ್ಕಂ ಜಟಾಜೂಟೇಂದುಶೋಭಿತಂ ॥ ೧೫೫ ॥

ನಾಗಭೂಷಂ ಜಪವಟೀಂ ಶೂಲಂ ಬ್ರಹ್ಮಕಪಾಲಕಂ ।
ಖಟ್ವಾಂಗಂ ದಧತಂ ದೋರ್ಭಿಸ್ತ್ರಿನೇತ್ರಂ ಚಿಂತಯೇದ್ಧರಂ ॥ ೧೫೬ ॥

ಲಕ್ಷತ್ರಯಂ ಜಪೇನ್ಮಂತ್ರಂ ತದ್ದಶಾಂಶಂ ಸಸರ್ಪಿಷಾ ।
ಹವಿಷಾ ಜುಹುಯಾತ್ಸಮ್ಯಕ್ಸಂಸ್ಕೃತೇ ಹವ್ಯವಾಹನೇ ॥ ೧೫೭ ॥

ಶೈವೇ ಪೀಠೇ ಯಜೇದ್ದೇವಂ ನೀಲಕಂಠಂ ಸಮಾಹಿತಃ ।
ಮೃತ್ಯುಂಜಯವಿಧಾನೇನ ವಿಪದ್ಭಯವಿನಾಶನಂ ॥ ೧೫೮ ॥

---

೧೫೫-೧೫೬. ಈ ಮಂತ್ರದ ಮೂರು ಬೀಜಾಕ್ಷರಗಳನ್ನು ಕ್ರಮವಾಗಿ ಶಿರಸ್ಸು, ಕಂಠ, ಹೃದಯಕಮಲಗಳಲ್ಲಿ ನ್ಯಾಸಮಾಡಬೇಕು.

ಧ್ಯಾನವಿಧಾನ :— ಹತ್ತುಸಾವಿರ ಬಾಲಸೂರ್ಯರಿಗೆ ಸಮಾನವಾದ ವರ್ಚಸ್ಸುಳ್ಳ, ಜಟೆಯಲ್ಲಿ ಶೋಭಿಸುತ್ತಿರುವ ಚಂದ್ರನುಳ್ಳ, ಸರ್ಪವೆಂಬ ಭೂಷಣವನ್ನು ಧರಿಸಿರುವ, ಕೈಗಳಲ್ಲಿ ಜಪಮಾಲೆ ಶೂಲ ಬ್ರಹ್ಮಕಪಾಲ ಖಟ್ವಾಂಗಗಳನ್ನು ಹಿಡಿದುಕೊಂಡಿರುವ, ಮುಕ್ಕಣ್ಣನಾದ ಈಶ್ವರನನ್ನು ಧ್ಯಾನಿಸಬೇಕು.

೧೫೭. ಈ ಮಂತ್ರವನ್ನು ಮೂರುಲಕ್ಷ ಜಪಿಸಬೇಕು. ಅನಂತರ ಸಂಸ್ಕೃತವಾದ ಅಗ್ನಿಯಲ್ಲಿ ಘೃತಸಹಿತವಾದ ಹವಿಸ್ಸಿನಿಂದ ಮೂವತ್ತುಸಾವಿರ ಹೋಮಮಾಡಬೇಕು.

೧೫೮. ಸಮಾಧಾನಚಿತ್ತನಾಗಿ ಶೈವಪೀಠದಲ್ಲಿ ವಿಪದ್ಭಯನಾಶಕನಾದ ನೀಲಕಂಠನನ್ನು ಮೃತ್ಯುಂಜಯಮಂತ್ರೋಕ್ತವಿಧಾನದಿಂದ ಪೂಜಿಸಬೇಕು.

ಅಗ್ನಿಃ ಸಂವರ್ತಕಾದಿತ್ಯರಾನಿಲೋ ಷಷ್ಠಬಿಂದುಮಾನ್ ।
ಚಿಂತಾಮಣಿರಿತಿ ಖ್ಯಾತಂ ಬೀಜಂ ಸರ್ವಸಮೃದ್ಧಿದಂ　　॥ ೧೫೯ ॥

ಕಶ್ಯಪೋ ಮುನಿರಾಖ್ಯಾತಶ್ಛಂದೋಽನುಷ್ಟುಬುದಾಹೃತಂ ।
ಅರ್ಧನಾರೀಶ್ವರಃ ಪ್ರೋಕ್ತೋ ದೇವತಾ ಜಗತಾಂ ಪತಿಃ　　॥ ೧೬೦ ॥

ರೇಫಾದಿವ್ಯಂಜನೈಃ ಷಡ್ಭಿಃ ಕುರ್ಯಾದಂಗಾನಿ ಷಟ್ ಕ್ರಮಾತ್ ।
ತ್ರಿನೇತ್ರಂ ನೀಲಮಣಿಭಂ ಶೂಲಪಾಶಂ ಕಪಾಲಕಂ　　॥ ೧೬೧ ॥

ರಕ್ತೋತ್ಪಲಂ ಚ ಹಸ್ತಾಬ್ಜೈರ್ದಧತಂ ಚಾರುಭೂಷಣಂ ।
ಬಾಲೇಂದುಬದ್ಧಮುಕುಟಮರ್ಧನಾರೀಶ್ವರಂ ಸ್ಮರೇತ್　　॥ ೧೬೨ ॥

---

### ಅರ್ಧನಾರೀಶ್ವರ ಅಥವಾ ಚಿಂತಾಮಣಿಮಂತ್ರ

೧೫೯. (ಅಗ್ನಿ = ರ, ಸಂವರ್ತಕ = ಕ್ಷ, ಆದಿತ್ಯ = ಮ, ರ, ಅನಿಲ= ಯ, ಔ, ಬಿಂದುಮತ್‌ಷಷ್ಠ= ಊಂ) 'ಕ್ಷ್ಮಮ್ರ್ಯೌಂ' ಎಂಬುದು ಚಿಂತಾಮಣಿಯೆಂದು ಪ್ರಸಿದ್ಧವಾದ, ಸಕಲಸಮೃದ್ಧಿಪ್ರದವಾದ ಬೀಜಮಂತ್ರವು.

೧೬೦. ಈ ಮಂತ್ರಕ್ಕೆ ಕಶ್ಯಪನು ಋಷಿ, ಅನುಷ್ಟುಪ್ ಛಂದಸ್ಸು, ಜಗತ್ಪತಿಯಾದ ಅರ್ಧನಾರೀಶ್ವರನು ದೇವತೆಯೆಂದೂ ಉಕ್ತವಾಗಿದೆ.

೧೬೧-೧೬೨. 'ರ' ಮುಂತಾದ ಆರು ವ್ಯಂಜನಾಕ್ಷರಗಳಿಂದ ಕ್ರಮವಾಗಿ ಷಡಂಗಗಳನ್ನು ನ್ಯಾಸಮಾಡಬೇಕು.

ಧ್ಯಾನವಿಧಾನ :—ಮುಕ್ಕಣ್ಣನು, ನೀಲಮಣಿಯಂತೆ ಪ್ರಕಾಶಮಾನನು, ಶೂಲ, ಪಾಶ, ಕಪಾಲ, ಕೆಂಪುನೈದಿಲೆಪುಷ್ಪಗಳನ್ನು ಹಸ್ತಕಮಲಗಳಲ್ಲಿ ಧರಿಸಿರುವವನು, ದಿವ್ಯಾಭರಣಧಾರಿಯು, ಕಿರೀಟದಲ್ಲಿ ಬಾಲಚಂದ್ರನನ್ನು ಇಟ್ಟುಕೊಂಡಿರುವವನೂ ಆದ ಅರ್ಧನಾರೀಶ್ವರನನ್ನು ಧ್ಯಾನಿಸಬೇಕು.

ಏಕಲಕ್ಷಂ ಜಪೇನ್ಮಂತ್ರಂ ತ್ರಿಶತಂ ಮಧುರಾಪ್ಲುತೈಃ |
ತಿಲೈರ್ಹುನೇದ್ಯಜೇತ್ಪೀಠೇ ಶೈವೇಂಗಾವರಣೈಃ ಸಹ || ೧೬೩ ||

ವೃಷಾದ್ಯೈರ್ಮಾತೃಭಿಃ ಪಶ್ಚಾಲ್ಲೋಕಪಾಲೈಸ್ತದಾಯುಧೈಃ |
ಪ್ರಾಸಾದಾದ್ಯಂ ಜಪೇನ್ಮಂತ್ರಮಯುತಂ ರೋಗಶಾಂತಯೇ || ೧೬೪ ||

ಸ್ವರಾವೃತ್ತಮಿದಂ ಬೀಜಂ ವಿಗಲತ್ಪರಮಾಮೃತಂ |
ಚಂದ್ರಬಿಂಬಸ್ಥಿತಂ ಮೂರ್ಧ್ನಿ ಧ್ಯಾತಂ ಕ್ಷ್ವೇಡಗದಾಪಹಂ || ೧೬೫ ||

ಪ್ರತಿಲೋಮಸ್ವರಾಢ್ಯಂ ಚ ಬೀಜಂ ವಹ್ನಿಗೃಹೇಸ್ಥಿತಂ |
ರೇಖಾದಿವ್ಯಂಜನೋಲ್ಲಾಸಿಷಟ್ಕೋಣಾಭಿವೃತಂ ಬಹಿಃ || ೧೬೬ ||

---

೧೬೩-೧೬೪. ಈ ಮಂತ್ರವನ್ನು ಒಂದುಲಕ್ಷ ಜಪಿಸಿ, ಮಧುರಮಿಶ್ರಿತವಾದ ತಿಲಗಳಿಂದ ಮುನ್ನೂರು ಹೋಮಮಾಡಬೇಕು. ಅನಂತರ ಶೈವಪೀಠದಲ್ಲಿ ಮೊದಲು ಅಂಗಾವರಣ, ರಾದಿ ಅಷ್ಟವರ್ಣಗಳಿಂದ ದ್ವಿತೀಯಾವರಣ, ಮಾತೃದೇವತೆಗಳಿಂದ ತೃತೀಯಾವರಣ, ಅನಂತರ ಲೋಕಪಾಲಕರು ಅವರ ಆಯುಧಗಳು ಇವುಗಳ ಸಹಿತವಾಗಿ ಅರ್ಧನಾರೀಶ್ವರನನ್ನು ಪೂಜಿಸಬೇಕು.

ಪ್ರಾಸಾದಮಂತ್ರಾದಿಯಾಗಿ ಈ ಮಂತ್ರವನ್ನು ರೋಗವು ವಾಸಿಯಾಗುವುದಕ್ಕಾಗಿ ಹತ್ತುಸಾವಿರ ಜಪಿಸಬೇಕು.

೧೬೫. ಸ್ವರವರ್ಣಗಳಿಂದ ಆವರಿಸಲ್ಪಟ್ಟ, ಉತ್ತಮವಾದ ಅಮೃತವನ್ನು ಸ್ರವಿಸುತ್ತಿರುವ, ಚಂದ್ರಬಿಂಬದಲ್ಲಿರುವ ಈ ಬೀಜವನ್ನು ಶಿರಸ್ಸಿನಲ್ಲಿ ಧ್ಯಾನಿಸಿದರೆ ಅದು ವಿಷರೋಗಗಳನ್ನು ಪರಿಹರಿಸುವುದು.

೧೬೬-೧೬೭. ಪ್ರತಿಲೋಮಸ್ವರಯುಕ್ತವಾದ, ಊರ್ಧ್ವಾಗ್ರತ್ರಿಕೋಣದಲ್ಲಿರುವ, ರ ಮುಂತಾದ ವ್ಯಂಜನಾಕ್ಷರಗಳಿಂದ ವಿರಾಜಮಾನವಾದ ಷಟ್ಕೋಣ

ಭೂತಾರ್ತಸ್ಯ ಸ್ಮೃತಂ ಮೂರ್ಧ್ನಿ ಭೂತಮಾಶು ವಿನಾಶಯೇತ್ ।
ಪೀಡಿತಾಂಗೇ ಸ್ಮೃತಂ ತತ್ತತ್ಪೀಡಾಂ ಶಮಯತಿ ಧ್ರುವಂ ॥ ೧೬೭ ॥

ಪ್ರಣವೋ ಹೃದಯಂ ಪಶ್ಚಾನ್ಙೇಂತಃ ಪಶುಪತಿಃ ಪುನಃ ।
ತಾರೋ ನಮೋ ಭೂತಪದಂ ತತೋಽಧಿಪತಯೇ ಧ್ರುವಂ ॥ ೧೬೮ ॥

ನಮೋ ರುದ್ರಾಯಯುಗಲಂ ಖಡ್ಗರಾವೇಣ ಶಬ್ದತಃ ।
ವಿಹರದ್ವಿತಯಂ ಪಶ್ಚಾತ್ಸರನೃತ್ಯಯುಗಂ ಪೃಥಕ್ ॥ ೧೬೯ ॥

ಶ್ಮಶಾನಭಸ್ಮಾರ್ಚಿತಾಂತೇ ಶರಣ್ಯಾಯ ತತಃ ಪರಂ ।
ಘಂಟಾಕಪಾಲಮಾಲಾದಿ ಧರಾಯೇತಿ ಪದಂ ಪುನಃ ॥ ೧೭೦ ॥

ವ್ಯಾಘ್ರಚರ್ಮಪದಸ್ಯಾಂತೇ ಪರಿಧಾನಾಯ ತತ್ಪರಂ ।
ಶಶಾಂಕಕೃತಶಬ್ದಾಂತೇ ಶೇಖರಾಯ ತತಃ ಪರಂ ॥ ೧೭೧ ॥

ಕೃಷ್ಣಸರ್ಪಪದಾತ್ಪಶ್ಚಾದ್ಯಜ್ಞೋಪವೀತಿನೇ ।
ವಲಯುಗ್ಮಂ ಚಲಾಯುಗ್ಮಮನಿವರ್ತಕಪಾಲಿನೇ ॥ ೧೭೨ ॥

---

ಗಳಿಂದ ಪರಿವೃತವಾದ ಬೀಜವನ್ನು ಹೊರಗೆ ಭೂತಗ್ರಸ್ತನ ಶಿರಸ್ಸಿನಲ್ಲಿ ಧ್ಯಾನಿಸಿದರೆ ಅದು ಶೀಘ್ರವಾಗಿ ಭೂತವನ್ನು ನಾಶಪಡಿಸುವುದು.

ಬಾಧಾದಿಯುಕ್ತವಾದ ಅಂಗದಲ್ಲಿ ಈ ಬೀಜವನ್ನು ಸ್ಮರಿಸಿದರೆ ಆಯಾಯಾ ಪೀಡೆಯು ಖಂಡಿತವಾಗಿಯೂ ನಾಶವಾಗುವುದು

## ಖಡ್ಗರಾವಣಮಂತ್ರ

೧೬೮-೧೭೫. ‘ ಓಂ ನಮಃ ಪಶುಪತಯೇ ಓಂ ನಮೋ ಭೂತಾಧಿಪತಯೇ ಓಂ ನಮೋ ರುದ್ರಾಯ ರುದ್ರಾಯ ಖಡ್ಗರಾವೇಣ ವಿಹರ ವಿಹರ ಸರಸರ ನೃತ್ಯನೃತ್ಯ ಸ್ಮಶಾನಭಸ್ಮಾರ್ಚಿತಶರಣ್ಯಾಯ ಘಂಟಾಕಪಾಲ ಮಾಲಾದಿ ಧರಾಯ ವ್ಯಾಘ್ರಚರ್ಮಪರಿಧಾನಾಯ ಶಶಾಂಕಕೃತಶೇಖರಾಯ ಕೃಷ್ಣಸರ್ಪ

ಹನಯುಗ್ಮಂ ತತೋ ಭೂತಾಂಸ್ತ್ರಾಸಯದ್ವಿತಯಂ ಪುನಃ ।
ಭೂಯೋ ಮಂಡಲಮಧ್ಯೇ ಸ್ಯಾತ್ಕಟಯುಗ್ಮಂ ತತಃ ಪರಂ ॥ ೧೭೩ ॥

ರುದ್ರಾಂಕುಶೇನ ಶಮಯ ಪ್ರವೇಶಯ ಯುಗಂ ತತಃ ।
ಆವೇಶಯ ಯುಗಂ ಪಶ್ಚಾಚ್ಚಂಡಾಸಿಪದಮೀರಯೇತ್ ॥ ೧೭೪ ॥

ಧರಾಧಿಪತಿರುದ್ರೋಯಂ ಜ್ಞಾಪಯತ್ಯಗ್ನಿಸುಂದರೀ ।
ಖಡ್ಗರಾವಣಮಂತ್ರೋಯಂ ಸಪ್ತತ್ಯೂರ್ಧ್ವಶತಾಕ್ಷರಃ ॥ ೧೭೫ ॥

ಭೂತಾಧಿಪತಯೇ ಸ್ವಾಹಾ ಪೂಜಾಮಂತ್ರೋಯಮೀರಿತಃ ।
ಸಿದ್ಧಮಂತ್ರೋಯಮುದಿತೋ ಜಪಾದೇವ ಪ್ರಸಿದ್ಧ್ಯತಿ ॥ ೧೭೬ ॥

ಅಯುತದ್ವಿತಯಾತ್ಪಶ್ಚಾದ್ಭೂತಾದಿಗ್ರಹಣೇ ಕ್ಷಮಃ ।
ಮಾಯಾಸ್ಫುರದ್ವಯಂ ಭೂಯಃ ಪ್ರಸ್ಫುರದ್ವಿತಯಂ ಪುನಃ ॥ ೧೭೭ ॥

ಘೋರಘೋರತರೇತ್ಯಂತೇ ತನುರೂಪಪದಂ ತತಃ ।
ಚಟಯುಗ್ಮಂ ತದಂತೇ ಸ್ಯಾತ್ಪ್ರಚಟದ್ವಿತಯಂ ಪುನಃ ॥
ಕಹಯುಗ್ಮಂ ವಮದ್ವಂದ್ವಂ ತತೋ ಬಂಧಯುಗಂ ಪುನಃ ।

---

ಯಜ್ಞೋಪವೀತಿನೇ ಚಲಚಲ ವಲ್ಗುವಲ್ಗುಮನಿವರ್ತಕಪಾಲಿನೇ ಹನಹನ ಭೂತಾಂಸ್ತ್ರಾಸಯತ್ರಾಸಯ ಮಂಡಲಮಧ್ಯೇ ಕಟಕಟರುದ್ರಾಂಕುಶೇನ ಶಮಯ ಪ್ರವೇಶಯ ಪ್ರವೇಶಯ ಆವೇಶಯ ಆವೇಶಯ ಚಂಡಾಸಿಧರಾಧಿಪತಿರುದ್ರೋ ಜ್ಞಾಪಯ ಸ್ವಾಹಾ' ಎಂಬುದು ಒಂದುನೂರೆಪ್ಪತ್ತು ಅಕ್ಷರಗಳ ಖಡ್ಗರಾವಣ ಮಂತ್ರವು.

೧೭೬. 'ಭೂತಾಧಿಪತಯೇ ಸ್ವಾಹಾ' ಎಂಬುದು ಪೂಜೆಯ ಮಂತ್ರವು. ಇದು ಸಿದ್ಧಮಂತ್ರವು. ಇಪ್ಪತ್ತುಸಾವಿರ ಜಪಮಾಡುವ ಮಾತ್ರದಿಂದಲೇ ಸಿದ್ಧವಾಗುತ್ತದೆ.

೧೭೭-೧೭೮. ಜಪಮಾಡಿದ ನಂತರ ಆರಾಧಕನು ಭೂತಾದಿಗಳನ್ನು ಹಿಡಿಯಲು ಸಮರ್ಥನಾಗುವನು.

ಘಾತಯೆದ್ವಿತಯಂ ವರ್ಮ ಘಡಂತಃ ಸಮುದೀರಿತಃ ||
ಏಕಪಂಚಾಶದರ್ಣೋಯಮಘೋರಾಸ್ತ್ರಂ ಮಹಾಮನುಃ　　|| ೧೭೮ ||

ಅಘೋರಸ್ಯ ಮುನಿಃ ಪ್ರೋಕ್ತಸ್ತ್ರಿಷ್ಟುಚ್ಛಂದ ಉದಾಹೃತಂ |
ಅಘೋರರುದ್ರಃ ಸಂದಿಷ್ಟೋ ದೇವತಾ ಮಂತ್ರನಾಯಕಃ　　|| ೧೭೯ ||

ಹೃದಯಂ ಪಂಚಭಿಃ ಪ್ರೋಕ್ತಂ ಶಿರಃ ಷಡ್ಭಿರುದಾಹೃತಂ |
ಶಿಖಾ ದಶಭಿರಾಖ್ಯಾತಾ ತಾವದ್ಭಿಃ ಕವಚಂ ಮತಂ　　|| ೧೮೦ ||

ವಸುವರ್ಣೈಃ ಸ್ಮೃತಂ ನೇತ್ರಂ ಮಾಸಾರ್ಣೈರಸ್ತ್ರಮೀರಿತಂ |
ಮೂರ್ಧ್ನಿ ನೇತ್ರಾಸ್ಯಕಂಠೇಷು ಹೃನ್ನಾಭ್ಯಾಮೂರುಷು ಕ್ರಮಾತ್ ||೧೮೧||

---

## ಅಘೋರಾಸ್ತ್ರಮಹಾಮಂತ್ರ

'ಓಂ ಹ್ರೀಂ ಸ್ಫುರ ಸ್ಫುರ ಪ್ರಸ್ಫುರ ಪ್ರಸ್ಫುರ ಘೋರ ಘೋರತರ ಚಟ ಚಟ ಪ್ರಚಟ ಪ್ರಚಟ ಕಹ ಕಹ ವಮ ವಮ ಬಂಧ ಬಂಧ ಘಾತಯ ಘಾತಯ ಹುಂ ಫಟ್' ಎಂಬುದು ಐವತ್ತೊಂದು ವರ್ಣಗಳ ಅಘೋರಾಸ್ತ್ರ ಮಹಾಮಂತ್ರವು.

೧೭೯. ಈ ಮಂತ್ರಕ್ಕೆ ಅಘೋರನು ಋಷಿ, ತ್ರಿಷ್ಟುಪ್ ಛಂದಸ್ಸು, ಅಘೋರರುದ್ರನು ದೇವತೆಯು, ಅವನೇ ಮಂತ್ರನಾಯಕನು.

೧೮೦-೧೮೨. ಕ್ರಮವಾಗಿ ಈ ಮಂತ್ರದ ಐದುವರ್ಣಗಳಿಂದ ಶಿಖೆ, ಅಷ್ಟರಿಂದಲೇ ಕವಚ, ಎಂಟುವರ್ಣಗಳಿಂದ ನೇತ್ರ, ಹನ್ನೆರಡುವರ್ಣಗಳಿಂದ ಅಸ್ತ್ರ ಈರೀತಿ ಷಡಂಗನ್ಯಾಸಮಾಡಬೇಕು.

ಈ ಮಂತ್ರದ ವರ್ಣಗಳನ್ನು 5, 6, 2, 8, 4, 6, 4, 4, 4, 6, 2 ವರ್ಣಗಳಾಗಿ ಹನ್ನೊಂದು ಭಾಗಮಾಡಿಕೊಂಡು ಕ್ರಮವಾಗಿ ಒಂದೊಂದು ಭಾಗ

ಜಾನುಜಂಘಾಪದದ್ವಂದ್ವೇ ರುದ್ರೈಭಿನ್ನಾಕ್ಷರೈರ್ನ್ಯಸೇತ್ ।
ಪಂಚಷಟ್ಸ್ವೃಷ್ಟವೇದಾಂಗತ್ರ್ಯಬ್ಧಿರಸಲೋಚನೈಃ ॥ ೧೮೨ ॥

ಶ್ಯಾಮಂ ತ್ರಿನೇತ್ರಂ ಸರ್ಪಾಢ್ಯಂ ರಕ್ತವಸ್ತ್ರಾಂಗರಾಗಕಂ ।
ನಾನಾಶಸ್ತ್ರಧರಂ ಧ್ಯಾಯೇದಘೋರಾಖ್ಯಂ ಸದಾಶಿವಂ ॥ ೧೮೩ ॥

ಭೂತವೇತಾಲಕಾದೀನಾಂ ಕ್ಷಮೋಽಯಂ ನಿಗ್ರಹೇ ಮನುಃ ।
ತಾರೋ ವಾಂತೋ ಧರಾಸಂಸ್ಥೋ ವಾಮನೇತ್ರೇಂದುಭೂಷಿತಃ ॥ ೧೮೪ ॥

ಪಾರ್ಶ್ವೋ ವಕಃ ಕರ್ಣಯುತೋ ವರ್ಮಾಸ್ತ್ರಾಂತಃ ಷಡಕ್ಷರಃ ।
ಮನುಃ ಪಾಶುಪತಾಸ್ತ್ರಾಖ್ಯೋ ಗ್ರಹಕ್ಷುದ್ರನಿವಾರಣಃ ॥ ೧೮೫ ॥

---

ವನ್ನು ಶಿರಸ್ಸು, ಕಣ್ಣು, ಮುಖ, ಕಂಠ, ಹೃದಯ, ನಾಭಿ, ತೊಡೆ, ಮೊಣಕಾಲು, ಜಂಘೆ, ಪಾದದ್ವಯ ಎಂಬ ಹನ್ನೊಂದು ಸ್ಥಾನಗಳಲ್ಲಿ ನ್ಯಾಸ ಮಾಡಬೇಕು.

೧೮೩. ಧ್ಯಾನ :—ಶ್ಯಾಮವರ್ಣ, ನೇತ್ರತ್ರಯ, ಸರ್ಪಭೂಷಣ ಇವುಗಳುಳ್ಳ, ಕೆಂಪುವಸ್ತ್ರದಿಂದ ಅಂಗರಾಗವನ್ನು ಹೊಂದಿರುವ, ನಾನಾವಿಧ ಶಸ್ತ್ರಗಳನ್ನು ಧರಿಸಿರುವ, ಅಘೋರನಾಮಕನಾದ ಸದಾಶಿವನನ್ನು ಧ್ಯಾನಿಸಬೇಕು.

೧೮೪-೧೮೫. ಈ ಮಂತ್ರವು ಭೂತ ಬೇತಾಳ ಮುಂತಾದುವುಗಳನ್ನು ನಿಗ್ರಹಿಸುತ್ತದೆ.

## ಪಾಶುಪತಾಸ್ತ್ರಮಂತ್ರವು

(ತಾರ = ಓಂ, ವಾಂತ = ಶ, ಧರಾ = ಲ, ವಾಮನೇತ್ರ = ಈ, ಇಂದು = ಂ, ಪಾರ್ಶ್ವ = ಪ, ವಕ = ಶ, ಕರ್ಣ = ಉ, ವರ್ಮ = ಹುಂ)

'ಓಂ ಶ್ಲೀಂ ಪಶು ಹುಂ ಫಟ್' ಎಂಬುದು ಕ್ಷುದ್ರಗ್ರಹಪೀಡೆಯನ್ನು ಪರಿಹರಿಸುವಂತಹ ಪಾಶುಪತಾಸ್ತ್ರವೆಂಬ ಮಂತ್ರವು.

ಷಡ್ಭಿರ್ವರ್ಣೈಃ ಷಡಂಗಾನಿ ಹುಂಫಡಂತೈಃ ಸಜಾತಿಭಿಃ ।
ಮಧ್ಯಾಹ್ನಾರ್ಕಪ್ರಭಂ ಭೀಮಂ ತ್ರ್ಯಕ್ಷಂ ಪನ್ನಗಭೂಷಣಂ ॥ ೧೮೬ ॥

ನಾನಾಶಸ್ತ್ರಂ ಚತುರ್ವಕ್ತ್ರಂ ಸ್ಮರೇತ್ಪಶುಪತಿಂ ಹರಂ ।
ವರ್ಣಲಕ್ಷಂ ಜಪೇನ್ಮಂತ್ರಂ ಜುಹುಯಾತ್ತದ್ದಶಾಂಶತಃ ॥ ೧೮೭ ॥

ಗವ್ಯೇನ ಸರ್ಪಿಷಾ ಮಂತ್ರೀ ಸಂಸ್ಕೃತೇ ಹವ್ಯವಾಹನೇ ।
ಶೈವೇ ಪೀಠೇ ಯಜೇದಂಗಮಾತೃಲೋಕೇಶ್ವರಾಯುಧೈಃ ॥ ೧೮೮ ॥

ಅನೇನ ಮಂತ್ರಿತಂ ತೋಯಂ ಭೂತಗ್ರಸ್ತಮುಖೇ ಕ್ಷಿಪೇತ್ ।
ಸದ್ಯಃ ಸ ಮುಂಚತಿ ಕ್ರಂದನ್ಮಹಾಮಂತ್ರಪ್ರಭಾವತಃ ॥ ೧೮೯ ॥

---

೧೮೬,೧೮೮. 'ಹುಂ ಫಟ್' ಅಂತಗಳಾದ ಈ ಮಂತ್ರದ ಆರುವರ್ಣಗಳಿಂದ 'ನಮಃ' ಇತ್ಯಾದಿ ಜಾತಿಸಹಿತವಾಗಿ ಎಂದರೆ 'ಓಂ ಹೃದಯಾಯ ನಮಃ' ಇತ್ಯಾದಿಯಾಗಿ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು.

ಧ್ಯಾನ :—ಮಧ್ಯಾಹ್ನದ ಸೂರ್ಯನಂತೆ ಕಾಂತಿಯುಳ್ಳ, ಭಯಂಕರನಾದ, ನೇತ್ರತ್ರಯವುಳ್ಳ, ಸರ್ಪದಿಂದ ಅಲಂಕೃತನಾದ, ಬಹು ಶಸ್ತ್ರಗಳನ್ನು ಧರಿಸಿರುವ, ನಾಲ್ಕು ಮುಖಗಳುಳ್ಳ, ಪಶುಪಾಲಕನಾದ ಈಶ್ವರನನ್ನು ಧ್ಯಾನಿಸಬೇಕು.

ಈ ಮಂತ್ರವನ್ನು ಆರುಲಕ್ಷ ಜಪಿಸಿ ಹಸುವಿನ ತುಪ್ಪದಿಂದ ಮಂತ್ರಿಯು ಸಂಸ್ಕಾರಮಾಡಿದ ಅಗ್ನಿಯಲ್ಲಿ ಅರವತ್ತುಸಾವಿರ ಹೋಮಮಾಡಬೇಕು.

ಶೈವಪೀಠದಲ್ಲಿ ಷಡಂಗಗಳು, ಅಷ್ಟಮಾತೃಗಳು, ಇಂದ್ರಾದಿ ಲೋಕಪಾಲಕರು, ಅವರವರ ಆಯುಧಗಳು ಇವುಗಳನ್ನು ಪೂಜಿಸಬೇಕು.

೧೮೯. ಈ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ನೀರನ್ನು ಭೂತಹಿಡಿದಿರುವವನ ಮುಖದ ಮೇಲೆ ಎರಚಬೇಕು. ತತ್ಕ್ಷಣದಲ್ಲಿಯೇ ಆ ಗ್ರಹವು ಮಹಾಮಂತ್ರಪ್ರಭಾವದಿಂದ ಅಳುತ್ತಾ ಅವನನ್ನು ಬಿಟ್ಟುಹೋಗುತ್ತದೆ.

ಅನೇನ ಮಂತ್ರಿತಾನ್ಬಾಣಾನ್ವಿಸೃಜೇದ್ಯುಧಿ ಯೋ ನರಃ ।
ಜಯೇತ್‌ಕ್ಷಣೇನ ನಿಖಿಲಾಂಚ್ಛತ್ರೂನ್ಪಾರ್ಥ ಇವಾಪರಃ ॥ ೧೯೦ ॥

ವರ್ಣಾಂತ್ಯಮೋ ಬಿಂದುಯುತಃ ಕ್ಷೇತ್ರಪಾಲಾಯ ಹೃನ್ಮನುಃ ॥ ೧೯೧ ॥

ತಾರಾದ್ಯೋ ವಸುವರ್ಣೋಽಯಂ ಕ್ಷೇತ್ರಪಾಲಸ್ಯ ಕೀರ್ತಿತಃ ।
ಷಡ್‌ದೀರ್ಘಯುಕ್ತಬೀಜೇನ ಷಡಂಗಂ ನ್ಯಸ್ಯ ಚಿಂತಯೇತ್ ॥ ೧೯೨ ॥

ನೀಲಾಚಲಾಭಂ ದಿಗ್ವಸ್ತ್ರಂ ಸರ್ಪಭೂಷಂ ತ್ರಿಲೋಚನಂ ।
ಪಿಂಗೋರ್ಧ್ವಕೇಶಾನ್ದಧತಂ ಕಪಾಲಂ ಚ ಗದಾಂ ಸ್ಮರೇತ್ ॥ ೧೯೩ ॥

---

೧೯೦. ಈ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಬಾಣಗಳನ್ನು ಯುದ್ಧದಲ್ಲಿ ಪ್ರಯೋಗಿಸುವ ಮನುಷ್ಯನು ಅಪರಾರ್ಜುನನಂತೆ ಕ್ಷಣಮಾತ್ರದಲ್ಲಿ ಸಕಲ ಶತ್ರುಗಳನ್ನೂ ಜಯಿಸುವನು

## ಕ್ಷೇತ್ರಪಾಲಕಮಂತ್ರ

೧೯೧-೧೯೨. 'ಓಂ ಕ್ಷಂ ಕ್ಷೇತ್ರಪಾಲಾಯ ನಮಃ' ಎಂಬುದು 'ಓಂ' ಎಂಬುದೇ ಆದಿಯಾಗಿ ಉಳ್ಳ, ಎಂಟು ಅಕ್ಷರಗಳಿಂದ ಯುಕ್ತವಾದ ಕ್ಷೇತ್ರಪಾಲ ಮಂತ್ರವೆಂದು ಉಕ್ತವಾಗಿದೆ. 'ಆ, ಈ' ಮುಂತಾದ ಆರು ದೀರ್ಘಸ್ವರ ಯುಕ್ತ ಬೀಜಾಕ್ಷರಗಳಿಂದ ಷಡಂಗನ್ಯಾಸಮಾಡಿ ಧ್ಯಾನಿಸಬೇಕು.

೧೯೩. ಧ್ಯಾನ :—ನೀಲಾಚಲದಂತೆ ಕಾಂತಿಯುಳ್ಳ, ದಿಗಂಬರನಾದ, ಸರ್ಪಭೂಷಣವನ್ನು ಧರಿಸಿರುವ, ಮುಕ್ಕಣ್ಣನಾದ, ಪಿಂಗವರ್ಣದ ಊರ್ಧ್ವಕೇಶಗಳನ್ನೂ, ಕಪಾಲ ಮತ್ತು ಗದೆಗಳನ್ನೂ ಧರಿಸಿರುವ ಕ್ಷೇತ್ರಪಾಲನನ್ನು ಧ್ಯಾನಿಸಬೇಕು.

ಲಕ್ಷಮೇಕಂ ಜಪೇನ್ಮಂತ್ರಂ ಜುಹುಯಾತ್ತದ್ದಶಾಂಶತಃ ।
ಚರುಣಾ ಘೃತಸಿಕ್ತೇನ ತತಃ ಕ್ಷೇತ್ರೇ ಸಮರ್ಚಯೇತ್ ॥ ೧೯೪ ॥

ಧರ್ಮಾದಿಕಲ್ಪಿತೇ ಪೀಠೇ ಸಾಂಗಾವರಣಮಾದರಾತ್ ।
ತಸ್ಮೈ ಸಪರಿವಾರಾಯ ಬಲಿಮೇಕೇನ ನಿರ್ಹರೇತ್ ॥ ೧೯೫ ॥

ಪೂರ್ವಮೇಹಿದ್ವಯಂ ಪಶ್ಚಾದ್ವಿದ್ವಿಷಂ ಪುರುಷಂ ದ್ವಯಂ ।
ಭಂಜಯೇದ್ದ್ವಿತಯಂ ಭೂಯೋ ನರ್ತಯೇದ್ದ್ವಿತಯಂ ಪುನಃ ॥ ೧೯೬ ॥

ತತೋ ವಿಘ್ನಪದದ್ವಂದ್ವಂ ಮಹಾಭೈರವ ತತ್ಪರಂ ।
ಕ್ಷೇತ್ರಪಾಲಬಲಿಂ ಗೃಹ್ಣದ್ವಯಂ ಪಾವಕಸುಂದರೀ ॥ ೧೯೭ ॥

ಬಲಿಮಂತ್ರೋಽಯಮಾಖ್ಯಾತಃ ಸರ್ವಕಾಮಫಲಪ್ರದಃ ।
ಸೋಪದಂಶಂ ಬೃಹತ್ಪಿಂಡಂ ಕೃತ್ವಾ ರಾತ್ರಿಷು ಸಾಧಕಃ ॥ ೧೯೮ ॥

---

೧೯೪-೧೯೫. ಈ ಮಂತ್ರವನ್ನು ಒಂದುಲಕ್ಷ ಜಪಿಸಿ, ಘೃತಸಿಕ್ತವಾದ ಅನ್ನದಿಂದ ಹತ್ತುಸಾವಿರ ಹೋಮಮಾಡಬೇಕು. ತರುವಾಯ ಕ್ಷೇತ್ರದಲ್ಲಿ ಧರ್ಮಾದಿಕಲ್ಪಿತ ಪೀಠದಲ್ಲಿ ಅಂಗಾವರಣ ಸಹಿತವಾಗಿ ಭಕ್ತಿಯಿಂದ ಮಂತ್ರ ದೇವತೆಯನ್ನು ಪೂಜಿಸಬೇಕು. ಪರಿವಾರಸಹಿತನಾದ ಆ ಕ್ಷೇತ್ರಪಾಲನಿಗೆ ಮುಂದೆ ಹೇಳುವ ಮಂತ್ರದಿಂದ ಬಲಿಯನ್ನು ಅರ್ಪಿಸಬೇಕು.

## ಬಲಿಮಂತ್ರ

೧೯೬-೧೯೭. 'ಏಹ್ಯೇಹಿ ವಿದ್ವಿಷಂ ಪುರುಷಂ ಭಂಜಯ ಭಂಜಯ ನರ್ತಯ ನರ್ತಯ ವಿಘ್ನ ವಿಘ್ನ ಮಹಾಭೈರವ ಕ್ಷೇತ್ರಪಾಲ ಬಲಿಂ ಗೃಹ್ಣ ಗೃಹ್ಣ ಸ್ವಾಹಾ' ಎಂಬುದು ಸಕಲೇಷ್ಟಾರ್ಥದಾಯಕವಾದ ಬಲಿಮಂತ್ರವೆಂದು ಉಕ್ತವಾಗಿದೆ.

೧೯೮-೨೦೦. ಸಾಧಕನು ಈ ಮಂತ್ರವನ್ನು ಹೇಳಿ, ವ್ಯಂಜನಸಹಿತ ವಾದ ಅನ್ನದಿಂದ ದೊಡ್ಡ ಪಿಂಡ ಮಾಡಿ ರಾತ್ರಿಕಾಲದಲ್ಲಿ ಹಿಂದೆ ಹೇಳಿರುವ

ಸ್ಮೃತ್ವಾ ಯಥೋಕ್ತಂ ಕ್ಷೇತ್ರೇಶಂ ತಸ್ಯ ಹಸ್ತೇ ಬಲಿಂ ಹರೇತ್ ।
ಬಲಿನಾನೇನ ಸಂತುಷ್ಟಃ ಕ್ಷೇತ್ರಪಾಲಃ ಪ್ರಯಚ್ಛತಿ ॥ ೧೯೯ ॥

ಕಾಂತಿಂ ಮೇಧಾಂ ಬಲಾರೋಗ್ಯಂ ತೇಜಃ ಪುಷ್ಟಿಂ ಯಶಃ ಶ್ರಿಯಂ ।
ಉದ್ಧರೇದ್ವಟುಕಂ ಙೇಂತಮಾಪದುದ್ಧಾರಣಂ ತಥಾ ॥ ೨೦೦ ॥

ಕುರುದ್ವಯಂ ತತಃ ಪಶ್ಚಾದ್ವಟುಕಂ ಙೇಂತಮುಚ್ಚರೇತ್ ।
ಶಕ್ತಿರುದ್ಧೋ ಧ್ರುವಾದಿಶ್ಚ ದ್ವಾವಿಂಶತ್ಯಕ್ಷರೋ ಮನುಃ ॥ ೨೦೧ ॥

ದ್ವಿ ಚತುಃಸಪ್ತವೇದಾಬ್ಧಿಚಂದ್ರಾರ್ಣೈರಂಗಕಂ ಮನೋಃ ।
ಬಾಲಂ ಸ್ಫಟಿಕಸಂಕಾಶಂ ಕುಂತಲೋಲ್ಲಸಿತಾನನಂ ॥ ೨೦೨ ॥

---

ಪ್ರಕಾರ ಕ್ಷೇತ್ರಪಾಲನನ್ನು ಚಿಂತಿಸಿ, ಅವನ ಹಸ್ತಗತ ಕಪಾಲದಲ್ಲಿ ಈ ಪಿಂಡ ರೂಪ ಬಲಿಯನ್ನು ಅರ್ಪಿಸಬೇಕು. ಈ ಬಲಿಯಿಂದ ಸಂತುಷ್ಟನಾಗಿ ಕ್ಷೇತ್ರ ಪಾಲನು ಆರಾಧಕನಿಗೆ ಕಾಂತಿ, ಮೇಧಾ, ಶಕ್ತಿ, ಆರೋಗ್ಯ, ತೇಜಸ್ಸು, ಪುಷ್ಟಿ, ಯಶಸ್ಸು, ಸಂಪತ್ತು ಇವುಗಳನ್ನು ಕೊಡುವನು.

## ಆಪದುದ್ಧಾರಣಮಂತ್ರ

೨೦೧. 'ಓಂ ಹ್ರೀಂ ವಟುಕಾಯ ಆಪದುದ್ಧಾರಣಾಯ ಕುರುಕುರು ವಟುಕಾಯ ಹ್ರೀಂ' ಎಂಬುದು ಇಪ್ಪತ್ತೆರಡಕ್ಷರಗಳ ಮಂತ್ರವು.

೨೦೨-೨೦೩. ಈ ಮಂತ್ರದ 2, 4, 7, 4, 4, 1 8 ವರ್ಣಗಳಿಂದ ಕ್ರಮವಾಗಿ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು.

ಧ್ಯಾನ :—ಸ್ಫಟಿಕದಂತೆ ಹೊಳೆಯುತ್ತಿರುವ, ಮುಂಗುರುಳುಗಳಿಂದ ವಿರಾಜಿಸುತ್ತಿರುವ ಮುಖವುಳ್ಳ, ಮನೋಹರವೇಷಗಳಿಂದ ಪ್ರಕಾಶಮಾನವಾದ ಅವಯವವುಳ್ಳ, ಮುಕ್ಕಣ್ಣನಾದ, ದಂಡತ್ರಿಶೂಲಗಳನ್ನು ಧರಿಸಿರುವ, ಅತ್ಯಂತ

ಧಿವ್ಯಾಕಲ್ಪೈಃ ಪ್ರದೀಪ್ತಾಂಗಂ ತ್ರ್ಯಕ್ಷಂ ದಂಡತ್ರಿಶೂಲಿನಂ ।
ಸುಪ್ರಸನ್ನಂ ಸ್ಮರೇದ್ಭಕ್ತ್ಯಾ ಭಕ್ತಾನಾಮಭಯಂಕರಂ ॥ ೨೦೩ ॥

ವರ್ಣಲಕ್ಷಂ ಜಪೇನ್ಮಂತ್ರಂ ಹವಿಷ್ಯಾಶೀ ಜಿತೇಂದ್ರಿಯಃ ।
ತದ್ದಶಾಂಶಂ ಪ್ರಜುಹುಯಾತ್ತಿಲೈರ್ಮಧುರಸಂಯುತೈಃ ॥ ೨೦೪ ॥

ಧರ್ಮಾದಿಕಲ್ಪಿತೇ ಪೀಠೇ ಪಂಕಜೇ ಚಾತಿಶೋಭನೇ ।
ಷಟ್ಕೋಣಾಂತಸ್ತ್ರಿಕೋಣಸ್ಥವ್ಯೋಮಪಂಕಜಸಂಯುತೇ ॥ ೨೦೫ ॥

ಬಟುಕಂ ಪೂಜಯೇದ್ದೇವಂ ಸಾಂಗಾವರಣಕಂ ಕ್ರಮಾತ್ ।
ಶತ್ರುಪಕ್ಷಸ್ಯ ರುಧಿರಂ ಪಿಶಿತಂ ಚ ದಿನೇ ದಿನೇ ।
ಭಕ್ಷಯಸ್ವ ಗಣೈಃ ಸಾರ್ಧಂ ಸಾರಮೇಯಸಮನ್ವಿತಃ ॥ ೨೦೬ ॥

ಬಲಿಮಂತ್ರೋಽಯಮಾಖ್ಯಾತಃ ಶತ್ರುನಾಮ್ನಾ ವಿಗರ್ಭಿತಃ ।
ಅನೇನ ಬಲಿನಾ ಹೃಷ್ಟೋ ಬಟುಕಃ ಪರಸೈನ್ಯಕಂ ॥ ೨೦೭ ॥

---

ಪ್ರಸನ್ನರೂಪಿಯಾದ ಅಭಯಪ್ರದನಾದ ಬಾಲರೂಪೀಶ್ವರನನ್ನು ಭಕ್ತಿಯಿಂದ ಧ್ಯಾನಿಸಬೇಕು.

೨೦೪. ಈ ಮಂತ್ರವನ್ನು ಇಪ್ಪತ್ತೆರಡುಲಕ್ಷ ಜಪಿಸಬೇಕು. ಅದರ ಹತ್ತನೆಯ ಒಂದುಭಾಗ ಎಂದರೆ ಎರಡುಲಕ್ಷದ ಇಪ್ಪತ್ತುಸಾವಿರ ಹೋಮಗಳನ್ನು ಶರ್ಕರಾದಿ ಮಧುರವಸ್ತುಸಹಿತವಾದ ಎಳ್ಳಿನಿಂದ ಮಾಡಬೇಕು.

೨೦೫-೨೦೬. ಧರ್ಮಾದಿಕಲ್ಪಿತ ಪೀಠದಲ್ಲಿ ಮಾತೃಕಾಪದ್ಮವನ್ನು ರಚಿಸಿ ಅದರ ಮೇಲೆ ತ್ರಿಕೋಣ, ಅದರ ಮೇಲೆ ಷಟ್ಕೋಣ ಮಂಡಲ, ಅದರ ಮೇಲೆ ಅಷ್ಟದಳಪದ್ಮ ಇದನ್ನೊಳಗೊಂಡಿರುವ ಚತುರಸ್ರಗೃಹವು ಪೂಜಾಯಂತ್ರವು. ಅದರಲ್ಲಿ ಅಂಗಾವರಣ ಸಹಿತವಾದ ವಟುರೂಪಿಯಾದ ದೇವನನ್ನು ಕ್ರಮವಾಗಿ ಪೂಜಿಸಬೇಕು.

ಛಿತ್ವಾ ಗಣೇಭ್ಯೋ ವಿಭಜೇದಾಮಿಷಂ ಕೃದ್ಧಮಾನಸಃ |
ಅರ್ಧೀಶೋ ವಹ್ನಿಶಿಖರೋ ಲಾಂತಸ್ಥೋದಾಂತ ಈರಿತಃ || ೨೦೮ ||

ಫಡಂತಶ್ಚಂಡಮಂತ್ರೋಯಂ ತ್ರಿವರ್ಣಾತ್ಮಾ ಸಮೀರಿತಃ |
ಅಸ್ಯ ತ್ರಿತೋ ಮುನಿಃ ಪ್ರೋಕ್ತಶ್ಛಂದೋನುಷ್ಟುಬುದಾಹೃತಂ || ೨೦೯ ||

ಚಂಡೇಶೋ ದೇವತಾ ಪ್ರೋಕ್ತಾ ವಕ್ಷ್ಯತೇಂಗಪ್ರಕಲ್ಪನಂ |
ಹೃದಯಂ ದೀಪ್ತಫಟ್ ಪ್ರೋಕ್ತಂ ಜ್ವಲಫಟ್ ಶಿರ ಈರಿತಂ || ೨೧೦ ||

## ಬಲಿಮಂತ್ರ

'ಶತ್ರುಪಕ್ಷಸ್ಯ ರುಧಿರಂ ಪಿಶಿತಂ ಚ ದಿನೇದಿನೇ '
ಭಕ್ಷಯಸ್ವ ಗಣೈಸ್ಸಾರ್ಧಂ ಸಾರಮೇಯಸಮನ್ವಿತಃ ||'

ಎಂಬುದು ಶತ್ರುನಾಮದಿಂದ ಯುಕ್ತವಾಗಿ ಬಲಿಮಂತ್ರವೆಂದು ಉಕ್ತವಾಗಿದೆ. ಈ ಮಂತ್ರದಿಂದ ಅರ್ಪಿಸಲ್ಪಟ್ಟ ಬಲಿಯಿಂದ ಸಂತುಷ್ಟನಾದ ವಟುಕನು ಶತ್ರುಸೈನ್ಯವನ್ನು ಛೇದಿಸಿ, ಕೋಪಾವಿಷ್ಟಚಿತ್ತನಾಗಿ ಮಾಂಸವನ್ನು ಗಣಗಳಿಗೆ ವಿಭಾಗಿಸಿ ಕೊಡುವನು.

## ಚಂಡೇಶ್ವರಮಂತ್ರ

೨೦೯-೨೧೧. (ಅರ್ಧೀಶ = ಊ, ವಹ್ನಿ = ರ, ಲಾಂತ = ವ, ದಾಂತ = ಧ)

'ಊರ್ಧ್ವ ಫಟ್' ಎಂಬುದು ಮೂರು ವರ್ಣಗಳುಳ್ಳ ಚಂಡೇಶ್ವರ ಮಂತ್ರವು.

ಈ ಮಂತ್ರಕ್ಕೆ ತ್ರಿತ ಎಂಬ ಮುನಿಯು ಋಷಿ, ಅನುಷ್ಟುಪ್ ಛಂದಸ್ಸು, ಚಂಡೇಶ್ವರನು ದೇವತೆಯು.

**ಶಿಖಾಜ್ವಾಲಿನಿ ಫಟ್ ಪ್ರೋಕ್ತಾ ವಹಫಟ್ ಕವಚಂ ಮತಂ |**
**ಹಲಫಟ್ ನೇತ್ರಮಾಖ್ಯಾತಂ ಸರ್ವಜ್ವಾಲಿನಿ ಫಟ್ ಪರಂ || ೨೧೧ ||**

**ವಿನ್ಯಸ್ಯೈವಂ ಷಡಂಗಾನಿ ತತೋ ದೇವಂ ವಿಚಿಂತಯೇತ್ |**
**ಚಂಡೇಶ್ವರಂ ರಕ್ತತನುಂ ತ್ರ್ಯಕ್ಷಂ ರಕ್ತಾಂಬರಾವೃತಂ || ೨೧೨ ||**

**ದಧತಂ ಚ ತ್ರಿಶೂಲಾಕ್ಷಮಾಲಾಟಂಕಕಮಂಡಲೂನ್ |**
**ವರ್ಣಲಕ್ಷಂ ಜಪೇನ್ಮಂತ್ರಂ ಹೋಮಂ ಕುರ್ಯಾದ್ದಶಾಂಶತಃ || ೨೧೩ ||**

**ಮಧುರತ್ರಯಸಂಯುಕ್ತೈರ್ವಿಶುದ್ಧೈಸ್ತಿಲತಂಡುಲೈಃ |**
**ಪಂಚಾಕ್ಷರೋದಿತೇ ಪೀಠೇ ಮೂರ್ತಿಂ ಮೂಲೇನ ಕಲ್ಪಯೇತ್ ||**

---

ಷಡಂಗಕಲ್ಪನೆಯ ರೀತಿಯನ್ನು ಹೇಳುವೆನು :—'ದೀಪ್ತ ಫಟ್' ಎಂಬುದಾಗಿ ಹೃದಯವನ್ನೂ, 'ಜ್ವಲ ಫಟ್' ಎಂಬುದಾಗಿ ಶಿರಸ್ಸನ್ನೂ, 'ಜ್ವಾಲಿನಿ ಫಟ್' ಎಂಬುದಾಗಿ ಶಿಖೆಯನ್ನೂ, 'ವಹ ಫಟ್' ಎಂಬುದಾಗಿ ಕವಚವನ್ನೂ, 'ಹಲಫಟ್' ಎಂಬುದಾಗಿ ನೇತ್ರವನ್ನೂ, 'ಸರ್ವಜ್ವಾಲಿನಿ ಫಟ್' ಎಂಬುದಾಗಿ ಅಸ್ತ್ರವನ್ನೂ ನ್ಯಾಸಮಾಡಬೇಕು.

೨೧೨-೨೧೪. ಈರೀತಿ ಷಡಂಗನ್ಯಾಸಮಾಡಿದ ನಂತರ ಮಂತ್ರ ದೇವತೆಯನ್ನು ಧ್ಯಾನಿಸಬೇಕು.

ಧ್ಯಾನ :—ಕೆಂಪುಬಣ್ಣದ ಶರೀರವುಳ್ಳ, ಮುಕ್ಕಣ್ಣನಾದ, ಕೆಂಪುವಸ್ತ್ರವನ್ನು ಉಟ್ಟಿರುವ, ತ್ರಿಶೂಲ, ಅಕ್ಷಮಾಲಾ, ಪರಶು, ಕಮಂಡಲುಗಳನ್ನು ಧರಿಸಿರುವ ಚಂಡೇಶ್ವರನನ್ನು ಧ್ಯಾನಿಸಬೇಕು

ಈ ಮಂತ್ರವನ್ನು ಮೂರುಲಕ್ಷ ಜಪಿಸಬೇಕು. ಬಳಿಕ ಘೃತ ಮಧು ಸಕ್ಕರೆಗಳಿಂದ ಮಿಶ್ರಿತವಾದ ನಿರ್ಮಲ ತಿಲತಂಡುಲಗಳಿಂದ ಮೂವತ್ತುಸಾವಿರ ಹೋಮಮಾಡಬೇಕು. ಅನಂತರ ಪಂಚಾಕ್ಷರಮಂತ್ರಕ್ಕೆ ವಿಹಿತವಾದ ಪೀಠದಲ್ಲಿ ಮೂರ್ತಿಯನ್ನು ಮೂಲಮಂತ್ರದಿಂದ ಸ್ಥಾಪಿಸಬೇಕು.

ಕೂರ್ಮೇಶೋ ಬಿಂದುಸಂಯುಕ್ತಸ್ತತಶ್ಚಂಡೇಶ್ವರಾಯ ಚ ।
ಹೃದಯಂ ಮನುರಾಖ್ಯಾತಶ್ಚಂಡೇಶಸ್ಯ ಪ್ರಪೂಜನೇ ॥ ೨೧೫ ॥

ಅಂಗೈರ್ಮಾತೃಭಿರಾಶೇಶೈರ್ವಜ್ರಾದ್ಯೈರಾವೃತಿರ್ಭವೇತ್ ।
ಶೈವಮಂತ್ರೇಷು ನಿಷ್ಣಾತಶ್ಚಂಡೇಶ್ವರಮನುಂ ಜಪೇತ್ ॥ ೨೧೬ ॥

ಸರ್ವಾನ್ಕಾಮಾನವಾಪ್ನೋತಿ ಪರತ್ರೇಹ ಚ ನಂದತಿ ।
ಶೃಣು ನಾರದ ವಕ್ಷ್ಯಾಮಿ ದಿವ್ಯಂ ಮಾಹೇಶ್ವರಂ ಸ್ತವಂ ॥ ೨೧೭ ॥

ಯಸ್ಯ ಪಾಠೇನ ಪೂಜಾಯಾಂ ಸಿಧ್ಯಂತಿ ಮನವೋಽಖಿಲಾಃ ॥ ೨೧೮ ॥

ಧರಾಂಬ್ವಗ್ನಿಮರುದ್ವ್ಯೋಮಯಜಮಾನೇಂದ್ವರ್ಕಮೂರ್ತಯೇ ।
ಸರ್ವಭೂತಾಂತರಸ್ಥಾಯ ಶಂಕರಾಯ ನಮೋನಮಃ ॥ ೨೧೯ ॥

---

## ಪೂಜಾಮಂತ್ರ

೨೧೫. (ಕೂರ್ಮೇಶ = ಚ) 'ಚಂ ಚಂಡೇಶ್ವರಾಯ ನಮಃ' ಎಂಬುದು ಚಂಡೇಶ್ವರ ಪೂಜೆಗೆ ವಿಹಿತಮಂತ್ರವು.

೨೧೬. ಷಡಂಗಗಳು, ಅಷ್ಟಮಾತೃಗಳು, ಇಂದ್ರಾದಿ ದಿಕ್ಪಾಲಕರು, ಅವರ ಆಯುಧಗಳಾದ ವಜ್ರಾದಿಗಳು ಇವೇ ಆವರಣಗಳು. ಇವನ್ನೂ ಪೂಜಿಸಬೇಕು. ಶೈವಮಂತ್ರಗಳಲ್ಲಿ ನಿಷ್ಣಾತನಾದವನು ಚಂಡೇಶ್ವರಮಂತ್ರವನ್ನು ಜಪಿಸಬೇಕು.

೨೧೭-೨೧೮. ಹಾಗೆ ಮಾಡಿದರೆ ಪರಲೋಕದಲ್ಲಿ ಸಕಲ ಇಷ್ಟಾರ್ಥಗಳನ್ನೂ ಪಡೆಯುವನು ಮತ್ತು ಈ ಲೋಕದಲ್ಲಿಯೂ ಸುಖವನ್ನು ಅನುಭವಿಸುವನು.

ನಾರದಾ! ಕೇಳು; ದಿವ್ಯವಾದ ಮಹೇಶ್ವರಸ್ತೋತ್ರವನ್ನು ಹೇಳುವೆನು; ಪೂಜೆಯ ಕಾಲದಲ್ಲಿ ಅದನ್ನು ಪಠನೆಮಾಡುವುದರಿಂದ ಸಕಲಮಂತ್ರಗಳೂ ಸಿದ್ಧಿಪ್ರದವಾಗುವುವು.

## ಮಹೇಶ್ವರಸ್ತೋತ್ರ

೨೧೯. ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ, ಯಜ್ಞದ ಯಜ

ಶ್ರುತ್ಯಂತಕೃತವಾಸಾಯ ಶ್ರುತಯೇ ಶ್ರುತಿಜನ್ಮನೇ ।
ಅತೀಂದ್ರಿಯಾಯ ಮಹಸೇ ಶಾಶ್ವತಾಯ ನಮೋನಮಃ || ೨೨೦ ||

ಸ್ಥೂಲಸೂಕ್ಷ್ಮವಿಭಾಗಾಭ್ಯಾಮನಿರ್ದೇಶ್ಯಾಯ ಶಂಭವೇ ।
ಭವಾಯ ಭವಸಂಭೂತದುಃಖಹಂತ್ರೇ ನಮೋನಮಃ || ೨೨೧ ||

ತರ್ಕಮಾರ್ಗಾತಿದೂರಾಯ ತಪಸಾಂ ಫಲದಾಯಿನೇ ।
ಚತುರ್ವರ್ಗವದಾನ್ಯಾಯ ಸರ್ವಜ್ಞಾಯ ನಮೋನಮಃ || ೨೨೨ ||

ಆದಿಮಧ್ಯಾಂತಶೂನ್ಯಾಯ ನಿರಸ್ತಾಶೇಷಭೀತಯೇ ।
ಯೋಗಿಧ್ಯೇಯಾಯ ಮಹತೇ ನಿರ್ಗುಣಾಯ ನಮೋನಮಃ || ೨೨೩ ||

ವಿಶ್ವಾತ್ಮನೇ ವಿವಿಕ್ತಾಯ ವಿಲಸಚ್ಚಂದ್ರಮೌಲಯೇ ।
ಕಂದರ್ಪದರ್ಪನಾಶಾಯ ಕಾಲಹಂತ್ರೇ ನಮೋನಮಃ || ೨೨೪ ||

---

ಮಾನ, ಚಂದ್ರ, ಸೂರ್ಯ ಎಂಬ ಎಂಟು ಮೂರ್ತಿಗಳುಳ್ಳ, ಸಕಲಪ್ರಾಣಿಗಳ ಅಂತಸ್ಥಿತನಾದ ಶಂಕರನಿಗೆ ನಮಸ್ಕಾರ! ನಮಸ್ಕಾರ!

೨೨೦. ಉಪನಿಷತ್ಪ್ರತಿಪಾದ್ಯನು, ಶ್ರುತಿರೂಪನು, ಅನಾದಿವೇದೋಪದೇಶಕನು, ಅತೀಂದ್ರಿಯನೂ ಆಗಿರುವ ಶಾಶ್ವತ ತೇಜೋರೂಪಿಯಾದ ದೇವನಿಗೆ ನಮಸ್ಕಾರ! ನಮಸ್ಕಾರ!

೨೨೧. ಸ್ಥೂಲಸೂಕ್ಷ್ಮ ವಿಭಾಗಗಳಿಂದ ನಿರ್ದೇಶಿಸಲಶಕ್ಯನಾದ, ಜನನದಿಂದಾಗುವ ದುಃಖವನ್ನು ಪರಿಹರಿಸುವ, ಭವನಾಮಕನಾದ ಶಂಭುವಿಗೆ ನಮಸ್ಕಾರ! ನಮಸ್ಕಾರ!

೨೨೨. ಯುಕ್ತಿಗಮ್ಯನಲ್ಲದ, ತಪಸ್ಸುಗಳಿಗೆ ಫಲದಾಯಕನಾದ, ಪುರುಷಾರ್ಥ ಚತುಷ್ಟಯವನ್ನು ಕೊಡುವ ಸರ್ವಜ್ಞನಿಗೆ ನಮಸ್ಕಾರ! ನಮಸ್ಕಾರ!

೨೨೩. ಆದಿಮಧ್ಯ ಅಂತ್ಯಗಳಿಲ್ಲದವನು, ಸಮಸ್ತಭಯಗಳನ್ನೂ ನಿರಾಕರಿಸುವವನು, ಯೋಗಿಗಳ ಧ್ಯಾನಕ್ಕೆ ಗೋಚರನು, ನಿರ್ಗುಣನೂ ಆದ ಮಹಾತ್ಮನಿಗೆ ನಮಸ್ಕಾರ! ನಮಸ್ಕಾರ!

೨೨೪. ವಿಶ್ವಾತ್ಮನು, ವಿಲಕ್ಷಣನು, ಪ್ರಕಾಶಮಾನನಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನು, ಮನ್ಮಥನ ಗರ್ವವನ್ನು ಮುರಿದವನೂ ಆದ ಕಾಲಸಂಹಾರಕನಿಗೆ ನಮಸ್ಕಾರ! ನಮಸ್ಕಾರ!

ವಿಷಾಶನಾಯ ವಿಹರದ್ವೃಷಸ್ಕಂಧಮುಪೇಯುಷೇ ।
ಸರಿದ್ದಾಮಸಮಾಬದ್ಧಕಪರ್ದಾಯ ನಮೋನಮಃ ॥ ೨೨೫ ॥

ಶುದ್ಧಾಯ ಶುದ್ಧಭಾವಾಯ ಶುದ್ಧಾನಾಮಂತರಾತ್ಮನೇ ।
ಪುರಾಂತಕಾಯ ಪೂರ್ಣಾಯ ಪುಣ್ಯನಾಮ್ನೇ ನಮೋನಮಃ ॥ ೨೨೬ ॥

ಭಕ್ತಾಯ ನಿಜಭಕ್ತಾನಾಂ ಭುಕ್ತಿಮುಕ್ತಿಪ್ರದಾಯಿನೇ ।
ವಿವಾಸಸೇ ನಿವಾಸಾಯ ವಿಶ್ವೇಷಾಂ ಪತಯೇ ನಮಃ ॥ ೨೨೭ ॥

ತ್ರಿಮೂರ್ತಿಮೂಲಭೂತಾಯ ತ್ರಿನೇತ್ರಾಯ ತ್ರಿಶೂಲಿನೇ ।
ತ್ರಿಧಾಮ್ನಾಂ ಧಾಮರೂಪಾಯ ಜನ್ಮದಾಯ ನಮೋನಮಃ ॥ ೧೨೮ ॥

ದೇವಾಸುರಶಿರೋರತ್ನಕಿರೀಟಾರುಣಿತಾಂಘ್ರಯೇ ।
ಕಾಂತಾಯ ನಿಜಕಾಂತಾಯೈ ದತ್ತಾರ್ಧಾಯ ನಮೋನಮಃ ॥ ೨೨೯ ॥

---

೨೨೫. ವಿಷಭೋಜನವಮಾಡಿದ, ವಿಹರಿಸುತ್ತಿರುವ ವೃಷಭದ ಭುಜದ ಮೇಲೆ ಕುಳಿತಿರುವ, ಗಂಗಾನದಿಯೆಂಬ ಹಗ್ಗದಿಂದ ಕಟ್ಟಲ್ಪಟ್ಟ ಜಟೆಯ ಸಮೂಹವುಳ್ಳ ಈಶ್ವರನಿಗೆ ನಮಸ್ಕಾರ! ನಮಸ್ಕಾರ!

೨೨೬. ಪರಿಶುದ್ಧನು, ನಿರ್ಮಲಭಾವವುಳ್ಳವನು, ಶುದ್ಧಾತ್ಮರ ಅಂತರಾತ್ಮನು, ಪುರಸಂಹಾರಕನು, ಪುಣ್ಯನಾಮನೂ ಆದ ಪೂರ್ಣನಿಗೆ ನಮಸ್ಕಾರ! ನಮಸ್ಕಾರ!

೨೨೭. ತನ್ನ ಭಕ್ತರಿಗೆ ಭಕ್ತನು, ಭೋಗಮೋಕ್ಷದಾಯಕನು, ದಿಗಂಬರನು, ಎಲ್ಲಾ ಕಡೆಯಲ್ಲಿಯೂ ಇರುವವನೂ ಆದ ಜಗತ್ಪತಿಗೆ ನಮಸ್ಕಾರ!

೨೨೮. ತ್ರಿಮೂರ್ತಿಗಳಿಗೆ ಮೂಲಭೂತನು, ಮುಕ್ಕಣ್ಣನು, ತ್ರಿಶೂಲಧಾರಿಯು, ಸೂರ್ಯ, ಅಗ್ನಿ, ಚಂದ್ರರೆಂಬ ಮೂರು ತೇಜಸ್ಸುಗಳಿಗೆ ಆವಾಸಸ್ಥಾನನು, ಜನ್ಮದಾತೃವೂ ಆದ ಈಶ್ವರನಿಗೆ ನಮಸ್ಕಾರ! ನಮಸ್ಕಾರ!

೨೨೯. ದೇವತೆಗಳ ಮತ್ತು ಅಸುರರ ಶಿರಸ್ಸಿನಲ್ಲಿರುವ ರತ್ನಕಿರೀಟದಿಂದ ಕೆಂಪಾಗಿ ಮಾಡಲ್ಪಟ್ಟ ಪಾದಗಳುಳ್ಳ, ಮನೋಹರನಾದ, ತನ್ನ ಕಾಂತೆಗೆ ಅರ್ಧಶರೀರವನ್ನು ಕೊಟ್ಟಿರುವ ಈಶ್ವರನಿಗೆ ನಮಸ್ಕಾರ! ನಮಸ್ಕಾರ!

ಏತತ್ಸ್ತೋತ್ರಂ ಮಹೇಶಸ್ಯ ಪ್ರೋಕ್ತಂ ಸರ್ವಾಘನಾಶನಂ ।
ಶಿವಸಾನ್ನಿಧ್ಯದಂ ವಿಪ್ರ ಸರ್ವತಂತ್ರಪ್ರಕಾಶಕಂ ॥ ೨೩೦ ॥

ಏತತ್ತೇ ಸುಮಹತ್ತಂತ್ರಂ ಸರ್ವದೇವಪ್ರಕಾಶಕಂ ।
ಲೋಕಾಭಿಲಾಷಸಂಪೂರ್ತಿಕ್ರಿಯಾಸಾಧನಸಂಗತಂ ॥ ೨೩೧ ॥

ಯೇ ತು ಸಾಮಾನ್ಯತಃ ಪ್ರೋಕ್ತಾಸ್ತಂತ್ರೇಽಸ್ಮಿನ್ ಮನವೋ ದ್ವಿಜ ।
ತೇ ತು ಲೋಕೋಪಕಾರಾಯ ಜ್ಞಾತವ್ಯಾಃ ಸಿದ್ಧಿದಾಯಕಾಃ ॥ ೨೩೨ ॥

ವಿಶೇಷತೋ ವೈಷ್ಣವಾ ಯೇ ಮಂತ್ರಾಃ ಸರ್ವೋತ್ತಮೋತ್ತಮಾಃ ।
ತ ಏವ ಸಾಧನೀಯಾಃ ಸ್ಯುಶ್ಚತುರ್ವರ್ಗಫಲಾಪ್ತಯೇ ॥ ೨೩೩ ॥

ರಾಮಮಂತ್ರಾಃ ಕೃಷ್ಣಮಂತ್ರಾಃ ಸಾಂಗಾ ರಾಸೇಶಿಮಂತ್ರಕಾಃ ।
ಶಾಕ್ತಾಃ ಸೌರಾಶ್ಚ ಗಾಣೇಶಾಃ ಶೈವಾಃ ಪ್ರೋಕ್ತಾಃ ಶುಭಾವಹಾಃ ॥ ೨೩೪ ॥

---

೨೩೦. ಬ್ರಾಹ್ಮಣಾ! ನಾರದಾ! ಸಕಲಪಾಪಗಳನ್ನೂ ನಾಶಪಡಿಸುವ ಶಿವಸಾನ್ನಿಧ್ಯದಾಯಕವಾದ, ಸಕಲ ತಂತ್ರಗಳನ್ನೂ ಪ್ರಕಾಶಪಡಿಸುವ ಈ ಮಹೇಶ್ವರಸ್ತೋತ್ರವನ್ನು ನಿನಗೆ ಹೇಳಿರುವೆನು.

೨೩೧. ಈ ಮಹಾಮಂತ್ರವು ನಿನಗೆ ಸಕಲ ದೇವತಾಪ್ರಕಾಶಕವಾಗಿ ಜನಗಳ ಇಷ್ಟಾರ್ಥಗಳನ್ನು ಪೂರ್ಣಗೊಳಿಸಲು ಸಾಧಕವಾಗುವುದು.

೨೩೨. ಈ ತಂತ್ರದಲ್ಲಿ ಸಾಮಾನ್ಯವಾಗಿ ಹೇಳಿದ ಮಂತ್ರಗಳು ಲೋಕೋಪಕಾರಾರ್ಥವಾದ ಸಿದ್ಧಿದಾಯಕಗಳಾಗುವುವೆಂದು ತಿಳಿಯಬೇಕು.

೨೩೩ ಉಕ್ತವಾದ ವೈಷ್ಣವಮಂತ್ರಗಳು ಸರ್ವೋತ್ತಮೋತ್ತಮಗಳು. ಪುರುಷಾರ್ಥಚತುಷ್ಟಯವನ್ನು ಹೊಂದಲು ಅವುಗಳನ್ನೇ ವಿಶೇಷವಾಗಿ ಆರಾಧಿಸಬೇಕು.

೨೩೪. ರಾಮಮಂತ್ರ, ಕೃಷ್ಣಮಂತ್ರ, ಸಾಂಗವಾದ ರಾಸೇಶಿಮಂತ್ರ, ಶಕ್ತಿಮಂತ್ರ, ಸೂರ್ಯಮಂತ್ರ, ಗಣೇಶಮಂತ್ರ ಮತ್ತು ಶಿವಮಂತ್ರ ಇವುಗಳು ಶುಭಪ್ರದಗಳೆಂದು ಉಕ್ತವಾಗಿದೆ.

**ತೇಷು ಸ್ವಾತ್ಮಪ್ರಕಾಶಾಯ ಭಜೇನ್ಮುಕ್ತಿಫಲಪ್ರದಾನ್ ।**
**ಏತತ್ತೇ ಸರ್ವಮಾಖ್ಯಾತಂ ಯತ್ತ್ವಯಾಭ್ಯರ್ಥಿತಂ ಮುನೇ ॥**
**ದೇವತಾರಾಧನಂ ಭಕ್ತ್ಯಾ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೨೩೫ ॥**

**ಇತಿ ಶ್ರೀನಾರದೀಯ ಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಮಹೇಶಮಂತ್ರಕಥನಂ ನಾಮ ಏಕನವತಿತಮೋಽಧ್ಯಾಯಃ**

**ಇತಿ ತೃತೀಯಃ ಪಾದಃ**

---

೨೩೫. ಅವುಗಳಲ್ಲಿ ಮೋಕ್ಷಫಲಕಮಂತ್ರಗಳನ್ನು ಆತ್ಮನ ಸ್ವರೂಪಾಭಿವ್ಯಕ್ತಿಗಾಗಿ ಆರಾಧಿಸಬೇಕು. ನಾರದಮುನಿಯೇ! ನೀನು ಪ್ರಾರ್ಥಿಸಿದ ದೇವತಾರಾಧನೆ ಮುಂತಾದುವೆಲ್ಲವನ್ನೂ ನಿನಗೆ ಹೇಳಿರುವೆನು ಈಗ ಪುನಃ ನೀನು ವಿಶ್ವಾಸದಿಂದ ಏನನ್ನು ತಿಳಿಯಬೇಕೆಂದು ಅಪೇಕ್ಷಿಸುವೆ? ಅದನ್ನು ಕೇಳು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ಮಹೇಶ್ವರಮಂತ್ರಕಥನೆಯೆಂಬ ತೊಂಬತ್ತೊಂದನೆಯ ಅಧ್ಯಾಯವು ಮುಗಿದುದು.

ಇಂತು ವಿದ್ವದ್ವರ ಗೋವಿಂದಕೃಷ್ಣಾಚಾರ್ಯತನಯ ದೊಡ್ಡಬಳ್ಳಾಪುರ ವಾಸುದೇವಾಚಾರ್ಯರಿಂದ ರಚಿತವಾದ ನಾರದೀಯಪುರಾಣದ ಕನ್ನಡಭಾಷಾನುವಾದದೊಳು ಪೂರ್ವಭಾಗದ ಮೂರನೆಯ ಪಾದವು ಮುಗಿಯಿತು.

## ವಿಷಯಸಂಗ್ರಹ

ಅನೇಕ ಶಿವಮಂತ್ರಗಳು, ಅಘೋರಾಸ್ತ್ರಮಂತ್ರ, ಪಾಶುಪತಾಸ್ತ್ರಮಂತ್ರ ಚಂಡೇಶ್ವರಮಂತ್ರ, ಕ್ಷೇತ್ರಪಾಲಮಂತ್ರ ಮುಂತಾದುವು ಸಪರಿಕರವಾಗಿ ನಿರೂಪಿಸಲ್ಪಟ್ಟಿವೆ.

---

ಪ್ರೊ:— ವೈ. ಆರ್. ರಂಗರಾವ್‌ರವರಿಂದ ಮೈಸೂರು
ಶ್ರೀಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು